ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾನ್ತರತ್ನಮಾಲಾ

ದ್ವಿತೀಯ ರತ್ನವು—ಹದಿಮೂರನೆಯ ಸಂಚಿಕೆಯು

ಶ್ರೀಮನ್ನಿಗಮಾನ್ತ ಮಹಾದೇಶಿಕಪ್ರಣೀತ

# ಶ್ರೀಮದ್ರಹಸ್ಯತ್ರಯ ಸಾರೇ

## ಸಾಧ್ಯೋಪಾಯ ಶೋಧನಾಧಿಕಾರಶ್ಚತುರ್ವಿಂಶಃ

---

ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್‌ಪೆಕ್ಟರು

**ಸಿ. ಯಂ. ವಿಜಯರಾಘವಾಚಾರ್ಯರಿಂದ**

ರಚಿಸಲ್ಪಟ್ಟ

**ಆಚಾರ್ಯಹೃದಯಾನ್ವೇಷಿಣೀ**

ಎಂಬ ಕನ್ನಡ ಅರ್ಥ ತಾತ್ಪರ್ಯಗಳೊಂದಿಗೆ ಮುದ್ರಿಸಲ್ಪಟ್ಟಿರುತ್ತದೆ.

---

ಬೆಂಗಳೂರು ಸಿಟಿ

೧೯೩೮

ಕ್ರಯ ೧ ರೂಪಾಯಿ

ಶ್ರಿಯೈ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ



# ಸಾಧ್ಯೋಪಾಯ ಶೋಧನಾಧಿಕಾರಃ ೨೪

**ಯಥಾಧಿಕರಣಂ ಪ್ರಭುಸ್ಸ್ವಜನ ದಾನ ಹೋಮಾರ್ಚನಾ ।**
**ಭರನ್ಯಸನ ಭಾವನಾ ಪ್ರಭೃತಿಭಿಸ್ಸಮಾರಾಧಿತಃ ।**

---

ಹಿಂದಿನ ಅಧಿಕಾರದಲ್ಲಿ ಸಿದ್ಧೋಪಾಯ ವಿಷಯದಲ್ಲಿ ಆತನ ಗುಣ ಸಂಬಂಧಾದಿಗಳ ಮೂಲಕವಾಗಿ ಪ್ರಾಪ್ತವಾಗಬಹುದಾದ ಶಂಕಾಗಳಿಗೆಲ್ಲಾ ಪ್ರಮಾಣಗಳೊಂದಿಗೆ ಸರಿಯಾದ ಸಮಾಧಾನಗಳನ್ನು ತಿಳಿಸಿದವರಾಗಿ ಈ ಅಧಿಕಾರದಲ್ಲಿ ಸಾಧ್ಯೋಪಾಯ ವಿಷಯದಲ್ಲಿ ಊಹಿಸಬಹುದಾದ ಶಂಕಾಗಳಿಗೆ ಸಮಾಧಾನವನ್ನು ಹೇಳುತ್ತಾರೆ

ಆದರೆ 'ತನ್ನ ಪ್ರಾಪ್ತಿಗೆ ತನಗೇನೇ ಸಾಧನತ್ವವು ಸರಿಯೆಂದು ತೋರಿಬರುವದಿಲ್ಲವು; ಯಾಗ ದಾನ ಹೋಮಾದಿಗಳೆಲ್ಲಾ ಅಪೂರ್ವ ದ್ವಾರಾ ಫಲವನ್ನು ಕೊಡುತ್ತವೆಂದು ಮೀಮಾಂಸಕರು ಹೇಳುವ ಪ್ರಕಾರ, ಭಕ್ತಿಮಾರ್ಗಕ್ಕೂ ಕೂಡ ಆ ಅಪೂರ್ವ ಮೂಲಕವಾಗಿಯೇ ಮೋಕ್ಷಪ್ರಾಪ್ತಿಯುಂಟಾಗುವದರಿಂದ ಸಿದ್ಧೋಪಾಯದ ಆವಶ್ಯಕತೆಗೆ ಕಾರಣವಿಲ್ಲವೆಂದು ಕೆಲವರು ಹೇಳುವರು; ಭರನ್ಯಾಸದಲ್ಲಾದರೋ ಭಗವಂತನನ್ನೇ ಸಿದ್ಧೋಪಾಯನೆಂದೇ ವರಿಸತಕ್ಕದ್ದೆಂದು ಹೇಳುವದರಿಂದ ಭರನ್ಯಾಸವೇ ಸಾಧ್ಯೋಪಾಯವಲ್ಲವೆಂದು ಅಭಿಪ್ರಾಯವಿರುವಾಗ, ಆ ಭರನ್ಯಾಸವೆಂಬ ಸಾಧ್ಯೋಪಾಯದ ಶೋಧನದ ಮಾತೇ ಉಂಟಾಗಲು ಕಾರಣವಿಲ್ಲವು.' ಇಂತಹ ಪೂರ್ವಪಕ್ಷಕ್ಕೆ ಸಮಾಧಾನರೂಪದಲ್ಲಿ ಶ್ರಿಯಃಪತಿಯು ಸಿದ್ಧೋಪಾಯನೆಂಬುದನ್ನು ಶ್ರುತಿ ಪ್ರಮಾಣಗಳಿಂದಲೂ, ಸ್ಮೃತಿ ಪ್ರಮಾಣಗಳಿಂದಲೂ,

**ಫಲಂದಿಶತಿ ದೇಹಿನಾ ಮಿತಿಹಿ ಸಂಪ್ರದಾಯ ಸ್ಥಿತಿ।**
**ಶ್ರುತಿ ಸ್ಮೃತಿ ಗುರೂಕ್ತಿಭಿರ್ನಯವತೀಭಿ ರಾಭಾತಿ ನಃ ॥೫೩॥**

ಸತ್ತರ್ಕಗಳಿಂದಲೂ, ಬ್ರಹ್ಮಸೂತ್ರಗಳಿಂದಲೂ, ಪರಮಾಚಾರ್ಯರುಗಳ ದಿವ್ಯಸೂಕ್ತಿ ಸಂಪ್ರದಾಯಗಳಿಂದಲೂ, ಸ್ಥಾಪಿಸಿ, ಅಂತಹ ಸಿದ್ಧೋಪಾಯನು ಸುಮ್ಮನೆ ತನ್ನಿಷ್ಟ ಬಂದಂತೆ ಫಲ ಕೊಡುವುದಿಲ್ಲವೆಂದೂ, ಸಾಧ್ಯೋಪಾಯಗಳಿಂದ ಆರಾಧಿತನಾಗಿ ಸಂತಷ್ಟನಾದರೇನೇ ಫಲವನ್ನು ಕೊಡುವನೇ ವಿನಾ ಅನ್ಯಥಾ ಇಲ್ಲವೆಂದುಪದೇ ಶಿಸುತ್ತಾರೆ. ಆದುದರಿಂದ ಶ್ರಿಯಃಪತಿಯನ್ನು ಉಪಾಯಭಾವದಿಂದ ವರಿಸುವ ಸಾಧ್ಯೋಪಾಯವಾದ ಭರನ್ಯಾಸಾನುಷ್ಠಾನವೂ ಆವಶ್ಯಕವು. ಅದರ ಶೋಧನವೂ ಸಹ ಆವಶ್ಯಕವು. ಈ ಅಭಿಪ್ರಾಯವನ್ನೇ ಸಂಗ್ರಹಿಸಿ ಈ ಶ್ಲೋಕದಲ್ಲಿ ಉಪದೇ ಶಿಸುತ್ತಾರೆ—

**ಅರ್ಥ—ಪ್ರಭುಃ** - ಸರ್ವಶಕ್ತಿ ಸ್ವಾತಂತ್ರ್ಯ ಕಾರುಣ್ಯಾ ವೋದಲಾದವುಗಳಿಂದ ಸಮರ್ಥನಾಗಿರುವ ನಮ್ಮ ಸ್ವಾಮಿಯು, **ಯಥಾಧಿಕರಣಂ** - ವರ್ಣಾಶ್ರಮರೂಪ ಅಧಿಕಾರಕ್ಕನುಗುಣವಾಗಿ, ಎಂದರೆ ಹಾಗೆ ಅನುಷ್ಠಿಸಲ್ಪಟ್ಟ, **ಯಜನ** . . . . **ಪ್ರಭೃತಿಭಿಃ, ಯಜನ** - ಯಜ್ಞ, ದಾನ, ಹೋಮ, ಸಾಯಂಪ್ರಾತರ್ಹೋಮವೂ, **ಅರ್ಚನ** - **ಪೂಜೆ, ಭರನ್ಯಸನ** - ಭರನ್ಯಾಸಾನುಷ್ಠಾನ, **ಭಾವನಾ** - ಧ್ರುವಾನುಸ್ಮೃತಿಯು, ಎಂದರೆ ಭಕ್ತಿಯೋಗ, **ಪ್ರಭೃತಿಭಿಃ** - ಮೊದಲಾದವುಗಳಿಂದ, (ಈ ಪ್ರಭೃತಿ ಶಬ್ದದಿಂದ ಕೆಲವು ವ್ಯಾಖ್ಯಾತೃಗಳು ವ್ರತಾನುಷ್ಠಾನ, ತೀರ್ಥಯಾತ್ರೆ, ಭಗವತ್ಸೇವೆ, ಭಾಗವತಸೇವೆಗಳು ಸಂಕಲ್ಪಿಸಲ್ಪಟ್ಟವೆಂದು ಹೇಳುವರು; ಇನ್ನು ಕೆಲವರು ಭಾವನಾಶಬ್ದದಿಂದ ಭಕ್ತಿಯೋಗವು ಹೇಳಲ್ಪಟ್ಟಿದುದರಿಂದ ಪ್ರಭೃತಿ ಶಬ್ದದಿಂದ ಕರ್ಮಜ್ಞಾನಯೋಗಗಳು ಸಂಗ್ರಹಿಸಲ್ಪಟ್ಟವೆಂದು ಅಭಿಪ್ರಾಯಪಡುವರು.) **ಸಮಾರಾಧಿತಃ** - ಚೆನ್ನಾಗಿ ಆರಾಧಿಸಲ್ಪಟ್ಟವನಾಗಿಯೇ, **ದೇಹಿನಾಂ** - ಚೇತನರಿಗೆ, **ಫಲಂ ದಿಶತಿ** - ಆಯಾಯಾ ಸಾಧ್ಯೋಪಾಯಗಳಿಗೆ ಅನುಗುಣವಾದ ಫಲವನ್ನು ಕೊಡುವನು, **ಇತಿ ಹಿ** - ಎಂಬದಾಗಿಯಲ್ಲವೇ, **ಸಂಪ್ರದಾಯ ಸ್ಥಿತಿಃ** - ಪೂರ್ವಾಚಾರ್ಯರುಗಳ ಉಪದೇಶಮೂಲಕ ಪರಂಪರೆಯಿಂದ ಬಂದ ಮರ್ಯಾದೆಯ ನೆಲೆಯು, **ನಃ**-ಶಾಸ್ತ್ರಗಳ ಮತ್ತು ಆಚಾರ್ಯರುಗಳ ಉಪದೇಶಗಳಲ್ಲಿ ತುಂಬಾ ಶ್ರದ್ಧೆಯುಳ್ಳ ನಮಗೆ, **ನಯವತೀಭಿಃ** - **ಸತ್ತರ್ಕ**ಗಳಿಂದ ಯುಕ್ತವಾದ, **ಶ್ರುತಿ ಸ್ಮೃತಿ ಗುರೂಕ್ತಿಭಿಃ**-ಶ್ರುತಿ ಸ್ಮೃತಿಗಳ ಮತ್ತು ಗುರುಗಳ ದಿವ್ಯಸೂಕ್ತಿಗಳಿಂದ, **ಆಭಾತಿ** - ಪ್ರಕಾಶಿಸುತ್ತದೆ. ಯಜನ

ದಾನ ಹೋಮಾದಿಗಳ ಮೂಲಕ ಹೇಗೆ ಸರ್ವೇಶ್ವರನು ಫಲವನ್ನು ಕೊಡುವನೆಂದು ನಾವು ನಂಬಿದ್ದೇವೋ, ಹಾಗೆಯೇ ಮೋಕ್ಷಾರ್ಥಿಗೂ ಕೂಡ ಭರನ್ಯಾಸನ ಭಾವನಗಳಾದ ಪ್ರಪತ್ತಿಭಕ್ತಿಗಳಾದ ಸಾಧ್ಯೋಪಾಯಗಳ ಮೂಲಕ ಮೋಕ್ಷವನ್ನು ಕೊಡುವನೆಂಬುದು ಸಾರಾಭಿಪ್ರಾಯವು

**ತಾತ್ಪರ್ಯ**—ಈ ಸಾಧ್ಯೋಪಾಯ ಸಹಕಾರಿಗಳಾದ ಯಜನ ದಾನ ಹೋಮಾದಿ ಗಳನ್ನು **ಯಥಾಧಿಕರಣಂ** - ಅಧಿಕಾರಾನುಗುಣವಾಗಿ ಅನುಷ್ಠಿಸತಕ್ಕದ್ದೆಂದು ಹೇಳಿದರು. ಯಜನ ದಾನ ಹೋಮಗಳಲ್ಲಿ ಎಲ್ಲರಿಗೂ ಅಧಿಕಾರವಿಲ್ಲವು ತ್ರೈ ವರ್ಣಿಕರಲ್ಲದವರಿಗೆ ಅಧಿಕಾರವಿಲ್ಲವು ಅರ್ಚನ ಭರನ್ಯಾಸನಗಳಲ್ಲಿ ಸರ್ವರಿಗೂ ಅಧಿಕಾರವುಂಟು. ಭಾವನೆಯಲ್ಲಿ ಸ್ತ್ರೀ ಶೂದ್ರ ಚಂಡಾಲಾದಿಗಳಿಗೆ ಅಧಿಕಾರ ವಿಲ್ಲವು ; ಆದುದರಿಂದ **ಯಥಾಧಿಕರಣಂ** ಎಂಬ ಪ್ರಯೋಗವು

ಯಜನ ದಾನ ಹೋಮಾದಿಗಳಾದ ಇಲ್ಲಿ ಹೇಳಿರುವ ಉಪಾಯಗಳೆಲ್ಲಾ ಮುಮುಕ್ಷುವಿನ ಸಾಧ್ಯೋಪಾಯಗಳೆಂದು ಭಾವಿಸಕೂಡದು. ಚತುರ್ವಿಧಪುರುಷಾ ರ್ಥಗಳಿಗೂ ಇವು ಸಾಧ್ಯೋಪಾಯಗಳೆಂದು ಹೇಳಲ್ಪಟ್ಟವು. ಆದರೆ ಮೋಕ್ಷವನ್ನು ಸಾಧಿಸಿಕೊಡುವ ಸಾಧ್ಯೋಪಾಯಗಳು ಎರಡೇ. ಇದನ್ನು ಹಿಂದೆಯೇ " **ಪ್ರಪ ನ್ನಶ್ಚ ದ್ವೇಧಾ ಸುಚರಿತ ಪರೀಪಾಕಭಿದಯಾ** " ಎಂಬ ಸ್ಥಳದಲ್ಲಿ ಉಪಪಾದಿ ಸಿರುತ್ತಾರೆ ೮೪೮ನೆಯ ಪುಟವನ್ನು ನೋಡಿ. ಈ ಸಾಧ್ಯೋಪಾಯಗಳನ್ನು ಅನುಷ್ಠಿಸದೇ ಅವುಗಳ ನೈಜಫಲಗಳು ದೊರೆಯುವದಿಲ್ಲವು. ಹಾಗಾದರೆ ಅವು ಗಳೇ ಫಲಗಳನ್ನು ಕೊಡುತ್ತವೆಯೋ, ಇಲ್ಲವೇ ಸರ್ವೇಶ್ವರನು ಫಲಗಳನ್ನು ಕೊಡು ತ್ತಾನೆಯೋ ಎಂಬ ಪ್ರಶ್ನೆಯು ಉಂಟಾಗುತ್ತದೆ ಮೀಮಾಂಸಕರು ಹೇಳುವದೇ ನೆಂದರೆ, ಈ ಸಾಧ್ಯೋಪಾಯಗಳಿಂದ ಒಂದು ಅದೃಷ್ಟವು ಉತ್ಪನ್ನವಾಗುತ್ತದೆಂದೂ ಆದಕ್ಕೆ ಅಪೂರ್ವವೆಂಬ ಹೆಸರೆಂದೂ, ಈ ಅಪೂರ್ವವೇ ಫಲವನ್ನು ಕೊಡುತ್ತ ದೆಂದೂ ಹೇಳುವರು. ಈ ಅಭಿಪ್ರಾಯವು ಶ್ರೀ ಭಾಷ್ಯದಲ್ಲಿ ಖಂಡಿಸಲ್ಪಟ್ಟಿರು ತ್ತವೆ. ಈ ಸಾಧ್ಯೋಪಾಯಗಳೆಲ್ಲಾ ಅಚೇತನಗಳು, ತಾನೇ ಸ್ವತಂತ್ರಿಸಿಯಾಗಲಿ, ಅದೃಷ್ಟದ್ವಾರಾವಾಗಲಿ ಫಲಗಳನ್ನು ಕೊಡಲಾರವು ಫಲಕೊಡುವವನು ಸರ್ವೇ ಶ್ವರನು. ಆತನು ಈ ಸಾಧ್ಯೋಪಾಯಗಳಿಂದ ಆರಾಧಿತನಾಗಿಯೇ ಫಲ ಕೊಡು ವನೇ ವಿನಾ ತಾನಾಗಿಯೇ ಕೊಡನು. ಇದರಿಂದ ಸರ್ವಶಕ್ತನಾಗಿ, ಸ್ವತಂತ್ರನಾಗಿ, ಪರಮಕಾರುಣಿಕನಾಗಿರುವ ಮಹಾ ಪ್ರಭುವು ಈ ಅಜಾಗಳ ಸ್ತನರೂಪವಾದ ಸಾಧ್ಯೋಪಾಯಗಳ ಆವಶ್ಯಕತೆಯನ್ನು ನಿರೀಕ್ಷಿಸುವನೇ ಎಂಬಾಕ್ಷೇಪಕ್ಕೆ ಸಮಾ ಧಾನವು ಇದರಿಂದ ಹೇಳಲ್ಪಟ್ಟಿತು ಇವುಗಳಿಂದ **ಸಮಾರಾಧಿತನಾದರೇನೇ** ಸಂತುಷ್ಟನಾಗಿ ಫಲವನ್ನು ಅನುಗ್ರಹಿಸುವನು, ಇಲ್ಲದಿದ್ದರೆ ಇಲ್ಲವು ಈಸಾಧ್ಯೋ

ಪಾಯಗಳ ಆವಶ್ಯಕತೆಯು ಏಕೆಂದರೆ ತನಗೆ ವೈಷಮ್ಯ ನೈರ್ಘೃಣ್ಯಾದಿಗಳಿಲ್ಲವೆಂದು ತೋರಿಸಿಕೊಳ್ಳುವದಕ್ಕಾಗಿ ಎಂದು ಭಾವಿಸತಕ್ಕದ್ದು.

**"ಫಲಂ ದಿಶತಿ ದೇಹಿನಾಂ"** ಇಲ್ಲಿ ಚೇತನನನ್ನು ದೇಹೀ ಎಂದು ಹೇಳಿದುದು, ಆತನಿಗೆ ಪ್ರಭುವಾದ ಸ್ವಾಮಿಯು ಕರಣ ಕಳೇಬರಯೋಗವನ್ನು ಪರಮಕೃಪಯಾ ದಯಪಾಲಿಸಿರುವದು, ಆತನು ತನ್ನ ಸಙ್ಕಲ್ಪ ಪ್ರಯತ್ನಗಳ ಮೂಲಕ ಇಂತಹ ಸಾಧ್ಯೋಪಾಯಗಳನ್ನು ಅನುಷ್ಠಿಸಲಿ ಎಂಬ ಉದಾರ ಭಾವದಿಂದ ಎಂಬುದು ತೋರಿಬರುತ್ತದೆ.

ಹೀಗೆಲ್ಲಾ ಸಾಧ್ಯೋಪಾಯಗಳನ್ನು ಪೂರ್ವಸುಕೃತಗಳಿಗನುಸಾರವಾಗಿ ಅನುಷ್ಠಿಸುವಹಾಗೆ ಮಾಡುವವನು ಸಿದ್ಧೋಪಾಯನಾದ ಸರ್ವಶಕ್ತನಾದ ಸ್ವಾಮಿಯೆಂದು ತಿಳಿಸುವದಕ್ಕಾಗಿ **ಪ್ರಭು** ಶಬ್ದವನ್ನು ಪಯೋಗಿಸಿರುತ್ತಾರೆ, ಹಾಗೆ ಪ್ರೇರಿಸುವದಕ್ಕೆ ಸರ್ವೇಶ್ವರನಿಗೆ ಸರ್ವಶಕ್ತತೆಯೂ, ಕಲ್ಯಾಣ ಗುಣಗಣವೂ, ಪತ್ನೀ ಮೊದಲಾದ ವಿಶೇಷಣಗಳ ವಿಶಿಷ್ಟತೆಯೂ, ತತ್ತತ್ಫಲಪ್ರದಾನಕ್ಕೆ ಬೇಕಾದ ಸ್ವಾತಂತ್ರ್ಯ ಸಾಮರ್ಥ್ಯಾದಿಗಳೂ ಪ್ರಭು ಶಬ್ದದಿಂದ ಸಙ್ಗ್ರಹಿಸಲ್ಪಟ್ಟವು. ಈ ಪ್ರಭು ಶಬ್ದವನ್ನೇ ಶ್ರೀದೇಶಿಕರವರು ಮುಂದಿನ ವಾಕ್ಯದಲ್ಲಿ **"ಸರ್ವಜ್ಞನಾಯ್, ಸರ್ವಶಕ್ತಿಯಾಯ್, ಪರಮ ಕಾರುಣಿಕನಾಯ್, ಸರ್ವಶೇಷಿಯಾಯ್, ಸಪತ್ನೀಕನಾಯ್, ಸರ್ವಲೋಕ ಶರಣ್ಯನ್"** ಎಂದು ವಿಸ್ತರಿಸಿರುತ್ತಾರೆ. ಹೀಗೆ ಸಾಧ್ಯೋಪಾಯಗಳಿಂದಾರಾಧಿತನಾಗಿಯೇ ಸಿದ್ಧೋಪಾಯನು ಫಲವನ್ನು ಕೊಡುವನೆಂಬಭಿಪ್ರಾಯವು, ತಮಗೆ ಆಚಾರ್ಯ ಪರಂಪರಯಾ ಉಪದೇಶಮುಖೇನ ಬಂದುದು ಎಂದು ತಿಳಿಸುವದಕ್ಕಾಗಿ **ಸಂಪ್ರದಾಯಸ್ಥಿತಿಃ** ಎಂಬ ಪ್ರಯೋಗವು. ಪ್ರಕೃತ ಮೋಕ್ಷಪ್ರಾಪ್ತಿಗೆ ಭರನ್ಯಾಸನ ಭಾವನಗಳಿಲ್ಲದೆ ಪ್ರಭುವು ಮೋಕ್ಷವನ್ನು ಕೊಡುವದಿಲ್ಲವೆಂಬುದು ತಮ್ಮ ಅಭಿಪ್ರಾಯ ಮಾತ್ರವೇ ಅಲ್ಲವು ನಾಥಮುನಿಗಳು ಮೊದಲುಗೊಂಡು ಸಂಪ್ರದಾಯ ರೀತ್ಯಾ ದೊರೆತ ಜ್ಞಾನೋಪದೇಶಾಭಿಪ್ರಾಯವು. ಆದುದರಿಂದ ಸರ್ವೇಶ್ವರನು ವ ಹಾಕೃಪಾನಿಧಿಯು, ಹೇಗೂ ಉದ್ಧಾರಮಾಡುವನು, ಈ ಭರನ್ಯಾಸಾದಿಗಳಿಂದ ಪ್ರಯೋಜನವೇನು, ಇತ್ಯಾದಿ ಆಕ್ಷೇಪಗಳಿಗೆ ಸುತರಾಂ ಅವಕಾಶವಿಲ್ಲವೆಂಬ ಭಾವವು. ಇದು ಸಂಪ್ರದಾಯಸ್ಥಿತಿಯಾದುದರಿಂದ ಅದನ್ನು ಉಲ್ಲಂಘಿಸಿ ನಡೆವುವವ ಶ್ರೇಯಸ್ಕರವಲ್ಲವೆಂಬ ಭಾವವೂ ತೋರಿಬರುತ್ತದೆ.

ಬರೀ ಸಂಪ್ರದಾಯಸ್ಥಿತಿಯೇ ಆದ ಪಕ್ಷದಲ್ಲಿ ಪ್ರತಿಕಕ್ಷಿಯವರು ಮನ ಬಂದಂತೆ ನಡೆಯಬಹುದು. ಆ ಸಂಪ್ರದಾಯಸ್ಥಿತಿಗೆ ಸಂಪೂರ್ಣ ಬಲವುಂಟೆಂದು ಹೇಳುತ್ತಾರೆ. **ಪ್ರಥಮತಃ** ಸತ್ತರ್ಕದ ಬಲವುಂಟೆಂದು **ನಯುವತೀಭಿಃ** ಎಂಬುದರಿಂದ ಉಪದೇಶಿಸುತ್ತಾರೆ. **ಫಲಮತ ಉಪಪತ್ತೇಃ** ಎಂಬ (೩ ೨.೩೭) ಶಾರೀರಕ

ಸೂತ್ರದಲ್ಲಿ ಶ್ರುತಿಯಲ್ಲಿ ಹೇಳಿರುವ ಭಗವಂತನ ಅನುಗ್ರಹವೇ ಫಲಪ್ರದವಲ್ಲದೆ ಶ್ರುತಿಯಲ್ಲಿ ಹೇಳದ ಅಪೂರ್ವವು ಫಲಪ್ರದವಲ್ಲವೆಂದು ತೋರಿಸಿರುವ ಸತ್ತರ್ಕಾನುಗೃಹೀತವಾದುವು ಶ್ರುತಿಸ್ಮೃತಿ ಗುರೂಕ್ತಿಗಳು ಎಂಬ ಭಾವವು ಶ್ರೀ ದೇಶಿಕರ ವರ ಆಚಾರ್ಯರಾದ ವಾದಿಹಂಸಾಂಬುವಾಹರೆಂಬ ಅಪರನಾಮಧೇಯವುಳ್ಳ ಅಪ್ಪುಳ್ಳಾರ್ರವರು ವಾದಿಗಳಲ್ಲಿ ಪ್ರಥಮರು, ಅಂತಹ ಮಹಸೀಯರು ಈ ಶ್ರುತಿ ಸ್ಮೃತಿ ಗುರೂಕ್ತಿಗಳನ್ನೆಲ್ಲಾ ವಾದಮೂಲಿಕ ಸ್ಥಿರಪಡಿಸಿ ತಮಗೆ ಉಪದೇಶಿಸಿದರು ಎಂಬರ್ಥವು **ನಯಪತೀಭಿರಾಭಾತಿ ನಃ** ಎಂಬುದರಿಂದ ತೋರಿಬರುತ್ತದೆ. ಹೀಗೆ ಶ್ರುತಿ ಸ್ಮೃತಿ ಗುರೂಕ್ತಿಗಳು ನ್ಯಾಯಾನುಗೃಹೀತಗಳಾದರೇನೇ ಶಾಸ್ತ್ರಾರ್ಥಗಳು, **ಆಭಾತಿ**-ಪ್ರಕಾಶಿಸುತ್ತವೆ. ಇಲ್ಲದಿದ್ದರೆ ಅವುಗಳಿಂದ ಅಪಾರ್ಥಗಳೇ ತೋರಿಬರುವದರಿಂದ ಪ್ರಕಾಶಿಸುವದಿಲ್ಲವೆಂದೂ, ಆ ಕಾರಣದಿಂದಲೇ ವಿಪಕ್ಷದವರಿಗೆ ಪ್ರಕಾಶಿಸಲಿಲ್ಲವೆಂಬ ಭಾವವು. ತಮಗಾದರೋ ಮಹಾವಾದಿಶ್ರೇಷ್ಠರುಗಳ ಉಪದೇಶವು ದೊರೆತು ಶ್ರುತಿ ಸ್ಮೃತಿ ಗುರೂಕ್ತಿಗಳಿಗೆ ನ್ಯಾಯಾನುಗೃಹೀತ ಸಮಂಜಸಾರ್ಥವು ದೊರೆತಿರುವದರಿಂದ ತಾವು ಈ ಭಾಗದಲ್ಲಿ ತುಂಬಾ ಸುಕೃತಿಗಳೆಂದು ತಮ್ಮ ಎದೆಯನ್ನು ಮುಟ್ಟಿ **ನಃ** ಎಂದು ಹೇಳಿಕೊಳ್ಳುವಹಾಗೆ **ಆಭಾತಿನಃ** ಎಂದು ಹೇಳಿಕೊಂಡಿರುತ್ತಾರೆ

ಸಾಧ್ಯೋಪಾಯಗಳಿಂದ ಪ್ರೀತನಾದ ಸಿದ್ಧೋಪಾಯನೇ ಸಕಲ ಫಲಪ್ರದನೆಂಬುದಕ್ಕೆ ಪ್ರಮಾಣಗಳು ಯಾವುವೆಂದರೆ :—

೧. **"ಸ ವಾ ಏಷ ಮಹಾನಜಃ ಆತ್ಮಾ ಅನ್ನಾದೋ ವಸುದಾನೋ ವಿನ್ದತೇ ವಸು"** (ಬ. ೬ ೪ ೨೪) ಯಾವನು ಈ ಮಹತ್ತಾಗಿ ನಿತ್ಯನಾಗಿ ಉತ್ಪತ್ತಿ ರಹಿತನಾದ ಪರಮಾತ್ಮನನ್ನು ಅನ್ನವನ್ನೂ ದ್ರವ್ಯವನ್ನೂ ಕೊಡುವ ಸಿದ್ಧೋಪಾಯನೆಂದು ತಿಳಿದು ಉಪಾಸಿಸುತ್ತಾನೋ, ಆತನು ಅನ್ನವನ್ನೂ ದ್ರವ್ಯವನ್ನೂ ಹೊಂದುವನು ಎಂಬರ್ಥವು ಇದರಿಂದ ಸಾಧ್ಯೋಪಾಯಾನುಷ್ಠಾನದಿಂದ ಫಲವೆಂಬುದು ವ್ಯಕ್ತವು. ಆದರೂ ಫಲಕೊಡುವವನು ಸರ್ವೇಶ್ವರನ, ಸಾಧ್ಯೋಪಾಯವಲ್ಲವು ಸಾಧ್ಯೋಪಾಯದಿಂದ ಆರಾಧಿತನಾಗಿ ಪ್ರೀತನಾಗಿ ಫಲವನ್ನು ಕೊಡುವನು

೨ **"ಸ ಏವೈನಂ ಭೂತಿಂ ಗಮಯತಿ"** (ಯಜುರ್ವೇದ ಸಂಹಿತೆ ೨೧೧) ಯಾರು ವಾಯುದೇವತಾಕನಾದ ಯಜ್ಞವನ್ನು ಮಾಡುವರೋ, ಅವರಿಗೆ ಅದೇ ವಾಯುದೇವತೆಯು ಎಂದರೆ ತದಂತರ್ಯಾಮಿಯಾದ ಭಗವಂತನು, ಐಶ್ವರ್ಯವನ್ನು ಹೊಂದಿಸುವನು.

೩. **"ತಮಕ್ರತುಂ ಪಶ್ಯತಿ ವೀತಶೋಕೋಧಾತುಃ ಪ್ರಸಾದಾನ್ಮಹಿಮಾನ ಮೀಶಂ"** (ತೈತ್ತರೀಯ. ಅಂಭಸಿ) ಅಂತಹ ಸರ್ವಕರ್ಮ ಬಂಧ ಶೂನ್ಯ

ನಾದ ಅಪಹತ ಪಾಪ್ಮನಾದ ಮಹತ್ತಾದ ಮಹಿಮೆಯುಳ್ಳ ಸರ್ವ ನಿಯಾಮಕ ನಾದ ಪರಮಾತ್ಮನನ್ನು ಯಾವಾಗ ಸಾಕ್ಷಾತ್ಕರಿಸುವನೋ, ಆಗ ಸರ್ವ ಸ್ರಷ್ಟಾ ವಾದ ಪರಮಾತ್ಮನ ಅನುಗ್ರಹದಿಂದ ಶೋಕವಿಲ್ಲದವನಾಗುವನು ಎಂದರೆ ನಿರತಿ ಶಯ ಆನಂದವನ್ನು ಹೊಂದುವನು. (ಳ. ೨ ೧.)

೪. "ಯಂಯಮಂತಶಮಭಿಕಾಮಾ ಭವಂತಿ, ತಂತಮೇವೋಪ ಜೀವಂತಿ"

೫. "ಯಮೇ ವೈಷ ವೃಣುತೇ ತೇನ ಲಭ್ಯಃ" (ಮುಂ. ೩ ೨.೩) ಇದರರ್ಥವು ಹಿಂದೆಯೇ ಉಪಪಾದಿತವು.

ಸ್ಮೃತಿವಾಕ್ಯಗಳು.

೬. "ಅಹಂ ಹಿ ಸರ್ವ ಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ಭೋಕ್ತಾರಂ ಯಜ್ಞತಪಸಾಂ ಸರ್ವಲೋಕ ಮಹೇಶ್ವರಂ॥
ಯೇ ಯಜಂತಿ ಪಿತೄನ್ ದೇವಾನ್ ಬ್ರಾಹ್ಮಣಾನ್ ಸಹುತಾಶನಾನ್।
ಸರ್ವಭೂತಾಂತರಾತ್ಮಾನಂ ವಿಷ್ಣುಮೇವ ಯಜಂತಿತೇ ॥

ಎಂಬುದರಿಂದ ಸಾಧ್ಯೋಪಾಯಗಳಾದ ಸರ್ವ ಕರ್ಮಗಳಿಂದಲೂ ಶ್ರೀ ಮಹಾವಿಷ್ಣುವೇ ಆರಾಧಿಸಲ್ಪಡುವನೆಂದು ಹೇಳಲ್ಪಟ್ಟಿತು. ಮುಂದೆ ಆತನೇ ಪ್ರೀತನಾಗಿ ಅವುಗಳಿಗೆ ಉಚಿತವಾದ ಫಲಗಳನ್ನು ಕೊಡುವನೆಂದು ಹೇಳಲ್ಪಡು ತ್ತದೆ:—

"ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತು ಮಿಚ್ಛತಿ" ಎಂದು ಪ್ರಾರಂಭಿಸಿ ಕಡೆಗೆ,

"ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿತಾನ್"॥
ಎಂಬುದರಿಂದ ಸಾಧ್ಯೋಪಾಯಕ್ಕೆ ಉಚಿತವಾದ ಫಲವನ್ನು ಕೊಡುವವನೂ ತಾನೇ ಎಂದುಪದೇಶಿಸಲ್ಪಟ್ಟಿರುತ್ತದೆ. ಹಾಗೆಯೇ ಇನ್ನೊಂದು ಕಡೆಯಲ್ಲೂ,

ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ।
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರ ಸಾಗರಾತ್ ॥

ಇಲ್ಲಿಯೂ ಸಾಧ್ಯೋಪಾಯವಾದ ಯೋಗದಿಂದಲೇ ಬ್ರಹ್ಮಪ್ರಾಪ್ತಿಯು ಹೇಳ ಲ್ಪಟ್ಟಿರುತ್ತದೆ. (ಗೀ. ೧೬ ೨೪)

ವಾಲ್ಮೀಕಿ ಮಹರ್ಷಿಯೂ ಕೂಡ

೭. "ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ" ಎಂಬುದರಿಂದ ಸಾಧ್ಯೋಪಾಯದಿಂದ ಶ್ರೀ ರಾಮನು ಸಂತುಷ್ಟನಾಗಿ, ಅನುಗ್ರಹೋನ್ಮುಖನಾಗು

ವನು ಎಂಬುದನ್ನು "**ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ**" ಎಂಬುದರಿಂದ ತಿಳಿಸಿರುತ್ತಾರೆ.

೮. ಶ್ರೀ ಪರಾಶರರು ಪ್ರಾಚೀನ ಬರ್ಹಿವಾಕ್ಯದಿಂದ ಹೇಳುತ್ತಾರೆ :—

**ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂಚಾಪ್ಯಿಚ್ಛತಾಂ ತಥಾ ।**

**ಆರಾಧನೀಯೋ ಭಗವಾನನಾದಿಃ ಪುರುಷೋತ್ತಮಃ ॥**

(ವಿ ಪು. ೧. ೧೪. ೧೬) ಚತುರ್ವಿಧ ಪುರುಷಾರ್ಥಗಳನ್ನಪೇಕ್ಷಿಸುವವರು ಆಯಾ ಫಲಗಳಿಗನುಗುಣವಾದ ಸಾಧ್ಯೋಪಾಯಗಳಿಂದ ಪುರುಷೋತ್ತಮನನ್ನು ಆರಾಧಿಸತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ.

೯. "**ಕರ್ಣಧಾರ ಇವಾಪಾರೇ ಭಗವಾನ್ ಪಾರದರ್ಶನಃ**" ಸಂಸಾರ ಸಾಗರದಲ್ಲಿ ಮಗ್ನರಾದವರನ್ನು ಸರ್ವೇಶ್ವರನು ಹಡಗಿನಲ್ಲಿ ಕೂಡಿಸಿ ಆಚೆಯ ದಡವನ್ನು ಸೇರಿಸುವನೆಂಬುದರಿಂದ ಸಿದ್ಧೋಪಾಯನೆಂಬುದನ್ನೂ, ಹಾಗೆ ಸಿದ್ಧೋಪಾಯನಾಗಲು ಬೇಕಾದ ಭಗವತ್ಪ್ರೀತಿಯುಂಟಾಗಬೇಕಾದರೆ, "**ಅತಃ ಪುಮ್ಭಿರ್ದ್ವಿಜ ಶ್ರೇಷ್ಠಾ ವರ್ಣಾಶ್ರಮ ವಿಭಾಗಶಃ । ಸ್ವನುಷ್ಠಿತಸ್ಯ ಧರ್ಮಸ್ಯ ಸಂಸಿದ್ಧಿರ್ಹರಿತೋಷಣಮ್॥ ತಸ್ಮಾದೇಕೇನ ಮನಸಾ ಭಗವಾನ್ ಸಾತ್ವತಾಂ ಪತಿಃ । ಶ್ರೋತ್ಯವ್ಯಃ ಕೀರ್ತಿತವ್ಯಶ್ಚ ಧ್ಯೇಯಃ ಪೂಜ್ಯಶ್ಚ ನಿತ್ಯದಾ॥**" (ಭಾ. ೧. ೨. ೧೩-೧೪) ಎಂಬುದರಿಂದ ಸಾಧ್ಯೋಪಾಯದ ಆವಶ್ಯಕತೆಯು ಹೇಳಲ್ಪಟ್ಟಿತು ಹಾಗೆಯೇ "ಶ್ರವಣಂ ಕೀರ್ತನಂ" ಎಂಬಲ್ಲಿಯೂ ಸಾಧ್ಯೋಪಾಯಗಳೂ ತತ್ಸಹಕಾರಿಗಳೂ ಹೇಳಲ್ಪಟ್ಟವು ಮತ್ತು "**ಭಗವದ್ಭಕ್ತಿಯೋಗೇನ ಪ್ರಾಪ್ತಾ ಭಾಗವತೀ ಗತಿಃ**" ಭಾಗ. (೩. ೨೫. ೫೭) ಎಂಬಲ್ಲಿ ಭಕ್ತಿಯೋಗದಿಂದ ಮೋಕ್ಷಫಲವು ವಿಧಿಸಲ್ಪಟ್ಟಿರುತ್ತದೆ

೧೦. ಸರ್ವೇಶ್ವರನೇ ಲೋಕಗುರುವಾಗಿ ಅನೇಕ ಸ್ಥಳಗಳಲ್ಲಿ ಸಾಧ್ಯೋಪಾಯಾವಶ್ಯಕತೆಯನ್ನುಪದೇಶಿಸಿರುತ್ತಾನೆ. "**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ**" ವೆಂದೂ (ಗೀ ೧೮ ೬೬) "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ**" (ರಾ ಅಯೋಧ್ಯಾ ೧೮ ೩೩) ವೆಂದೂ ತನ್ನ ದಿವ್ಯಸಙ್ಕಲ್ಪವನ್ನು ವ್ಯಕ್ತಪಡಿಸಿರುತ್ತಾನೆ.

೧೧. **ಶ್ರುತಿ ಸ್ಮೃತಿ ಗುರೂಕ್ತಿಭಿಃ** ಎಂಬಲ್ಲಿ ಗುರೂಕ್ತಿಭಿಃ ಎಂಬುದರಿಂದ ಶ್ರೀ ಯತಿವರ್ಯರು "**ಫಲಮತ ಉಪಪತ್ತೇಃ**" ಎಂಬ ಸೂತ್ರವ್ಯಾಖ್ಯಾನದಲ್ಲಿ ಹೇಳಿರುವ "**ಸ ಏವಹಿ ಸರ್ವಜ್ಞಃ ಸ್ಸರ್ವಶಕ್ತಿರ್ಮಹೋದಾರೋ ಯಾಗ ದಾನ ಹೋಮಾದಿಭಿ ರುಪಾಸನೇನಚಾರಾಧಿತಃ ಐಹಿಕಾಮುಷ್ಮಿಕ**

## ಸಾಧ್ಯೋಪಾಯಂ ವಿನಾ ಸಿದ್ಧೋಪಾಯಸ್ಯ ವಶೀಕರಣಂ ನ ಸಾಧ್ಯಂ.

ಇಪ್ಪಡಿ ಸರ್ವಜ್ಞನಾಯ್, ಸರ್ವಶಕ್ತಿಯಾಯ್, ಪರಮಕಾರುಣಿಕ

---

ಭೋಗಜಾತಂ ಸ್ವಸ್ವರೂಪಾವಾಪ್ತಿರೂಪಮಪವರ್ಗಂ ಚ ದಾತುಮಿಷ್ಟೇ" ಮತ್ತು ಹಾಗೆಯೇ ಫಲಾಧಿಕರಣದ ಕೊನೆಯಲ್ಲಿ ಹೇಳಿರುವ "ತದಾರಾಧನ ರೂಪಾಣಿ ಚ ಯಾಗದಾನ ಹೋಮಾತ್ಮಕಾನಿ", "ಸ್ತುತಿನಮಸ್ಕಾರ ಸಂಕೀರ್ತನಾರ್ಚನಧ್ಯಾನ ನ್ಯಾಸಾದಿಭಿರಾರಾಧಿತಾತ್ಪರಸ್ಮಾತ್ಪುರುಷಾದೈಹಿಕಾಮುಷ್ಮಿಕಭೋಗಾಪವರ್ಗರೂಪ ಫಲಂಚ ವದಂತೀತಿಸರ್ವಂ ಸಮಂಜಸಂ" ಎಂಬೀ ವಾಕ್ಯಗಳೂ ಸಹ ಗ್ರಹಿಸಲ್ಪಟ್ಟವು. ಇವುಗಳ ಅರ್ಥವೇನೆಂದರೆ:— "ಆ ಪರಬ್ರಹ್ಮನು, ತಾನೇ ಸರ್ವಜ್ಞನು, ಸರ್ವಶಕ್ತಿಯುಳ್ಳವನು, ಮಹೋದಾರಿಯು, ಹೋಮ ಮೊದಲಾದವುಗಳಿಂದಲೂ, ಉಪಾಸನೆಯಿಂದಲೂ ಕೂಡ ಆರಾಧಿಸಲ್ಪಟ್ಟವನಾಗಿ ಐಹಿಕಾಮುಷ್ಮಿಕಭೋಗ ಸಮೂಹವನ್ನೂ, ಚೇತನನು ತನ್ನ ಸ್ವಂತ ಸ್ವರೂಪವನ್ನು ಹೊಂದುವ ಮೋಕ್ಷವನ್ನೂ, ಕೊಡಲು ಶಕ್ತನಾಗಿದ್ದಾನಷ್ಟೆ" ಮುಂದೆ ಅಚೇತನವಾಗಿ ಅನಿತ್ಯವಾಗಿ ಕ್ಷಣಧ್ವಂಸಿಯಾಗಿರುವ ಕರ್ಮವು ಕಾಲಾನ್ತರದಲ್ಲಿ ಪ್ರಾಪ್ತವಾಗುವ ಫಲವನ್ನು ಕೊಡಲಾರದಷ್ಟೇ ಎಂದು ಇನಿ- "ಸ್ತುತಿ ನಮಸ್ಕಾರ ಕೀರ್ತನೆ ಅರ್ಚನೆ ಉಪಾಸನೆ ಭರಸಮರ್ಪಣೆ ಮೊದಲಾದವುಗಳಿಂದ ಆರಾಧಿಸಲ್ಪಟ್ಟ ಪರಮ ಪುರುಷನಿಂದಲೇ ಸರ್ವವಿಧ ಭೋಗಗಳೂ ಮೋಕ್ಷವೂ ಸಹ ಫಲವೆಂದು ವೇದಾನ್ತಗಳು ಹೇಳುತ್ತವೆಯಾದುದರಿಂದ ಸಮಸ್ತ ಶಾಸ್ತ್ರವೂ ನಮಗೆ ಸಮಂಜಸವು" ಎಂದು ಹೇಳಿ ಫಲಾಧಿಕರಣವನ್ನು ಮುಗಿಸಿರುತ್ತಾರೆ. ಹೀಗೆ ಸಾಧ್ಯೋಪಾಯಾವಶ್ಯಕತೆಯನ್ನು ಹೇಳುವ ನಃ-ನಮಗೆ, ಸರ್ವವೂ ಸಮಂಜಸವು ಎಂಬರ್ಥವನ್ನು ಸೂಚಿಸುವದಕ್ಕಾಗಿಯೇ, ಆಭಾತಿನಃ ಎಂದು ಪ್ರಯೋಗಿಸಿರುತ್ತಾರೆ. ಹೀಗೆ ಶ್ರೀ ದೇಶಿಕರವರು ಶ್ರೀ ಭಾಷ್ಯಾರ್ಥಗಳನ್ನು ಮನಸ್ಸಿನಲ್ಲಿಟ್ಟೇ ಪ್ರಯೋಗಗಳನ್ನು ಮಾಡಿರುತ್ತಾರೆ.

## ಸಾಧ್ಯೋಪಾಯವಿಲ್ಲದೆ ಸಿದ್ಧೋಪಾಯನನ್ನು ವಶಮಾಡಿ ಕೊಳ್ಳುವದು ಸಾಧ್ಯವಿಲ್ಲವು

---

ಸಿದ್ಧೋಪಾಯನ ಸ್ವರೂಪ ಮಾಹಾತ್ಮ್ಯೆಯನ್ನು ಚನ್ನಾಗಿ ಅರಿತವನಾಗಿದ್ದರೂ, ಆತನಲ್ಲಿ ತುಂಬಾ ಭಕ್ತಿಯೂ ಸಂಸಾರದಲ್ಲಿ ಸಂಪೂರ್ಣವಾದ ವೈರಾಗ್ಯವೂ, ಪ್ರಾಪ್ತವಾಗಿದ್ದರೂ, ಪ್ರಾಪ್ಯವನ್ನು ಹೊಂದಬೇಕೆಂಬ ರುಚಿ, ತ್ವರೆ ಸಹ ತಲೆತೋರಿ

**ಮಾಯ್, ಸರ್ವಶೇಷಿಯಾಯ್, ಸಪತ್ನೀಕನಾಯ್, ಸರ್ವಲೋಕ ಶರಣ್ಯಮಾನ ಸಿದ್ಧೋಪಾಯ ವಿಶೇಷಮ್ ತೆಳಿನ್ದಾಲುಮ್, (೧) "ಆರೋಗ್ಯ**

---

ದ್ದರೂ, ಹೀಗೆ ಜ್ಞಾನ ಭಕ್ತಿ ವೈರಾಗ್ಯಗಳು ಈ ಮೋಕ್ಷಾರ್ಥಿಗೆ ಉಂಟಾಗಿದ್ದರೂ, ಸಾಧ್ಯೋಪಾಯವನ್ನು ಅನುಷ್ಠಿಸುವಹಾಗೆ ಮಾಡುವ ತನ್ನ ಸುಕೃತವೂ ಅದನ್ನು ಚನ್ನಾಗಿ ತಿಳಿಯುವ ಭಗವಂತನ ಅನುಗ್ರಹವೂ, ಇಲ್ಲದ ಪಕ್ಷದಲ್ಲಿ ಈ ಸಿದ್ಧೋಪಾಯನಾದ ಮುಕುಂದನು "**ನದಿಶತಿ ಮುಕುಂದೋ ನಿಜಪದಂ**" ಎಂದು ಹೇಳಿರುವಹಾಗೆ, ಮೋಕ್ಷವನ್ನು ಕೊಡುವದಿಲ್ಲವು ಎಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.

ಸರ್ವೇಶ್ವರನು ಸಿದ್ಧೋಪಾಯನಾಗಲು ಬೇಕಾದ ಕಲ್ಯಾಣಗುಣಗಳು ಆತನಲ್ಲಿವೆ ಎಂದು ಪ್ರಥಮತಃ ಹೇಳುತ್ತಾರೆ. **ಇಪ್ಪಡಿ**-ಸಿದ್ಧೋಪಾಯ ಶೋಧನಾಧಿಕಾರದಲ್ಲಿ ಸ್ಥಾಪಿಸಿದ ರೀತಿಯಲ್ಲಿ, **ಸರ್ವಜ್ಞಮಾಯ್**-ಸರ್ವಜ್ಞನಾಗಿ, ಸದಾ ಏಕಕಾಲದಲ್ಲೇ ಎಲ್ಲವನ್ನೂ ಸಾಕ್ಷಾತ್ಕರಿಸುವವನಾಗಿ, ಇದರಿಂದ ಚೇತನನು ಮಾಡಿದ್ದನ್ನರಿತು ಆತನು ಹೇಗೆ ಅನುಗ್ರಹಕ್ಕೆ ಅರ್ಹನೆಂದು ತಿಳಿಯಲು ಬೇಕಾದಗುಣವು, **ಸರ್ವಶಕ್ತಿಯಾಯ್** - ಈತನುಮಾಡುವ ಸಾಧ್ಯೋಪಾಯಗಳಿಂದ, ಪ್ರಾಪ್ಯಪ್ರಾಪಕಗಳಿಗೆ ವಿರೋಧಗಳನ್ನು ನಿವಾರಣೆಮಾಡುವ ಶಕ್ತಿಯು, ಐಹಿಕಗಳಿಗಾಗಿ ಸಾಧ್ಯೋಪಾಯಾನುಷ್ಠಾನವಾದರೂ, ತತ್ಫಲಪ್ರಾಪ್ತಿ ವಿರೋಧಿಗಳನ್ನೂ ಹೋಗಲಾಡಿಸುವ ಶಕ್ತಿಯು, **ಪರಮಕಾರುಣಿಕನಾಯ್**-ಕೃಪಾಸಾಗರನಾಗಿ, ಸಾಮರ್ಥ್ಯವಿದ್ದರೂ ಕೃಪೆಯಿಲ್ಲದಿದ್ದರೆ ಅನುಗ್ರಹ ಉಂಟಾಗುವದಿಲ್ಲವೆಂದು ಉಪಪಾದಿಸಿರುವಹಾಗೆ, ಅನುಗ್ರಹಕ್ಕೆ ಕೃಪೆಯೂ ಆವಶ್ಯಕವು, **ಸರ್ವಶೇಷಿಯಾಯ್**- ಎಲ್ಲವೂ ತನ್ನ ಪ್ರಯೋಜನಕ್ಕಾಗಿರುವದರಿಂದ ಸಮಸ್ತಕ್ಕೂ ಶೇಷಿಯಾಗಿ, ಇದರಿಂದ ಚೇತನಾನುಗ್ರಹವೂ ಆತನನ್ನು ಪ್ರೀತಿಸುವ ಸ್ವಭಾವವೂ ಹೇಳಲ್ಪಟ್ಟವು, **ಸಪತ್ನೀಕನಾಯ್**-ಅನುಗ್ರಹಮಯಳಾಗಿ ಚೇತನ ಸಂರಕ್ಷಣೆಯಲ್ಲಿ ಬದ್ಧಾದರವುಳ್ಳ ಪತ್ನಿಯಾದ ಲಕ್ಷ್ಮಿಯಿಂದ ಯುಕ್ತನಾಗಿ, ಈ ವಿಶೇಷಣವೂ ಅನುಗ್ರಹಕ್ಕೆ ಆವಶ್ಯಕವು, **ಸರ್ವಲೋಕಶರಣ್ಯಮಾನ** - ಸಮಸ್ತ ಚೇತನರಿಗೂ "**ಸಮೋಹಂಸರ್ವಭೂತೇಷು**" ಎಂದು ಹೇಳಿರುವಹಾಗೆ ಏನೊಂದೂ ಪಕ್ಷಪಾತವಿಲ್ಲದೆ ತನ್ನನ್ನಾಶ್ರಯಿಸಿದವರನ್ನೆಲ್ಲಾ ಉದ್ಧಾರಮಾಡುವವನಾದ, **ಸಿದ್ಧೋಪಾಯ ವಿಶೇಷಮ್ ತೆಳಿನ್ದಾಲುಮ್** - ಸರ್ವೇಶ್ವರನೇ ಸಿದ್ಧೋಪಾಯನೆಂಬ ಜ್ಞಾನ ಉಂಟಾಗಿದ್ದರೂ, **ಮತ್ತು** (೨)

---

(೧)

ಮಿಂದ್ರಿಯೌಲ್ಬಣ್ಯ ಮೈಶ್ವರ್ಯಂ ಶತ್ರು ಶಾಲಿತಾ। ವಿಯೋಗೋ ಬಾಂಧ ವೈರಾಯುಃ ಕಿಂತದ್ಯೇನಾತ್ರತುಷ್ಯತಿ" ಎಱ್ಱಪಡಿಯೇ ವಿವೇಕಮಿಲ್ಲಾ ದಾರ್ಕ್ಕು ಗುಣಮಾಯ್ ತೋತ್ತಿನ ವೈಯುಮ್ ದೋಷಮಾನಪಡಿ ಕಂಡು (ಸಂಸಾರ) ವೈರಾಗ್ಯಮ್ ಪೂರ್ಣಮಾನಾಲುಮ್ (೨) "ಪರಮಾತ್ಮನಿ

---

"ಆರೋಗ್ಯಮಿಂದ್ರಿಯೌಲ್ಬಣ್ಯಂ - ಆರೋಗ್ಯವು ವಿಷಯೋಪಭೋಗಿಗೆ ಬಹಳ ಬೇಕಾದುದಾದರೂ, ವಿವೇಕಿಗೆ ಇಂದ್ರಿಯಗಳ ಹಾವಳಿಗೆ ಕಾರಣಭೂತವಾಗಿ ದೋಷಯುಕ್ತವಾದುದು, ಐಶ್ವರ್ಯಂ ಶತ್ರುಶಾಲಿತಾ- ಐಶ್ವರ್ಯವೇನೋ ಐಹಿಕ ಭೋಗಗಳಿಗೆ ಸಾಧಕವಾಗಿದ್ದರೂ ವಿವೇಕಿಗೆ ಇತರರಲ್ಲಿ ಅಸೂಯೆಯನ್ನುಂಟು ಮಾಡುವದರಮೂಲಕ ಶತ್ರುಗಳನ್ನುಂಟುಮಾಡುವ ದೋಷವುಳ್ಳದು, ಅಥವಾ ಕಾಮಕ್ರೋಧಾದಿಗಳನ್ನುಂಟುಮಾಡುವ ದೋಷವುಳ್ಳದು, ವಿಯೋಗೋ ಬಾಂಧವೈರಾಯುಃ - ಆಯುಸ್ಸು ಬಹುಕಾಲ ಈ ಲೋಕದ ಉಪಭೋಗಗಳಿಗೆ ಸಾಧಕವಾಗಿದ್ದರೂ, ಬಹುಕಾಲ ಬದುಕಿದವನಿಗೆ ಪುತ್ರ ಕಳತ್ರ ಸಹೋದರಾದಿಗಳಾದ ಅನೇಕ ಬಂಧುವಿಯೋಗಮೂಲಕ ದುಃಖವನ್ನುಂಟುಮಾಡುವ ದೋಷವುಳ್ಳದು, ಹೀಗಿರುವಾಗ, ಯೇನ - ಯಾವುದರಿಂದ, ಅತ್ರ - ಈ ದೋಷ ಸಪ್ತಕಗಳಿಂದ ಕೂಡಿದ ಲೋಕದಲ್ಲಿ, ತುಷ್ಯತಿ - ಸಂತೋಷಪಡುವನೋ, ತತ್-ಅದು, ಕಿಂ - ಯಾವುದು? ಎಂದರೆ ಯಾವುದೂ ವಿವೇಕಿಗೆ ಸಂತೋಷಕರವಾದುದಿಲ್ಲವು ಎಂಬ ಭಾವವು. ಸರ್ವವೂ (೩) "ಭಯನಿದಾನವೇ" ಭಯಕ್ಕೆ ಕಾರಣಭೂತವಾದುದೇ ಎಂಬ ತಾತ್ಪರ್ಯವು. ಎಱ್ಱಪಡಿಯೇ - ಎಂದು ಹೇಳಿರುವಹಾಗೆ, ವಿವೇಕಮಿಲ್ಲಾದಾರ್ಕ್ಕು - ವಿವೇಕವಿಲ್ಲದವರಿಗೆ, ಗುಣಮಾಯ್ ತೋತ್ತಿನ ವೈಯುಮ್ - ಒಳ್ಳೇದೆಂಬದಾಗಿ ತೋರಿಬಂದ, ಆಯುರಾರೋಗ್ಯೈಶ್ವರ್ಯವೆಲ್ಲವೂ, ದೋಷಮಾನಪಡಿ ಕಂಡು - ದೋಷಯುಕ್ತವಾದುದು ಎಂದು ಚನ್ನಾಗಿ ಅರಿತು, ವೈರಾಗ್ಯಮ್ ಪೂರ್ಣಮಾನಾಲುಮ್ - ಸಂಸಾರದಲ್ಲಿ ವೈರಾಗ್ಯವು ಸಂಪೂರ್ಣವಾಗಿ ಉಂಟಾಗಿದ್ದರೂ

"ಸಂಪದಸ್ಸ್ವಪ್ನ ಸಂಕಾಶಾ ಯೌವನಂ ಕುಸುಮೋಪಮಂ।
ತಟಿಚ್ಚಂಚಲ ಮಾಯುಶ್ಚ ಕಸ್ಯಸ್ಯಾಜ್ಜ್ಞನತೋ ಧೃತಿಃ॥"

ಎಂದರೆ "ಸಂಪತ್ತುಗಳು ಕನಸಿನಲ್ಲಿ ಕಂಡ ಗಂಟಿನ ಹಾಗೂ, ಯೌವನವು ಬಾಡಿ ಹೋಗುವ ಮೃದುವಾದ ಪುಷ್ಪದಹಾಗೂ, ಆಯುಸ್ಸು ಚಂಚಲವಾದ ಮಿಂಚಿನ

---

(೨) ನಾರದ ಪರಿವ್ರಾಜಕೋಪನಿಷತ್ತು. (೩) ಅಭೀತಿಸ್ತುತಿಃ.

**ಯೋ ರಕ್ತಃ” ಎಙ್ಗರಪಡಿಯೇ ಪ್ರಾಪ್ಯರುಚಿಯುಂಡಾನಾಲುವ್ (೪) “ಮಹತಾ ಪುಣ್ಯಪಣ್ಯೇನ ಕ್ರೀತೇಯಂ ಕಾಯನೌ ಸ್ತ್ವಯಾ। ಪ್ರಾಪ್ತುಂ ದುಃಖೋದಧೇಃ ಪಾರಂ ತ್ವರ ಯಾವನ್ನ ಭಿದ್ಯತೇ” ॥ ಎಙ್ಗರ ಪಡಿಯೇ ತ್ವರೈ ಪಿರಿನ್ದಾಲುವ್, ಅನಾದಿಯಾಗ ಅನುವೃತ್ತಮಾನ**

---

ಹಾಗೂ ವಿರಕ್ತನಿಗೆ ತೋರಿಬರುವದರಿಂದ, ಇಂತಹ ಸರಿಯಾದ ಜ್ಞಾನವುಳ್ಳ ಯಾವ ವಿವೇಕಿಗೆ ಇವುಗಳಲ್ಲಿ ಸ್ಥಿರಬುದ್ಧಿಯುಂಟಾಗುತ್ತದೆ” ಎಂಬುದು ಇಲ್ಲಿ ಅನುಸಂಧೇಯವು. (೩) “**ಪರಮಾತ್ಮನಿಯೋರಕ್ತಃ**” ಪರಮಾತ್ಮನಲ್ಲಿ ಯಾವನು ಭಕ್ತಿಯುಳ್ಳವನೋ, ಮುಂದಕ್ಕೆ “**ವಿರಕ್ತೋಽಪರಮಾತ್ಮನಿ**” ಪರಮಾತ್ಮವ್ಯತಿರಿಕ್ತಗಳಾದ ಐಹಿಕಗಳಲ್ಲಿ ವೈರಾಗ್ಯವುಳ್ಳವನಾಗುತ್ತಾನೆ ಎಂದು ಇದೆ, **ಎಙ್ಗರಪಡಿಯೇ** - ಎಂದು ಹೇಳಿರುವ ಹಾಗೆ, **ಪ್ರಾಪ್ಯರುಚಿ ಯುಂಡಾನಾಲುವ್** - ಪ್ರಾಪ್ಯನಾದ ಶ್ರಿಯಃಪತಿಯನ್ನು ಹೊಂದಬೇಕೆಂಬ ಆಶೆಯನ್ನು ಹೊಂದಿದ್ದರೂ, (೪) ಇದು ಶಿಷ್ಯನಿಗೆ ಗುರುವು ಹೇಳುವ ಸಂದರ್ಭವು. “**ಮಹತಾ** - ಮಹತ್ತಾದ, **ಪುಣ್ಯಪಣ್ಯೇನ** - ಪುಣ್ಯವೆಂಬ ದ್ರವ್ಯದಿಂದ, **ತ್ವಯಾ** - ನಿನ್ನಿಂದ, **ಇಯಂ** – ಈ, **ಕಾಯನೌಃ** - ಶರೀರವೆಂಬ ಹಡಗು, **ಕ್ರೀತಾ** - ಕೊಂಡುಕೊಳ್ಳಲ್ಪಟ್ಟಿತು, ಎಂದರೆ ತುಂಬಾ ಪುಣ್ಯವಿಶೇಷವಿದ್ದುದರಿಂದಲೇ ಇಂತಹ ಮಾನುಷ ಜನ್ಮವು ನಿನಗೆ ಲಭಿಸಿರುತ್ತದೆ ಎಂದು ಹೇಳಿರುತ್ತದೆ. ಈ ಶರೀರವನ್ನೇ ಒಂದು ಹಡಗಿಗೆ ಹೋಲಿಸಿರುತ್ತಾರೆ; ಏತಕ್ಕೆಂದರೆ ಉತ್ತರಾರ್ಧದಿಂದ ಹೇಳುತ್ತಾರೆ. **ಯಾವತ್** - ಎಷ್ಟರಲ್ಲಿ, ಈ ದೇಹವೆಂಬ ಹಡಗು, **ನ ಭಿದ್ಯತೇ** – ಒಡೆದುಹೋಗುವದಿಲ್ಲವೋ ಅಷ್ಟರಲ್ಲೇ ಎಂದರೆ ದೇಹಾವಸಾನವು ಪ್ರಾಪ್ತವಾಗುವದರೊಳಗೇನೇ, **ದುಃಖೋದಧೇಃ** – ಸಂಸಾರವೆಂಬ ದುಃಖರೂಪ ಸಮುದ್ರದ, **ಪಾರಂ**- ಆಚೆಯ ದಡವನ್ನು, **ಪ್ರಾಪ್ತುಮ್** - ಹೊಂದುವದಕ್ಕೆ, **ತ್ವರ** - ಶೀಘ್ರಪಡಿಸು, ಎಂದರೆ ಈ ಜ್ಞಾನವಿವೇಕಗಳಿರುವ ಈ ಮಾನುಷಜನ್ಮವು ತುಂಬಾ ಪುಣ್ಯಶೇಷದಿಂದುಂಟಾದುದು, ಈ ಜನ್ಮವು ಕಳೆಯುವದರಲ್ಲೇ ಜ್ಞಾನ ಸಂಪಾದಿಸಿಕೊಂಡು ಸಾಧ್ಯೋಪಾಯಾನುಷ್ಠಾನವನ್ನು ಮಾಡಿ, ಆತನನ್ನು ಹೊಂದು,” **ಎಙ್ಗರಪಡಿಯೇ** - ಎಂದು ಹೇಳಿರುವ ಹಾಗೆ, **ತ್ವರೈ ಪಿರನ್ದಾಲುವ್** - ಪ್ರಾಪ್ಯವನ್ನು ಹೊಂದಬೇಕೆಂಬ ತ್ವರಾತಿಶಯವು ಉಂಟಾಗಿದ್ದರೂ, ಹೀಗೆ ಸರ್ವೇಶ್ವರನನ್ನು ಹೊಂದಲು ಬೇಕಾದ ವೈರಾಗ್ಯ, ಪ್ರಾಪ್ಯರುಚಿ, ಪ್ರಾಪ್ಯತ್ವರೆ ಇವೆಲ್ಲವೂ ಇದ್ದರೂ, ಮುಂದಿನ ವಾಕ್ಯ

---

(೪) ವರಾಹ ಪುರಾಣ.

**ಆಜ್ಞಾತಿಲಂಘನ ಮಡಿಯಾಗ ಪ್ಪಿರಿನ್ದ ನಿರ್ಕ್ಕಿರ ಬಂಧಕಮಾನ ಭಗವನ್ನಿಗ್ರಹತ್ತುಕ್ಕು ಪ್ರಶಮನಮಾಗ, "ಮಾಮೇಕಂ ಶರಣಂ ವ್ರಜ" ಎನ್ರ ವಿಧಿವಾಕ್ಯ (ತ್ತಿ) ತ್ತಾಲುಮ್, "ಪ್ರಪದ್ಯೇ" ಎನ್ರ ಅನುಷ್ಠಾನ ವಾಕ್ಯ (ತ್ತಿ) ತ್ತಾಲುಮ್ ಶೊಲ್ಲಪ್ಪಟ್ಟ ಸಾಧ್ಯೋಪಾಯ ವಿಶೇಷಂ ತೆಳಿಯಾದ ಪೋದು ಸಿದ್ಧೋಪಾಯ ಭೂತನಾನ ಸರ್ವೇಶ್ವರನೈ ವಶೀಕರಿಕ್ಕವಿರಗಿಲ್ಲೈ.**

---

ಶೇಷದಿಂದ ಸಾಧ್ಯೋಪಾಯಾನುಷ್ಠಾನವು ಪರಮಾತ್ಮ ಕೃಪಯಾ ಉಂಟಾಗದಿದ್ದ ಪಕ್ಷದಲ್ಲಿ ಭಗವದನುಗ್ರಹವು ಅಂತವನಿಗಿಲ್ಲವೆಂದು ಹೇಳುತ್ತಾರೆ, ಏಕೆಂದರೆ "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂದು ಶ್ರೀ ಭಾಷ್ಯದಲ್ಲಿ ಯತಿವರ್ಯರು ಹೇಳಿರುವ ಹಾಗೆ ಸಾಧ್ಯೋಪಾಯಾನುಷ್ಠಾನವಿಲ್ಲದುದರಿಂದ ಶ್ರಿಯಃಪತಿಯನ್ನು ವಶೀಕರಣ ಮಾಡಲಸಾಧ್ಯವೆಂಬಭಿಪ್ರಾಯವು. **ಅನಾದಿಯಾಗ ಅನುವೃತ್ತಮಾನ** - ಈ ದುಷ್ಕರ್ಮಗಳು ಯಾವಾಗಲಿಂದ ಅನುಸರಿಸಿ ಬಂದಿವೆ ಎಂದು ಹೇಳಲು ಸಾಧ್ಯವಿಲ್ಲದುದರಿಂದ, ಅನಾದಿಯಾಗಿ ಅನುಸರಿಸಿ ಬಂದ ಎಂದು ಹೇಳಲ್ಪಟ್ಟಿರುತ್ತದೆ. **ಆಜ್ಞಾತಿಲಂಘನಂ** – ಸರ್ವೇಶ್ವರನ ಆಜ್ಞೆಗಳಾದ ವಿಧಿ ನಿಷೇದ ವಾಕ್ಯಗಳನ್ನು ಅತಿಕ್ರಮಿಸಿ ನಡೆದ ಅಕೃತ್ಯಕರಣ ಕೃತ್ಯಾಕರಣ ರೂಪ ಅಪರಾಧಗಳ, **ಅಡಿಯಾಗ** – ಮೂಲಕವಾಗಿ, **ಪಿರಿನ್ದ ನಿರ್ಕ್ಕಿರ** – ಉತ್ಪನ್ನವಾಗಿರುವ, **ಭಗವನ್ನಿಗ್ರಹಕ್ಕೆ, ಪ್ರಶಮನಮಾಗ** - ಶಾಂತಿಯ ರೂಪದಲ್ಲಿ, **ಮಾಮೇಕಂ ಶರಣಂ ವ್ರಜ** – ನನ್ನೊಬ್ಬನನ್ನು ಉಪಾಯವಾಗಿ ಹೊಂದು, **ಎನ್ರ ವಿಧಿವಾಕ್ಯತ್ತಾಲುಮ್** - ಎಂಬ ವಿಧಿವಾಕ್ಯದಿಂದಲೂ, **"ಪ್ರಪದ್ಯೇ" ಎನ್ರ ಅನುಷ್ಠಾನ ವಾಕ್ಯತ್ತಾಲುಮ್** – **ಚರಣೌ ಶರಣ ಮಹಂ ಪ್ರಪದ್ಯೇ** ಎಂದು ಅನುಷ್ಠಾನ ಮಂತ್ರವಾದ ದ್ವಯ ಪೂರ್ವ ಖಂಡದಿಂದಲೂ, **ಶೊಲ್ಲಪ್ಪಟ್ಟ** – ಹೇಳಲ್ಪಟ್ಟ, **ಸಾಧ್ಯೋಪಾಯ ವಿಶೇಷಂ**-ಸಾಧ್ಯೋಪಾಯ ವಿಶೇಷವು, **ತೆಳಿಯಾದಪೋದು** - ಅದನ್ನು ಅನುಷ್ಠಿಸುವದು ಅತ್ಯಾವಶ್ಯಕವೆಂಬ ಜ್ಞಾನ ಉಂಟಾಗದೇ ಇರುವಾಗ, **ಸಿದ್ಧೋಪಾಯ ಭೂತನಾದ ಸರ್ವೇಶ್ವರನನ್ನು, ವಶೀಕರಿಕ್ಕ ವಿರಗಿಲ್ಲೈ** - ವಶಮಾಡಿಕೊಳ್ಳುವ ಮಾರ್ಗವು ಇನ್ನು ಯಾವುದೂ ಇರುವದಿಲ್ಲವು. **ಸಾಧ್ಯೋಪಾಯವನ್ನವಲಂಬಿಸದೇ ಸಿದ್ಧೋಪಾಯನು ಅನುಗ್ರಹಿಸುವದಿಲ್ಲವೆಂದು ಇಲ್ಲಿ ಹೇಳಲ್ಪಟ್ಟಿತು. ಹಿಂದೆ " ಪ್ರಪನ್ನಾದನ್ಯೇಷಾಂ " ಎಂಬ ಶ್ಲೋಕಮೂಲಕ ಸಾಧ್ಯೋಪಾಯಗಳು ಭಕ್ತಿಪ್ರಪತ್ತಿಗಳೆರಡೇ ಎಂದೂ, ಇವುಗಳಲ್ಲಿ ಯಾವುದಾದರೂ ಒಂದನ್ನು ಅವಲಂಬಿಸದೆ ಮುಕ್ತಿದಾಯಕನು ಮುಕ್ತಿಯನ್ನು ಕೊಡ**

**ಆಗ್ಯೈಯಾಲ್ ಅರ್ದಿ ಅಧಿಕಾರತ್ತಿಲುಮ್ ಸ್ವರೂಪತ್ತಿಲುಮ್, ಪರಿಕರಙ್ಗಳಿಲುಮ್, ವರುಮ್ ಕಲಕ್ಕಙ್ಗಳೈ ಶಮಿಪ್ಪಿಕ್ಕಿರೋಮ್ :—**

---

ನೆಂದು ಹೇಳಲ್ಪಟ್ಟಿರುತ್ತದೆ. **ಮಾಮೇಕಂ ಶರಣಂ ವ್ರಜ** ಎಂಬುವದರಿಂದ ಭಕ್ತಿರೂಪ ಉಪಾಯವೂ, **ಪ್ರಪದ್ಯೇ** ಎಂಬುವದರಿಂದ ಭರನ್ಯಾಸವೂ ಹೇಳಲ್ಪಟ್ಟಿತೆಂದೂ, ಅಥವಾ ಎರಡರಿಂದಲೂ ಭರನ್ಯಾಸವು ಬೋಧಿಸಲ್ಪಟ್ಟಿತೆಂದೂ, ಭರನ್ಯಾಸವು ಪ್ರಕರಣಾನುಗುಣ್ಯವಾಗಿ ಹೇಳಲ್ಪಟ್ಟರೂ ಭಕ್ತಿಮಾರ್ಗವೂ ಉಪಲಕ್ಷಣ ರೀತ್ಯಾ ಉಪದೇಶಿಸಲ್ಪಟ್ಟಿತೆಂದೂ ಭಾವಿಸಬಹುದು. ಶ್ರುತಿಯೂ ಕೂಡ "**ನಾನ್ಯಃಪನ್ಥಾ ಅಯನಾಯ ವಿದ್ಯತೇ**" (ಪು. ಸೂ) ಎಂದು ಸಾಧ್ಯೋಪಾಯಾನುಷ್ಠಾನವಿಲ್ಲದೆ ಆತನನ್ನು ಹೊಂದಲು ಸಾಧ್ಯವಿಲ್ಲವೆಂದು ಹೇಳುತ್ತದೆ. ಮತ್ತು

**"ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿತೇ"**

ಈ ಜೀವಾತ್ಮನಿಗೆ ಕರ್ಮಕೃತವಿಚಿತ್ರ ಗುಣಮಯವಾದ ಪ್ರಕೃತಿ ಸಂಸರ್ಗರೂಪವಾದ ಸಂಸಾರದಿಂದ ಬಿಡುಗಡೆಯು ಪ್ರಪದನವನ್ನನುಷ್ಠಿಸದೆ ಎಂದಿಗೂ ಉಂಟಾಗುವದಿಲ್ಲವೆಂದೂ ಹೇಳಲ್ಪಟ್ಟಿರುತ್ತದೆ. ಮತ್ತು ಧ್ಯಾನ ಶ್ಲೋಕದಲ್ಲಿ

**"ಯತ್ಪ್ರಪತ್ತಿಂ ವಿನಾ ಸರ್ವೈ ಯಸ್ಯಮಾಯಾ ದುರತ್ಯಯಾ ।**
**ಧನಂಜಯ ರಥಸ್ಥಂ ತತ್ ಪ್ರಪದ್ಯೇ ಪರಮಂ ಮಹಃ"**

ಯಾವ ಸರ್ವೇಶ್ವರನಲ್ಲಿ ಶರಣಾಗತಿಯನ್ನನುಷ್ಠಿಸದೆ ಸಂಸಾರವನ್ನು ದಾಟಲಸಾಧ್ಯವೋ, ಅಂತಹ ಅರ್ಜುನಲೀಲಾ ಸಾರಥಿಯಾದ ಸರ್ವೋತ್ಕೃಷ್ಟ ತೇಜಸ್ಸನ್ನು ಶರಣು ಹೊಂದುವೆನು. **ಆಗ್ಯೈಯಾಲ್** - ಹೀಗೆ ಸಾಧ್ಯೋಪಾಯಾನುಷ್ಠಾನವಿಲ್ಲದೆ ಮೋಕ್ಷವಿಲ್ಲವೆಂಬುದು ಸ್ಥಾಪಿತವಾದನಂತರ, (೧) **ಅಧಿಕಾರತ್ತಿಲುಮ್** – ಯಾರಿಗೆ ಈ ಸಾಧ್ಯೋಪಾಯವಾದ ಭರನ್ಯಾಸದಲ್ಲಿ ಅಧಿಕಾರವೆಂಬುವದರಲ್ಲೂ, (೨) **ಸ್ವರೂಪತ್ತಿಲುಮ್** - ಅದರ ಸ್ವರೂಪದಲ್ಲೂ, (೩) **ಪರಿಕರಙ್ಗಳಿಲುಮ್** – ಅದರ ಅಂಗಗಳಲ್ಲೂ, **ವರುಮ್ ಕಲಕ್ಕಙ್ಗಳೈ** – ಬರುವ ಶಙ್ಕಾರೂಪ ಆಕ್ಷೇಪಗಳನ್ನು, **ಶಮಿಪ್ಪಿಕ್ಕಿರೋಮ್** - ಶಮನಮಾಡುತ್ತೇವೆ, ಎಂಬದಾಗಿ **ಈ ಅಧಿಕಾರದಲ್ಲಿ ಉಪದೇಶಿಸುವದನ್ನು ಪ್ರತಿಜ್ಞಾವಾಕ್ಯರೂಪದಲ್ಲಿ ಹೇಳಿರುತ್ತಾರೆ. ಈ ಅಧಿಕಾರದಲ್ಲಿ ಮೂರು ವಿಧವಾದ ಆಕ್ಷೇಪಗಳಿಗೆ ಸಮಾಧಾನವು ಹೇಳಲ್ಪಡುತ್ತದೆ:—(೧) ಅಧಿಕಾರ ವಿಷಯದಲ್ಲಿ (೨) ಸ್ವರೂಪ ವಿಷಯದಲ್ಲಿ (೩) ಪರಿಕರಗಳ ವಿಷಯದಲ್ಲಿ ಉಂಟಾಗಬಹುದಾದ ಶಙ್ಕಾಗಳನ್ನು ಪೂರ್ವಪಕ್ಷ**

## ಪ್ರಪತ್ತೇಃ ಸ್ಸರ್ವಾಧಿಕಾರತ್ವೇ ಸಮರ್ಥನಮ್

ಇಪ್ಪ್ರಪತ್ತಿಯು ವೊರು ವೈದಿಕ ಧರ್ಮಮನ್ರೋ? ಇದುವು ವೊರು ಯಾಗ ವಿಶೇಷ ಮಾಗವನ್ರೋ ನ್ಯಾಸವಿದ್ಯೈ ಯಿಲೆಯೋದಪ್ಪಡು

---

ಮಾಡಿ ಅನುವದಿಸಿ ಅವುಗಳಿಗೆ ಸಮಾಧಾನವನ್ನೂ ಹೇಳುತ್ತಾರೆ. ಹೀಗೆ ಸಾಧ್ಯೋಪಾಯ ವಿಷಯವಾದ ಶಙ್ಕೆಗಳು ಶೋಧಿಸಲ್ಪಡುವದರಿಂದ ಇದಕ್ಕೆ ಸಾಧ್ಯೋಪಾಯ ಶೋಧನಾಧಿಕಾರವೆಂಬ ಹೆಸರು.

### (೧) ಪ್ರಪತ್ತಿಯಲ್ಲಿ ಸರ್ವರಿಗೂ ಅಧಿಕಾರ ಉಂಟೆಂಬುದರ ಸಮರ್ಥನೆಯು.

ಪ್ರಥಮತಃ ಅಧಿಕಾರ ವಿಷಯದಲ್ಲುಂಟಾಗುವ ಪೂರ್ವಪಕ್ಷವನ್ನುಪಪಾದಿಸಿ ಅದನ್ನು ನಿರಸನ ಮಾಡುತ್ತಾರೆ. ಇಪ್ಪ್ರಪತ್ತಿಯು-ಈ ಭರನ್ಯಾಸವು, ಒರು ವೈದಿಕ ಧರ್ಮಮನ್ರೋ-ವೇದದಲ್ಲಿ ಹೇಳಿರುವ ಒಂದು ಕರ್ಮಾನುಷ್ಠಾನವಲ್ಲವೋ? ಇದುವುಮ್ - ಈ ಪ್ರಪದನವು, ಒರು ಯಾಗವಿಶೇಷಮಾಗಮನ್ರೋ - ಒಂದು ಯಾಗವಿಶೇಷವೆಂದಲ್ಲವೇ ನ್ಯಾಸವಿದ್ಯೆಯಲ್ಲಿ, ಓದಪ್ಪಡುಗಿರದು - ಪಠಿತವಾಗಿರುತ್ತದೆ ಎಂದರೆ ಹೇಳಲ್ಪಟ್ಟಿರುತ್ತದೆ. ಆಗೈಯಾಲ್ - ಆದುದರಿಂದ, ಇದು ಸರ್ವಾಧಿಕಾರಮಾಗಕ್ಕೂಡಮೋ - ಈ ಪ್ರಪತ್ತ್ಯನುಷ್ಠಾನದಲ್ಲಿ ಶೂದ್ರ ಚಂಡಾಲ ಮೊದಲುಗೊಂಡು ಎಲ್ಲರಿಗೂ ಅಧಿಕಾರ ಉಂಟೆಂದು ಅಧಿಕಾರಿ ವಿಭಾಗಾಧಿಕಾರದಲ್ಲಿ ಹೇಳಿರುವದು ಸರಿಯೋ, ಎನ್ರು - ಎಂಬದಾಗಿ, ಶಿಲರ್-ಕೆಲವರು, ಅವರು ಯಾರೆಂದರೆ, ಶ್ರೀ ಸೋಮೇಶಿಯಾಂಡಾನ್ ಪ್ರಭೃತಿಗಳು, ವಿಚಾರಿಪ್ಪಾರ್‌ಗಳ್ - ಪೂರ್ವಪಕ್ಷವನ್ನು ಹೇಳುವರು. ಭರನ್ಯಾಸವೂ ಒಂದು ವೇದವಿಹಿತ ಧರ್ಮವು. ನ್ಯಾಸವಿದ್ಯೆಯಲ್ಲಿ ಒಂದು ಯಾಗ ವಿಶೇಷವೆಂದೇ ರೂಪಕ ಮಾಡಿ ಹೇಳಿರುತ್ತದೆ. ಅದು ಯಾವುದೆಂದರೆ, ನಾವುಗಳು ಅದನ್ನು ಪ್ರತಿದಿನವೂ ದೇವತಾರ್ಚನೆಯ ಶಾತ್ತುಮುರೆಯಲ್ಲಿ ಪಠಿಸುತ್ತೇವೆಯಾದುದರಿಂದ, ಓದಪ್ಪಡುಗಿರದು - ಎಂಬ ಪ್ರಯೋಗವು (೧) "ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ" ಎಂದಾರಂಭಿಸಿ, "ತಸ್ಮಾದ್ಬ್ರಹ್ಮಣೋ ಮಹಿಮಾನ ಮಿತ್ಯುಪನಿಷತ್" ಎಂದು ಮುಗಿಸುವ ವಾಕ್ಯವಾಗಿರುತ್ತದೆ. ಇದರರ್ಥವೇನೆಂದರೆ:— ನ್ಯಾಸವಿದ್ಯಾನಿಷ್ಠನ ಸ್ವರೂಪಸ್ಥಿತಿ ಪ್ರವೃತ್ತಿಗಳೆಲ್ಲಾ ಒಂದು ಯಾಗರೂಪವಾದುದೆಂದು ಇಲ್ಲಿ ಹೇಳಲ್ಪಡುತ್ತದೆ. ಈ ನ್ಯಾಸವಿದ್ಯೆ ಎಂಬ ಯಾಗಕ್ಕೆ ಜೀವಾತ್ಮನೇ ಯಜಮಾನನು, ಯಜ್ಞ ಯಜಮಾನನು ಸಪತ್ನೀಕನಾಗಿರಬೇಕು, ಶ್ರದ್ಧೆಯೇ

ಗಿರದು. ಆಗೈಯಾಲ್ ಇದು ಸರ್ವಾಧಿಕಾರವಾಗ ಕ್ಕೂಡುವೋ ವೆನ್ರು ಶಿಲರ್ ವಿಚಾರಿಪ್ಪರ್‌ಗಳ್.

---

ಪತ್ನಿಯು, ಆ ಪ್ರಪನ್ನನ ಶರೀರವೇ ಇಧ್ಮವು ಕಟ್ಟಿಗೆಯು, ವಕ್ಷಸ್ಥಳವೇ ವೇದಿಕೆಯು, ವಕ್ಷಸ್ಥಳದ ಕೂದಲುಗಳೇ ಪರಿಸ್ತರಣ ದರ್ಭೆಗಳು, ಶಿಖೆಯೇ ವೇದವು, ಇಲ್ಲಿ ವೇದ ಶಬ್ದವು ಯಾಗದಲ್ಲಿ ಬೇಕಾದ ದರ್ಭವಿಶೇಷವನ್ನು ಸೂಚಿಸುತ್ತದೆ. (ಈಗಿನವರಿಗೆ ವೇದವೇ ಬೇಕಾಗಿಲ್ಲವಾದುದರಿಂದ ಶಿಖೆಯಿಲ್ಲದವರಾಗಿರುತ್ತಾರೆ.) ಹೃದಯವೇ ಕೋಪವೆಂಬ ಪಶುವನ್ನು ಕಟ್ಟುವ ಯೂಪಸ್ತಂಭವು, ಕಾಮವೇ ಎಂದರೆ ಭಗವದನುಭವದ ಆಶೆಯೇ ಹೋಮಕ್ಕೆ ಬೇಕಾದ ತುಪ್ಪವು, ಕೋಪವೇ ವಧಿಸತಕ್ಕ ಪಶುವು, ಶಾಂತಿಯೇ ಬ್ರಾಹ್ಮಣರಿಗೆ ಕೊಡುವ ದಕ್ಷಿಣೆಯು, ವಾಕ್ಕೇ ಎಂದರೆ ಪ್ರಪನ್ನನ ಭಗವದ್ಗುಣಪ್ರಶಂಸಾರೂಪ ವಾಕ್ಕೇ ಋತ್ವಿಕ್ಕು ಹೇಳತಕ್ಕ ಮಂತ್ರಗಳು, ಪ್ರಾಣವೇ ಎಂದರೆ ವಾಯು ಸಂಚಾರಗಳೇ ಉದ್ಗಾತೃವಿನ ಸಾಮಗಾನವು, ಚಕ್ಷುಸ್ಸೇ ಎಂದರೆ ಜ್ಞಾನ ಚಕ್ಷುಸ್ಸೇ ಅಧ್ವರ್ಯುವಿನ ಯಜುರ್ವೇದಾಮ್ನಾನವು, ಮನಸ್ಸೇ ಬಹ್ಮಾ, ಕಿವಿಗಳೇ ಅಗ್ನಿಧ್ರವು, ದೇಹಾವಸನದವರಿವಿಗೂ ಯಾಗದೀಕ್ಷೆಯು, ಇವನು ಊಟಮಾಡುವದೂ ಪಾನಮಾಡುವದೂ ಸೋಮಪಾನವು, ಹೀಗೆಯೇ ರೂಪಕಮಾಡಿ ಹೇಳಿ ಕೊನೆಗೆ ಯಾಗಕ್ಕೆ ಅವಭೃಥವೇ ಮರಣವೆಂದು ಹೇಳಿ, ಈತನ ಜೀವಮಾನದಲ್ಲೆಲ್ಲಾ ನಡೆಯತಕ್ಕ ಒಂದು ದೊಡ್ಡ ಅಗ್ನಿಹೋತ್ರವೆಂದು ತಿಳಿಸಿ, ಹೀಗೆ ತಿಳಿದ ಜ್ಞಾನಿಯಾದ ಪ್ರಪನ್ನನಿಗೆ ಉಂಟಾಗಬಹುದಾದ ಅರ್ಚಿರಾದಿಗತಿಯನ್ನು ಬೋಧಿಸಿ ಪರಬ್ರಹ್ಮಪ್ರಾಪ್ತಿಯನ್ನು ಫಲವಾಗಿ ಉಪದೇಶಿಸಿರುತ್ತದೆ. ಹಾಗೆಯೇ ಪುರುಷಸೂಕ್ತದ ೧೮ನೆಯ ಋಕ್ಕಿನಲ್ಲಿ ಹೇಳಲ್ಪಟ್ಟಿರುತ್ತದೆ:— (೨) "ಯಜ್ಞೇನ ಯಜ್ಞ ಮಯಜಂತ ದೇವಾಃ । ತಾನಿ ಧರ್ಮಾಣಿ ಪ್ರಥಮಾನ್ಯಾಸರ್ । ತೇಹನಾಕಂ ಮಹಿಮಾನ ಸ್ಸಚಂತೇ । ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ" ॥ ಮುಕ್ತರಾಗಬೇಕೆಂಬುವರು ಭರನ್ಯಾಸರೂಪಯಜ್ಞದಿಂದ, ಯಜ್ಞೋವೈವಿಷ್ಣುಃ ಎಂದು ಹೇಳಿರುವ ಹಾಗೆ ಸರ್ವಯಜ್ಞಾರಾಧ್ಯನಾದ ಶ್ರೀ ಮಹಾವಿಷ್ಣುವನ್ನು ಆರಾಧಿಸುತ್ತಾರೆ. ಅಂತವರು ನಿತ್ಯವಿಭೂತಿಯಲ್ಲಿರುವ ಅನಂತ ಗರುಡ ವಿಷ್ವಕ್ಸೇನಾದಿ ನಿತ್ಯಸೂರಿಗಳೊಂದಿಗೆ ಸೇರುವದಕ್ಕಾಗಿ ಅರ್ಚಿರಾದಿಗಳಿಂದ ಸನ್ಮಾನಿಸಲ್ಪಟ್ಟು ದಿವ್ಯ ವೈಕುಂಠವನ್ನು ಹೋಗಿ ಸೇರುವರು ಎಂದು ಹೇಳಲ್ಪಟ್ಟಿರುತ್ತದೆ. (೩) "ಯ ಸ್ಸಮಿಧಾಯ ಆಹುತೀಯೋ

ವೇದೇನ ದಾಶಮರ್ತ್ಯೋ ಅಗ್ನಯೇ ಯೋ ನಮಸಾ ಸಸ್ವಧ್ವರಃ" (೪) "ಹವಿ ಗ್ರ್ಗಹೀತ್ವಾತ್ಮರೂಪಂ ವಸುರಣ್ಯೇತಿ ಮಂತ್ರತಃ ಜುಹುಯಾತ್ಪ್ರಣವೇನಾಗ್ನಾವಚ್ಯುತಾಖ್ಯೇ ಸನಾತನೇ" ಜೀವಾತ್ಮರೂಪದ ಹವಿಸ್ಸನ್ನು ತೆಗೆದುಕೊಂಡು ಓಂ ಎಂಬ ಪ್ರಣವವನ್ನು ಉಚ್ಚರಿಸಿ, ಅನಾದಿಯಾದ ಅಚ್ಯುತನೆಂಬ ಅಗ್ನಿಯಲ್ಲಿ "ವಸುರಣ್ಯೋವಿಭೂರಸಿ ಎಂಬ ಮಂತ್ರವನ್ನು ಹೇಳಿ ಹೋಮ ಮಾಡತಕ್ಕದ್ದು ಎಂದರೆ ಆತನ ಪಾದದಲ್ಲಿ ಸಮರ್ಪಿಸತಕ್ಕದ್ದೆಂಬ ಭಾವವು. ಮಂತ್ರವು ಯಾವುದೆಂದರೆ :—"ವಸುರಣ್ಯೋ ವಿಭೂರಸಿ, ಪ್ರಾಣೇತ್ವಮಸಿ ಸಂಧಾತಾ, ಬ್ರಹ್ಮ್ರನ್ತ್ವಮಸಿ ವಿಶ್ವಸೃಕ್ ತೇಜೋದಾಃ ತ್ವಮಸ್ಯಗ್ನೇಃ ವರ್ಚೋದಾಃ ತ್ವಮಸಿ ಸೂರ್ಯಸ್ಯ ದ್ಯುಮ್ನೋದಾಃ ತ್ವಮಸಿ ಚಂದ್ರಮಸ ಉಪಯಾಮ ಗೃಹೀತೋಸಿ, ಬ್ರಹ್ಮಣೇತ್ವಾ ಮಹಸ ಓಮಿತ್ಯಾತ್ಮಾನಂ ಯುಂಜೀತ" (ತೈ. ಅಂ೫೧) ಇದರರ್ಥವೇನೆಂದರೆ :—ಇದು, ನ್ಯಾಸಶಬ್ದದಿಂದ ಹೇಳಲ್ಪಡುವ ಪ್ರಪದನ ಕರಣಮನ್ತ್ರವು. ವಸುರಣ್ಯಃ ಎಂದರೆ ವಸುಗಳಿಂದ ಪ್ರಾಪ್ಯನು, ಎಂಬುದರಿಂದ ಸರ್ವ ದೇವತೆಗಳಿಗೂ ಉಪಾಸ್ಯನು. ಎಲ್ಲಕ್ಕೂ ಆತ್ಮಾವಾಗಿ ವ್ಯಾಪಿಸಿರುವದರಿಂದ ಸರ್ವಕ್ಕೂ ನಿಯನ್ತಾವಾಗಿ ವಿಭುವು. ಪ್ರಾಣೇತ್ವಮಸಿಸಂಧಾತಾ – ಪ್ರಾಣ ಶಬ್ದದಿಂದ ಹೇಳಲ್ಪಡುವ ಕಾರ್ಯಕಾರಣಗಳ ಸಂಯೋಜಕನು; ವಿಶ್ವಸೃಕ್ - ವಿಶ್ವವನ್ನು ಸೃಷ್ಟಿಸುವವನು; ತ್ವಮಸಿ ತೇಜೋದಾಃ - ತೇಜಸ್ಸನ್ನು ಕೊಡುವನೂ ನೀನೇ, ಕಾಂತಿಯನ್ನು ಕೊಡುವನೂ ನೀನೇ, ಸೂರ್ಯಚಂದ್ರರಿಗೂ ಕಾಂತಿಯನ್ನು ಕೊಡುವನು ನೀನೇ. ನೀನು ಬಹು ಕಾಲಕ್ಕೆ ಸಿಕ್ಕಿರುವಿ, ನಿನ್ನನ್ನು ಶರಣು ಹೊಂದೋಣ; ನಿನ್ನ ಪ್ರಯೋಜನಕ್ಕಾಗಿಯೇ ಭಗವಚ್ಛೇಷತ್ವವನ್ನು ಉಪಪಾದಿಸುವ ಪ್ರಣವೋಚ್ಚಾರಣೆ ಮೂಲಕವಾಗಿ ಆತ್ಮಸಮರ್ಪಣೆಯನ್ನು ಮಾಡತಕ್ಕದ್ದೆಂಬುದು, ಈ ಶ್ರುತ್ಯರ್ಥವು. (೫) "ಸಮಿತ್ಸಾಧನಕಾದೀನಾಂ ಯಜ್ಞಾನಾಂ ನ್ಯಾಸ ಮಾತ್ಮನಃ। ನಮಸಾ ಯೋಕರೋ ದ್ದೇವೇ ಸಸ್ವಧ್ವರ ಇತೀರಿತಃ" ಇದು ಮೂರನೆಯ ಪ್ರಮಾಣದ ಉಪಬ್ರಹ್ಮಣವು. ಸಮಿತ್ತೇ ಸಾಧನವಾಗಿ ವುಳ್ಳೋಣ ಮೊದಲಾದವುಗಳಿಂದ ಕೂಡಿದ ಯಜ್ಞಗಳ ಮಧ್ಯೆ ಆತ್ಮಾವನ್ನು ನ್ಯಾಸಮಾಡುವ ಭರನ್ಯಾಸವನ್ನು ಯಾವನು ಅಖಂಡ ನಮಸ್ಸಿನ ಮೂಲಕ ಸರ್ವೇಶ್ವರನಲ್ಲಿ ಮಾಡುತ್ತಾನೋ ಅವನು ಸಮಾಚೀನವಾದ ಯಜ್ಞವನ್ನು ಮಾಡಿದವನೆಂದು ತಿಳಿಯತಕ್ಕದ್ದು.

ಹೀಗೆ ಭರನ್ಯಾಸವೂ ಒಂದು ಯಾಗರೂಪಧರ್ಮವೆಂದು ಹೇಳಿರುವದರಿಂದಲೂ ಶ್ರುತಿಯಲ್ಲಿ ತ್ರೈವರ್ಣಿಕರಲ್ಲದೆ ಇತರರಾದ ಶೂದ್ರಾದಿಗಳಿಗೆ ಇಂತಹ ವೈದಿಕ

**ಇದು ಸರ್ವೇಶ್ವರನ್ನೈ ಸರ್ವರುಕ್ಕುಮ್ ಶರಣಮೆನ್ರೋದುಗಿರ ಶ್ವೇತಾಶ್ವತರ ಶ್ರುತಿಬಲತ್ತಾಲೇ ಪರಿಹೃತಮ್. ಇವ್ವರ್ಥಮ್ (೧) "ಸರ್ವಲೋಕ**

---

ಧರ್ಮಗಳಲ್ಲಿ ಅಧಿಕಾರವಿಲ್ಲವೆಂದೂ ಅಪಶೂದ್ರಾಧಿಕರಣದಲ್ಲಿ ಹೇಳಿರುವದರಿಂದಲೂ ಈ ಪ್ರಪತ್ತಿಯಲ್ಲಿ ಸರ್ವರಿಗೂ ಅಧಿಕಾರ ಉಂಟೆಂದು ಹೇಳಿದುದು ಸರಿಯೋ ಎಂದಾಕ್ಷೇಪವು. ಈ ಆಕ್ಷೇಪಕ್ಕೆ ಸಮಾಧಾನವನ್ನು ಮುಂದಿನ ವಾಕ್ಯದಿಂದ ಹೇಳುತ್ತಾರೆ.

**ಇದು** - ಈ ಆಕ್ಷೇಪವು, **ಸರ್ವೇಶ್ವರನ್ನೈ** - ಸರ್ವೇಶ್ವರನನ್ನು, **ಸರ್ವರುಕ್ಕುಮ್** - ಸಮಸ್ತರಿಗೂ, **ಶರಣಮ್** - ಉಪಾಯನು, **ಎನ್ರುಮ್ ಓದುಗಿರ** - ಎಂದು ಪಠಿಸುವ ಶ್ವೇತಾಶ್ವತರ ಶ್ರುತಿಯ, **ಬಲತ್ತಾಲೇ** - ಪ್ರಮಾಣವಾಗಿರುವ ಬಲದಿಂದ, **ಪರಿಹೃತಮ್**-ಪರಿಹಾರವನ್ನು ಹೊಂದಿತು. ಈ ಅಭಿಪ್ರಾಯವನ್ನು ಶ್ರೀಮದಾಚಾರ್ಯರವರು **"ಶ್ರೌತೀಸರ್ವಶರಣ್ಯತಾ ಭಗವತಸ್ಸ್ಮೃತ್ಯಾಪಿ ಸತ್ಯಾಪಿತಾ"** ಎಂಬ ಪ್ರಪತ್ತಿಯೋಗ್ಯಾಧಿಕಾರದ ಸಂಗ್ರಹ ಶ್ಲೋಕದಲ್ಲಿ ಸ್ಥಾಪಿಸಿರುತ್ತಾರೆ. ಇಲ್ಲಿ **ಸರ್ವರುಕ್ಕುಮ್** ಎಂದು ಹೇಳುವಾಗ ಏನೊಂದೂ ಸಂಕೋಚವಿಲ್ಲದೆ ಶೂದ್ರ ಪಂಚಮರಿಗೂ ಕೂಡ ಅನ್ವಯಿಸುವದರಿಂದ ಏನೊಂದೂ ವ್ಯತ್ಯಾಸವಿಲ್ಲದೆ ಸರ್ವರಿಗೂ ಈ ಉಪಾಯಾನುಷ್ಠಾನದಲ್ಲಿ ಅಧಿಕಾರವುಂಟೆಂಬ ಭಾವವು. ಉಪನಿಷತ್ತುಗಳಲ್ಲಿ ತೈತ್ತರೀಯ ಮತ್ತು ಶ್ವೇತಾಶ್ವತರಗಳುಬಹು ವ್ಯಕ್ತವಾಗಿಯೂ ಬಹುಸ್ಫುಟವಾಗಿಯೂ ಉಪದೇಶಿಸುವದರಿಂದ ಅಂತಹ ಪ್ರಮಾಣಕ್ಕೆ ವ್ಯತ್ಯಸ್ತವಾಗಿ ಅರ್ಥಮಾಡುವದೇ ಸಾಧ್ಯವಲ್ಲದುದರಿಂದ **ಶ್ವೇತಾಶ್ವತರ ಶ್ರುತಿ ಬಲತ್ತಾಲೆ** ಎಂದು ಹೇಳಿರುತ್ತಾರೆ. **"ಸರ್ವಸ್ಯ ಶರಣಂ ಸುಹೃತ್"** ಎಂಬುದು ಆ ಶ್ರುತಿವಾಕ್ಯವು. **"ಪ್ರಪತ್ತಿಕ್ಕು ಜಾತ್ಯಾದಿ ನಿಯಮ ಮಿಲ್ಲಾಮೈಯಾಲೇ ಸರ್ವಾಧಿಕಾರತ್ವಂಸಿದ್ಧಮ್"** ಎಂದು ಅಲ್ಲಿ ಸ್ಥಾಪಿಸಿರುತ್ತಾರೆ. ಹಾಗೆಯೇ

**ನ ಜಾತಿಭೇದಂ ನ ಕುಲಂ ನ ಲಿಙ್ಗಂ ನ ಗುಣಕ್ರಿಯಾಃ ।**
**ನ ದೇಶಕಾಲೌ ನಾವಸ್ಥಾಂ ಯೋಗೋಹ್ಯಯಮಪೇಕ್ಷತೇ ॥**

ಭರನ್ಯಾಸರೂಪವಾದ ಈ ಯೋಗವಾದರೋ, ಬ್ರಾಹ್ಮಣ ಕ್ಷತ್ರಿಯ ಶೂದ್ರಾದಿ ಜಾತಿ ಭೇದವನ್ನಾಗಲಿ ಉತ್ಕೃಷ್ಟ ನಿಕೃಷ್ಟ ಕುಲಗಳ ವ್ಯತ್ಯಾಸವನ್ನಾಗಲಿ ಸ್ತ್ರೀ ಪುರುಷ ಭೇದವನ್ನಾಗಲಿ, ಗುಣಕ್ರಿಯೆಗಳ ಉತ್ತಮಾಧಮ ಸ್ಥಿತಿಯನ್ನಾಗಲಿ,

---

(೧) ರಾಮಾ. ಯುದ್ಧ. ೧೭. ೧೪.

**ಶರಣ್ಯಾಯ" (೨) ಸರ್ವಯೋಗ್ಯ ಮನಾಯಾಸ ಮಪ್ರಮಾದ ಮನೂಪ ಮಮ್ । ಪ್ರಪನ್ನಾರ್ತಿ ಹರಂ ವಿಷ್ಣುಂ ಶರಣಂ ಗಂತು ಮರ್ಹಸಿ " ಇತ್ಯಾ**

---

ದೇಶಕಾಲಗಳ ವಿವೇಚನೆಯನ್ನಾಗಲಿ, ಅವಸ್ಥೆಯ ಸಮಾಚೀನತ್ವವನ್ನಾಗಲಿ ಅಪೇಕ್ಷಿಸುವದಿಲ್ಲವು.

ಮುಂದೆ ಕೆಲವು ಶ್ರುತ್ಯುಪಬ್ರಹ್ಮಣಗಳನ್ನು ಮೇಲಿನಭಿಪ್ರಾಯದ ಸಮರ್ಥನೆಗಾಗಿ ಉದಾಹರಿಸುತ್ತಾರೆ:—

**ಸರ್ವಲೋಕಶರಣ್ಯಾಯ ರಾಘವಾಯ ಮಹಾತ್ಮನೇ । ನಿವೇದಯತ ಮಾಂ ಕ್ಷಿಪ್ರಂ ವಿಭೀಷಣಮುಪಸ್ಥಿತಂ ॥** ಎಂಬುದು ಪೂರಾ ಶ್ಲೋಕವು, **ಸರ್ವಲೋಕ ಶರಣ್ಯಾಯ** - ಅಧಿಕಾರ ಭೇದವೇನೂ ಇಲ್ಲದೆ ದೇವ ಮನುಷ್ಯ ತಿರ್ಯಕ್‌ಸ್ಥಾವರಾದಿ ಸಮಸ್ತರಿಗೂ ಮತ್ತು **"ನಿಷಾದಾನಾಂ ನೇತಾ"** ಎಂಬ ದಯಾ ಶತಕ ಶ್ಲೋಕ ೬೫ರಲ್ಲಿ ಹೇಳಿರುವಹಾಗೆ ನಿಮ್ನೋನ್ನತಿ ಭೇದವಿಲ್ಲದೆ ಸಮಸ್ತರಿಗೂ ಆಶ್ರಯಿಸಲು ಯೋಗ್ಯನಾದ, **ರಾಘವಾಯ** - ಶರಣಾಗತರನ್ನು ರಕ್ಷಿಸುವದರಲ್ಲಿಯೂ ಬೇಡಿದುದನ್ನು ಕೊಡುವದರಲ್ಲೂ ಅತ್ಯಂತ ಪ್ರಸಿದ್ಧಿಯನ್ನುಹೊಂದಿದ ರಘುವಂಶದಲ್ಲಿ ಅವತರಿಸಿದವನಾದ, **ಮಹಾತ್ಮನೇ** - ಮಹತ್ತಾದ ಕೃಪೆಯಿಂದ ಕೂಡಿದ ಮನಸ್ಸುಳ್ಳವನಾದ, ಅಥವಾ ಮನುಷ್ಯಾವತಾರಿಯಾಗಿರುವ ಪರಮಾತ್ಮನಾದ ಶ್ರೀರಾಮನಿಗೆ, **ವಿಭೀಷಣಂ ಮಾಂ** - ಶ್ರೀರಾಮನನ್ನು ಸಕಲವಿಧ ಬಂಧುತ್ವೇನ ಭಾವಿಸಿದ ವಿಭೀಷಣನಾದ ತನ್ನನ್ನು, ಒಂದು ಮುಹೂರ್ತ ಕೂಡ ಆತನನ್ನು ಬಿಟ್ಟಿರಲಾರೆನಾದುದರಿಂದ ತುಂಬಾ ದಾಹಪೀಡಿತನು ನೀರನ್ನು ಹೇಗೆ ಪಾನ ಮಾಡದಿರಲಾರನೋ ಹಾಗೆ ಇರುವ ತನ್ನನ್ನು, ಅಥವಾ ಧರ್ಮದಲ್ಲೇ ಬುದ್ಧಿ ಇರಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಿ ಅಂತಹ ವರವನ್ನು ಪಡೆದವನಾದುದರಿಂದ, ಇದುವರೆಗಿನ ಸ್ಥಿತಿಯು ಅಗ್ನಿಯಲ್ಲಿ ಬಿದ್ದು ತಪಿಸುವಂತಿರುವದರಿಂದ, ಅಂತಹ **ವಿಭೀಷಣಮುಪಸ್ಥಿತಂ** - ವಿಭೀಷಣನಾದ ತನ್ನನ್ನು, ಅಥವಾ ಆ ವರಪ್ರಸಾದದಿಂದುಂಟಾದ ಜ್ಞಾನದಿಂದ ಶ್ರೀರಾಮನು ಸರ್ವಲೋಕ ಶರಣ್ಯನೆಂದು ನಂಬಿರುವ ವಿಭೀಷಣನಾದ ತನ್ನನ್ನು, **ನಿವೇದಯತ** - ಆತನ ಪಾದದಲ್ಲಿ ನೀವುಗಳು ಪುರುಷಕಾರಭೂತರಾಗಿ ಸಮರ್ಪಿಸತಕ್ಕದ್ದು.

(೨) **"ಸರ್ವಯೋಗ್ಯಂ** - ಸಮಸ್ತರಿಗೂ ಶರಣ್ಯನಾಗಿರಲು ಯೋಗ್ಯನು, ದಯಾದಿ ಕಲ್ಯಾಣಗುಣಗಳಿಂದಲೂ, ಸರ್ವಶೇಷಿಯಾಗಿರುವದರಿಂದಲೂ, ಶರಣಾ

---

(೨)

ದ್ಯುಪಬೃಹ್ಮಣಙ್ಗಳಾಲುವ್ (೩) "ತ್ರಯಾಣಾಂ ಕ್ಷತ್ರಿಯಾದೀನಾಂ" ಎನ್ರು ತುಡಙ್ಗಿ ಶೂದ್ರ ಪರ್ಯಂತಙ್ಗಳಾನ ವರ್ಣಂಗಳೈ ಯೆಡುತ್ತು "ಪ್ರಪನ್ನಾ ನಾಂಚ ತತ್ವತಃ" ಎನ್ರು ಶೊಲ್ಲುಗಿರ ಶ್ರೀ ಸಾತ್ವತ ವಚನತ್ತಾಲುವ್, "ಕುಯೋನಿಷ್ವಪಿ ಸಂಜಾತೋ ಯಸ್ಸಕೃಚ್ಛರಣಂಗತಃ । ತಂ

---

ಗತ ಪರಿಪಾಲನಾದಿ ವ್ರತದಿಂದಲೂ ಯೋಗ್ಯನು, ಸರ್ವಯೋಗ್ಯನಾಗಿದ್ದರೂ, ತುಂಬಾ ಕಷ್ಟಸಾಧ್ಯನೋ ಎಂದರೆ, **ಅನಾಯಾಸಂ** - ಏನೊಂದೂ ಆಯಾಸವಿಲ್ಲದೆ ಸಿದ್ಧೋಪಾಯನು, ಹಾಗೆ ಸುಲಭನಾದರೂ ಪ್ರಮಾದವೇನಾದರೂ ಉಂಟೋ ಎಂದರೆ, **ಅಪ್ರಮಾದಂ** - ಏನೊಂದೂ ಪ್ರಮಾದವಿಲ್ಲದಿರುವವನು, **ಅನೂಪಮಂ** - ತನಗೆ ಸಮರು ಯಾರೂ ಇಲ್ಲದವನು, ಅಸದೃಶನು, **ಪ್ರಪನ್ನಾರ್ತಿಹರಂ** - ಪ್ರಪನ್ನನ ಕ್ಲೇಶಗಳನ್ನೆಲ್ಲಾ ಅಪಹರಿಸುವವನು ಎಂದರೆ ಹೋಗಲಾಡಿಸುವವನು ಇಂತಹ, **ವಿಷ್ಣುಂ** - ವಿಷ್ಣುವನ್ನು, **ಶರಣಂ ಗಂತುಮರ್ಹಸಿ**- ಶರಣು ಹೊಂದಲು ಯೋಗ್ಯನು, ಇಲ್ಲಿಯೂ **ಸರ್ವಯೋಗ್ಯಂ** ಎಂದಿರುವದರಿಂದ, **ಸರ್ವಸ್ಯಶರಣಂ** ಎಂಬ ಶ್ರುತ್ಯರ್ಥವು ಉಪಬೃಹ್ಮಣ ಮಾಡಲ್ಪಟ್ಟಿತು." ಇಲ್ಲಿ **ಅನಾಯಾಸಂ, ಅಪ್ರಮಾದಂ, ಅನೂಪಮಂ** ಎಂಬ ವಿಶೇಷಣಗಳು ವಿಷ್ಣುವಿಗೆ ಸಂಬಂಧಿಸಿದವಾದರೂ, ಅಂತಹ ವಿಷ್ಣುವನ್ನು **ಶರಣಂ ಗಂತುಂ** ಎಂದು ಹೇಳಿರುವದರಿಂದ, ಶರಣಶಬ್ದಕ್ಕೂ ವಿಶೇಷಣಗಳೆಂದು ಭಾವಿಸಿ, ಆ ವಿಷ್ಣುವಿನಲ್ಲಿ ಪ್ರಪದನವೂ ಕೂಡ ಅನಾಯಾಸ, ಅಪ್ರಮಾದ ಅನೂಪಮಂ ಎಂದು ಭಾವಿಸಬಹುದು ; **ಇತ್ಯಾದ್ಯುಪಬೃಹ್ಮಣಙ್ಗಳಾಲುವ್**-ಇವೇ ಮೊದಲಾದ ಉಪಬೃಹ್ಮಣಗಳಿಂದಲೂ, **ತ್ರಯಾಣಾಂ ಕ್ಷತ್ರಿಯಾದೀನಾಂ** - ತ್ರಯಾಣಾಂ ಎಂದರೆ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂದು ಎಲ್ಲಿ ಅರ್ಥ ಉಂಟಾಗುತ್ತದೋ ಎಂಬ ಶಂಕಾದಿಂದ, **ಕ್ಷತ್ರಿಯಾದೀನಾಂ** ಎಂದು ಇಲ್ಲಿ ಹೇಳಲ್ಪಟ್ಟಿರುತ್ತದೆ, ಕ್ಷತ್ರಿಯ ವೈಶ್ಯ ಶೂದ್ರರುಗಳ, **ಎನ್ರು ತುಡಙ್ಗಿ** - ಎಂದು ಆರಂಭಿಸಿ, **ಶೂದ್ರ** ಪರ್ಯಂತಗಳಾದ ವರ್ಣಗಳನ್ನು, **ಯೆಡುತ್ತು** - ಸ್ಪಷ್ಟವಾಗಿ ತೋರುವಹಾಗೆ ಮಾಡಿ, **"ಪ್ರಪನ್ನಾನಾಂಚ ತತ್ವತಃ"** "ಯಥಾರ್ಥವಾಗಿಯೂ ಪ್ರಪನ್ನರಾದ," **ಎನ್ರು** - ಎಂಬದಾಗಿ, **ಶೊಲ್ಲುಗಿರ ಶ್ರೀ ಸಾತ್ವತ ವಚನತ್ತಾಲುವ್** - ಹೇಳುವ ಶ್ರೀ ಸಾತ್ವತ ಸಂಹಿತಾ ವಾಕ್ಯದಿಂದಲೂ, ಇಲ್ಲಿ **ಪ್ರಪನ್ನಾನಾಂ** ಎಂಬುದು ತ್ರಯಾಣಾ ಕ್ಷತ್ರಿಯಾದೀನಾಂ ಎಂಬುವದರೊಂದಿಗೆ ಅನ್ವಯುವಾದುದರಿಂದ ಶೂದ್ರರಲ್ಲೂ

---

(೩) ಶ್ರೀ ಸಾತ್. ೨. ೯.

**ಮಾತಾ ಪಿತೃಹಂತಾರ ಮಃಪಿಪಾತಿಭವಾರ್ತಿಹಾ" ಎನ್ರು ಶೊಲ್ಲುಗಿರ ಸನ ತ್ಕುಮಾರ ಸಂಹಿತಾ ವಚನತ್ತಾಲುಮ್, ದೃಢೀಕೃತಮ್.**

---

ಪ್ರಪನ್ನತೆಗೆ ಅರ್ಹತೆಯುಂಟೆಂಬುದು ತೋರಿಬರುತ್ತದೆ. ಇದರಿಂದ ಪ್ರಪತ್ತಿಗೆ ಸರ್ವಾಧಿಕಾರತ್ವವು ಸಿದ್ಧವು. **"ಕುಯೋನಿಷ್ವಪಿ** - ಕುತ್ಸಿತ ಯೋನಿಗಳಾದ ಶೂದ್ರ, ನಿಷಾದ, ಪಂಚಮ ಜಾತಿಯಲ್ಲೂ ಕೂಡ, **ಸಂಜಾತಃ** - ಹುಟ್ಟಿದರೂ, **ಸಕೃಚ್ಛರಣಂ ಗತಃ**-ಮ ಕ್ತಿದಾಯಕನನ್ನು ಒಂದುಸಲ ಶರಣು ಹೊಂದುವನಾ ಗುತ್ತಾನೋ, **ತಂ** - ಅಂತಹ ಪ್ರಪನ್ನನನ್ನು, **ಮಾತಾಪಿತೃ ಹಂತಾರಮಪಿ** - ತಾಯಿತಂದೆಯನ್ನು ಕೊಂದವನಾಗಿದ್ದರೂ, **ಭವಾರ್ತಿಹಾ** - ಸಂಸಾರ ಬಂಧ ದಿಂದುಂಟಾಗುವ ಕ್ಲೇಶಗಳನ್ನು ಹೋಗಲಾಡಿಸುವ ಭಗವಂತನು, **ಪಾತಿ**-ಸಂರಕ್ಷಿಸು ತ್ತಾನೆ" **ಎನ್ರು** - ಎಂಬದಾಗಿ, **ಶೊಲ್ಲುಗಿರ** - ಹೇಳುವ ಸನತ್ಕುಮಾರಸಂಹಿತಾ ವಾಕ್ಯದಿಂದಲೂ, **ದೃಢೀಕೃತಮ್** - ಸಮರ್ಥನೆ ಮಾಡಲ್ಪಟ್ಟಿತು. ಪ್ರಪದನ ದಲ್ಲಿ ಅಧಿಕಾರವು ಬ್ರಾಹ್ಮಣಾದಿ ತ್ರಿವರ್ಣದವರಿಗೆ ಮಾತ್ರವೇ ಅಲ್ಲದೆ ಶೂದ್ರ ಪಂಚಮರಿಗೂ ಕೂಡ ಉಂಟು. ಇದಕ್ಕೆ ಸರ್ವರಿಗೂ ಅಧಿಕಾರ ಉಂಟೆಂಬುದಕ್ಕೆ ಶ್ರುತಿ ಪ್ರಮಾಣವನ್ನು ಉದಾಹರಿಸಿ, ಅನಂತರ ಶ್ರುತಿಯು ಸರ್ವಾಧಿಕಾರತ್ವವನ್ನೇ ವಿಧಿಸಿತು ಎಂಬುದನ್ನು ಸಮರ್ಥನೆ ಮಾಡಿ ಹೇಳುವದಕ್ಕಾಗಿ ಸಾತ್ವತ ಸನತ್ಕು ಮಾರವಾಕ್ಯಗಳನ್ನೂ ಕೂಡ ಉದಾಹರಿಸಿದರು. **ಕುಯೋನಿಷು** ಎಂದು ಹೇಳಿರು ವದರಿಂದ ಇದಕ್ಕೆ ಜಾತ್ಯಾದಿ ಭೇದವೂ ಇಲ್ಲವೆಂದು ಹೇಳಿದುದಲ್ಲದೆ, ಅಧಿಕಾ ರಿಯು ಎಷ್ಟು ಪಾಪಿಷ್ಠನಾಗಿ ತಾಯಿತಂದೆಗಳನ್ನು ಕೊಂದವನಾದರೂ ರಕ್ಷಿಸಲ್ಪ ಡುವನೆಂದು ಹೇಳಲ್ಪಟ್ಟಿತು. **ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಂಚನ । ದೋಷೋ ಯದ್ಯಪಿ ತಸ್ಯ ಸ್ಯಾತ್ಸತಾ ಮೇತದಗರ್ಹಿತಂ** ದೋಷಿಯೂ ಕೂಡ ಶರಣಾಗತನಾದರೆ ರಕ್ಷಿಸಲ್ಪಡುವನೆಂದು ಶ್ರೀ ರಾಮನು ಹೇಳಿ ರುತ್ತಾನೆ. ಮಹಾ ಪಾಪಿಯಾದ ರಾವಣನೇ ಶರಣಾಗತನಾದರೂ ರಕ್ಷಿಸಲ್ಪಡುವನು ಎಂದು **"ಯದಿವಾ ರಾವಣಸ್ಸ್ವಯಂ"** ಎಂಬುದರ ಮೂಲಕ ತಿಳಿಯಪಡಿಸು ತ್ತಾರೆ. **ಕುಯೋನಿ** ಯಲ್ಲಿ ಜನಿಸಿದ ಮಹಾಪಾಪಿಯಾದ ಕಾಕನೂ ಕೂಡ ರಕ್ಷಿಸ ಬೇಕೆಂದು ಪ್ರಪದನ ಮಾಡಿದುದರಿಂದ ರಕ್ಷಿಸಲ್ಪಟ್ಟನು. ಹೀಗೆ ಶರಣಾಗತಿಗೆ ಸರ್ವಾ ಧಿಕಾರತ್ವ ಉಂಟೆಂಬುದು ಸಿದ್ಧವು. ಆದರೆ ಪ್ರಪನ್ನನು ಭವಾರ್ತಿಪರಿಹಾರಕ್ಕಾಗಿ ಶರಣಾಗತಿಯನ್ನು ಮಾಡುವದರಿಂದ ಆತನು ಯಾರೇ ಆಗಲಿ **ಭವರ್ತಿಹಾ** ಆದ ಶ್ರೀಹರಿಯು ಭವಾರ್ತಿಯಿಂದ ರಕ್ಷಿಸುವನೆಂಬ ಭಾವವು.

## ಶೂದ್ರಾದೀನಾಂ ಉಪಾಸನೇಽನಧಿಕಾರಃ ನ ತು ಪ್ರಪತ್ತೌ.

ಅಗ್ನೈಯಾಲ್ ಉಪಾಸನಮ್ ತ್ರೈವರ್ಣಿಕಾಧಿಕಾರಮಾಗ ಅಪ ಶೂದ್ರಾಧಿ ಕರಣತ್ತಿಲೇ ಸಮರ್ಥಿತಮಾನಾಲುಮ್, ವೈದಿಕಙ್ಗಳಾನ ಸತ್ಯ ವಚನಾದಿಗಳ್ ಪೋಲೆ, ಪ್ರಪತ್ತಿಯುಮ್ ಸಾಮಾನ್ಯಧರ್ಮ ಮಾಗೈ

---

## ಶೂದ್ರಾದಿಗಳಿಗೆ ಉಪಾಸನದಲ್ಲಿ ಅಧಿಕಾರವಿಲ್ಲವು ಪ್ರಪತ್ತಿಯಲ್ಲಾದರೋ ಹಾಗಲ್ಲವು.

ಈ ಅಧಿಕರಣದಲ್ಲಿ ಶೂದ್ರನಿಗೆ ಬ್ರಾಹ್ಮಣ ಕ್ಷತ್ರಿಯ ವೈಶ್ಯರಹಾಗೆ ಉಪಾಸನದಲ್ಲಿ ಅಧಿಕಾರ ಉಂಟೇ ಇಲ್ಲವೇ ಎಂಬ ವಿಚಾರದಲ್ಲಿ ಶೂದ್ರನಿಗೂ ಅರ್ಥಿತ್ವವೂ ಉಪಾಸನೆಯಲ್ಲಿ ಸಾಮರ್ಥ್ಯವೂ ಇರುವದರಿಂದಲೂ, ಪುರಾಣಾದಿಗಳಿಂದ ಬ್ರಹ್ಮಸ್ವರೂಪಜ್ಞಾನವೂ ಉಂಟಾಗುವದರಿಂದಲೂ, ಉಪನಿಷತ್ತಿನಲ್ಲಿ ಜಾನಶ್ರುತಿರಾಜನನ್ನು, ಓ ಶೂದ್ರನೇ ಎಂದು ಸಂಬೋಧಿಸಿ ರೈಕ್ವರು ಬ್ರಹ್ಮವಿದ್ಯೆಯನ್ನು ಉಪದೇಶಿಸಿರುವವರಿಂದಲೂ, ಶೂದ್ರನಿಗೂ ಅಧಿಕಾರ ಉಂಟೆಂದು ಪೂರ್ವ ಪಕ್ಷಮಾಡಿ, ಉಪನಯನಮಾಡಿ ಬಂದ ವೇದಾಂತಾಧ್ಯಯನ ಜ್ಞಾನದಿಂದ ಉಪಾಸನಕ್ಕೆ ಅಧಿಕಾರ ಉಂಟಾಗುವದರಿಂದ, ಅಂತಹ ಉಪನಯನವು ಶೂದ್ರನಿಗಿಲ್ಲವಾದುದರಿಂದಲೂ, ಉಪನಿಷತ್ತಿನಲ್ಲಿ ಜಾನಶ್ರುತಿಯನ್ನು ಸಂಬೋಧಿಸಿದುದು ಬ್ರಹ್ಮಜ್ಞಾನವಿಲ್ಲವೇ ಎಂಬ ಶೋಕದ ಮೂಲಕ ಶೂದ್ರನೆಂದಾದುದರಿಂದಲೂ, ಜಾನಶ್ರುತಿರಾಜನು ಶೂದ್ರನಲ್ಲದೆ ಕ್ಷತ್ರಿಯನಾದುದರಿಂದಲೂ, ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವು. ಉಪಾಸನವು ಬ್ರಹ್ಮವಿದ್ಯಾರೂಪವಾದ ಉಪಾಯವಾದುದರಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಮಾತ್ರವೇ ವೇದಾಧಿಕಾರಿಗಳಾದುದರಿಂದ ಅದರಲ್ಲಿ ಅಧಿಕಾರ ಉಂಟೆಂದೂ, ಶೂದ್ರ ಪಂಚಮರುಗಳಿಗೆ ಇಲ್ಲವೆಂದೂ, ವ್ಯಾಸಸೂತ್ರಗಳ ಅಪಶೂದ್ರಾಧಿಕರಣದಲ್ಲಿ ಹೇಳಲ್ಪಟ್ಟಿರುವಾಗ, ಈ ಪ್ರಪದನವೂ ಉಪಾಸನದ ಹಾಗೆ ಮೋಕ್ಷೋಪಾಯವೆಂದು ಶ್ರುತಿಯಲ್ಲಿ ಹೇಳಿರುವದರಿಂದಲೂ, ಅದೂ ಒಂದು ವೈದಿಕ ಕರ್ಮವಾದುದರಿಂದಲೂ ಉಪಾಸನದಹಾಗೆ ತ್ರೈವರ್ಣಿಕರಿಗೆ ಮಾತ್ರವೇ ಇದರಲ್ಲಿ ಅಧಿಕಾರವೆಂದು ಭಾವಿಸುವದು ನ್ಯಾಯವಲ್ಲವೇ ಎಂಬಾಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ:-ಅಗ್ನೈಯಾಲ್-ಶ್ರುತಿವಾಕ್ಯಬಲದಿಂದಲೂ, ಅದನ್ನು ಸಮರ್ಥಿಸಿ ಹೇಳಿರುವ ಸಂಹಿತಾವಾಕ್ಯಪ್ರಮಾಣಗಳಿಂದಲೂ, ಪ್ರಪ

**ಯಾಲೇ ಯಥಾಧಿಕಾರಮ್ ವೈದಿಕ ಮಂತ್ರತ್ತಾಲೆಯಾದಲ್, ತಾಂತ್ರಿಕ ಮಂತ್ರಾದಿಗಳಾಲೆ ಯಾದಲ್ ಸರ್ವರುಕ್ಕುಮ್ ಪ್ರಪತ್ತ್ಯನುಷ್ಠಾನತ್ತುಕ್ಕು ವಿರೋಧಮಿಲ್ಲೈ.**

---

ತ್ತಿಗೆ ಸರ್ವಾಧಿಕಾರತ್ವವು ತೋರಿಬರುವದರಿಂದ, ಉಪಾಸನವು, ತ್ರೈವರ್ಣಿಕಾಧಿ **ಕಾರಮಾಗ**-ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮೂರು ವರ್ಣದವರಿಗೆ ಮಾತ್ರವೇ ಅಧಿಕಾರವಿರುವಹಾಗೆ, ವ್ಯಾಸಸೂತ್ರಗಳ ಅಪಶೂದ್ರಾಧಿಕರಣವಲ್ಲಿ ಸಮರ್ಥಿತಮಾನಾ **ಲುಮ್**-ಸಾಧಿಸಲ್ಪಟ್ಟಿದ್ದರೂ, **ವೈದಿಕಙ್ಗಳಾನ** - ವೇದದಲ್ಲಿ ಹೇಳಿರುವ, ಸತ್ಯವಚನಾದಿಗಳ್ **ಪೋಲೇ**-"**ಸತ್ಯಂವದ ಧರ್ಮಂಚರ**" (ತೈ. ಶೀಕ್ಷಾವಲ್ಲಿ) ಇತ್ಯಾದಿ ವಾಕ್ಯಗಳಹಾಗೆ, ಪ್ರಪತ್ತಿಯೂ ಕೂಡ, **ಸಾಮಾನ್ಯ ಧರ್ಮಮಾಗೈಯಾಲೆ**-ಎಲ್ಲಾ ವರ್ಣದವರಿಗೂ ಅನ್ವಯಿಸುವ ಧರ್ಮವಾದುದರಿಂದ, **ಯಥಾಧಿಕಾರಮ್**-ಅಧಿಕಾರಿಯು ಬ್ರಾಹ್ಮಣಾದಿಯಲ್ಲೊಬ್ಬನೋ ಅಥವಾ ಶೂದ್ರಪಂಚಮನೋ ಅದಕ್ಕನುಗುಣವಾಗಿ, **ವೈದಿಕ ಮಂತ್ರತ್ತಾಲೆಯಾದಲ್**-ಕಠಶ್ರುತಿಯಲ್ಲಿ ವೇದಪ್ರತಿಪಾದ್ಯವಾದ ದ್ವಯಮಂತ್ರದಿಂದಲೇಯಾಗಲಿ, **ತಾಂತ್ರಿಕ ಮಂತ್ರಾದಿಗಳಾಲೇಯಾದಲ್** - ತಾಂತ್ರಿಕ ಮೂಲಕವಾಗಲಿ ಎಂದರೆ ತ್ರಿವರ್ಣದವರಿಗೆ ದ್ವಯಮಂತ್ರಮೂಲಕವಾಗಿ ಶೂದ್ರಾದಿಗಳಿಗೆ "**ಶ್ರೀಮನ್ನಾರಾಯಣಸ್ವಾಮಿನೇ**" ಎಂಬ ತಾಂತ್ರಿಕಾದಿ ಮಂತ್ರದ ಮೂಲಕವಾಗಿ ಎಂಬ ಭಾವವು, ಸರ್ವರಿಗೂ, **ಪ್ರಪತ್ತ್ಯನುಷ್ಠಾನತ್ತುಕ್ಕು** - ಪ್ರಪದನಾನುಷ್ಠಾನವುಂಟೆಂಬುದರಲ್ಲಿ, **ವಿರೋಧಮಿಲ್ಲೈ** - ವಿರೋಧವೇನೂ ಇಲ್ಲವು. ಭಕ್ತಿಯೋಗವು ಪ್ರಪದನದಹಾಗೆ ವೇದಪ್ರೋಕ್ತವಾದ ಉಪಾಯವಾಗಿ ತ್ರೈವರ್ಣಿಕರಿಗೆ ಮಾತ್ರವೇ ಅದರಲ್ಲಿ ಅಧಿಕಾರವುಂಟೆಂಬುದು ಶಾರೀಕಮೀಮಾಂಸಾ ಅಪಶೂದ್ರಾಧಿಕರಣದಲ್ಲಿ (೧ ೩ ೯) ವ್ಯಕ್ತವು. ಉಪಾಸನ ಪ್ರಪತ್ತಿಗಳೆರಡೂ ಮೋಕ್ಷೋಪಾಯಗಳು. ಹೀಗಿರುವಾಗ ಉಪಾಸನದಲ್ಲಿ ತ್ರೈವರ್ಣಿಕರಿಗೆ ಮಾತ್ರ ವಧಿಕಾರವೆಂದು ಶ್ರೀವ್ಯಾಸರು ಅಪಶೂದ್ರಾಧಿಕರಣದಲ್ಲಿ ವೇದಪ್ರೋಕ್ತವೆಂದು ಸ್ಥಾಪಿಸಿರುವಾಗ ಪ್ರಪತ್ತಿಗೆ ಮಾತ್ರ ಸರ್ವಾಧಿಕಾರತ್ವವು ಹೇಗೆ ? ಎಂದರೆ ಶ್ರುತಿ ಸ್ಮೃತಿ ಪ್ರಮಾಣಗಳ ಬಲದಿಂದ ಸರ್ವಾಧಿಕಾರತ್ವವು ಸಿದ್ಧವೆಂದು ಹಿಂದಿನ ವಾಕ್ಯಗಳಿಂದ ಸ್ಥಾಪಿಸಿದರು. ಹೀಗೆ ಪ್ರಪತ್ತಿಗೆ ಸರ್ವಾಧಿಕಾರತ್ವವನ್ನು ಒಪ್ಪಿಕೊಂಡರೆ ಅನುಷ್ಠಾನವೇನು ಶೂದ್ರಾದಿಗಳ ವಿಷಯದಲ್ಲೂ ಸಮವೇ ಇಲ್ಲವೇ ವ್ಯತ್ಯಸ್ತವೇ ಎಂದರೆ ತ್ರೈವರ್ಣಿಕರಿಗೆ ಮಂತ್ರವು ಯಥಾವತ್ತಾಗಿಯೂ ಇತರರಿಗೆ ತಾಂತ್ರಿಕವಾಗಿಯೂ

## ಸ್ವಾಶ್ರಯಣಂ ಸರ್ವ ಸಾಧಾರಣಮಿತಿ ಭಗವದುಕ್ತಿಃ.

ಕಾಕಾದಿಗಳುಮ್ ಪ್ರಪನ್ನರಾಗ ಶಾಸ್ತ್ರಙ್ಗಳಿಲೇ ಕೇಳಾ ನಿನ್ರೋಮ್
(೧) "ಮಾಂಹಿ ಪಾರ್ಥವ್ಯಪಾಶ್ರಿತ್ಯ ಯೇಽಪಿಸ್ಯುಃ ಪಾಪಯೋನಯಃ ।

---

ಉಪದೇಶ್ಯವೆಂಬ ಭಾವವು. ತಾಂತ್ರಿಕ ಮಂತ್ರಗಳು ಯಾವುವೆಂಬುದು ದ್ವಯಾಧಿಕಾರದಲ್ಲಿ ಪ್ರತಿಪಾದಿಸಲ್ಪಟ್ಟಿವೆ:—"ಶ್ರೀಮನ್ನಾರಾಯಣಸ್ವಾಮಿನ್ನನನ್ಯಶರಣಸ್ತ್ವವ । ಚರಣೌ ಶರಣಂ ಯಾತಸ್ತ್ವನ್ಯೈವಾಸ್ಮ್ಯಹಮುಚ್ಯುತ॥" ಎಂಬ ಪಂಚರಾತ್ರತಂತ್ರದಲ್ಲಿ ಹೇಳಲ್ಪಟ್ಟ ಮಂತ್ರವನ್ನು ದ್ವಯಕ್ಕೆ ಬದಲಾಗಿ ಉಪಯೋಗಿಸಬಹುದು, ಅಥವಾ ಶ್ರೀಮನ್ನಾರಾಯಣಸ್ವಾಮಿನ್ದಾಸೋಽಹಂ ತವತಸ್ಯನ್ವೈ । ಪರವಿಾಪ್ನುಸ್ತ್ವಮೇವಾರ್ಥಮನುಕೂಲೋ ವಿವರ್ಜಯೇ॥ ಪ್ರಾತಿಕೂಲ್ಯಂ ಸುವಿಸ್ರಬ್ಧ ಸ್ಸಂಪ್ರಾರ್ಥ್ಯ ಶರಣಂ ಗತಃ । ವ್ರಜಾಮಿ ಯುಷ್ಮಚ್ಛರಣಂ ತತ್ರ್ತ್ಯೈವಾಹಂ ಮಯಾರ್ಪಿತಂ॥" ಈ ಎರಡು ಶ್ಲೋಕಕ್ಕೂ ದ್ವಯವೆಂದೇ ಹೆಸರು. ತಾಂತ್ರಿಕ ಮಂತ್ರಾದಿ ಎಂಬಲ್ಲಿ ಆದಿ ಪದದಿಂದ "ಮಂತ್ರೈ ರನುಶ್ರವ ಮುಖೇಷ್ವಧಿಗ ್ಯಮಾನ್ಯೈ ಸ್ಸ್ವಾಧಿಕ್ರಿಯಾ ಸಮುಚಿತ್ಯೈ ಯದಿವಾನ್ಯವಾಕ್ಯೈಃ" ಎಂಬ ಶ್ಲೋಕದಲ್ಲಿ ಅನ್ಯವಾಕ್ಯೈಃ ಎಂಬುದರಿಂದ ತೋರಿಬರುವ ಅದೇ ಅರ್ಥಗರ್ಭಿತವಾದ ಇತರ ವಾಕ್ಯಗಳು ಸೂಚಿಸಲ್ಪಟ್ಟವು. ದ್ವಯದಲ್ಲಿ ಹೇಗೋ ಹಾಗೆಯೇ ಮೂಲಮಂತ್ರದ ವಿಷಯದಲ್ಲೂ ಸ್ತ್ರೀಶೂದ್ರಾದಿಗಳ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸದಿಂದ ಉಪದಿಶ್ಯವು

### ತನ್ನ ಆಶ್ರಯದಲ್ಲಿ ಸರ್ವರಿಗೂ ಅಧಿಕಾರ ಉಂಟೆಂದು ಭಗವಂತನ ಉಕ್ತಿಯು.

ಮುಂದೆ ತಿರ್ಯಜ್ಜಂತುಗಳಿಗೂ ಅಧಿಕಾರ ಉಂಟೆಂದು ಭಗವದುಕ್ತಿಯನ್ನೇ ಪ್ರಮಾಣವಾಗಿ ಉದಾಹರಿಸಿ ಕೈಮುತಿಕನ್ಯಾಯಪ್ರಕಾರ ಶೂದ್ರರಿಗೆ ಅಧಿಕಾರ ಉಂಟೇಉಂಟೆಂದು ಸ್ಥಾಪಿಸುತ್ತಾರೆ. ಕಾಕಾದಿಗಳುಮ್-ಇಂದ್ರನ ಮಗನಾದ ಕಾಕಾಸುರನೇ ಮೊದಲಾದವರೂಕೂಡ, ಇಲ್ಲಿ ಆದಿಶಬ್ದದಿಂದ, ಕಪೋತ ಗಜೇಂದ್ರಾದಿಗಳು ಹೇಳಲ್ಪಟ್ಟರು, ಪ್ರಪನ್ನರಾಗ–ಪ್ರಪದನವನ್ನನುಷ್ಠಿಸಿ ಭಗವತ್ಪಾದಾಶ್ರಯವನ್ನು ಮಾಡಿದವರೆಂದು, ಶಾಸ್ತ್ರಗಳಲ್ಲಿ, ಕೇಳಾನಿನ್ರೋಮ್-ಗುರುಮುಖೇನ ಕೇಳಿರುತ್ತೇವೆ, (೧) "ಹೇ ಪಾರ್ಥ-ಓ ರಾಜರ್ಷಿಯಾದ ಅರ್ಜುನನೇ, ಸ್ತ್ರಿಯಃ-

---

(೧) ಗೀ. ೯. ೩೨

ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂಗತಿಮ್" ಎನ್ರು ಭಗವದಾಶ್ರಯಣ ಮಾತ್ರಮ್ ಸರ್ವಸಾಧಾರಣ ಮಾಗ ಶರಣ್ಯನ್ ತಾನೇ ಮ್ ಅರುಳಿಚ್ಚೆಯ್‌ದಾನ್ ಉಪಾಸನತ್ತುಕ್ಕುಮ್ ಪ್ರಾರಂಭಂ ತ್ರೈವರ್ಣಿಕ ಶರೀರತ್ತಿಲೇಯಾನಾಲುಮ್, ಅವಸಾನಮ್ ಸರ್ವಶರೀರತ್ತಿಲುಮ್

---

ಸ್ತ್ರೀಗಳಾಗಲಿ, **ವೈಶ್ಯಾಃ** - ಧರ್ಮಾಧರ್ಮಗಳ ವಿವೇಕವಿಲ್ಲದೆ ಯಾವಾಗಲೂ, ವಾಣಿಜ್ಯದಲ್ಲಿ ಮುಳುಗಿದ ವೈಶ್ಯರೂ, **ತಥಾ** - ಹಾಗೆಯೇ, **ಶೂದ್ರಾಶ್ಚ**-ಆಚಾರ ಶೂನ್ಯರಾದ ಶೂದ್ರರೂ ಸಹ, **ಪಾಪಯೋನಯೋಽಪಿ**-ಪಾಪಜನ್ಮವನ್ನೆತ್ತಿದವರಾದರೂ ಕೂಡ, **ಯೇಸ್ಯುಃ** - ಯಾರು ಆಗುತ್ತಾರೋ, **ತೇಽಪಿ** - ಅವರುಗಳೂ ಕೂಡ, **ಮಾಂ ಹಿ ವ್ಯಪಾಶ್ರಿತ್ಯ** - ನನ್ನನ್ನು ಚನ್ನಾಗಿ ಆಶ್ರಯಿಸುಯಲ್ಲವೇ **ಪರಾಂಗತಿಂ ಯಾಂತಿ**-ಅತ್ಯುತ್ಕೃಷ್ಟನಾದ ಗತಿಯನ್ನು ಹೊಂದುವರು. ಹೀಗಿರುವಲ್ಲಿ ಬ್ರಾಹ್ಮಣರಾಗಿ ಪುಣ್ಯವಂತರಾಗಿರುವವರು ಸದ್ಗತಿಯನ್ನು ಹೊಂದುವರು ಎಂದು ಹೇಳತಕ್ಕದ್ದೇನಿದೆ, ಕೈಮುತಿಕನ್ಯಾಯಸಿದ್ಧವೆಂದು ಹೇಳಲ್ಪಡುತ್ತದೆ." **ಎನ್ರು** - ಎಂಬದಾಗಿ, **ಭಗವದಾಶ್ರಯಣ ಮಾತ್ರಮ್**-ಭಗವಂತನನ್ನು ಆಶ್ರಯಿಸೋಣ ಮಾತ್ರವು, **ಸರ್ವ ಸಾಧಾರಣಮಾಗ** - ಸಮಸ್ತರಿಗೂ ಸಾಧಾರಣವಾದುವೆಂದು ಎಂದರೆ ಸಮಸ್ತ ಅಧಿಕಾರಿಗಳಿಗೂ ಉಂಟೆಂಬುದು, ಇಲ್ಲಿ ಮಾತ್ರ ಶಬ್ದದಿಂದ ಉಪಾಸನವು ಹಾಗಲ್ಲವೆಂಬುದು ಸೂಚಿತವು, ಸ್ತ್ರೀ ಶೂದ್ರಾದಿಗಳಿಗೆ ಉಪಾಸನದಲ್ಲಿ ಅಧಿಕಾರವಿಲ್ಲವು, **ಶರಣ್ಯನ್ ತಾನುಮ್** - ಸಮಸ್ತರಿಗೂ ಉಪಾಯಭೂತನಾಗಿ ರಕ್ಷಕನಾದ ಸರ್ವೇಶ್ವರನು ತಾನೇ, **ಅರುಳಿಚ್ಚೆಯ್‌ದಾನ್** - ದಯಮಾಡಿ ಉಪದೇಶಿಸಿರುತ್ತಾನೆ, ಕಾಕಾದಿ ವೃತಾಂತಗಳು ಶ್ರೀಮದ್ರಾಮಾಯಣದಲ್ಲಿ ಸುಪ್ರಸಿದ್ಧವು. ಸ್ತ್ರೀ ಶೂದ್ರಾದಿಗಳಿಗೆ ಉಪಾಸನ ಪ್ರಾರಂಭದಲ್ಲಿ ಅಧಿಕಾರವಿಲ್ಲವೆಂದೂ ತ್ರೈವರ್ಣಿಕರಿಗೆ ಮಾತ್ರ ಉಂಟೆಂದೂ ಅಪಶೂದ್ರಾಧಿಕರಣದಲ್ಲಿ ಹೇಳಲ್ಪಟ್ಟಿದ್ದರೂ, ಉಪಾಸನವು ಸಿದ್ಧಿಸದೆ ಸ್ತ್ರೀ ಶೂದ್ರಾದಿ ಜನ್ಮಗಳು ಅನಂತರ ಪ್ರಾಪ್ತವಾದರೆ ಅಂತಹ ನೀಚ ಜನ್ಮದಲ್ಲೂ ಪೂರೈಸಿ ಫಲವನ್ನು ಪಡೆದಿರುತ್ತಾರೆ. ಹೀಗೆ ನೀಚ ಜಾತೀಯರೂ ಕೂಡ ಹಿಂದೆ ಭಕ್ತಿಮಾರ್ಗವನ್ನವಲಂಬಿಸಿದವರು, ಅಂತಹ ನೀಚಜಾತಿಯಲ್ಲೂ ಉಪಾಯ ಪೂರ್ತಿಯನ್ನು ಮಾಡಿ ಫಲವನ್ನು ಹೊಂದಿರುತ್ತಾರೆಂಬುದಕ್ಕೆ ಪ್ರಮಾಣವನ್ನು ಮುಂದಿನ ವಾಕ್ಯದಿಂದ ಉದಾಹರಿಸಿ, ಹೀಗಿರವಾಗ ಅಂತಹ ನೀಚ ಜಾತೀಯರಿಗೆ ಪ್ರಪದನದಲ್ಲಿ ಅಧಿಕಾರವಿಲ್ಲವೆಂದು ಹೇಳುವದು ಸುತರಾಂ ಸಾಧ್ಯವಿಲ್ಲವೆಂದು ಹೇಳುತ್ತಾರೆ. **ಉಪಾಸನತ್ತುಕ್ಕುಮ್**

**ಕೊಡುಮೆನ್ನುಮಿಡವ್, (೧) ಧರ್ಮವ್ಯಾಧಾದಯೋಽಪ್ಯನ್ಯೇ ಪೂರ್ವಾಭ್ಯಾಸಾಜ್ಜುಗುಪ್ಸಿತೇ। ವರ್ಣಾವರತ್ವೇ ಸಂಪ್ರಾಪ್ತಾಸ್ಸಂಸಿದ್ಧಿಂ ಶ್ರಮಣೀ ಯಥಾ" ಎನ್ರು ಶ್ರೀವಿಷ್ಣುಧರ್ಮತ್ತಿಲೇ ಶೊಲ್ಲಪಟ್ಟದು.**

---

**ಪ್ರಾರಂಭವಮ್**-ಉಪಾಸನಕ್ಕೆ ಪ್ರಾರಂಭವು, **ತ್ರೈವರ್ಣಿಕ ಶರೀರತ್ತಿಲೇಯಾನಾಲುಮ್** - ಬ್ರಾಹ್ಮಣ ಕ್ಷತ್ರಿಯ ವೈಶ್ಯಜನ್ಮವನ್ನೆತ್ತಿದ ಶರೀರದಿಂದ ಮಾತ್ರವೇ ಆದರೂ, **ಅವಸಾನಮ್**-ಆ ಉಪಾಸನಕ್ಕೆ ಅಂತ್ಯವು, **ಸರ್ವಶರೀರತ್ತಾಲುಮ್ ಕೊಡುಮ್** - ಸ್ತ್ರೀ ಶೂದ್ರಾದಿ ಯಾವ ಜನ್ಮವನ್ನೆತ್ತಿದ ಶರೀರದಿಂದಲೇಯಾಗಲಿ ಸಮಸ್ತರಿಗೂ ಆಗಬಹುದು, **ಎನ್ನುಮಿಡವ್** - ಎನ್ನುವ ಸಂದರ್ಭದಲ್ಲಿ ಅದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ :—(೧)"**ಅನ್ಯೇ**-ಇತರರಾದ, **ಧರ್ಮವ್ಯಾಧಾದಯೋಽಪಿ**-ಧರ್ಮವ್ಯಾಧನೇ ಮೊದಲಾದವರೂಕೂಡ, **ಜುಗುಪ್ಸಿತೇ** ತುಂಬಾ ಹೇಯವಾದ, **ವರ್ಣಾವರತ್ವೇ** - ಕೀಳು ವರ್ಣದ ಜನ್ಮವನ್ನು ಹೊಂದಿದರೂ, **ಪೂರ್ವಾಭ್ಯಾಸಾತ್** - ಹಿಂದಿನ ಜನ್ಮದಲ್ಲಿ ಅನುಷ್ಠಿಸಿದ ಭಕ್ತಿಯೋಗದ ಮಹಿಮೆಯಿಂದ, **ಸಂಸಿದ್ಧಿಂ** - ಮೋಕ್ಷವನ್ನು, **ಶ್ರಮಣೀಯಥಾ** - ಸನ್ಯಾಸಿನಿಯಾದ ಶಬರಿಯು ಹೇಗೆ ಹೊಂದಿದಳೋ ಹಾಗೆ, **ಸಂಪ್ರಾಪ್ತಾಃ** - ಹೊಂದಿದವರಾದರು" **ಎನ್ರು**-ಎಂಬದಾಗಿ ವಿಷ್ಣುಧರ್ಮದಲ್ಲಿ, **ಶೊಲ್ಲಪಟ್ಟದು** - ಹೇಳಲ್ಪಟ್ಟಿತು, ಡಬೇಳಾದ ಶಬರಿಯೂ,ವ್ಯಾಧನಾದ ಧರ್ಮವ್ಯಾಧನೂ ಸಹ ಇಂತಹ ಕೀಳುಜನ್ಮವನ್ನು ಕಾರಣಾಂತರದಿಂದ ಹೊಂದಿದ್ದರೂ, ಹಿಂದಿನ ಉತ್ಕೃಷ್ಟಜನ್ಮದಲ್ಲಿ ಪ್ರಾರಂಭಿಸಿದ ಉಪಾಸನೆಯ ಮಹಿಮೆಯಿಂದ ಸರ್ವೇಶ್ವರನ ಧ್ಯಾನದಲ್ಲೇ ನಿರತರಾಗಿ ಮೋಕ್ಷವನ್ನು ಹೊಂದಿದರೆಂಬ ಇತಿಹಾಸಗಳುಂಟೆಂಬ ತಾತ್ಪರ್ಯವು. ಹಿಂದೆ ಉಪಾಸನವನ್ನು ಉತ್ಕೃಷ್ಟಜನ್ಮದಲ್ಲಿ ಆರಂಭಿಸಿದುದರಿಂದ ಅನಂತರ ನಿಕೃಷ್ಟಜನ್ಮ ಬಂದರೂ ಭಗವದಾಶ್ರಯಣವು ಮೋಕ್ಷದಾಯಕವಾಗಿರುವಾಗ, ಪ್ರಪದನಾನುಷ್ಠಾನಮೂಲಕ ಭಗವದಾಶ್ರಯಣವು ಸರ್ವಾಧಿಕಾರವಾಗುವದರಲ್ಲಿ ಸಂದೇಹವಿಲ್ಲವೆಂಬ ತಾತ್ಪರ್ಯವು. ಉಪಾಸನಕ್ಕೆ ತ್ರೈವರ್ಣಿಕರಿಗಲ್ಲದೆ ಶೂದ್ರಾದಿಗಳಿಗೆ ಅಧಿಕಾರವಿಲ್ಲವು; ಆದುದರಿಂದ ಉಪಾಸನಾರಂಭಕ್ಕಾದರೂ ಉತ್ತಮವರ್ಣದಲ್ಲಿ ಜನ್ಮವು ಆವಶ್ಯಕವು; ಪ್ರಪತ್ತಿಗಾದರೋ ಅಂತಹ ನಿಯಮವಿಲ್ಲವು. ಕೀಳು ಜನ್ಮದವರೂ ಅನುಷ್ಠಿಸಿ ಅದೇ ಜನ್ಮದಲ್ಲೇ ಮುಕ್ತಿಯನ್ನು ಹೊಂದಬಹುದು. ಶಬರಿಯು ಸನ್ಯಾಸಿನಿಯೆಂದು

---

(೧) ವಿ. ಧ. ೧೦೨. ೨೯ ಹಿಂದೆ ಪರಿಪೂರ್ಣ ಬ್ರಹ್ಮಾನುಭವಾಧಿಕಾರದ ೧೮೩ನೆಯ ಪುಟ ನೋಡಿ.

## ಪ್ರಪತ್ತೇಃ ಸರ್ವಾಧಿಕಾರತ್ವಂ, ಆಕಿಂಚಿನ್ಯ ಮೇವ ಸರ್ವತ್ರಾಧಿಕಾರಃ

ಇಪ್ಪಡಿ ಉಪಾಸನಮ್ ತ್ರೈವರ್ಣಿಕರ್ಕ್ಕೇ ಆರಂಭಣೀಯಮಾನಾ ರ್ಪೋಲೆ ಪ್ರಪತ್ತಿಯಿಲೊರು ನಿಯಾಮಕತ್ತಾಲೆ ಸಾಮಾನ್ಯ ವಚನ

---

ಹೇಳಲ್ಪಟ್ಟಿತಲ್ಲಾ ಸನ್ಯಾಸಾಶ್ರಮವು ಸ್ತ್ರೀಯರಿಗುಂಟೋ ಎಂದರೆ ಸನ್ಯಾಸವೃತ್ತಿಯಲ್ಲಿದ್ದಳೆಂಬ ಅಭಿಪ್ರಾಯವೇ ವಿನಾ ಸನ್ಯಾಸಾಶ್ರಮವನ್ನು ವಹಿಸಿದಳೆಂಬ ಭಾವವಲ್ಲವು. ಉತ್ತಮವರ್ಣದಲ್ಲಿ ಉಪಾಸನವನ್ನಾರಂಭಿಸಿ, ಉಪಾಸನ ನಿಷ್ಪತ್ತಿಯಿಲ್ಲದೇ ಹೋಗಿ, ಇನ್ನೊಂದು ನಿಕೃಷ್ಟಜನ್ಮಪ್ರಾಪ್ತವಾದರೆ ಆಗ ಉಪಾಸನವನ್ನು ಪೂರ್ತಿಮಾಡಲು ಅಧಿಕಾರ ಉಂಟೋ ಎಂದರೆ ವಿದುರಾದಿಗಳಹಾಗೆ ಯೋಗಾಧಿಕಾರವು ಶಬರಿಗೆ ಇತ್ತೆಂದು ವ್ಯಾಖ್ಯಾತೃಗಳು ಅಭಿಪ್ರಾಯಪಟ್ಟಿರುತ್ತಾರೆ. ಶ್ರೀ ವಾಲ್ಮೀಕಿ ಮಹರ್ಷಿಯೂ ೭೪ ನೆಯ ಸರ್ಗಾಂತ್ಯ ಶ್ಲೋಕದಲ್ಲಿ "ತತ್ಪುಣ್ಯಂ ಶಬರೀ ಸ್ಥಾನಂ ಜಗಾಮಾತ್ಮಸಮಾಧಿನಾ" ಎಂದು ಆತ್ಮಸಮಾಧಿ ಶಬ್ದವನ್ನು ಪ್ರಯೋಗಿಸಿರುತ್ತಾರೆ. ಸಮಾಧಿ ಶಬ್ದದಿಂದ ಅಷ್ಟಾಂಗ ಯೋಗವು ಹೇಳಲ್ಪಟ್ಟಿಲ್ಲವು; ಆಸನಾದಿಗಳಿಲ್ಲದೆ ತದೇಕಧ್ಯಾನವು ಹೇಳಲ್ಪಟ್ಟಿತು. ಆದರೆ ಅದಕ್ಕೆ ಅಂಗವಾಗಿ ಯಜ್ಞಾದಿ ಕರ್ಮಗಳ ಸ್ಥಾನದಲ್ಲಿ ತಮ್ಮ ಗುರುವಾದ ಮತಂಗಮಹರ್ಷಿಯ ಶುಶ್ರೂಷೆಯನ್ನಿಟ್ಟುಕೊಂಡಿದ್ದಳು. ಇಲ್ಲಿ ಹೇಳಿರುವ ಪುಣ್ಯಸ್ಥಾನವು ಪುನರಾವೃತ್ತಿ ರಹಿತವಾದ ಅಕ್ಷಯಲೋಕವಾದ ಪರಮಪದವೇ. ಶಬರೀ ವಿದುರಾದಿಗಳಿಗೆ ನಿರತಿಶಯವಾದ ಜ್ಞಾನದೀಪ್ತಿ ಇದ್ದುದರಿಂದ ಆತ್ಮಜ್ಞಾನ ಮೂಲಕ ಪರಮಾತ್ಮ ಧ್ಯಾನದಿಂದ ಮೋಕ್ಷವು ಲಭಿಸಿತು ಎಂಬ ತಾತ್ಪರ್ಯವು.

### ಪ್ರಪತ್ತಿಗೆ ಸರ್ವಾಧಿಕಾರತ್ವವುಂಟು ; ಅದಕ್ಕೆ ಬೇಕಾದ ಅಂಗವು ಆಕಿಂಚನ್ಯ ಮಾತ್ರವೇ.

ಇಪ್ಪಡಿ - ಮೇಲೆಹೇಳಿದ ರೀತಿಯಲ್ಲಿ, ಉಪಾಸನವು, ತ್ರೈವರ್ಣಿಕರ್ಕ್ಕೇ - ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೇನೇ, ಆರಂಭಣೀಯ ಮಾನಾರ್ಪೋಲೇ ಆರಂಭಿಸಲು ಯೋಗ್ಯವಾದ ಹಾಗೆ, ಪ್ರಪತ್ತಿಯಲ್ಲಿ ಒರು ನಿಯಾಮಕತ್ತಾಲೆ-ಒಂದು ನಿಬಂಧನೆಯ ಪ್ರಕಾರ, ಸಾಮಾನ್ಯ ವಚನತ್ತುಕ್ಕು - ಸಾಮಾನ್ಯ ಪ್ರಮಾಣವಾದ, "ಸರ್ವಸ್ಯ ಶರಣಂ ಸುಹೃತ್" ಎಂಬ ವಾಕ್ಯಕ್ಕೆ, ಸಂಕೋಚ ಮಿಲ್ಲಾಮೈಯಾಲುಮ್ - ಸಂಕೋಚವಿಲ್ಲದೇ ಇರುವದರಿಂದಲೂ, ವಿಶೇಷ

**ತ್ವಾತ್ ಸಂಕೋಚಮಿಲ್ಲಾಮೈಯಾಲುಮ್, ವಿಶೇಷ ವಚನ ಪ್ರಾಬಲ್ಯ ತ್ತಾಲುಮಿ, ಪ್ಪ್ರಪದನಂ ಸರ್ವರ್ಕ್ಕುಮ್ ಯೋಗ್ಯಮ್. ಆನ ಪಿನ್ಬು ಇದು ತನಕ್ಕು ವಿಶೇಷಿತ್ತುವೇಣ್ಡುಮ್ ಅಧಿಕಾರಾಂಶಮುಮ್ ಮುನ್ಬೇ ಶೊನ್ನೋಮ್.**

---

**ವಚನ ಬಲತ್ತಾಲುಮ್**-ಸರ್ವರಿಗೂ ಅಧಿಕಾರ ಉಂಟೆಂದು ವಿಶೇಷಿಸಿ ಹೇಳಿರುವ ಪ್ರಮಾಣಗಳ ಬಲದಿಂದಲೂ, **ಪ್ರಪದನಂ ಸರ್ವರ್ಕ್ಕು ಯೋಗ್ಯಮ್** - ಪ್ರಪದನವು ಎಲ್ಲರಿಗೂ ಯೋಗ್ಯವಾದುದು, ಎಂದರೆ ಪ್ರಪದನದಲ್ಲಿ ಸರ್ವರಿಗೂ ಅಧಿಕಾರ ಉಂಟೆಂಬ ಭಾವವು. ಭಕ್ತಿಮಾರ್ಗದಲ್ಲಿ ಎಂದರೆ ಉಪಾಸನದಲ್ಲಿ ಮಾತ್ರ ಸರ್ವರಿಗೂ ಅಧಿಕಾರವಿಲ್ಲವು. ತ್ರೈವರ್ಣಿಕರಿಗೆ ಮಾತ್ರ ಆರಂಭಮಾಡುವ ಅಧಿಕಾರವು; ಉಪಾಸನ ನಿಷ್ಪತ್ತಿಯು ನಿಕೃಷ್ಟಜನ್ಮದಲ್ಲೂ ಆಗಬಹುದು ಎಂಬ ತಾತ್ಪರ್ಯವು. ಹೀಗೆ ಪ್ರಪದನಕ್ಕೆ ಇಂತಹ ನಿರ್ಬಂಧವು ಯಾವುದೂ ಇಲ್ಲವು. ತ್ರೈವರ್ಣಿಕರಿಗೆ ಮಾತ್ರವೇ ಎಂದಾಗಲಿ, ಶೂದ್ರಾದಿಗಳಿಗೆ ಮಾತ್ರವೇ ಎಂದಾಗಲಿ, ಯಾವ ನಿರ್ಬಂಧವೂ ಇಲ್ಲವೆಂಬ ಭಾವವು. **ಆನಪಿನ್ಬು** - ಪ್ರಪದನವು ಸರ್ವಾಧಿಕಾರವುಳ್ಳದ್ದೆಂದಾದ ನಂತರ, **ಇದು ತನಕ್ಕು** - ಈ ಪ್ರಪದನಕ್ಕೆ, **ವಿಶೇಷಿತ್ತುವೇಣ್ಡುಮ್ ಅಧಿಕಾರಾಂಶಮ್**-ಮುಖ್ಯವಾಗಿ ಬೇಕಾದ ಅಧಿಕಾರವನ್ನು ಎಂದರೆ ಅಙ್ಗವನ್ನು, **ಮುನ್ಬೇ ಶೊನ್ನೋಮ್**-ಹಿಂದೆ ಪ್ರಪತ್ತಿಯೋಗ್ಯಾಧಿಕಾರದಲ್ಲಿ ಆಕಿಂಚನ್ಯವೇ ಮುಖ್ಯಾಧಿಕಾರವೆಂದು ಹೇಳಿದೆವು. ಹಿಂದೆ ಪ್ರಪತ್ತಿಯೋಗ್ಯಾಧಿಕಾರದಲ್ಲಿ ಹೇಳಿರುವದು ಉಪಾಸನಕ್ಕೆ ಅರ್ಹತೆಯಿಲ್ಲದವರಿಗೆ ಪ್ರಪತ್ತ್ಯಧಿಕಾರವೆಂದು ತೋರಿಬರುವದರಿಂದಲೂ, ತ್ರೈವರ್ಣಿಕತ್ವವು ಉಪಾಸನಕ್ಕೆ ಅಧಿಕಾರವೆಂದು ಹೇಳಿರುವದರಿಂದಲೂ, ತ್ರೈವರ್ಣಿಕರಿಗೆ ಪ್ರಪತ್ತಿಯಲ್ಲಿ ಅಧಿಕಾರವಿಲ್ಲವೆಂದಾಗುತ್ತದೋ ಎಂಬ ಸಂದೇಹ ಉಂಟಾಗಬಹುದು. ಆಕಿಂಚನ್ಯವೂ ಮುಖ್ಯವೆಂದು ಹೇಳುವದರಿಂದ ಆಕಿಂಚನ್ಯವೂ ತ್ರೈವರ್ಣಿಕತ್ವವೂ ಇದ್ದುದಾದರೆ ಅಧಿಕಾರವೆಂದು ಊಹಿಸಿದರೆ, ಆಗ ಶೂದ್ರಾದಿಗಳಿಗೆ ಅಧಿಕಾರವಿಲ್ಲವಾಗುತ್ತದೆ. ಇದೂ ಅಲ್ಲದೆ ಸರ್ವರಿಗೂ ಅಧಿಕಾರ ಉಂಟೆಂದು ಹೇಳಿಬಿಟ್ಟರೆ, ಉಪಾಸನಾದಿಗಳಿಗೆ ಸಾಮರ್ಥ್ಯವೂ ವಿಳಂಬಾಸಹತ್ವಾದಿಗಳೂ ಇರುವ ಮೋಕ್ಷಾರ್ಥಿಗೂ ಅಧಿಕಾರ ಉಂಟೆಂದಾಗುತ್ತದೆ. ಇತ್ಯಾದಿ ಎಲ್ಲಾ ಶಂಕಾಗಳಿಗೂ ಸಮಾಧಾನಾರ್ಥವಾಗಿ ಒಂದು ಕಾರಿಕೆಯನ್ನು ಮುಂದೆ ಅನುಗ್ರಹಿಸುತ್ತಾರೆ—ತ್ರೈವರ್ಣಿಕನಾಗಲಿ ತ್ರೈವರ್ಣಿಕನಲ್ಲದೇ ಇರಲಿ, ಸರ್ವರಿಗೂ ಪ್ರಪತ್ತಿಯಲ್ಲಿ ಅಧಿಕಾರ ಉಂಟು;

**ಕಾ. ಅತಸ್ತ್ರೈವರ್ಣಿಕತ್ವಾದೇ ರ್ಭಾವೋಽಭಾವೋಽಪಿ ಕಸ್ಯಚಿತ್ ।**
**ನಾಧಿಕಾರಃ ಪ್ರಪತ್ತೇಸ್ಸ್ಯಾದಾಕಿಂಚನ್ಯ ಮನಾಶ್ರಿತಃ ॥೩೭॥**

ಹಾಗೆ ಅಧಿಕಾರವಿರಲು ಮುಖ್ಯವಾದ ಅಂಗವು, ಆಕಿಂಚನ್ಯವು; ಸಾಮರ್ಥ್ಯ ವಿಳಂಬಾ ಸಹತ್ವಾದಿಗಳಿರುವ ಭಕ್ತಿಯೋಗನಿಷ್ಠನು ಸಕಿಂಚನನಾಗಿ ಆಕಿಂಚನ್ಯ ವಿಲ್ಲದವನಾದುದರಿಂದ, ಆತನು ಪ್ರಪತ್ತಿಗೆ ಅಧಿಕಾರಿಯಲ್ಲವು, ಎಂಬೀ ಅರ್ಥ ಗರ್ಭಿತವಾದ ಕಾರಿಕೆಯನ್ನನುಗ್ರಹಿಸುತ್ತಾರೆ.

**ಕಾ. ಅರ್ಥವು—** ಅತಃ-ಹೀಗೆ ಮೇಲೆ ಉಪಪಾದಿಸಿದ ರೀತಿಯಲ್ಲಿ ಪ್ರಪತ್ತಿಗೆ ಸರ್ವಾಧಿಕಾರತ್ವವು ನಿರ್ಣಯಿಸಲ್ಪಟ್ಟಿರುವದರಿಂದ, ಅಥವಾ ಅಧಿಕಾರಕ್ಕೆ ಯಾವ ವಿಧ ಸಂಕೋಚವೂ ಇಲ್ಲದಿರುವದರಿಂದ, **ತ್ರೈವರ್ಣಿಕತ್ವಾದೇಃ** - ಬ್ರಹ್ಮ ಕ್ಷತ್ರಿಯ ವೈಶ್ಯಜಾತಿಯೇನು, ಆದಿಶಬ್ದದಿಂದ ಬ್ರಹ್ಮಚರ್ಯ ಗೃಹಸ್ಥವಾನಪ್ರಸ್ಥ ಸನ್ಯಾಸಾಶ್ರಮವೇನು, ಮತ್ತು ಸ್ತ್ರೀ ಪುರುಷನಾಗಿರುವದೇನು ಇವುಗಳ, **ಭಾವಃ**-ಸದ್ಭಾವಃ, ಇರೋಣವೂ, **ಅಭಾವೋಽಪಿ** – ಇಲ್ಲದಿರೋಣವೂ ಕೂಡ, **ಕಸ್ಯಚಿತ್** - ಯಾವ ಚೇತನಿಗೇ ಆಗಲಿ, **ಆಕಿಂಚನ್ಯ ಮನಾಶ್ರಿತಃ**-ಆಕಿಂಚನ್ಯವನ್ನು ಅವಲಂಬಿಸದೇ ಇರುವನಾಗಿ,ಎಂದರೆ ಆಕಿಂಚನ್ಯವಿಲ್ಲದುದಾದರೆ, ಆ ಕಾರಣದಿಂದ, **ಪ್ರಪತ್ತೇಃ** - ಪ್ರಪದನಕ್ಕೆ, **ಅಧಿಕಾರಃ ನಸ್ಯಾತ್**—ಅಧಿಕಾರವಾಗುವದಿಲ್ಲವು. ಬ್ರಾಹ್ಮಣಾದಿ ಯಾವಜಾತಿಯವನೇ ಆಗಲಿ, ಬ್ರಹ್ಮಚರ್ಯಾದಿ ಯಾವ ಆಶ್ರಮವನ್ನು ವಹಿಸಿದವನೇ ಆಗಲಿ, ಈ ಜಾತಿಯವನಾಗದೆ ಶೂದ್ರ ಪಂಚಮ ಯಾವ ಜಾತಿಯವನೇ ಆಗಲಿ, ಪುರುಷನೇ ಆಗಲಿ, ಸ್ತ್ರೀಯೇ ಆಗಲಿ, ಆಕಿಂಚನ್ಯವಿಲ್ಲದೇ ಹೋದರೆ ಆತನು ಪ್ರಪತ್ತಿಗೆ ಅಧಿಕಾರಿಯಾಗುವದಿಲ್ಲ ಎಂಬುದು ಈ ಶ್ಲೋಕಾರ್ಥವು. ಇದರಿಂದ ಆಕಿಂಚನ್ಯವಿದ್ದುದಾದರೆ ಸರ್ವರೂ ಅಧಿಕಾರಿಗಳೇ ಎಂಬ ಭಾವವು. ಭಕ್ತಿಯೋಗ ನಿಷ್ಠನು ಅಕಿಂಚನನಲ್ಲವಾದುದರಿಂದ ಪ್ರಪತ್ತಿಗೆ ಅಧಿಕಾರಿಯಲ್ಲವು. ಈ ಸಂದರ್ಭದಲ್ಲಿ,

**ನ ಜಾತಿಭೇದಂ ನ ಕುಲಂ ನ ಲಿಙ್ಗಂ ನ ಗುಣ ಕ್ರಿಯಾಃ ।**
**ನ ದೇಶಕಾಲೌ ನಾವಸ್ಥಾಂ ಯೋಗೋಹ್ಯಯ ಮಪೇಕ್ಷತೇ॥**

ಎಂಬ ಶ್ಲೋಕವನುಸಂಧೇಯವು. ಪ್ರಪದನರೂಪವಾದ ಈ ಯೋಗವು ಜಾತಿ ಕುಲಗಳ ಉತ್ಕೃಷ್ಟತೆ ನಿಕೃಷ್ಟತೆಯನ್ನಾಗಲಿ ಸ್ತ್ರೀಪುರುಷ ಭೇದವನ್ನಾಗಲಿ ಗುಣಕ್ರಿಯೆಗಳ ಉತ್ತಮಾಧಮ ಸ್ಥಿತಿಯನ್ನಾಗಲಿ, ದೇಶಕಾಲಾವಸ್ಥೆಗಳ ಯೋಗ್ಯಾಯೋಗ್ಯತೆಗಳನ್ನಾಗಲಿ ಅಪೇಕ್ಷಿಸುವದಿಲ್ಲವು. ಇನ್ನು ಯಾವುದನ್ನು ಅಪೇಕ್ಷಿಸುತ್ತದೆ ಎಂದರೆ ಆಕಿಂಚನ್ಯವನ್ನು ಮಾತ್ರವೇ ಅಪೇಕ್ಷಿಸುತ್ತದೆ.

**ಇವ್ವರ್ಥತ್ತೈ (೧) "ಕುಲಙ್ಗಳಾಯ ವೀರಿರಂಡಿ ಲೊನ್ರಿಲುಮ್ ಪಿರನ್ದಿಲೇನ್" ಎನ್ಗಿರ ಪಾಟ್ಟಿಲುಮ್,(೨) "ಜನಿತ್ವಾಹಂ ವಂಶೇ" ಎನ್ಗಿರ ಶ್ಲೋಕತ್ತಿಲುಮ್, ಕಣ್ಡುಕೊಳ್ವದು.**

ಇವ್ವರ್ಥತ್ತೈ - ಈ ಅಭಿಪ್ರಾಯವನ್ನು ತಿರುಮಳಿಶೈಯಾಳ್ವಾರವರು ರಚಿಸಿದ ತಿರುಚ್ಛಂದವಿರುತ್ತದ (೧) "ಕುಲಙ್ಗಳಾಯ" ಎಂಬುವ ಪಾಶುರದಲ್ಲೂ (೨) "ಜನಿತ್ವಾಹಂ ವಂಶೇ" ಎನ್ನುವ ಯಾಮುನೇಯರ ಸ್ತೋತ್ರರತ್ನದ ಶ್ಲೋಕದಲ್ಲೂ, ಕಣ್ಡುಕೊಳ್ವದು - ತಿಳಿದುಕೊಳ್ಳತಕ್ಕದ್ದು. "ಕುಲಙ್ಗಳಾಯ" ಎಂಬ ಪೂರಾ ಪಾಶುರಕ್ಕೂ ಅದರ ಅರ್ಥಕ್ಕೂ ಉತ್ತರಕೃತ್ಯಾಧಿಕಾರದ ೧೨೭ನೆಯ ಪುಟವನ್ನು ನೋಡಿ. ಅಲ್ಲಿ ಆಕಿಂಚನ್ಯವು ಪ್ರದರ್ಶಿಸಿಸಲ್ಪಟ್ಟಿರುತ್ತದೆ. ಶ್ರೀ ಯಾಮುನೇಯರ ಶ್ಲೋಕವು ಯಾವುದೆಂದರೆ—

**ಜನಿತ್ವಾಹಂ ವಂಶೇ ಮಹತಿ ಜಗತಿ ಖ್ಯಾತ ಯಶಸಾಂ ।**
**ಶುಚೀನಾಂ ಯುಕ್ತಾನಾಂ ಗುಣ ಪುರುಷ ತತ್ವ ಸ್ಥಿತಿವಿದಾಂ ॥**
**ನಿಸರ್ಗಾದೇವ ತ್ವಚ್ಚರಣ ಕಮಲೈಕಾಂತ ಮನಸಾಂ ।**
**ಅಧೋಧಃ ಪಾಪಾತ್ಮಾ ಶರಣದ ನಿಮಜ್ಜಾಮಿ ತಮಸಿ ॥೬೧॥**

ಇದು ವಿಶೇಷವಾದ ಆಕಿಂಚನ್ಯವನ್ನು ಪ್ರದರ್ಶಿಸುವ ಶ್ಲೋಕವು. **ಹೇ ಶರಣದ** - ಅನನ್ಯಗತಿಕರಾಗಿಯೂ ಸಕಿಂಚನರಾಗಿರುವವರಿಗೆ ಅವರವರ ಅಧಿಕಾರಾನುಗುಣನಾಗಿ ಮೋಕ್ಷೋಪಾಯವನ್ನು ದಯಪಾಲಿಸುವವನೇ, **ಜಗತಿ**-ಈ ಲೋಕದಲ್ಲಿ, **ಖ್ಯಾತ ಯಶಸಾಂ**-ಆಗನೋತ್ಥ ಜ್ಞಾನವುಳ್ಳವರೆಂದು ಪ್ರಸಿದ್ಧಿಯನ್ನು ಹೊಂದಿದ, **ಶುಚೀನಾಂ** – ಅಂತರಿಂದ್ರಿಯ ಬಾಹ್ಯೇಂದ್ರಿಯಗಳ ಪಾರಿಶುದ್ಧ್ಯವನ್ನು ಹೊಂದಿದ, ಬರೀ ಜಲದಿಂದ ಶುದ್ಧಿ ಹೊಂದಿದವರೆಂಬರ್ಥವಲ್ಲವು, ಅಥವಾ ಕರ್ಮಯೋಗದಿಂದ ಪಾಪಗಳನ್ನು ಕಳೆದುಕೊಂಡು ಪರಿಶುದ್ಧರಾದ, **ಯುಕ್ತಾನಾಮ್**-ಆತ್ಮಾವಲೋಕನಕ್ಕೆ ಯೋಗ್ಯರಾದ, ಎಂದರೆ ಜ್ಞಾನಯೋಗನಿರತರಾದ ಅಥವಾ ನಿನ್ನ ಅನುಭವದ ವಿಶ್ಲೇಷವಿಲ್ಲದಿರುವ, **ಗುಣಪುರುಷ ತತ್ವಸ್ಥಿತಿವಿದಾಂ** - ಪ್ರಕೃತಿಪುರುಷ ಇವುಗಳ ಸ್ವರೂಪ ಯಾಥಾತ್ಮ್ಯವನ್ನು ಚನ್ನಾಗಿ ತಿಳಿದಿರುವ, **ನಿಸರ್ಗಾದೇವ** - ಸ್ವಾಭಾವಿಕವಾಗಿಯೇ, **ತ್ವಚ್ಚರಣ ಕಮಲೈ ಕಾಂತ ಮನಸಾಂ**-ನಿನ್ನ (ಸರ್ವೇಶ್ವರನ) ಚರಣಕಮಲದಲ್ಲೊಂದರಲ್ಲೇ ಸಕ್ತವಾದ ಮನಸ್ಸುಳ್ಳ, ಹೀಗೆ ಭಕ್ತಿಯೋಗ ನಿಷ್ಠರ, **ಮಹತಿ ವಂಶೇ** – ಘನವಾದ ವಂಶದಲ್ಲಿ

(೧) ತಿರುಚ್ಛಂದವಿರುತ್ತಂ. ೯೦. (೨) ಆಳ. ಸ್ತೋ. ೬೧,

**ಆಗೈಯಾಲ್ ಶರಣ್ಯ ಶರಣಾಗತಿ ಜ್ಞಾನಮುಮ್, ಆಕಿಂಚನ್ಯಾದಿಗಳು ಮುಡೈಯ ಸರ್ವಜಾತಿಯರ್‌ಕ್ಕುಮ್ ಪ್ರಪತ್ತ್ಯಧಿಕಾರಮ್ ಸಿದ್ಧಮ್.**

---

**ಅಹಂ** – ದುರ್ಭಗನಾದ ನಾನೊಬ್ಬ ಮಾತ್ರ, ಜನಿತ್ವಾ - ಹುಟ್ಟಿ, **ಪಾಪಾತ್ಮಾ**- ಪಾಪಗಳಲ್ಲೇ ಬುದ್ಧಿಯುಳ್ಳವನಾಗಿ, ಅಥವಾ ಪಾಪವೇ ಸ್ವರೂಪ ಸ್ವಭಾವಗಳಾಗಿ ಉಳ್ಳವನಾಗಿ, ತಮಸಿ - ಅಜ್ಞಾನ ವಿಪರೀತಜ್ಞಾನರೂಪ ಸಮುದ್ರದಲ್ಲಿ, **ಅಧೋಧಃ** - ಕೆಳಕೆಳಗೆ ಹೋಗುತ್ತಾ, **ನಿಮಜ್ಜಾಮಿ** - ಮುಳುಗಿರುವೆನು, ಇಂತಹ ಮಹಾಜ್ಞಾನನಿಧಿಗಳ ವಂಶದಲ್ಲಿ ಹುಟ್ಟಿರುವಾಗಲೇ ಉಪಾಯಾವಲಂಬನವನ್ನುಮಾಡಿ ಈ ಜ್ಞಾನ ಸಾಗರವನ್ನು ದಾಟದೇ ಆ ಸಮುದ್ರದಲ್ಲೇ ಮುಳುಗಿರುತ್ತೇನೆ; ಹೀಗೆ ಯಾವುದೊಂದೂ ಗತಿಯಿಲ್ಲದೆ ಆಕಿಂಚನನಾದ ನನಗೆ, **ಹೇ ಶರಣದ** ನೀನೇ ಪರಮಕೃಪಯಾ ಒಂದುಪಾಯವನ್ನು ತೋರಿ ಸಿದ್ಧೋಪಾಯನಾಗಿ ಈ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ಕೃಪಯಾ ಕೈಹಿಡಿದು ಎತ್ತತಕ್ಕದ್ದೆಂದು ತಮ್ಮ ಆಕಿಂಚನ್ಯವನ್ನು ಪ್ರದರ್ಶಿಸಿರುತ್ತಾರೆ. ಮುಂದಿನ ಶ್ಲೋಕವಾದ **"ಅಮರ್ಯಾದಃ"** ಎಂಬಲ್ಲೂ ಕೂಡ ಆಕಿಂಚನ್ಯವೇ ಹೇಳಲ್ಪಟ್ಟಿರುತ್ತದೆ. **"ಶರಣದ"** ಎಂದು ಸಂಬೋಧನೆಯಿರುವದರಿಂದ ಸರ್ವಾಧಿಕಾರತ್ವವೂ ಸೂಚಿತವು. ಆಕಿಂಚನ್ಯಮಾತ್ರ ಆವಶ್ಯಕವೆಂಬ ಭಾವವು. ಮಹಾಕುಲ ಪ್ರಸೂತತ್ವವೂ ಕೂಡ ಕಾರ್ಯಕಾರಿಯಾಗುವದಿಲ್ಲವೆಂಬ ಭಾವವು. ಉಪಾಸನಾದಿಗಳಿಗೆ ತಾನು ಅಶಕ್ತನೆಂಬ ಆಕಿಂಚನ್ಯಮಾತ್ರವೇ ಅಧಿಕಾರವೆಂದು ತಾವು ಇಷ್ಟುದೂರ ಉಪಪಾದಿಸಿದ ಅಭಿಪ್ರಾಯವನ್ನೇ ನಿಗಮನಮಾಡಿ ಹೇಳುತ್ತಾರೆ—

**ಆಗೈಯಾಲ್** – ಹೀಗೆ **ತ್ರೈವರ್ಣಿಕತ್ವ** ಅತ್ರೈವರ್ಣಿಕತ್ವಾದಿಗಳು ಯಾವುದೂ ಪ್ರಪತ್ತಿಗೆ ಅಧಿಕಾರವಿಲ್ಲದುದರಿಂದ, **ಶರಣ್ಯ ಶರಣಾಗತಿ ಜ್ಞಾನಮುಮ್** - ಸರ್ವರಿಗೂ ಉಪಾಯಭೂತನಾಗಿರುವ ಸರ್ವೇಶ್ವರನಲ್ಲಿ ಮಾಡುವ ಶರಣಾಗತಿಯ ಜ್ಞಾನವನ್ನೂ, **ಆಕಿಂಚನ್ಯಾದಿಗಳುಮ್** - ಆಕಿಂಚನ್ಯವೇ ಮೊದಲಾದವುಗಳನ್ನೂ, **ಉಡೈಯ** - ಹೊಂದಿರುವ, **ಸರ್ವಜಾತಿಯರ್ಕ್ಕುಮ್**-ಪಂಚಮಾದಿ ಸಮಸ್ತ ಜಾತಿಯವರಿಗೂ, ಪ್ರಪತ್ತಿಯಲ್ಲಿ ಅಧಿಕಾರವು, **ಸಿದ್ಧಮ್** - ಸ್ಥಾಪಿತವು. ಈ ನಿಗಮನ ವಾಕ್ಯದಲ್ಲಿ ಸಮಸ್ತಜಾತಿಯವರಿಗೂ ಅಧಿಕಾರವೆಂದು ಸರ್ವಾಧಿಕಾರವನ್ನು ಸ್ಥಾಪಿಸಿದರೂ, ಅಂಗಾಂಗಿ ಸಮೇತ ಶರಣಾಗತಿಯನ್ನು ಶರಣ್ಯನಲ್ಲಿ ಅನುಷ್ಠಿಸಿದರೇನೇ ಪ್ರಪತ್ತಿ ಪೂರ್ಣವಾಗುತ್ತೆಯೇ ವಿನಾ, ಪ್ರಧಾನಾಙ್ಗವಾದ ಆಕಿಂಚನ್ಯ ಒಂದು ಮಾತ್ರವಿದ್ದುಬಿಟ್ಟರೆ ಶರಣಾಗತಿಯಾಗುವದಿಲ್ಲ

## ಅಥ ಪ್ರಪತ್ತಿ ಸ್ವರೂಪ ಶಙ್ಕಾ ಪರಿಹಾರಃ

ಇವ್ವುಪಾಯ ಸ್ವರೂಪತ್ತೈ ಪತ್ತ "ನಾರಾಯಣಂ ಸಲಕ್ಷ್ಮೀಕಂ ಪ್ರಾಪ್ತುಂ ತಚ್ಚರಣದ್ವಯಮ್। ಉಪಾಯ ಇತಿ ವಿಶ್ವಾಸೋ ದ್ವಯಾರ್ಥಶ್ಶರಣಾಗತಿಃ" ॥ ಎಙ್ಗರಭಿಯುಕ್ತರ್ ಪಾಶುರಮುಮ್, ಅಧಿಕಾರ ಕೋಟಿಯಿಲುಮ್ ಅಙ್ಗ ಕೋಟಿಯಿಲುಮ್ ನಿರ್ಕಿರ ವಿಶ್ವಾಸತ್ತಿನುಡೈಯ ಪ್ರಾಧಾನ್ಯಮ್ ಶೊಲ್ಲುಗೈಕ್ಕಾಗವತ್ತನೈ.

---

ವೆಂಬಭಿಪ್ರಾಯವನ್ನು ಸೂಚಿಸುವದಕ್ಕಾಗಿ "ಶರಣ್ಯ ಶರಣಾಗತಿ ಜ್ಞಾನಮುಮ್" ಎಂಬ ಪ್ರಯೋಗವು.

ಹೀಗೆ ಪ್ರಪತ್ತ್ಯಧಿಕಾರದ ಸ್ವರೂಪವ್ಯವಸ್ಥೆಯನ್ನು ಮಾಡಿ, ಮುಂದೆ ಪ್ರಪತ್ತಿಸ್ವರೂಪವಾದ ಅಂಗಿಯಲ್ಲುಂಟಾಗುವ ಶಂಕೆಗಳನ್ನು ಪರಿಹರಿಸುತ್ತಾರೆ

### ಪ್ರಪತ್ತಿ ಸ್ವರೂಪದಲ್ಲಿ ಉಂಟಾಗುವ ಶಙ್ಕೆಗಳನ್ನು ಪರಿಹರಿಸುತ್ತಾರೆ.

ಸರ್ವೇಶ್ವರನು ನಮ್ಮನ್ನು ರಕ್ಷಿಸಿಯೇ ರಕ್ಷಿಸುವನೆಂಬ ಮಹಾ ವಿಶ್ವಾಸವೇ, ಶರಣಾಗತಿಯೇ, ಅಥವಾ ಆತನ ಚರಣದ್ವಂದವೇ ನಮಗೆ ಸರ್ವವಿಧದಲ್ಲೂ ತಾರಕವೆಂಬ ಮಹಾ ವಿಶ್ವಾಸವೇ ಶರಣಾಗತಿಯೇ ಎಂಬ ಅಭಿಪ್ರಾಯವನ್ನು ಸರಿಯಾಗಿ ತಿಳಿದುಕೊಳ್ಳದೇ ಮಹಾ ವಿಶ್ವಾಸವಾದ ಅಙ್ಗವನ್ನು ಅಙ್ಗಿಯಾದ ಶರಣಾಗತಿಯೆಂದು ಕೆಲವರು ಭಾವಿಸುವರು. ಇದು ಸರಿಯಾದ ಅಭಿಪ್ರಾಯವಲ್ಲವೆಂದೂ, ಮಹಾ ವಿಶ್ವಾಸವೇ ಶರಣಾಗತಿಯೆಂದು ಹೇಳಿದುದರ ಸರಿಯಾದಭಿಪ್ರಾಯವೇನೆಂಬುದನ್ನೂ ತಿಳಿಸುತ್ತಾರೆ.

ಇವ್ವುಪಾಯಸ್ವರೂಪತ್ತೈ - ಈ ಪ್ರಪದನವೆಂಬ ಉಪಾಯದ ಸ್ವರೂಪವನ್ನು ಕುರಿತ, ಇದು ಅಭಿಯುಕ್ತರ್ ಪಾಶುರಮುಮ್ ಎಂಬುದರೊಂದಿಗೆ ಅನ್ವಯವು, (೧) "ಸಲಕ್ಷ್ಮೀಕಂ-ಲಕ್ಷ್ಮಿಯೊಂದಿಗೆ ಸದಾ ಇರುವ, ನಾರಾಯಣನನ್ನು, ಪ್ರಾಪ್ತುಂ-ಹೊಂದಲು, ತಚ್ಚರಣದ್ವಯಮ್-ಆ ಲಕ್ಷ್ಮೀನಾರಾಯಣರ ಪಾದದ್ವಂದವು, ಉಪಾಯ ಇತಿವಿಶ್ವಾಸಃ-ಉಪಾಯವೆಂಬದಾಗಿ ಅದರಲ್ಲಿ ಮಹಾ ವಿಶ್ವಾಸವು, ಎಂಬುದು ದ್ವಯಾರ್ಥಶ್ಶರಣಾಗತಿಃ-ದ್ವಯಮಂತ್ರದ ಅರ್ಥವಾದ "ಶರಣಾಗತಿಯು", ಎನ್ರು - ಎಂಬದಾಗಿ, ಅಭಿಯುಕ್ತರ್ ಪಾಶುರಮುಮ್-ಮಹಾಪೂಜ್ಯರ ಶ್ಲೋಕವು, ಅಧಿಕಾರ ಕೋಟಿಯಲ್ಲೂ, ಅಙ್ಗಕೋಟಿಯಲ್ಲೂ,

## ವಿಶ್ವಾಸಪ್ರಾರ್ಥನೇ ಅಙ್ಗೇ, ನತು ಅಙ್ಗಿನೀ

ಅಪ್ಪಡಿಯೇ (೧) "ಪ್ರಪತ್ತಿ ರ್ವಿಶ್ವಾಸ ಸ್ಸಕೃತ್ಪ್ರಾರ್ಥನಾ ಮಾತ್ರೇಣಾ ಪೇಕ್ಷಿತಂ ದಾಸ್ಯತೀತಿ ವಿಶ್ವಾಸಪೂರ್ವಕಂ ಪ್ರಾರ್ಥನ ಮಿತಿಯಾವತ್" ಎಙ್ಗಿರವಾಕ್ಯಮುಮ್ ಪ್ರಾಧಾನ್ಯವಿವಕ್ಷೈಯಾಲೇ ಮುದಲ್ ವಿಶ್ವಾಸ

---

ನಿರ್ಕಿರ - ಇರುವ, ಮಹಾ ವಿಶ್ವಾಸದ, ಪ್ರಾಧಾನ್ಯಮ್ - ಪ್ರಾಮುಖ್ಯತೆಯನ್ನು, ಶೊಲ್ಲುಗೈಕ್ಕಾಕ ವತ್ತನ್ನೈ - ಹೇಳುವದಕ್ಕಾಗಿ ಮಾತ್ರವೇ. ಮಹಾ ವಿಶ್ವಾಸವೇ ದ್ವಯಾರ್ಥವಾದ ಶರಣಾಗತಿಯೆಂದರೆ ಮಹಾವಿಶ್ವಾಸವೇ ಅಙ್ಗಿಯಾದ ಶರಣಾ ಗತಿಯೆಂದು ಹೇಳಿದಂತಾಯಿತು. ಮಹಾವಿಶ್ವಾಸವು ಶರಣಾಗತಿಗೆ ಒಂದು ಮುಖ್ಯವಾದ ಅಙ್ಗವೆಂದು ಹಿಂದೆ ಪರಿಕರವಿಭಾಗಾಧಿಕಾರದಲ್ಲಿ ಹೇಳಲ್ಪಟ್ಟಿರು ತ್ತದೆ ಈ ಮಹಾ ವಿಶ್ವಾಸವು ಅಧಿಕಾರಿ ಎಂದೆನಿಸಿಕೊಳ್ಳುವದಕ್ಕೂ ಬೇಕು, ಮತ್ತು ಅಙ್ಗಗಳಲ್ಲಿ ಒಂದು ಪ್ರಧಾನವಾದ ಅಙ್ಗವಾಗಿಯೂ ಬೇಕು, ಹೀಗಿರು ವದರಿಂದ ಅದರ ಪ್ರಾಮುಖ್ಯತೆಯನ್ನು ಮನಸ್ಸಿನಲ್ಲಿಟ್ಟು ವಿಶ್ವಾಸವೇ ಶರಣಾಗತಿ ಎಂದು ಹೇಳಿಬಿಟ್ಟರೇ ವಿನಾ, ಪ್ರಪದನಕ್ಕೆ ಅಙ್ಗವಾದ ಮಹಾ ವಿಶ್ವಾಸವನ್ನೇ, ಅಙ್ಗಿಯೆಂಬಭಿಪ್ರಾಯದಿಂದಲ್ಲವೆಂಬ ತಾತ್ಪರ್ಯವು ತಮ್ಮ ಅಭಿಪ್ರಾಯ ಸಮ ರ್ಥನೆಗಾಗಿ ಶ್ರೀ ಭಾಷ್ಯಕಾರರೂ, ಪ್ರಪತ್ತಿಯೇ ಮಹಾವಿಶ್ವಾಸವೆಂದು ಹೇಳಿ, ಅದರ ತಾತ್ಪರ್ಯವು ವಿಶ್ವಾಸಪೂರ್ವಕಪ್ರಾರ್ಥನಾ ಎಂದು ವಿವರಿಸಿ, ಇದೇ ಪ್ರಪದನ ವೆಂದು ಉಪದೇಶಿಸಿರುತ್ತಾರೆ. ಶ್ರೀ ಭಾಷ್ಯಕಾರರ ಶಿಷ್ಯರು ಒಂದಾನೊಂದುಕಾಲ ದಲ್ಲಿ ಪ್ರಪತ್ತಿಯ ಸ್ವರೂಪವೆಂತಾದ್ದೆಂದು ಪ್ರಶ್ನಿಸಲು, ಆಗ ಅವರು ಅಪ್ಪಣೆ ಕೊಡಿ ಸಿದ ಮುಕ್ತಕ ವಾಕ್ಯವನ್ನು ಉದಾಹರಿಸುತ್ತಾರೆ—

ವಿಶ್ವಾಸ ಪ್ರಾರ್ಥನೆಗಳು ಅಂಗಗಳು, ಅಙ್ಗಿಯಾಗಲಾರವು.

---

ಅಪ್ಪಡಿಯೇ - ಮೇಲೆ ಉಪಪಾದಿಸಿದ ಹಾಗೆಯೇ "ಪ್ರಪತ್ತಿಃ- ಪ್ರಪತ್ತಿ ಎಂಬುದು, ವಿಶ್ವಾಸಃ - ವಿಶ್ವಾಸವು, ಸಕೃತ್ಪ್ರಾರ್ಥನಾ ಮಾತ್ರೇಣ - ಒಂದು ಸಲ ಪ್ರಾರ್ಥಿಸುವ ಮಾತ್ರದಿಂದ, ಅಪೇಕ್ಷಿತಂ – ಕೋರಿದ ಫಲವನ್ನು, ದಾಸ್ಯ ತೀತಿ - ಸರ್ವೇಶ್ವರನು ಕೊಡುವನೆಂದು ವಿಶ್ವಾಸ ಪೂರ್ವಕವಾಗಿ, ಪ್ರಾರ್ಥನ ಮಿತಿ ಯಾವತ್ - ಪ್ರಾರ್ಥಿಸೋಣ ಯಾವುದೋ ಅದು," ಎಙ್ಗಿರ ವಾಕ್ಯ ಮುಮ್ - ಎನ್ನುವ ವಾಕ್ಯವೂ, ಪ್ರಾಧಾನ್ಯ ವಿವಕ್ಷೈಯಾಲೇ - ಪ್ರಾಮು ಖ್ಯತೆಯನ್ನು ಹೇಳಬೇಕೆಂಬ ಇಚ್ಛೆಯಿಂದ, ಮುದಲ್ ವಿಶ್ವಾಸತ್ತೈ ಚ್ಚೊಲ್ಲಿ

---

(೧) ಶ್ರೀ ಭಾಷ್ಯಕಾರರ ಸೂಕ್ತಿ.

**ತ್ರ್ಯ ಚೆಸ್ಥಲ್ಲಿ, "ಅನನ್ಯ ಸಾಧ್ಯೇ" ಎಙ್ಗಿರ ಭರತಮುನಿ ಪ್ರಣೀತ ಲಕ್ಷಣ ವಾಕ್ಯತ್ತಿನ್ಪಡಿಯೇ ವಿಶ್ವಾಸಪೂರ್ವಕಂ ಪ್ರಾರ್ಥನಮೆನ್ರು ನಿಷ್ಕರ್ಷಿತ್ತದು.**

---

ಮೊದಲು ಪ್ರಪದನವೇ ವಿಶ್ವಾಸವೆಂದು ಹೇಳಿ, **"ಅನನ್ಯ ಸಾಧ್ಯೇ" ಎಙ್ಗಿರ ಭರತಮುನಿ ಪ್ರಣೀತ** - ಎಂಬ ಭರತಮುನಿಯಿಂದ ರಚಿಸಲ್ಪಟ್ಟ, **ಲಕ್ಷಣ ವಾಕ್ಯತ್ತಿಲ್ ಪಡಿಯೇ** - ಪ್ರಪತ್ತಿಗೆ ಹೇಳುವ ಲಕ್ಷಣ ವಾಕ್ಯದಹಾಗೆ, ವಿಶ್ವಾಸ ಪೂರ್ವಕವಾದ, **ಪ್ರಾರ್ಥನ ಮೆನ್ರು** - ಪ್ರಾರ್ಥನೆಯೆಂದು, **ನಿಷ್ಕರ್ಷಿತ್ತದು** - ನಿಷ್ಕರ್ಷಿಸಲ್ಪಟ್ಟದುದು ಪ್ರಪತ್ತಿ ಎಂಥಾದ್ದು ಎಂದರೆ ಶ್ರೀ ಭಾಷ್ಯಕಾರರೂ ಮಹಾ ವಿಶ್ವಾಸವೇ ಎಂದು ಪ್ರಥಮತಃ ಹೇಳಿ, ವಿಶ್ವಾಸವು ಪ್ರಪತ್ತಿಗೆ ಅಂಗವಾಗಿರುವಾಗ ಅದೇ ಅಂಗಿರೂಪ ಶರಣಾಗತಿಯಾದೀತೆಂಬ **ಪೂರ್ವಪಕ್ಷ** ಬಂದೀತೆಂದು, ಮಹಾವಿಶ್ವಾಸದಿಂದ ತನ್ನ ಪುರುಷಾರ್ಥವು ಯಾವುದೋ ಅದನ್ನು ಪ್ರಾರ್ಥಿಸುವದು ಎಂದು ತಮ್ಮ ವಾಕ್ಯಾಭಿಪ್ರಾಯವನ್ನು ಭರತಮುನಿಯ **ಲಕ್ಷಣ ವಾಕ್ಯಾನು**ಸಾರವಾಗಿ ಹೇಳಿದರು. ಹಾಗೆ ಹೇಳಲು ಕಾರಣವೇನೆಂದರೆ ಆ ಮಹಾ ವಿಶ್ವಾಸಾಂಗದ ಪ್ರಾಧಾನ್ಯತೆಯನ್ನು ಸಮರ್ಥಿಸಿ ಹೇಳುವದಕ್ಕಾಗಿ ಎಂಬ ಭಾವವು. ಭರತ ಮುನಿಯ ವಾಕ್ಯವು ಯಾವುದೆಂದರೆ .—

**ಅನನ್ಯ ಸಾಧ್ಯೇ ಸ್ವಾಭೀಷ್ಟೇ ಮಹಾ ವಿಶ್ವಾಸಪೂರ್ವಕಂ ।**
**ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ॥**

ಇದರರ್ಥಕ್ಕೆ ಸಾಂಗಪ್ರಪದನಾಧಿಕಾರದ ೧೦೫೩ನೆಯ ಪುಟವನ್ನು ಪರಾಂಬರಿಸಿ. ಭರತ ಮುನಿಗಳು ವಿಶ್ವಾಸ**ಪೂರ್ವ**ಕವಾಗಿ ಭಗವಂತನೇ ಮುಖ್ಯ ಸಿದ್ಧೋಪಾಯನೆಂದು ತಿಳಿದು ಸ್ವಾಭೀಷ್ಟವನ್ನು ಸಕೃತ್ ತಿಳಿಸಿ ರಕ್ಷಾಪೇಕ್ಷೆಯನ್ನು ಪ್ರಾರ್ಥಿಸುವದೇ **ಪ್ರ**ಪತ್ತಿ ಎಂದು ಹೇಳಿರುವ ಹಾಗೆ ಶ್ರೀ ಭಾಷ್ಯಕಾರರೂ **"ಪ್ರಾರ್ಥನಮಿತಿಯಾನತ್"** ಎಂದು ಹೇಳಿದರು. ಇಲ್ಲಿ ಪ್ರಾರ್ಥನೆಯು **ಕೂಡ ಗೋಪ್ತೃತ್ವ** ವರಣರೂಪವಾದ ಅಙ್ಗವು. ಅದು ತಾನೇ ಪ್ರಪತ್ತಿ ಹೇಗಾದೀತು ಎಂಬುದಕ್ಕೆ ಸಮಾಧಾನವಾಗಿ, **ಯಾಚ್ಞಾ ಪ್ರಪತ್ತಿಃ** - ಎಂಬುದರಭಿಪ್ರಾಯವು, **"ಭರನ್ಯಾಸಂ ಯಾಚ್ಞಾನ್ವಿತ ಮಭಿನದನ್ತಿ ಪ್ರಪದನಂ"** ತನಗೆ ಅಪೇಕ್ಷಿತವಾದುದರ ಸರ್ವ ಭರವನ್ನು ಸರ್ವೇಶ್ವರನಲ್ಲಿಡುವದೇ ಪ್ರಪದನವೆಂದು ಹೇಳುತ್ತಾರೆ ಎಂಬುದೆಂದು ಶ್ರೀ ದೇಶಿಕರವರೇ ಸಾಂಗಪ್ರಪದನಾಧಿಕಾರದಲ್ಲಿ ವ್ಯಾಖ್ಯಾನಮಾಡಿರುತ್ತಾರೆ. ಈ ಅಭಿಪ್ರಾಯವನ್ನೇ ಮುಂದಿನ ವಾಕ್ಯದ ಮೂಲಕ ತಿಳಿಸುತ್ತಾರೆ.

**ಇವ್ವಾಕ್ಯತ್ತಾಲುಮ್, ಆತ್ಮನಿಕ್ಷೇಪ ಮುಕ್ಕು ಇತರಙ್ಗಳ್ ಅಙ್ಗಙ್ಗಳೆನ್ರು ಶೊಲ್ಲುಗಿರ (೧) "ನ್ಯಾಸಃ ಪಂಚಾಂಗ ಸಂಯುತಃ" ಇತ್ಯಾದಿ ವಚನಙ್ಗಳಾಲೆ ಪ್ರಾರ್ಥನೈಯುಮ್ ಅಙ್ಗಮಾಗೈಯಾಲ್ (೨) "ರಕ್ಷಾಪೇಕ್ಷಾಂ ಪ್ರತೀಕ್ಷತೇ" ಎನ್ಗಿರಪಡಿಯೇ ಈಶ್ವರನ್ ಅಪೇಕ್ಷಾಮಾತ್ರಸಾಪೇಕ್ಷನೆನ್ರಿವ್ವಙ್ಗತ್ತಿನ್ ಪ್ರಾಧಾನ್ಯತ್ತೈ ವಿವಕ್ಷಿತ್ತು ಚೊನ್ನಪಡಿ.**

---

ಮಹಾ ವಿಶ್ವಾಸವೂ ಅಙ್ಗವು, ಮತ್ತು ಯಾಚನೆಯೂ ಗೋಪ್ತೃತ್ವವರಣರೂಪ ಅಙ್ಗವು; ಇವೆರಡೂ ಅಙ್ಗಿಯಾದ ಪ್ರಪತ್ತಿಯಾಗಲಾರವು. ಭರತಮುನಿ ಮತ್ತು ಶ್ರೀ ಭಾಷ್ಯಕಾರರುಗಳು ವಿಶ್ವಾಸ ಪೂರ್ವಕ ಯಾಚನೆಯೇ ಪ್ರಪತ್ತಿ ಎಂದು ಹೇಳಿದುದರಭಿಪ್ರಾಯವು, ಮಹಾ ವಿಶ್ವಾಸವೂ ಗೋಪ್ತೃತ್ವವರಣವೂ ಎರಡೂ ಮುಖ್ಯವಾದ ಅಙ್ಗಗಳೆಂದು ತಿಳಿಸುವದರಲ್ಲಿ ತಾತ್ಪರ್ಯವು. ಹಾಗಾದರೆ ಶ್ರೀ ಭಾಷ್ಯಕಾರರು "ವಿಶ್ವಾಸಪೂರ್ವಕಂ ಪ್ರಾರ್ಥನಮಿತಿ ಯಾವತ್" ಎಂದು ಪ್ರಪತ್ತಿಗೆ ಹೇಗೆ ಲಕ್ಷಣವನ್ನು ಹೇಳಿದರು ಎಂಬಾಕ್ಷೇಪಕ್ಕೆ ಮುಂದೆ ಸಮಾಧಾನವನ್ನೂ ಹೇಳುತ್ತಾರೆ.

ಇವ್ವಾಕ್ಯತ್ತಾಲುಮ್-"ಪ್ರಪತ್ತಿರ್ವಿಶ್ವಾಸಃ" ಎಂದಾರಂಭಿಸಿ "ಪ್ರಾರ್ಥನಮಿತಿ ಯಾವತ್" ಎಂದು ಮುಗಿಸಿ ಹೇಳಿರುವ ಶ್ರೀ ಭಾಷ್ಯಕಾರರ ವಾಕ್ಯವೂ ಕೂಡ ಆತ್ಮನಿಕ್ಷೇಪವು ಅಙ್ಗಿ, ಇತರಂಗಳ್ - ಎಂದರೆ ವಿಶ್ವಾಸ ಪ್ರಾರ್ಥನಾ ಮೊದಲಾದವು, ಅಙ್ಗಙ್ಗಳೆನ್ರು ಶೊಲ್ಲುಗಿರ ಅಙ್ಗಗಳೆಂದು ಹೇಳುವ, "ನ್ಯಾಸಃ ಪಂಚಾಂಗ ಸಂಯುತಃ ಎಂದರೆ ಆತ್ಮನಿಕ್ಷೇಪವೆಂದು ಹೇಳಿಸಿಕೊಳ್ಳುವ ಭರನ್ಯಾಸವೆಂಬ ಅಙ್ಗಿಯು ಐದು ಅಂಗಗಳಿಂದ ಕೂಡಿದುದು" ಇತ್ಯಾದಿ ವಚನಙ್ಗಳಾಲೇ - ಇವೇ ಮೊದಲಾದ ಪ್ರಮಾಣಗಳಿಂದ, ಪ್ರಾರ್ಥನೆಯುಮ್ ಅಙ್ಗಮಾಗಿಲ್-ಪ್ರಾರ್ಥನೆಯೂ ಗೋಪ್ತೃತ್ವ ವರಣರೂಪ ಅಙ್ಗವಾದುದರಿಂದ, "ರಕ್ಷಾಪೇಕ್ಷಾಂ ಪ್ರತೀಕ್ಷತೇ" - "ಪ್ರಪತ್ತಿಯು ಭಗವಂತನ ರಕ್ಷೆಯ ಅಪೇಕ್ಷೆಯನ್ನು ಎದುರು ನೋಡುತ್ತದೆ" ಎನ್ಗಿರಪಡಿಯೇ-ಎಂದು ಹೇಳಿರುವಹಾಗೆ, ಈಶ್ವರನ್-ಸರ್ವೇಶ್ವರನು, ಅಪೇಕ್ಷಾಮಾತ್ರ ಸಾಪೇಕ್ಷನ್ - ತನ್ನ ಮನೋರಥವು ಯಾವುದೆಂದು ಮಾತ್ರ ತಿಳಿಯಲು ಅಪೇಕ್ಷೆಯುಳ್ಳವನು, ಎನ್ರಿವ್ವಙ್ಗತ್ತಿನ್ - ಎಂಬದಾಗಿ ಈ ಗೋಪ್ತೃತ್ವ ವರಣರೂಪ ಅಙ್ಗದ, ಪ್ರಾಧಾನ್ಯವನ್ನು, ವಿವಕ್ಷಿತ್ತು ಚೊನ್ನಪಡಿ - ಚನ್ನಾಗಿ ತಿಳಿಸಬೇಕೆಂಬಭಿಲಾಷೆಯಿಂದ ಹೇಳಲ್ಪಟ್ಟಿತೆಂದು

---

(೧) ಲಕ್ಷ್ಮೀ ತಂತ್ರ ೧೭ ೭೪. (೨) ಲಕ್ಷ್ಮೀತಂತ್ರ, ೧೭. ೭೮

## ಶ್ರೀ ಭಾಷ್ಯಕಾರಾಭಿಪ್ರಾಯೇಽಪಿ ನಿಕ್ಷೇಪ ಏವಾಙ್ಗೀ

**ಶಿರಿಯ ಗದ್ಯತ್ತಿಲುಮ್ ವಿಶ್ವಾಸಪೂರ್ವಕ ಪ್ರಾರ್ಥನೈಯೈಪ್ಪಣ್ಣಿ "ನಮೋಽಸ್ತು ತೇ" ಎನ್ರು ಮುಡಿಕ್ಕೈಯಾಲುಮ್, ಉಪಾಯ ವರಣಶಬ್ದ ಸಾಮರ್ಥ್ಯತ್ತಾಲುಮ್ ನಿಕ್ಷೇಪಮುಮ್ ಸಿದ್ಧಮ್.**

---

ಭಾವಿಸತಕ್ಕದ್ದು. "**ಪ್ರಪತ್ತಿರ್ವಿಶ್ವಾಸಃ**" ಎಂದು ಹೇಳುವಾಗ ಹೇಗೆ ಪ್ರಪತ್ತಿಗೆ ವಿಶ್ವಾಸರೂಪ ಅಙ್ಗದ ಪ್ರಾಧಾನ್ಯವನ್ನು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವೋ, ಹಾಗೆಯೇ **ಪ್ರಾರ್ಥನಮತಿಯಾವತ್** ಎಂದು ಹೇಳುವಾಗಲೂ, ಗೋಪ್ತೃತ್ವ ವರಣ ಪ್ರಾಧಾನ್ಯವನ್ನು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದೆಂಬ ತಾತ್ಪರ್ಯವು. "ನ್ಯಾಸಃ ಪಂಚಾಂಗ ಸಂಯುತಃ" ಎಂಬ ಶ್ಲೋಕವನ್ನು ಸ್ವಾಮಿ ದೇಶಿಕರವರೇ ಉದಾಹರಿಸಿರುತ್ತಾರೆ. ೯೫ನೆಯ ಪುಟವನ್ನೂ ೧೦೦೦ ಪುಟವನ್ನೂ ನೋಡಿ.

ಹಾಗೆಯೇ "ರಕ್ಷಾಪೇಕ್ಷಾಂ" ಎಂಬ ಶ್ಲೋಕವನ್ನೂ ಪರಿಕರ ವಿಭಾಗಾಧಿಕಾರದಲ್ಲೇ ಉದಾಹರಿಸಿರುತ್ತಾರೆ. ೧೩೦೮ನೆಯ ಪುಟ ನೋಡಿ.

ಹೀಗೆ ವಿಶ್ವಾಸವೂ ಯಾಚನೆಯೂ ಸಹ ಪ್ರಪತ್ತಿಗೆ ಅಙ್ಗಗಳಾದರೆ, ಅಙ್ಗಿ ಯಾವುದು ಎಂದು ತೋರ್ಪಡಿಸಿದ್ದಾರೆಯೇ ಎಂದರೆ ಬಹುಕಡೆಯಲ್ಲಿ ನಿಕ್ಷೇಪವೇ ಅಙ್ಗಿ ಎಂದು ತೋರ್ಪಡಿಸಿರುತ್ತಾರೆಂದು ಹೇಳುತ್ತಾರೆ —

## ಶ್ರೀ ಭಾಷ್ಯಕಾರರ ಅಭಿಪ್ರಾಯಾನುಸಾರವಾಗಿಯೂ ನಿಕ್ಷೇಪವೇ ಅಙ್ಗಿಯು

ಮುಂದೆ, ಇತರರು ಹೇಳುವಹಾಗೆ ಪ್ರಾರ್ಥನೆಯೇ ಪ್ರಪತ್ತಿಯಲ್ಲವು, ಪ್ರಪತ್ತಿಯು ಆತ್ಮನಿಕ್ಷೇಪವೆಂಬುದೇ ಶ್ರೀ ಭಾಷ್ಯಕಾರರ ಅಭಿಪ್ರಾಯವೆಂದು ಮಿತಗದ್ಯ ಮತ್ತು ವೈಕುಂಠ ಗದ್ಯವಾಕ್ಯಗಳಿಂದ ವ್ಯಕ್ತಪಡಿಸುತ್ತಾರೆ ಆದುದರಿಂದ "**ವಿಶ್ವಾಸಪೂರ್ವಕಂ ಪ್ರಾರ್ಥನಾ**" ಎಂಬ ಶ್ರೀ ಭಾಷ್ಯಕಾರರ ವಾಕ್ಯವೂ, "**ಯಾಚ್ಞಾ ಪ್ರಪತ್ತಿಃ**" ಎಂಬ ಭರತಮುನಿಯ ವಾಕ್ಯವೂ ಔಪಚಾರಿಕವು ಎಂಬ ಭಾವವು. **ಶಿರಿಯ ಗದ್ಯತ್ತಿಲುಮ್** - ಚಿಕ್ಕ ಗದ್ಯವಾದ ಶ್ರೀರಂಗ ಗದ್ಯದಲ್ಲೂ, **ವಿಶ್ವಾಸಪೂರ್ವಕ ಪ್ರಾರ್ಥನೈಯೈಪ್ಪಣ್ಣಿ** - "**ನಿತ್ಯ ದಾಸ್ಯಂ ದಾಸ್ಯತೀತಿ ಮಹಾ ವಿಶ್ವಾಸ ಪೂರ್ವಕಂ ನಿತ್ಯ ಕಿಙ್ಕರತಾಂ ಪ್ರಾರ್ಥಯೇ**" ಎಂದು "ವಿಶ್ವಾಸಪೂರ್ವಕವಾಗಿ ದಿವ್ಯವೈಕುಂಠವಲ್ಲಿದ್ದು, ನಿನಗೆ ಸದಾ ಕೈಂಕರ್ಯವನ್ನು ಮಾಡುವದನ್ನು ಪ್ರಾರ್ಥಿಸುವನೆಂದು" ಪ್ರಾರ್ಥಿಸಿ

## ನಮಶ್ಶಬ್ದ ಆತ್ಮನಿವೇದನ ಪರಃ

**ನಮಸ್ಸಾತ್ಮ ನಿಕ್ಷೇಪ ಪರಮೆನ್ನು ಮಿಡವರ್** (೧) **"ನಮಸ್ಕಾರಾ**

**"ನಮೋಽಸ್ತುತೇ"** ನಿನಗೆ ನಮಸ್ಕಾರವನ್ನು ಮಾಡವೆನೆಂದು ಮುಗಿಸಿರುವದರಿಂದಲೂ, **ಉಪಾಯವರಣ ಶಬ್ದಸಾಮರ್ಥ್ಯಾತ್ತಾಲುಮರ್** - ಅಲ್ಲಿ ಇರುವದೇನೆಂದರೆ **"ತತ್ತ್ವನಾ ನಂತಕಾಲ ಸಮೀಕ್ಷಯಾಪ್ಯದೃಷ್ಟ ಸಂತಾರೋಪಾಯೇ ನಿಖಿಲ ಜನ್ತು ಜಾತ ಶರಣ್ಯಂ** ಶ್ರೀಮನ್ನಾರಾಯಣ ತವ ಚರಣಾರವಿಂದ **ಯುಗಳಂ ಶರಣಮಹಂ ಪ್ರಪದ್ಯೇ"** ಎಂಬಲ್ಲಿ **"ಶರಣಮಹಂ ಪ್ರಪದ್ಯೇ"** ಎಂದಿರುವದರಿಂದ ಉಪಾಯನಾಗಿರಬೇಕೆಂಬ ಶಬ್ದಸಾಮರ್ಥ್ಯ**ದಿಂದಲೂ, ನಿಕ್ಷೇಪ ಮುಮರ್** - ಎಂದರೆ ಆತ್ಮನಿಕ್ಷೇಪವು, **ಸಿದ್ಧಮ್** - ಸ್ಥಾಪಿತವು, ಎರಡು **ಕಾರಣ**ಗಳಿಂದ ಪ್ರಪತ್ತಿ ಎಂಬದು ಪ್ರಾರ್ಥನೆ ಮಾತ್ರವೇ ಅಲ್ಲವು, ಪ್ರಾರ್ಥನೆಯೊಂದಿಗೆ ಆತ್ಮನಿಕ್ಷೇಪವೇ ಎಂದು ಹೇಳುತ್ತಾರೆ (೧) **"ನಮೋಽಸ್ತುತೇ"** ಎಂದು ಕೊನೆಯಲ್ಲಿ ಹೇಳಿರುವದರಿಂದ, ನಮಶ್ಶಬ್ದಕ್ಕೆ ಆತ್ಮನಿಕ್ಷೇಪಾರ್ಥವು ಹೇಗೆ ಎಂದರೆ ಹಾಗೆ ಉಪಯೋಗಿಸಿರುವದಕ್ಕೆ ಮುಂದಿನ ವಾಕ್ಯದಿಂದ **ಪ್ರಮಾಣವನ್ನು ತೋರಿಸುತ್ತಾರೆ** (೨) **ಶರಣಮಹಂ ಪ್ರಪದ್ಯೇ** ಎಂದು ಇರುವದರಿಂದ; ಶರಣ **ಶಬ್ದವು ಉಪಾಯಾರ್ಥ**ವಾಗಿ ಉಪಾಯ ಭರವನ್ನು ಅವನಲ್ಲಿಡುವದರಿಂದ ಆತ್ಮನಿ**ಕ್ಷೇಪವು** ಸಿದ್ಧವು **ಎಂಬ ತಾತ್ಪರ್ಯ**ವು ಇದು ಹೇಗೆಂದರೆ- **ಶರಣಂ ಪ್ರಪದ್ಯೇ** ಎಂಬುದು ಸರ್ವೇಶ್ವರನೇ ಉಪಾಯಭೂತನೆಂಬ ನಿಶ್ಚಯಜ್ಞಾನವನ್ನು ಬೋಧಿಸುವದರಿಂದ ಉಪಾಸನ ಸ್ಥಾನದಲ್ಲಿ ಸರ್ವೇಶ್ವರ**ನೇ** ನಿಂತು ಉಪಾಯ **ಪೂರ್ತಿ**ಯ**ನ್ನುಂಟು**ಮಾಡಿ ಫಲವನ್ನು ಕೊಡುವನೆಂದು ನಂಬಿ ಸರ್ವ ಭರವನ್ನೂ ಅವನ**ಲ್ಲಿಡುವದೇ**ಯಾದುದರಿಂದ ಶರಣಂ **ಪ್ರ**ಪದ್ಯೇ ಎಂಬುದರಿಂದ ಆತ್ಮನಿಕ್ಷೇಪ ಸಿದ್ಧಿ**ಯೆಂಬ ತಾತ್ಪರ್ಯವು**

ನಮಸ್ಸು ಆತ್ಮನಿವೇದನ ಪರವೆಂದು ಹಿಂದೆ ಹೇಳಲ್ಪಟ್ಟಿತು ಅದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ—

### ನಮಃ ಎಂಬ ಶಬ್ದವು ಆತ್ಮನಿವೇದನ ಪರವು

**ನಮಸ್ಸು** - ನಮಶ್ಶಬ್ದವು, **ಆತ್ಮನಿಕ್ಷೇಪ ಪರಮೆನ್ನು ಮಿಡಮ್** - ಆತ್ಮನಿಕ್ಷೇಪವನ್ನು ಬೋಧಿಸುತ್ತದೆಂಬುದಕ್ಕೆ ಪ್ರಮಾಣವಾಗಿ **"ನಮಸ್ಕಾರಾತ್ಮಕಂ** - ನಮಸ್ಕಾರ ರೂಪವಾದ, **ಆತ್ಮ ನಿವೇದನಂ** - ಆತ್ಮನಿಕ್ಷೇಪವನ್ನು, **ಯಸ್ಮೈ** -

(೧) ಮನ್ತ್ರ-ಪದ

**ತ್ಮಕಂ ಯಸ್ಮೈ ವಿಧಾಯಾತ್ಮ ನಿವೇದನಮ್॥ ಇತ್ಯಾದಿಗಳಲ್ಲೇ ಪ್ರಸಿದ್ಧಮ್.**

ಯಾವ ಭಗವಂತನಿಗಾಗಿ, ವಿಧಾಯ ಮಾಡಿ, ಮುಂದೆ "**ತ್ಯಕ್ತದುಃಖೋಘಿಲಾನ್ಕಾಮಾನಶ್ನುತೇತಂನಮಾಮ್ಯಹಂ**" ಎಂದು ಇರುತ್ತದೆ; ಸಮಸ್ತ ದುಃಖಗಳಿಂದಲೂ ಬಿಡಲ್ಪಟ್ಟವನಾಗಿ, ಸಮಸ್ತ ಇಷ್ಟಾರ್ಥಗಳನ್ನೂ ಯಾವನಿಂದ ಹೊಂದುವನೋ, ಅಂತಹ ಲಕ್ಷ್ಮೀನೃಸಿಂಹನನ್ನು ನಾನು ನಮಿಸುತ್ತೇನೆ ಎಂದರೆ ಶರಣು ಹೊಂದುತ್ತೇನೆಂಬುದು ತಾತ್ಪರ್ಯವು" ಇತ್ಯಾದಿಗಳಲ್ಲೇ-ಇವೇ ಮೊದಲಾದ ಪ್ರಮಾಣಗಳಲ್ಲಿ, **ಪ್ರಸಿದ್ಧಂ**-ಪ್ರಸಿದ್ಧವಾದುದು ತನ್ನ ಇಷ್ಟಾರ್ಥಸಿದ್ಧಿಯನ್ನುಂಟುಮಾಡುವ ಉಪಾಯಕ್ಕೆ ಅನುಕೂಲತೆಯ ರಕ್ಷಾಭರವನ್ನೆಲ್ಲಾ ಸಮರ್ಪಿಸುವದೇ ಆತ್ಮನಿಕ್ಷೇಪವು. ಇದು ಪ್ರಣಾಮರೂಪವಾದುದು. ಹಾಗೆಯೇ ನಮಸ್ಸು ಆತ್ಮನಿಕ್ಷೇಪ ಪರವೆಂದು ಭಾರತ ವನಪರ್ವದಲ್ಲಿ (೯೨ ೫೭) ಹೇಳಲ್ಪಟ್ಟಿರುತ್ತದೆ ಮಾರ್ಕಂಡೇಯ ಮಹರ್ಷಿಯು ಯುಧಿಷ್ಠಿರಾದಿಗಳನ್ನು ಕುರಿತು ಶ್ರೀಕೃಷ್ಣನು ಸಾಮಾನ್ಯನಲ್ಲವು ಆತನೇ ಪರತತ್ವವು, "**ಸರ್ವೇಷಾಮೇವಲೋಕಾನಾಂ ಪಿತಾ ಮಾತಾ ಚ ಮಾಧವಃ । ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ**" ॥ ಆತನನ್ನೇ ಶರಣು ಹೊಂದಿರಿ ನಿಮ್ಮಿಷ್ಟಾರ್ಥವು ಕೈಗೂಡುತ್ತದೆಂದು ಹಿತೋಪದೇಶವನ್ನು ಮಾಡಲು, ಆದಕ್ಕೆ "**ಏವಮುಕ್ತಾಶ್ಚತೇ ಪಾರ್ಥಾ ಯಮೌಚ ಪುರುಷರ್ಷಭೌ । ದ್ರೌಪದ್ಯಾ ಸಹಿತಾಸ್ಸರ್ವೇ ನಮಶ್ಚಕ್ರುರ್ಜನಾರ್ದನಂ**"॥ ಆ ಪಂಚಪಾಂಡವರೂ ದ್ರೌಪದಿಯೊಂದಿಗೆ ಶ್ರೀಕೃಷ್ಣನಿಗೆ ಪ್ರಣಾಮವನ್ನೆಸಗಿದರು ಎಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ನಮಸ್ಸು ಆತ್ಮನಿಕ್ಷೇಪ ಪರವಾದುದು. ನಮಸ್ಸಿಗೆ ಪರ್ಯಾಯ ಪದವಾದ **ಪ್ರಣಿಪಾತ** ಶಬ್ದವೂ ಆತ್ಮನಿಕ್ಷೇಪ ಪರವೆಂದು ಹಿಂದೆಯೇ "**ಪ್ರಣಿಪಾತ ಪ್ರಸನ್ನಾಹಿ ಮೈಥಿಲೀ ಜನಕಾತ್ಮಜಾ**" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ, ೯೮ನೆಯ ಪುಟ ಮೂರನೆಯ ಪಂಕ್ತಿಯನ್ನು ನೋಡಿ

ಆದರೆ ಪ್ರಣಾಮರೂಪವಾದ ನಮಸ್ಸು ಸರ್ವವಿಧ ಫಲಕ್ಕಾಗಿಯೂ ಆಗಬಹುದಾದುದರಿಂದ, ಮೋಕ್ಷಾರ್ಥಿಯು ಮಾಡುವ ಆತ್ಮ ಹವಿಸ್ಸಮರ್ಪಣರೂಪ ಅಞ್ಜಲಿಯನ್ನು ಹೇಗೆ ಬೋಧಿಸುತ್ತದೆ ಎಂಬಾಕ್ಷೇಪಕ್ಕೆ ಸಮಾಧಾನರೂಪವಾಗಿ, ಶ್ರೀ ವೈಕುಂಠಗದ್ಯದಲ್ಲಿ ಆತ್ಮ ಹವಿಸ್ಸಮರ್ಪಣವು ಪ್ರಣಾಮರೂಪವಾದುದೆಂಬ ಅಭಿಪ್ರಾಯ ಬರುವಹಾಗೆ ಅಪ್ಪಣೆ ಕೊಡಿಸಿರುತ್ತಾರೆಂದು ಹೇಳುತ್ತಾರೆ ಆದುದ

ರಿಂದ "ಶ್ರೀ ಭಾಷ್ಯಕಾರರ ಅಭಿಪ್ರಾಯದ ಪ್ರಕಾರ, ಪ್ರಪತ್ತಿಯು ವಿಶ್ವಾಸಮಾತ್ರವೇ ಅಲ್ಲವು; ಮತ್ತು ವಿಶ್ವಾಸ **ಪೂರ್ವಕ** ಪ್ರಾರ್ಥನೆಯೂ ಅಲ್ಲವು; ವಿಶ್ವಾಸ **ಪೂರ್ವಕ** ಯಾಚ್ಞೆಯೊಂದಿಗೆ ಪ್ರಣಾಮಮಾಡಿ ಆತ್ಮಹವಿಸ್ಸನ್ನು ಶ್ರೀ ಲಕ್ಷ್ಮೀ ಪತಿಯ ಪಾದಾರವಿಂದದಲ್ಲಿ ಸಮರ್ಪಿಸೋಣವೇ ಪ್ರಪತ್ತಿ" ಎಂದು, ಮುಂದಿನ ವಾಕ್ಯದಿಂದ ತಿಳಿಸುತ್ತಾರೆ

ಶ್ರೀ ಭಾಷ್ಯಕಾರರು ರಚಿಸಿದ ಶ್ರೀ ವೈಕುಂಠ ಗದ್ಯದಲ್ಲಿ ಪ್ರಪತ್ತಿಯ ಸ್ವರೂಪವು **ಪ್ರಾರ್ಥನಾ ಪೂರ್ವಕಾತ್ಮ ನಿಕ್ಷೇಪಮ್** - ಪ್ರಾರ್ಥನಾ ಪೂರ್ವಕವಾದ **ಆತ್ಮ**ನಿವೇದನವೆಂದು, **ಕಂಠೋಕ್ತ್ಯಾಯಾತ್ತು** - ಅನುಮಾನ, ಊಹೆ ಮೊದಲಾದವುಗಳ ಆವಶ್ಯಕತೆ ಇಲ್ಲದೇನೇ ಸಾಕ್ಷಾತ್ತಾಗಿಯೇ **ಹೇಳಲ್ಪಟ್ಟಿ**ರುತ್ತದೆ ಎಂಬ ಭಾವವು. ಎಲ್ಲಿ ಹೇಳಿದೆ ಎಂದರೆ "**ಮಾಮೈಕಾಂತಿಕಾತ್ಯಂತಿಕ ಪರಿಚರ್ಯಾ ಕರಣಾಯ ಪರಿಗೃಹ್ಣೀಷ್ವೇತಿ ಯಾಚಮಾನಃ ಪ್ರಣಮ್ಯಾತ್ಮಾನಂ ಭಗವತೇ ನಿವೇದಯೇತ್**" ಎಂದು ಕಂಠೋಕ್ತವಾಗಿ ಹೇಳಲ್ಪಟ್ಟಿರುತ್ತದೆ, "ನನ್ನನ್ನು ನಿನಗೇನೇ ಪ್ರಯೋಜನವಾಗಿಯೂ ಯಾವಾಗಲೂ ನಿರಂತರವಾಗಿ ಕೈಂಕರ್ಯಕ್ಕಾಗಿ ಅಙ್ಗೀಕರಿಸು ಎಂದು ಪ್ರಾರ್ಥಿಸುವನಾಗಿ ನಮಸ್ಕರಿಸಿ ಆತ್ಮಾವನ್ನು ಭಗವಂತನಲ್ಲಿ ನಿವೇದನಮಾಡತಕ್ಕದ್ದು ಎಂಬುದಾಗಿ ಈ ವಾಕ್ಯದ ಅರ್ಥವು, ಆದುದರಿಂದ ಆತ್ಮನಿಕ್ಷೇಪವೇ ಅಙ್ಗಿ ಎಂದು ಕಂಠೋಕ್ತವಾಗಿ ಹೇಳಲ್ಪಟ್ಟಿರುವುದರಿಂದ, ಇತರ ಸ್ಥಳಗಳಲ್ಲಿ, "**ಪ್ರಪತ್ತಿರ್ವಿಶ್ವಾಸಃ**" ಎಂದೂ "**ನಿತ್ಯಕಿಙ್ಕರತಾಂ ಪ್ರಾರ್ಥಯೇ**" ಎಂದೂ ಹೇಳಲ್ಪಟ್ಟಿದ್ದರೂ, ಈ ಕಂಠೋಕ್ತವಾದ ಭರನ್ಯಾಸ ಸ್ವರೂಪವನ್ನು ಮನಸ್ಸಿನಲ್ಲಿಟ್ಟು ಈ ವಾಕ್ಯಗಳನ್ನು ಅನ್ವಯಿಸತಕ್ಕದ್ದು. ವಿಶ್ವಾಸ**ಪೂರ್ವಕ** ಯಾಚ್ಞಾ ಇದ್ದರೇನೇ ಪ್ರಪತ್ತಿಗೆ ಸ್ವರೂಪಪ್ರಾಪ್ತಿಯು ಎಂದು ತಿಳಿಸುವದಕ್ಕಾಗಿಯೇ ಹಾಗೆ ಹೇಳಲ್ಪಟ್ಟಿತೆಂಬ ಭಾವವು, ಆದುದರಿಂದ ಪ್ರಪತ್ತಿಯು ವಿಶ್ವಾಸವೆಂದೂ ಯಾಚ್ಞಾ ಎಂದೂ ಹೇಳುವದು ಔಪಚಾರಿಕವು.

## ಆತ್ಮನಿಕ್ಷೇಪವೇ ಅಙ್ಗಿ ಎಂಬುದೇ ಶ್ರೀ ಭಾಷ್ಯಕಾರಾಭಿಪ್ರಾಯವೆಂಬುದಕ್ಕೆ ಏನು ಪ್ರಮಾಣವು ?

---

ಹೀಗೆ ಶ್ರೀ ಭಾಷ್ಯಕಾರರು ಅಙ್ಗಿ ಸ್ವರೂಪವನ್ನು ನಿಷ್ಕರ್ಷಿಸಿದುದಕ್ಕೆ ಪ್ರಮಾಣಗಳೇನಾದರೂ ಉಂಟೋ ಎಂದರೆ ಎರಡು ಪ್ರಮಾಣಗಳನ್ನು ಉದಾಹರಿಸುತ್ತಾರೆ:—**ಅಗ್ನೈಯಾಲ್** - ಶ್ರೀ ವೈಕುಂಠ ಗದ್ಯದಲ್ಲಿ "**ಯಾಚಮಾನಃ**" ಎಂದು **ವಿಶ್ವಾಸಪೂರ್ವಕ**ವಾಗಿ ಪ್ರಾರ್ಥನೆಯನ್ನೂ ತಿಳಿಸಿ, ಅದಕ್ಕಿಂತಲೂ ಬೇರೆ

## ಆತ್ಮನಿಕ್ಷೇಪ ಏವಾಙ್ಗೇತಿ ಶ್ರೀ ಭಾಷ್ಯಕಾರಾಭಿಪ್ರಾಯೇ ಕಿಂ ಪ್ರಮಾಣಂ ?

ಶ್ರೀ ವೈಕುಂಠ ಗದ್ಯತ್ತಿಲೇ ಪ್ರಾರ್ಥನಾಪೂರ್ವಕಾ ತ್ಮನಿಕ್ಷೇಪನ್ ಕಂಠೋಕ್ತಮಾಯ್ತ್ತು. ಆಗೈಯಾಲ್ (೧) "ಅನೇನೈವತು ಮನ್ತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್" (೨) "ಆತ್ಮಾತ್ಮೀಯ ಭರನ್ಯಾಸಃ" ಇತ್ಯಾದಿಗಳಿಲೇ ಅಙ್ಗವಿಧಾನಮ್. ಇಪ್ಪಡಿ ಯಲ್ಲಾದಪೋದು, (೩) ಷಡ್ವಿಧಾ

---

ಯಾಗಿ ಆತ್ಮನಿವೇದನರೂಪ ನಿಕ್ಷೇಪವೂ ಸಿದ್ಧವಾಗುದರಿಂದ (೧) "ಈ ಮಂತ್ರದ ಮೂಲಕವಾಗಿಯೇ ಆತ್ಮನನ್ನು ನನ್ನಲ್ಲಿಡತಕ್ಕದ್ದು" ಎಂಬ ಸಾತ್ಯಕಿ ತಂತ್ರ ಪ್ರಮಾಣ ಮತ್ತು (೨) "ಆತ್ಮಾತ್ಮೀಯ ಭರನ್ಯಾಸೋ ಹ್ಯಾತ್ಮನಿಕ್ಷೇಪ ಉಚ್ಯತೇ" "ತನ್ನ ಮತ್ತು ತನ್ನವರ ರಕ್ಷಣೆಯ ಭರವನ್ನು ಪರಮಾತ್ಮನಲ್ಲಿಡುವದೇ ಆತ್ಮನಿಕ್ಷೇಪವು" ಎಂಬ ಸಾತ್ವತ ಪ್ರಮಾಣ, ಇತ್ಯಾದಿಗಳಿಲೆ - ಇವೇ ಮೊದಲಾದವುಗಳಲ್ಲಿ, ಇಲ್ಲಿ ಆದಿ ಶಬ್ದದಿಂದ "ಆತ್ಮಾತ್ಮೀಯಭರಂ ಸರ್ವಂ ನಿಕ್ಷಿಪ್ಯ ಶ್ರೀಪತೇಃಪದೇ" ಇವೇ ಮೊದಲಾದ ಇನ್ನೂ ಪ್ರಮಾಣಗಳಿವೆ ಎಂಬ ಭಾವವು ಸೂಚಿಸಲ್ಪಟ್ಟಿತು, ಅಙ್ಗ ವಿಧಾನಮ್ - ಅಂಗಿ ಯಾವುದೆಂದು ವಿಧಿಸೋಣವು, ನಿರ್ಣೀತಂ ಎಂದು ಇಟ್ಟುಕೊಳ್ಳತಕ್ಕದ್ದು, ನಿರ್ಣಯಿಸಲ್ಪಟ್ಟಿತು. ಈ ಪ್ರಮಾಣಗಳ ಮೂಲಕ ಪ್ರಪತ್ತಿಯ ಅಂಗಿಯು ಆತ್ಮನಿಕ್ಷೇಪವೆಂಬುದು ಸಿದ್ಧವೆಂದು ಹೇಳಲ್ಪಟ್ಟಿತು.

ಆದರೆ "ಪ್ರಪತ್ತಿರ್ವಿಶ್ವಾಸಃ" ಎಂಬ ಯತಿರಾಜರ ವಾಕ್ಯದಲ್ಲೂ, "ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ" ಎಂಬ ಭರತಮುನಿಯ ವಾಕ್ಯದಲ್ಲೂ, ಔಪಚಾರಿಕಾಭಿಪ್ರಾಯಕಲ್ಪನೆಯು ನ್ಯಾಯವೋ ? ಮಹಾ ವಿಶ್ವಾಸವೂ, ಪ್ರಾರ್ಥನಾ, ಆತ್ಮನಿಕ್ಷೇಪವೂ ಈ ಮೂರನ್ನೂ ಅಙ್ಗಿಯಾಗಿಯೇ ಏಕೆ ಭಾವಿಸಕೂಡದು ? ಎಂದು ಪ್ರಶ್ನಿಸಿದರೆ, ಆಗ ಉಂಟಾಗುವ ದೋಷವನ್ನು ಸೂಚಿಸುತ್ತಾರೆ. ಇಪ್ಪಡಿಯಲ್ಲಾದ ಪೋದು-ವಿಶ್ವಾಸ ಪ್ರಾರ್ಥನೆಗಳು ಅಙ್ಗಗಳೆಂದೂ, ಆತ್ಮನಿಕ್ಷೇಪವೇ ಅಙ್ಗಿಯೆಂದೂ ಒಪ್ಪಿಕೊಳ್ಳದಿದ್ದರೆ, ಷಡ್ವಿಧಾ ಶರಣಾಗತಿಃ ಎನ್ಗಿರ ವಾಕ್ಯತ್ತಿಲ್ - ಎಂಬ ವಾಕ್ಯದಲ್ಲಿ, ಆಪಾತಪ್ರತೀತಿಯೈ ಕೊಂಡು-

---

(೧) ಮಂತ್ರರಾಜ ಪದ ಸ್ತೋತ್ರಂ. (೨) ಶ್ರೀ ಸಾತ್ವ ೧೭ ೪೮
(೩) ಅಹಿ. ೩೭.೨.೨೭,

**ಶರಣಾಗತಿಃ" ಎನ್ಗರ ವಾಕ್ಯತ್ತಿಲ್ ಅಪಾತಪ್ರತೀತಿಯೈಕೊಂಡು, (೨) "ಸ್ನಾನಂ ಸಪ್ತವಿಧಂ ಸ್ಮೃತಂ" ಇತ್ಯಾದಿಗಳಿಲ್ ಶೊನ್ನ ಸ್ನಾನಾದಿ ಭೇದ**

---

**ಮೇಲೆ** ತೋರುವ ಅರ್ಥವನ್ನು ಸ್ವೀಕರಿಸಿ, ಮೇಲಕ್ಕೆ ತೋರುವರ್ಥವು ಯಾವುದೆಂದರೆ ಶರಣಾಗತಿಯು ಆರು ವಿಧವಾದ ದು ಎಂಬುದು, **"ಸ್ನಾನಂ ಸಪ್ತವಿಧಂ ಸ್ಮೃತಮ್" ಇತ್ಯಾದಿಗಳಿಲ್** - ಸ್ನಾನವು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು ಏಳುವಿಧವು ಎಂಬಿವೇ **ಮೊದಲಾದವುಗಳಲ್ಲಿ, ಶೊನ್ನ ಸ್ನಾನಾದಿ ಭೇದಙ್ಗಳ್ ಪೋಲೇ**-ಹೇಳಲ್ಪಟ್ಟ ಸ್ನಾನವೇ ಮೊದಲಾದ ಭೇದಗಳ ಹಾಗೆ, **ತನಿತ್ತನಿಯೇ**-ಬೇರೆ ಬೇರೆಯಾಗಿ, **ಪ್ರಪತ್ತಿ ವಿಶೇಷಙ್ಗಳಾಗ** - ಪ್ರಪತ್ತಿ ಭೇದಗಳಾಗಿ, **ಪ್ರಸಙ್ಗಿಕ್ಕುಮ್** - ಉಂಟಾಗಬಹುದು ಸ್ನಾನಗಳು ಏಳು ವಿಧವೆಂದು ಹೇಳಿರುವ ಹಾಗೆ, **ಷಡ್ವಿಧಾ ಶರಣಾಗತಿಃ** ಎಂದರೆ ಪ್ರಪತ್ತಿಯು ಆರು ವಿಧಗಳೆಂದು **ಈ** ವಾಕ್ಯಕ್ಕೆ ಮೇಲೆ ಮೇಲೆ ತೋರುವ ಅರ್ಥವನ್ನು ಹೇಳಿಬಿಟ್ಟು ಪ್ರಪತ್ತಿಯು ವಿಶ್ವಾಸವೆಂದೂ ಪ್ರಾರ್ಥನೆಯೆಂದೂ, ಆತ್ಮ ನಿಕ್ಷೇಪವೆಂದೂ ಹೀಗೆ ಪ್ರಪತ್ತಿ ಭೇದಗಳೆಂದು ಅರ್ಥಮಾಡಿಬಿಟ್ಟರೆ,

**"ಆನುಕೂಲ್ಯಸ್ಯ ಸಙ್ಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಂ ।**
**ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವವರಣಂ ತಥಾ ।**
**ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ"**

ಎಂದು ಹೇಳಿರುವದರಿಂದ ಆನುಕೂಲ್ಯಸ್ಯ ಸಂಕಲ್ಪವೇ ಒಂದು ವಿಧ ಶರಣಾಗತಿಯೆಂದೂ, ಪ್ರಾತಿಕೂಲ್ಯಸ್ಯ ವರ್ಜನವೇ ಇನ್ನೊಂದು ವಿಧವೆಂದೂ ಹೀಗೆಲ್ಲಾ ಅರ್ಥಮಾಡಬೇಕಾಗಿ ಬರುವದರಿಂದಲೂ, ಮತ್ತು **ನ್ಯಾಸಃಪಂಚಾಂಗ ಸಂಯುತಃ** ಇತ್ಯಾದಿ ಅನೇಕ ಪ್ರಮಾಣಗಳಿಗೆ ವಿರುದ್ಧವಾಗುವದರಿಂದಲೂ ಅಪಾರ್ಥವು; ಆದುದರಿಂದ **ಷಡ್ವಿಧಾ ಶರಣಾಗತಿಃ** ಎಂದರೆ ಶರಣಾಗತಿಯು, ಐದು ಅಂಗಗಳು ಒಂದು ಅಂಗಿಯು ಹೀಗೆ ಆರು ಅಂಶಗಳುಳ್ಳದು ಎಂದು, ಬಹುವ್ರೀಹಿ ಅರ್ಥವನ್ನು ಹೇಳುವದೇ ಸರ್ವ ಸಮಂಜಸವೆಂಬ ಭಾವವು, ಇದರ ಉಪಪಾದನೆಗೆ ೯೫೨-ಳನೆಯ ಪುಟಗಳನ್ನು ಪರಾಂಬರಿಸಿ. ಆದುದರಿಂದ ಪ್ರಾರ್ಥನೆಯೇ ಪ್ರಪತ್ತಿಯು ಎಂಬ ಕೆಲವರಭಿಪ್ರಾಯವು ಇದರಿಂದ ಸಮಂಜಸವಾದುದಲ್ಲವೆಂದು ಸ್ಥಾಪಿಸಲ್ಪಟ್ಟಿತು.

**"ಷಡ್ವಿಧಾ ಶರಣಾಗತಿಃ"** ಎಂಬಲ್ಲಿ ಪ್ರಪತ್ತಿಯು ಆರುವಿಧಗಳೆಂದರೆ ಆನುಕೂಲ್ಯಸ್ಯ ಸಂಕಲ್ಪಾದಿಗಳೂ ಪ್ರಪತ್ತಿಗಳೆಂದು ಹೇಳಬೇಕಾಗುತ್ತದೆಂದು

**ಙ್ಗಳ್ ಪೋಲೆ ತನಿತ್ತನಿಯೇ ಪ್ರಪತ್ತಿ ವಿಶೇಷಙ್ಗಳಾಗ ಪ್ರಸಙ್ಗಿಕ್ಕೈವನ್ (೧) "ಪ್ರಪತ್ತಿಂ ತಾಂ ಪ್ರಯುಂಜೀತ ಸ್ವಾಙ್ಗೈಃ ಪಂಚಭಿ ರಾವೃತಾಮ್" ಇತ್ಯಾದಿ ವಚನಾಂತರ ಬಲತ್ತಾಲೆ ನಿಯಮಿಕ್ಕ ಪಾರ್ಕಿಲ್, ಅಪ್ಪಡಿಯೇ ಪ್ರಾರ್ಥನಾ ವಿಶ್ವಾಸಾದಿಗಳೈಪ್ರಪತ್ತಿಯೆನ್ರು ಶೊಲ್ಲುಗಿರ ವಚನಙ್ಗಳೈ ಯುಮ್ ನಿಯಮಿತ್ತು (೨) "ನ್ಯಾಸಃ ಪಂಚಾಙ್ಗ ಸಂಯುತಃ" ಇತ್ಯಾದಿ ಗಳಿಲ್ ಪಡಿಯೇ ನಿಕ್ಷೇಪಮೊನ್ರುಮೇ ಅಙ್ಗಿ, ಇತರಙ್ಗಳ್ ಅಙ್ಗಗಳೆ ನ್ಗೈಯುಚಿತಮ್**

---

ದೋಷ ಉಂಟಾಗುತ್ತದೆ, ಆದುದರಿಂದ ಪ್ರಾರ್ಥನೆಯು ಪ್ರಪತ್ತಿಯಲ್ಲವೆಂಬು ಹೇಳಲ್ಪಟ್ಟಿತು ಈ ವಾದಕ್ಕೆ ಪ್ರತಿಕಕ್ಷಿಯವರು ಸಮಾಧಾನ ಹೇಳುವರು: ಏನಂ ದರೆ, "**ಪ್ರಪತ್ತಿಂ ತಾಂ ಪ್ರಯುಂಜೀತ ಸ್ವಾಙ್ಗೈಃ ಪಂಚಭಿರಾವೃತಾಮ್**" ಎಂಬ ಲಕ್ಷ್ಮೀತಂತ್ರ ಪ್ರಮಾಣಾನುಸಾರವಾಗಿ ಐದು ಅಙ್ಗಗಳು ಒಂದು ಅಙ್ಗೀ ಎಂದು ಭಾವಿಸುವದೇ ಯುಕ್ತವು; ಆದುದರಿಂದ ಪ್ರಾರ್ಥನೆಯೇ ಅಂಗೀ, ಮಿಕ್ಕವು ಗಳೆಲ್ಲಾ ಆತ್ಮನಿಕ್ಷೇಪವೊಂದಿಗೆ ಅಂಗಗಳೆಂದು ಹೇಳುವೆವು ಎಂದರೆ ಅದಕ್ಕೆ ಸಮಾ ಧಾನವನ್ನು ಮುಂದಿನವಾಕ್ಯವಾದ "**ಪ್ರಪತ್ತಿಂ ತಾಂ ಪ್ರಯುಂಜೀತ**" ಎಂಬುದ ರಿಂದ ಹೇಳುತ್ತಾರೆ

"**ಪಂಚಭಿಃ** - ಐದಾದ, **ಸ್ವಾಙ್ಗೈಃ** - ತನ್ನ ಅಙ್ಗಗಳಿಂದ, **ಆವೃತಾಂ** - ಕೂಡಿದ, **ತಾಂ ಪ್ರಪತ್ತಿಂ** - ಆಪ್ರಪದನವನ್ನು, **ಪ್ರಯುಂಜೀತ** - ಪ್ರಯೋಗಿಸ ತಕ್ಕದ್ದು," **ಇತ್ಯಾದಿ ವಚನಾಂತರ ಬಲತ್ತಾಲೇ** - ಇವೇ ಮೊದಲಾದ ಬೇರೇ ಪ್ರಮಾಣಗಳ ಬಲದಿಂದ, **ನಿಯಮಿಕ್ಕ ಪಾರ್ಕಿಲ್** - ಷಡ್ವಿಧಾ ಶರಣಾಗತಿ ಎಂಬಲ್ಲಿ ಆರು ವಿಧಗಳೆಂಬ ಅರ್ಥ ಹೇಳದೆ ಆರು ಅಂಶಗಳುಳ್ಳದ್ದೆಂದೇ ಹೇಳು ವದು ವಿಧಾಯಕವಾಗಿ ಕಂಡರೆ, **ಅಪ್ಪಡಿಯೇ** - ಅದರ ಹಾಗೆಯೇ, **ಪ್ರಾರ್ಥನೆ ವಿಶ್ವಾಸ** ಮೊದಲಾದವುಗಳನ್ನೂ ಪ್ರಪತ್ತಿ ಎಂದು ಹೇಳುವ ಪ್ರಮಾಣವಚನ ಗಳನ್ನೂ ಸಹ, **ನಿಯಮಿತ್ತು**-ಅವುಗಳು ಅಙ್ಗಗಳೆಂದು ಹೇಳುವ ಇತರ ಪ್ರಮಾಣ ಬಲದಿಂದ ಖಂಡಿಸಿ "**ನ್ಯಾಸಃ ಪಂಚಾಙ್ಗಸಂಯುತಃ** - ನಿಕ್ಷೇಪರೂಪವಾದ **ಪ್ರಪತ್ತಿ**ಯು ಐದು ಅಂಗಗಳಿಂದ ಕೂಡಿದುದು" **ಇತ್ಯಾದಿಗಳಿಲ್ ಪಡಿಯೇ** - ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವ ಹಾಗೆ, **ನಿಕ್ಷೇಪ ಮೊನ್ರುಮೇ ಅಙ್ಗಿ** - ನಿಕ್ಷೇಪ ಒಂದೇ ಅಙ್ಗಿಯು, ಒಂದೇ ಎಂದು ಹೇಳಿದುದರಿಂದ ವಿಶ್ವಾಸ

---

(೧) ಲಕ್ಷ್ಮೀ ತಂತ್ರ. ೨೮. ೧೧. ೭: (೨) ಅಹಿ. ೧೭. ೭೪.

ಪ್ರಾರ್ಥನೆಗಳು ಅಙ್ಗಗಳಾಗಲಾರವೆಂಬ ಭಾವವು. ಇತರಙ್ಗಳ್ - ಆರರಲ್ಲಿ ಮಿಕ್ಕ ಐದೂ ಅಙ್ಗಗಳು, ಎನ್ಗೈ ಯುಚಿತನ್ - ಎಂದು ಹೇಳುವದೇ ಸಮಂಜಸವು. ಇಲ್ಲಿ ವಾಕ್ಯಗಳಿಗೆ ನಿಯಮನ ಹೇಗೆ ಎಂದರೆ, ಅಙ್ಗಿಯಾದ ಪ್ರಪತ್ತಿಯು ಮಹಾ ವಿಶ್ವಾಸ ಪೂರ್ವಕವಾದ ಪ್ರಾರ್ಥನೆಯಿಂದ ವಿಶಿಷ್ಟವಾದುದು ಎಂದು ಕೆಲವು ವಾಕ್ಯ ಗಳು ಹೇಳುತ್ತವೆ ಎಂದೂ, ಇನ್ನು ಕೆಲವು ಮಹಾವಿಶ್ವಾಸವು ಪ್ರಧಾನವಾದ ಅಙ್ಗವಾಗಿ, ಅದರಿಂದ ವಿಶಿಷ್ಟವಾಗಿರಬೇಕೆಂದೂ ನಿಯಮನವೆಂಬ ಭಾವವು. "ಪ್ರಪತ್ತಿಂ ತಾಂ ಪ್ರಯುಂಜೀತ ಸ್ವಾಙ್ಗೈಃ ಪಂಚಭಿರಾವೃತಾಂ" ಎಂಬ ಬೇರೆ ಪ್ರಮಾಣಾನುಸಾರವಾಗಿ "ಷಡ್ವಿಧಾ ಶರಣಾಗತಿಃ" ಎಂಬ ವಾಕ್ಯ ವನ್ನು ಅನ್ವಯಿಸತಕ್ಕದ್ದು ನ್ಯಾಯವಾದುದರಿಂದ, ಒಂದೇ ಅಙ್ಗಿಯು, ಐದು ಅಙ್ಗಗಳೆಂದು ಅರ್ಥ ಮಾಡುವದೇ ಯುಕ್ತವೆಂದು ಒಪ್ಪಿ, ಪ್ರಾರ್ಥನೆಯೇ ಅಙ್ಗಿಯು, ಇನ್ನು ಮಿಕ್ಕ ಐದೂ ಅಙ್ಗಗಳೆಂದು ಹೇಳುತ್ತೇವೆ. "ಸ್ನಾನಂ ಸಪ್ತವಿಧಂ" ಎಂಬ ಪ್ರಮಾಣದಲ್ಲಾದರೋ ಏಳುವಿಧವಲ್ಲವೆಂದು ತೋರುವ ಪ್ರಮಾಣಬಲವ್ಯಾವುದೂ ಇಲ್ಲವಾದುದರಿಂದ, ಸ್ನಾನವು ಏಳುವಿಧವೆಂದೇ ಅರ್ಥ ಮಾಡತಕ್ಕದ್ದು. "ಷಡ್ವಿಧಾ ಶರಣಾಗತಿಃ" ಎಂಬುವ ವಾಕ್ಯಾರ್ಥಕ್ಕಾದರೋ ಪ್ರಪತ್ತಿಂ ತಾಂ ಪ್ರಯುಂಜೀತ ಇತ್ಯಾದಿ ಇತರ ಪ್ರಮಾಣ ಬಲವಿರುವದರಿಂದ ಐದು ಅಙ್ಗಗಳು, ಒಂದು ಅಙ್ಗಿ ಎಂದೇನೋ ನೀವು ಹೇಳುವಹಾಗೆ ಹೇಳುವೆವು. ಆದರೆ ಪ್ರಾರ್ಥನೆಯು ಅಙ್ಗಿ, ಇತರಗಳು ಅಙ್ಗಗಳೆಂದು ಹೇಳುವೆವು ಎಂಬುದು ಇಲ್ಲಿ ಪೂರ್ವ ಪಕ್ಷವು. ಇದಕ್ಕೆ ಸಮಾಧಾನವು ಹೇಗೆಂದರೆ—ಐದು ಅಙ್ಗಗಳು ಒಂದು ಅಙ್ಗಿ ಎಂದು ಇತರ ಪ್ರಬಲಪ್ರಮಾಣದಿಂದ ಒಪ್ಪಿಕೊಂಡನಂತರ, ಹಾಗೆಯೇ "ನ್ಯಾಸಃ ಪಂಚಾಂಗ ಸಂಯುತಃ" ಎಂಬ ಪ್ರಬಲಪ್ರಮಾಣವಾದ ಅಹಿರ್ಬುಧ್ನ್ಯ ಸಂಹಿತಾವಾಕ್ಯ ಸಾಮರ್ಥ್ಯದಿಂದ ನ್ಯಾಸವೆಂದರೆ ಆತ್ಮನಿಕ್ಷೇಪ ವೆಂಬ ಪ್ರಪತ್ತಿಯು ಐದು ಅಙ್ಗಗಳುಳ್ಳದ್ದೆಂದು ತೋರಿ ಬರುವದರಿಂದ ಆತ್ಮನಿಕ್ಷೇ ಪವೇ ಅಙ್ಗಿಎಂದೂ, ಇತರಗಳು ಅಙ್ಗಗಳೆಂದೂ ಒಪ್ಪಿಕೊಳ್ಳಲು ಅಭ್ಯಂತರ ವೇನು ? ಎಂಬ ಭಾವವು.

ಇವರಮೇಲೆ ಇನ್ನೊಂದು ಪೂರ್ವಪಕ್ಷವೇನೆಂದರೆ :—" ಭೂಯಸಾಂ ಸ್ಯಾದ್ಬಲೀ ಯಸ್ತ್ವಂ" ಎಂಬ ಭೂಯಸಾಂ ನ್ಯಾಯದಪ್ರಕಾರ, ಒಂದು ವಿಷಯ ದಲ್ಲಿ ಅನೇಕ ಪ್ರಮಾಣಗಳಿದ್ದರೆ, ಅದು ಒಂದೆರಡು ಶಾಸ್ತ್ರವಾಕ್ಯಗಳಿಗೆ ವಿರೋಧ ವಾಗಿ ತೋರಿಬಂದರೂ ಇವುಗಳನ್ನು ಬೇರೇ ವಿಧವಾಗಿ ಅನ್ವಯಿಸಿಬಿಟ್ಟು ಆ ವಿಷ ಯವೇ ಉಪಾದೇಯವೆಂದು ಭಾವಿಸತಕ್ಕದ್ದು. ಹೀಗೆ ಪ್ರಾರ್ಥನೆಯೇ ಪ್ರಪತ್ತಿ ಯೆಂಬುದಕ್ಕೆ ಅನೇಕ ಪ್ರಮಾಣಗಳಿರುವಾಗ, ಅವುಗಳನ್ನೆಲ್ಲಾ ತಿರಸ್ಕರಿಸಿ, ಆತ್ಮ

## ಭೂಯಸಾಂ ನ್ಯಾಯರೀತ್ಯಾ ನಿಕ್ಷೇಪ ಏವ ಅಙ್ಗೀ ನ ತು ಪ್ರಾರ್ಥನಾ.

**ಭೂಯಸಾಂ ನ್ಯಾಯತ್ತೈ ಪ್ಪಾರ್ತಾಲುಮ್ ಸಾತ್ಯಕಿತನ್ತ್ರ ಲಕ್ಷ್ಮೀತನ್ತ್ರಾಹಿರ್ಬುಧ್ನ್ಯ ಸಂಹಿತಾದಿಗಳಿಲ್ ಪ್ರಪತ್ತ್ಯಧ್ಯಾಯಙ್ಗಳಿಲೇ ನಿಕ್ಷೇಪಮಙ್ಗಿಯೆನ್ರೇ ಪ್ರಸಿದ್ಧಮ್.**

---

ನಿಕ್ಷೇಪವೇ ಅಙ್ಗಿ ಎಂದು ಭಾವಿಸುವದು ಹೇಗೆ? ಪ್ರಾರ್ಥನೆಯೇ ಪ್ರಪತ್ತಿ ಎಂದು ಹೇಳುವ ಪ್ರಮಾಣಗಳು ಯಾವುವೆಂದರೆ—

೧. **ತ್ವಮೇವೋಪಾಯಭೂತೋ ಮೇ ಭವೇತಿ ಪ್ರಾರ್ಥನಾಮತಿಃ ।**
**ಶರಣಾಗತಿರಿತ್ಯುಕ್ತಾ ಸಾದೇವೇ ಸ್ಮಿನ್ಪ್ರಯುಜ್ಯತಾಂ ॥** ಅಹಿ.

೨. **ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಕಂ ।**
**ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ ॥** ಭರತಮುನಿ ವಾಕ್ಯವು.

೩. **ಉಪಾಯಂ ವೃಣು ಲಕ್ಷ್ಮೀಶಂ ತಮುಪೇಯಂ ವಿಚಿಂತ್ಯಚ । ಇತ್ಯಾದಿ.**

ಈ ಪೂರ್ವಪಕ್ಷಕ್ಕೆ ಸಮಾಧಾನವಾಗಿ ಹೇಳುತ್ತಾರೇನೆಂದರೆ:—ನೀವು **ಹೇಳುವ** ಭೂಯಸಾಂ ನ್ಯಾಯಪ್ರಕಾರವಾಗಿಯೇ ಆತ್ಮನಿಕ್ಷೇಪವೇ ಪ್ರಪತ್ತಿಯು ಅಙ್ಗಿ ಎಂದು ಹೇಳುವದರಿಂದ ಆತ್ಮನಿಕ್ಷೇಪವೇ ಅಙ್ಗಿಯೇ ವಿನಾ ಪ್ರಾರ್ಥನೆಯಲ್ಲವೆಂದು ಹೇಳುತ್ತಾರೆ.

### ಭೂಯಸಾಂ ನ್ಯಾಯಪ್ರಕಾರ ನಿಕ್ಷೇಪವೇ ಅಙ್ಗಿಯು, ಪ್ರಾರ್ಥನೆಯಲ್ಲವು

**ಭೂಯಸಾಂ ನ್ಯಾಯತ್ತೈ, ಪಾರ್ತಾಲುಮ್** - **"ಭೂಯಸಾಂ ಸ್ಯಾದ್ಬಲೀಯಸ್ತ್ವಂ"** ಬಹ ಪ್ರಮಾಣಗಳಿರುವದಕ್ಕೇನೇ ಪ್ರಬಲಸಾಮರ್ಥ್ಯವು ಎಂಬ ನ್ಯಾಯದ ಪ್ರಕಾರ ನೋಡಿದರೂ, ಸಾತ್ಯಕಿ ತಂತ್ರ, ಲಕ್ಷ್ಮೀತಂತ್ರ, ಅಹಿರ್ಬುಧ್ನ್ಯ ಸಂಹಿತೆಗಳಲ್ಲಿರುವ ಪ್ರಪತ್ತ್ಯಧ್ಯಾಯಗಳಲ್ಲಿ, ನಿಕ್ಷೇಪವೇ, **ಅಙ್ಗಿಯನ್ರೇ ಪ್ರಸಿದ್ಧಮ್** - ಅಙ್ಗಿಯೆಂಬುದೇ ಪ್ರಸಿದ್ಧವಾದ ವಿಷಯವು ಆ ಪ್ರಮಾಣಗಳು ಯಾವುವೆಂದರೆ—

೧ **"ಸ್ವಾತ್ಮಾನಂ ಮಯಿ ನಿಕ್ಷಿಪೇತ್"** ಸಾತ್ಯಕಿ ತಂತ್ರವಾಕ್ಯವು ೧೦೬ನೆಯ ಪುಟವನ್ನು ನೋಡಿ. ೨. **"ಆತ್ಮಾತ್ಮೀಯ ಭರನ್ಯಾಸೋ ಹ್ಯಾತ್ಮ**

## ಅಙ್ಗಸ್ಯ ಪ್ರಾಧಾನ್ಯಾತ್ ಅಙ್ಗಾಙ್ಗಿನೋರಭೇದಃ, ಏಷಃ ಲೋಕಸಿದ್ಧಃ

"ತ್ವಮೇವೋಪಾಯ ಭೂತೋ ಮೇ ಭವೇತಿ ಪ್ರಾರ್ಥನಾಮತಿಃ । ಶರಣಾಗತಿರಿತ್ಯುಕ್ತಾ" ಎನ್ಗಿರದುವುಮ್ ತತ್ಪ್ರಕರಣತ್ತಿಲೆ ಪ್ರಧಾನಮಾಗ

---

ನಿಕ್ಷೇಪ ಉಚ್ಯತೇ" ಲಕ್ಷ್ಮೀತಂತ್ರ ವಾಕ್ಯವು. ೩ ತೇನ ಸಂರಕ್ಷ್ಯಮಾಣಸ್ಯ ಫಲೇ ಸ್ವಾಮ್ಯ ವಿಯುಕ್ತತಾ । ಕೇಶವಾರ್ಪಣ ಪರ್ಯಂತಾ ಹ್ಯಾತ್ಮ ನಿಕ್ಷೇಪ ಉಚ್ಯತೇ" ॥ ಲಕ್ಷ್ಮೀತಂತ್ರವಾಕ್ಯವು ೧೮೩-೪ನೆಯ ಪುಟಗಳನ್ನು ನೋಡಿ ೪. "ನ್ಯಾಸಃ ಪಂಚಾಂಗ ಸಂಯುತಃ" ಅಹಿರ್ಬುಧ್ನ್ಯ ಸಂಹಿತಾವಾಕ್ಯವು. ೫. "ಅನೇನೈವ ತು ಮನ್ತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್" ಮಯಿ ನಿಕ್ಷಿಪ್ತ ಕರ್ತವ್ಯಃ ಕೃತಕೃತ್ಯೋ ಭವಿಷ್ಯತಿ" ॥ ಸಾತ್ಯಕಿ ತಂತ್ರವಾಕ್ಯವು. ೧೧೦೨ನೆಯ ಪುಟವನ್ನು ನೋಡಿ. ೬ "ಯದ್ಯೇನ ಕಾಮ ಕಾಮೇನ ನ ಸಾಧ್ಯಂ ಸಾಧನಾಂತರೈಃ । ತೇನ ತೇನಾಪ್ಯತೇ ತತ್ತನ್ನ್ಯಾಸೇನೈವ ಮಹಾಮುನೇ"॥ ೭ "ಓಮಿತ್ಯಾತ್ಮಾನಂ ಯುಂಜೀತ" ೮. "ಆತ್ಮಾತ್ಮೀಯ ಭರಂ ಸರ್ವಂ ನಿಕ್ಷಿಪ್ಯ ಶ್ರೀಪತೇಃ ಪದೇ" ೯. "ವಿಧಾನಮಾತ್ಮ ನಿವೇದನಂ" ೧೦ "ನಿವೇದಯತ ಮಾಂ ಕ್ಷಿಪ್ರಂ ವಿಭೀಷಣ ಮುಪಸ್ಥಿತಮ್"

ಹೀಗೆ ಪ್ರಾರ್ಥನಾವ್ಯತಿರಿಕ್ತಾತ್ಮನಿಕ್ಷೇಪಕ್ಕೆ ಅನೇಕ ಪ್ರಮಾಣಗಳಿರುವುದರಿಂದ ಆತ್ಮನಿಕ್ಷೇಪವೇ ಅಙ್ಗಿಯು. ಹೀಗೆ ಆತ್ಮ ನಿಕ್ಷೇಪವೆ ಅಙ್ಗಿ ಎಂದು ಹೇಳುವ ದಾದರೆ, "ತ್ವಮೇವೋಪಾಯ ಭೂತೋ ಮೇ" ಎಂಬ ವಾಕ್ಯದಲ್ಲಿ ಭವೇತಿ ಪ್ರಾರ್ಥನಾಮತಿಃ ಎಂದು ಪ್ರಾರ್ಥನಾ ಬುದ್ಧಿಯುಳ್ಳದೇ ಶರಣಾಗತಿ ಎಂದು ಹೇಳುವದಕ್ಕೆ ಸಂಗ್ರಹವು ಹೇಗೆ? ಆ ವಾಕ್ಯದ ಅಭಿಪ್ರಾಯವೇನು? ಎಂದು ಕೇಳಿದರೆ ಅದರ ತಾತ್ಪರ್ಯವನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ.

ತ್ವಂ - ನೀನು, ಮೇ - ಅನನ್ಯಗತಿಕನಾದ ನನಗೆ, ಉಪಾಯ ಭೂತ ಏವ - ಉಪಾಯ ರೂಪನೇ ಎಂದರೆ ಉಪಾಯಾನ್ತರವಾದ ಉಪಾಸನಸ್ಥಾನದಲ್ಲಿ ನೀನೇ ನಿಲ್ಲುವನು ಭವ - ಆಗು, ಇತಿ - ಎಂಬದಾಗಿ ಪ್ರಾರ್ಥನಾಮತಿಃ - ಪ್ರಾರ್ಥಿಸುವ ಜ್ಞಾನವುಳ್ಳದೇ, ಶರಣಾಗತಿರಿತ್ಯುಕ್ತಾ-ಶರಣಾಗತಿ ಎಂದು ಹೇಳಲ್ಪಟ್ಟದು, ಸಾದೇವೇಸ್ಮಿನ್ ಪ್ರಯುಜ್ಯತಾಂ - ಎಂದು ಶ್ಲೋಕ ಪೂರಣವು

**ಚ್ಚೊನ್ನ ಭರನ್ಯಾಸ ಪರ್ಯಂತ ಮೆನ್ನು ಮಿಡಮ್ ಅವಧಾರಣ ಸಹ ಕೃತೋ ಪಾಯ ಶಬ್ದತ್ತಾಲೇ ವ್ಯಂಜಿತಮ್. ಓರೋರು ವಿವಕ್ಷೈಗ ಳಾಲೇ ಅಙ್ಗಙ್ಗಳೈ ಪ್ರಧಾನಮಾಗ ಚೊಲ್ಲುಗೈ ಲೋಕತ್ತಿಲು ಮುಂಡು.**

---

**ಸಾ** - ಅಂತಹ ಶರಣಾಗತಿಯು, **ಅಸ್ಮಿನ್ ದೇವೇ** – ಈ ಕ್ರೀಡಾಪರನಾದ ಸರ್ವೇಶ್ವರನಲ್ಲಿ, **ಪ್ರಯುಜ್ಯತಾಂ** - ಪ್ರಯೋಗಿಸಲ್ಪಡಲಿ, ಎಙ್ಗಿರದುವುಮ್-ಎಂದು ಹೇಳಿರುವದೂ, **ತತ್ಪ್ರಕರಣತ್ತಿಲೆ** - ಆ ಸಂದರ್ಭದಲ್ಲಿ, **ಪ್ರಧಾನಮಾಗ ಚ್ಚೊನ್ನ**-ಮುಖ್ಯವಾಗಿ ಹೇಳಲ್ಪಟ್ಟ, **ಭರನ್ಯಾಸಪರ್ಯಂತಮೆನ್ನುಮಿಡಮ್**-ಭರನ್ಯಾಸ ಪರ್ಯಂತವಾಗುವ ಎನ್ನುವ ಸಂದರ್ಭವು, **ಅವಧಾರಣ ಸಹಕೃತ-ಏವ** ಎಂಬ ಅವಧಾರಣದಿಂದ ಸೇರಿದ, **ಉಪಾಯ ಶಬ್ದತ್ತಾಲೇ**-ಉಪಾಯ ಭೂತ ಎಂಬ ಶಬ್ದದಿಂದ, **ವ್ಯಂಜಿತಮ್**-ವ್ಯಕ್ತವು, ಸರ್ವೇಶ್ವರನೇ ಉಪಾಯವಾಗಬೇಕೇ ವಿನಾ ಅನ್ಯಥಾ ಇಲ್ಲವು ಎಂಬ ಜ್ಞಾನವುಳ್ಳದ್ದು ಎಂದು ಹೇಳಿರುವದರಿಂದ ಈ ಪ್ರಾರ್ಥನಾವಸಾನದ ಶರಣಾಗತಿಯು ಭರನ್ಯಾಸ ಪರ್ಯಂತವೆಂದು ಭಾವಿಸುವದೇ ನ್ಯಾಯವೆಂದು ತೋರಿಬರುತ್ತದೆ. ಇಲ್ಲಿ ಏವ ಎಂಬ ಅವಧಾರಣವನ್ನು ಉಪಾಯಭೂತನೆಂಬುದರೊಂದಿಗೆ ಅನ್ವಯಿಸತಕ್ಕದ್ದು. ಹೀಗೆ ಉಪಾಯವಾಗು ಎಂದು ಪ್ರಾರ್ಥಿಸಿ ಶರಣಾಗತಿಯನ್ನನುಷ್ಠಿಸತಕ್ಕದ್ದೆಂಬ ಭಾವವು; **ಸಾದೇವೇಸ್ಮಿನ್ ಪ್ರಯುಜ್ಯತಾಂ** – ಎಂದು ಉತ್ತರಾರ್ಧವಾಕ್ಯದಲ್ಲಿ ಹೇಳಿರುವದರಿಂದ ಉಪಾಯರೂಪ ಪ್ರಾರ್ಥನೆಗಿಂತ ಪ್ರಯೋಗವು, ಬೇರೆಯಾದುದೆಂಬುದೂ ತೋರಿಬರುತ್ತದೆ.

ಇನ್ನು ಕೆಲವು ಪ್ರಮಾಣಗಳಲ್ಲಿ, "ತ್ವಮೇವೋಪಾಯ ಭೂತೋ ಮೇ" ಎಂಬ ಪ್ರಮಾಣದಲ್ಲಿರುವ ಹಾಗೆ ಅವಧಾರಣ ಸಹಕೃತ ಉಪಾಯಶಬ್ದರೂಪ ಸಹಾಯವಿಲ್ಲದಿರುವ ಸಂದರ್ಭದಲ್ಲಿ ಅಙ್ಗವನ್ನೇ ಸಾಕ್ಷಾತ್ತಾಗಿ ಅಙ್ಗಿಯಾಗಿ ಹೇಳಲ್ಪಟ್ಟಿರುವನ್ನಲ್ಲಿ ಹೇಗೆ ಎಂದರೆ ಲೋಕ ವಾಡಿಕೆಯಲ್ಲಿ ಮುಖ್ಯವಾದ ಅಙ್ಗದ ಪ್ರಾಧಾನ್ಯವನ್ನು ನಿರ್ದೇಶಿಸುವದಕ್ಕಾಗಿ ಅಙ್ಗಿತ್ವೇನ ಭಾವನೆಯುಂಟೆಂದು ತಿಳಿಸುತ್ತಾರೆ.

**ಆಜ್ಞಾನಾದಥವಾ ಜ್ಞಾನಾದಪರಾಧೇಷು ಸತ್ಸ್ವಪಿ ।**
**ಪ್ರಾಯಶ್ಚಿತ್ತಂ ಕ್ಷಮಸ್ವೇತಿ ಪ್ರಾರ್ಥನೈಕೈವ ಕೇವಲಮ್॥**

ಇಲ್ಲಿ ಕ್ಷಮಿಸ್ವೆಯಾ ಎಂಬ ಪ್ರಾರ್ಥನೆಯೇ ಮುಖ್ಯವಾದ ಪ್ರಾಯಶ್ಚಿತ್ತವೆಂದು ಹೇಳಿರುವದು, ಈ ಪ್ರಾರ್ಥನಾರೂಪವಾದ ಅಙ್ಗದ ಮಾಹಾತ್ಮ್ಯವನ್ನು ತಿಳಿಸುವ

**"ಶರಣಂವ್ರಜ" ಇತ್ಯಾದಿ ವಿಶ್ವಾಸಾಙ್ಗಪರವಾಕ್ಯೇಽಪಿ ಆತ್ಮ ಸಮರ್ಪಣ ಪರ್ಯಂತತ್ವ ಸಿದ್ಧಿಃ**

---

**ಆಲಂಭ ಶಬ್ದವತ್ ಯಾಗಪರ್ಯಂತ ಮಾನಾರ್ಹ್ಯೋಲೆ, "ಶರಣಂ**

---

ದಕ್ಕಾಗಿ ಅಙ್ಗಿಯೊಂದಿಗೆ ಅಭೇದವು ಹೇಳಲ್ಪಟ್ಟಿರುತ್ತದೆ. ಓರೋರು ವಿವಕ್ಷೈ ಗಳಾಲೇ - ಒಂದೊಂದು ವಿಷಯವನ್ನು ಮುಖ್ಯವಾಗಿ ತಿಳಿಸುವ ಅಪೇಕ್ಷೆಯಿಂದ, ಅಙ್ಗಙ್ಗಳೈ - ಅಙ್ಗಗಳನ್ನು, ಪ್ರಧಾನಮಾಗ ಚೊಲ್ಲುಗೈ - ಮುಖ್ಯವಾಗಿ ಹೇಳೋಣವು, ಲೋಕತ್ತಿಲು ಮುಂಡು - ಲೋಕವಾಡಿಕೆಯಾಗಿಯೂ ಉಂಟು. ಕಾರ್ಯಸಹಾಯಕನಾದ ರಾಜಭಟನನ್ನೇ "ಇವನೇ ರಾಜನು" ಎಂದು ಉಪಚಾರ ರೂಪವಾಗಿ ಪ್ರಯೋಗವು ಉಂಟು ಹಾಗೆಯೇ ಕ್ಷಮಸ್ವ ಎಂಬ ಪ್ರಾರ್ಥನೆಯು ಅಙ್ಗವು; ಈ ಪ್ರಾರ್ಥನೆಯು ಪ್ರಧಾನರೂಪ ಅಙ್ಗವಾದುದರಿಂದ ಇದಕ್ಕೂ ಪ್ರಪದನಕ್ಕೂ ಅಭೇದವು ಹೇಳಲ್ಪಟ್ಟಿರುತ್ತದೆಂಬ ಭಾವವು

**ಶರಣಂ ವ್ರಜ ಇವೇ ಮೊದಲಾದ ವಿಶ್ವಾಸದ್ಯೋತಕ ವಾಕ್ಯ ದಲ್ಲೂ ಆತ್ಮಸಮರ್ಪಣ ರೂಪಾಙ್ಗಿಯ ಸಿದ್ಧಿಯು.**

---

ಹಿಂದೆ ಲೋಕದೃಷ್ಟಾಂತದಿಂದ ಪ್ರಧಾನಾಙ್ಗಕ್ಕೆ ಅಙ್ಗಿತ್ವೇನ ನಿರ್ದೇಶ ಉಂಟೆಂದು ಹೇಳಿದರು ಈ ಮುಂದಿನ ವಾಕ್ಯದಿಂದ **"ಲೋಕೇ ವೇದೇಚ"** ಎಂದು ಹೇಳಿರುವಹಾಗೆ ವೇದಗಳಲ್ಲಿ ವಿಧಿಸಲ್ಪಟ್ಟಿರುವದೇ ಲೋಕಸಂಮತವಾದುದರಿಂದ ವೈದಿಕ ಮಾರ್ಗದಿಯೂ ಹಾಗೆ ಉಂಟೆಂಬುದಕ್ಕೆ ಒಂದು ದೃಷ್ಟಾಂತವನ್ನು ದಯಪಾಲಿಸುತ್ತಾರೆ "ಮಾಮೇಕಂ ಶರಣಂ ವ್ರಜ", "ತಮೇವ **ಶರಣಂ ಗಚ್ಛ"** ಇತ್ಯಾದಿ ವಾಕ್ಯಗಳಲ್ಲಿ ಮಹಾವಿಶ್ವಾಸಮಾತ್ರವೇ ತೋರುತ್ತದೇ ವಿನಾ, ಆತ್ಮನಿಕ್ಷೇಪರೂಪ ಅಙ್ಗಿಯು ತೋರುವದಿಲ್ಲವಲ್ಲಾ ಎಂದರೆ ವ್ರಜ, ಗಚ್ಛ, ಎಂಬವುಗಳಲ್ಲಿರುವ ಧಾತುಗಳಿಂದ ತೋರುವ ಅರ್ಥ ಪ್ರಕರಣಗಳಿಂದ ಆತ್ಮನಿಕ್ಷೇಪವೂ ಹೇಳಲ್ಪಟ್ಟಿತೆಂದು ಉಪದೇಶಿಸುತ್ತಾರೆ

**ಆಲಂಭ ಶಬ್ದವತ್ - "ವಾಯುವ್ಯಗ್ಂ ಶ್ವೇತಮಾಲಭೇತ", ಅಗ್ನೀಷೋಮೀಯಂ ಪಶುಮಾಲಭೇತ",** ಇತ್ಯಾದಿ ಸಂದರ್ಭಗಳಲ್ಲಿ ಪ್ರಯೋಗಿಸಲ್ಪಟ್ಟ ಆ ಪಶುಹಿಂಸೆಯನ್ನು ಬೋಧಿಸುವ ಆಲಂಭಶಬ್ದವು, **ಯಾಗ ಪರ್ಯಂತ ಮಾನಾರ್ಹ್ಯೋಲೆ** - ಪಶುಹಿಂಸೆ ಮಾತ್ರವನ್ನೇ ಬೋಧಿಸದೇ, ಪೂರಾ ಅಗ್ನೀಷೋಮೀಯ ಯಾಗವನ್ನೆಲ್ಲಾ ಹ್ಯಾಗೆ ಬೋಧಿಸುತ್ತದೋ ಹಾಗೆ, **"ಶರಣಂ ವ್ರಜ"**

**ವ್ರಜ” ಇತ್ಯಾದಿಗಳಿಲ್ ಧಾತುಕ್ಕಳ್ ನ್ಯಾಸ ನಿಕ್ಷೇಪತ್ಯಾಗಾದಿ ಶಬ್ದಙ್ಗಳಾಲೇ ಶೊಲ್ಲಪ್ಪಟ್ಟ ಆತ್ಮಯಾಗತ್ತೈ ಚೊಲ್ಲುಗೈ ವೈದಿಕ ಮರ್ಯಾದೈಕ್ಕುಮ್ ಅನುಗುಣಮ್.**

---

ಇತ್ಯಾದಿಗಳಿಲ್, ಶರಣವನ್ನು ಹೊಂದು ಇವೇ ಮೊದಲಾದವುಗಳಲ್ಲಿ, ಇಲ್ಲಿ ಆದಿಪದದಿಂದ **“ತಮೇವ ಶರಣಂ ಗಚ್ಛ”** ಇತ್ಯಾದಿಗಳು ಬೋಧಿಸಲ್ಪಟ್ಟವು **ಧಾತುಗಳ್** - ವ್ರಜ, ಗಚ್ಛ, ವೃಣು ಎಂಬಿವೇ ಧಾತುಗಳ, **ನ್ಯಾಸ, ನಿಕ್ಷೇಪ, ತ್ಯಾಗ** ಮೊದಲಾದ ಶಬ್ದಗಳಿಂದ, **ಶೊಲ್ಲಪ್ಪಟ್ಟ ಆತ್ಮಯಾಗತ್ತೈ** - ಹೇಳಲ್ಪಟ್ಟ ಆತ್ಮಹವಿಸ್ಸಮರ್ಪಣ ರೂಪಯಾಗವನ್ನು, **ಶೊಲ್ಲುಗೈ** - ಹೇಳೋಣವು, **ವೈದಿಕ ಮರ್ಯಾದೈಕ್ಕುಮ್** - ಶಾಸ್ತ್ರಮರ್ಯಾದೆಗೂ, **ಅನುಗುಣಮ್** - ಅನುರೂಪವಾದುದು, **ಅಗ್ನೀಷೋಮೀಯಂ ಪಶುಮಾಲಭೇತ** ಎಂಬ ವಾಕ್ಯದಿಂದ ಪಶುಹನನ ಮಾತ್ರವೇ ಹೇಳಲ್ಪಡಸೆ ಆ ಯಾಗವೇ ಹೇಗೆ ಹೇಳಲ್ಪಡುತ್ತದೋ, ಹಾಗೆಯೇ **ಶರಣಂ ವ್ರಜ** ಇತ್ಯಾದಿ ವಾಕ್ಯದಿಂದ ಶರಣಾಗತಿಯಾದ ಆತ್ಮನಿಕ್ಷೇಪವೇ ಹೇಳಲ್ಪಟ್ಟಿತೆಂಬ ಭಾವವು. ಏಕೆಂದರೆ ಪಶುವಿನ ಆಲಂಭವು ಯಾಗದ ಏಕದೇಶವು ಹೇಗೋ, ಹಾಗೆ ಶರಣವನ್ನು ಹೊಂದುವುದೂ ಸಹ, ಆತ್ಮಯಾಗದ ಏಕದೇಶವು. ಈ ಆತ್ಮ ನಿಕ್ಷೇಪವೂ ಆತ್ಮಯಾಗವಹಾಗೆ ಎಲ್ಲಿ ಹೇಳಲ್ಪಟ್ಟಿರುತ್ತದೆ? ಎಂದರೆ

೧. **“ನನುಸಾ ಯೋ ಕರೋದ್ವೇವೇ ಸಸ್ವಧ್ವರ ಇತೀರಿತಃ”** ಇಲ್ಲಿ ಭರನ್ಯಾಸಾನುಷ್ಠಾತೃವು ಸಮೀಚೀನವಾದ ಅಧ್ವರವೆಂದರೆ ಯಾಗಾನುಷ್ಠಾತೃವೆಂದು ಹೇಳಲ್ಪಟ್ಟಿರುತ್ತದೆ.

೨ **“ಬ್ರಹ್ಮಣೇತ್ವಾ ಮಹಸ ಓಮಿತ್ಯಾತ್ಮಾನಂ ಯುಂಜೀತ ”** ಮಹಾತೇಜೋರೂಪನಾದ ಪರಬ್ರಹ್ಮನಾದ ನಿನಗೆ ಈ ಆತ್ಮಹವಿಸ್ಸನ್ನು ಸಮರ್ಪಿಸುವೆನು ಎಂಬದಾಗಿ, ಆತ್ಮಾವನ್ನು ಸ್ವಾಮಿಪಾದಾರವಿಂದದಲ್ಲಿಡತಕ್ಕದ್ದು.

೩. **“ಹವಿರ್ಗೃಹೀತ್ವಾತ್ಮರೂಪಂ ವಸುರಣ್ಯೇತಿ ಮಂತ್ರತಃ।**
**ಜುಹುಯಾತ್ಪ್ರಣವೇನಾಗ್ನಾವಚ್ಯುತಾಖ್ಯೇ ಸನಾತನೇ”॥**

**ವಸುರಣ್ಯೋವಿಭೂರಸಿ** ಎಂಬ ಮಂತ್ರಮೂಲಕವಾಗಿ, ಆತ್ಮರೂಪವಾದ ಹವಿಸ್ಸನ್ನು ತೆಗದುಕೊಂಡು ಅನಾದಿಯಾದ ಅಚ್ಯುತನೆಂಬ ಅಗ್ನಿಯಲ್ಲಿ, ಓಂ ಎಂಬ ಪ್ರಣವವನ್ನು ಉಚ್ಚರಿಸುತ್ತಾ ಹೋಮ ಮಾಡತಕ್ಕದ್ದು. ಆ **“ವಸುರಣ್ಯೋ”** ಎಂಬ ಪ್ರಪದನ ಕರಣಮಂತ್ರವು ಯಾವುದೆಂದರೆ—

"ವಸುರಣ್ಯೋ ವಿಭೂರಸಿ । ಪ್ರಾಣೇ ತ್ವಮಸಿ ಸಂಧಾತಾ । ಬ್ರಹ್ಮನ್ ತ್ವಮಸಿ ವಿಶ್ವಸೃಕ್ । ತೇಜೋದಾ ಸ್ತ್ವಮಸ್ಯಗ್ನೇಃ, ವರ್ಚೋದಾ ಸ್ತ್ವಮಸಿ ಸೂರ್ಯಸ್ಯ, ದ್ಯುಮ್ನೋದಾ ಸ್ತ್ವಮಸಿ ಚಂದ್ರಮಸಃ। ಉಪಯಾಮ ಗೃಹೀತೋಽಸಿ । ಬ್ರಹ್ಮಣೇ ತ್ವಾಮಹಸ ಓಮಿತ್ಯಾತ್ಮಾನಮ್ ಯುಂಜೀತ । ಏತದ್ವೈ ಮಹೋಪನಿಷದಂ ದೇವಾನಾಂ ಗುಹ್ಯಂ, ಯ ಏವಂ ವೇದ ಬ್ರಹ್ಮಣೋ ಮಹಿಮಾನಮಾಪ್ನೋತಿ ತಸ್ಮಾದ್ಬ್ರಹ್ಮಣೋ ಮಹಿಮಾನಮಿತ್ಯುಪನಿಷತ್" ತೈ ನಾ ೪. ೫೧

ವಸುರಣ್ಯಃ - ವಸುಗಳಿಂದ ಪ್ರಾಪ್ಯನು ಎಂದರೆ ವಸು ಶಬ್ದದಿಂದ ಉಪಲಕ್ಷಿತರಾದ ಸಮಸ್ತ ದೇವತೆಗಳಿಗೂ ಉಪಾಸ್ಯನು, ವಿಭೂರಸಿ - ಸರ್ವವ್ಯಾಪಕನಾಗಿದ್ದೀ, ಪ್ರಾಣೇ - ಪ್ರಾಣಶಬ್ದದಿಂದ ಹೇಳಲ್ಪಟ್ಟ ಕಾರ್ಯಕಾರಣದಲ್ಲಿ, ತ್ವಮಸಿ ಸಂಧಾತಾ - ನೀನು ಸಂಯೋಜಕನಾಗಿದ್ದೀ, ಬ್ರಹ್ಮನ್ ತ್ವಮಸಿ ವಿಶ್ವಸೃಕ್-ಓ ಪರಬ್ರಹ್ಮನೇ ನೀನೇ ಸಮಸ್ತ ವಿಶ್ವಕ್ಕೂ ಸೃಷ್ಟಿಕರ್ತಾ, ತೇಜೋದಾಸ್ತ್ವಮಸ್ಯಗ್ನೇಃ-ಅಗ್ನಿಗೆ ನೀನೇ ತೇಜಸ್ಸನ್ನು ಕೊಟ್ಟವನು, ವರ್ಚೋದಾಸ್ತ್ವಮಸಿ ಸೂರ್ಯಸ್ಯ - ಸೂರ್ಯನಿಗೆ ತೇಜಸ್ಸನ್ನು ಕೊಟ್ಟವನೂ ನೀನೇ ದ್ಯುಮ್ನೋದಾ ಸ್ತ್ವಮಸಿ ಚಂದ್ರಮಸಃ - ಚಂದ್ರನಿಗೆ ಕಾಂತಿಯನ್ನು ಕೊಟ್ಟವನೂ ನೀನೇ, ಉಪಯಾಮ - ನಿನ್ನನ್ನು ಶರಣು ಹೊಂದೋಣ, ಗೃಹೀತೋಽಸಿ-ಬಹುಕಾಲಕ್ಕೆ ಕಣ್ಣಿಗೆ ಬಿದ್ದಿರುವೆ ಯಾವ ಪ್ರಯೋಜನಕ್ಕಾಗಿ ಎಂದರೆ ಹೇಳಲ್ಪಡುತ್ತದೆ, ಬ್ರಹ್ಮಣೇತ್ವಾಮಹಸೇ - ಮಹತ್ತಾದ ಮಹಿಮೆಯುಳ್ಳ ಪರಬ್ರಹ್ಮನಾದ ನಿನಗೆ ಎಂದರೆ ನಿನ್ನ ಪ್ರಾಪ್ತಿಗಾಗಿ, ಓಂ ಎಂಬ ಪ್ರಣವಮಂತ್ರವನ್ನುಚ್ಚರಿಸುವದು ಮಾತ್ರವೇ ಅಲ್ಲದೆ ಆತ್ಮಾನಂ ಯುಂಜೀತ - ಆತ್ಮಸಮರ್ಪಣರೂಪ ಶರಣಾಗತಿಯನ್ನು ಅನುಷ್ಠಿಸತಕ್ಕದ್ದು. ಈ ಸಂದರ್ಭದ ಭಾಷ್ಯದಲ್ಲಿ ಶ್ರೀ ರಂಗರಾಮಾನುಜಸ್ವಾಮಿಗಳು "ಓಮಿತಿ ಮಂತ್ರೇಣಾಪಿ ಭಗವಚ್ಛೇಷತ್ವ ಪ್ರತಿಪಾದಕೇನ ಪುನರಾತ್ಮಸಮರ್ಪಣಂ ಕರ್ತವ್ಯ ಮೇವೇತ್ಯರ್ಥಃ" ಎಂದು ಬರೆದಿರುತ್ತಾರೆ ಇದರಿಂದ ಬರೀ ಪ್ರಾರ್ಥನಾ ಸಾಲದು, ಶರಣಾಗತಿಯ ಅನುಷ್ಠಾನವೂ ಆವಶ್ಯಕವೆಂಬುದು ಸಿದ್ಧವು.

೪. ತೈತ್ತರೀಯ ನಾರಾಯಣೀಯದ ಮುಂದಿನ ಅನುವಾಕವಾದ "ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ" ಎಂದಾರಂಭಿಸಿ ಇದು ವಿದ್ವಾಂಸನಿಂದ ಮಾಡಲ್ಪಡುವ ಆತ್ಮಹವಿಸ್ಸಮರ್ಪಣರೂಪವಾದ ಯಜ್ಞವು, ಇತರೆ ಪ್ರಸಿದ್ಧವಾದ ಯಜ್ಞಗಳಿಗಿಂತಲೂ ವಿಶೇಷ ಮಹಿಮೆಯುಳ್ಳದ್ದೆಂದು ರೂಪಕಮಾಡಿ ಅದರ ಪ್ರಾಶಸ್ತ್ಯವು ತೋರಿಸಲ್ಪಡುತ್ತದೆ.

## ಆತ್ಮ ಸಮರ್ಪಣಂ ಆತ್ಮಯಾಗಃ.

**ಯಾಗಮಾವದು ? ಇನ್ನ ದೇವತ್ತೈಕ್ಕಿನ್ನ ಹವಿಸ್ಸೆನ್ರಿಜ್ಞನೇ ಯೊರು ಬುದ್ಧಿವಿಶೇಷಮ್. ಇಪ್ಪಡಿಯೆನ್ನಾತ್ಮಾವಾಗಿರ ಸ್ವಾದುತಮಮಾನ ಹವಿಸ್ಸು ಶ್ರೀಮಾನಾನ ನಾರಾಯಣರ್ ಪೊರುಟ್ಟೆನ್ರಿಜ್ಞನೇ ಯಿರುಪ್ಪದೊರು ಬುದ್ಧಿವಿಶೇಷಮ್ ಇವ್ವಿಡತ್ತಿಲ್ ಆತ್ಮಯಾಗಮ್.**

---

ಹೀಗೆ ಆತ್ಮ ಹವಿಸ್ಸಮರ್ಪಣವೂ ಕೂಡ ಒಂದು ಯಾಗವೆಂದೇ, **ಆತ್ಮ** ಯಾಗವೆಂದೇ ಹೇಳಲ್ಪಟ್ಟಿರುತ್ತದೆ. ವ್ರಜ, ಗಚ್ಛ ಇತ್ಯಾದಿಗಳೂ **ಕೂಡ ಆತ್ಮ** ಯಾಗವನ್ನೇ ಅನುಷ್ಠಿಸತಕ್ಕದ್ದೆಂದು ಬೋಧಿಸುತ್ತವೆ ಎಂಬುದು ಮುಖ್ಯ ತಾತ್ಪರ್ಯವು.

ಆಗಲಿ, **ಆತ್ಮಯಾಗವೆಂದು** ಇಲ್ಲಿ ಯಾಗಶಬ್ದವು ಕೂಡುತ್ತದೋ? ಮುಖ್ಯವಾಗಿ ಯಾಗವೋ? ಇಲ್ಲವೇ ಬರೀ ಭಾವನೆಯೋ? ಎಂದರೆ ಭಾವನೆ ಮಾತ್ರವೇ ಅಲ್ಲವು; ಇದೂ ಒಂದು ವಿಲಕ್ಷಣ ಯಾಗವೇ ಎಂದು ಹೇಳಲು ಹೊರಟು ಯಾಗ ಶಬ್ದಾರ್ಥವನ್ನು ಉಪದೇಶಿಸುತ್ತಾರೆ ಏತಕ್ಕಾಗಿ ಎಂದರೆ ಭರನ್ಯಾಸವು ಬರೀ ಪ್ರಾರ್ಥನೆ ಮಾತ್ರವೇ ಅಲ್ಲವು. ವಿಷದ ಹಾವು ಕಚ್ಚಿರುವವನಿಗೆ ಗರುಡಧ್ಯಾನಮಾತ್ರದಿಂದಲೇ ಅಲ್ಲದೆ ಅದರೊಂದಿಗೆ ವಿಷಾಪಹಾರಿ ಚಿಕಿತ್ಸೆಯೂ ಹೇಗೆ ಆವಶ್ಯಕವೋ, ಹಾಗೆ ಪಾಪಗಳಿಂದ ಪೀಡಿತನಾದ ಈ ಬದ್ಧಚೇತನನಿಗೆ ಪರಮಾತ್ಮನ ಸನ್ನಿಧಿಯಲ್ಲಿ ವಿಶ್ವಾಸಪೂರ್ವಕ ಪ್ರಾರ್ಥನೆಯೊಂದಿಗೆ ಪಾಪಗಳನ್ನೆಲ್ಲಾ ಹೋಗಲಾಡಿಸುವ ಶರಣಾಗತಿಯೂ ಆವಶ್ಯಕವೆಂಬ ಭಾವವು

**ಆತ್ಮಸಮರ್ಪಣವು ಆತ್ಮಯಾಗವು.**

---

**ಯಾಗಮಾವದು** - ಯಾಗವೆಂಬುದು ಯಾವುದು? **ಇನ್ನ ದೇವತ್ತೈಕ್ಕಿನ್ನ ಹವಿಸ್ಸೆನ್ರು** - ಈ ದೇವತೆಗೆ ಉದ್ದಿಶ್ಯವಾದುದು ಈ ಹವಿಸ್ಸು ಎಂದು, **ಇಜ್ಞನೆ ಯೊರು ಬುದ್ಧಿ ವಿಶೇಷಮ್** - ಇರುವ ಒಂದು ಬುದ್ಧಿ ವಿಶೇಷವು, **ಇಪ್ಪಡಿ** - ಈ ಪ್ರಕಾರವಾಗಿಯೇ, **ಎನ್ನಾತ್ಮಾವಾಗಿರ** - ನನ್ನ ಆತ್ಮಾವಾಗಿರುವ, **ಸ್ವಾದುತಮಮಾನ** - ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳಿಂದಲೂ, ಆನಂದಾದಿ ಗುಣಗಳಿಂದಲೂ ಪರಿಶುದ್ಧನಾಗಿ ಶ್ರುತಿಯಲ್ಲಿ **"ಅಹಮನ್ನಂ ಅಹಮನ್ನಂ"** ಎಂದು ಹೇಳಿರುವಹಾಗೆ, ಬಹು **ಭೋಗ್ಯಭೂತವಾದ**, **ಹವಿಸ್ಸು ಶ್ರೀಮಾನಾನ** - ಲಕ್ಷ್ಮೀಯುಕ್ತನಾದ, **ನಾರಾಯಣನ್ ಪೊರುಟ್ಟೇ** - ನಾರಾ

ಯಣಸಿಗಾಗಿಯೋ, **ಎನ್ರು** – ಎಂಬದಾಗಿ, **ಇಜ್ಞನೇ** - ಈ ಸಂದರ್ಭದಲ್ಲಿ, **ಇರುಪ್ಪದು** - ಇರುವಂತಹ, **ಒರುಬುದ್ಧಿ ವಿಶೇಶಮ್** – ಒಂದು ಜ್ಞಾನವಿಶೇಷವು, **ಇಪ್ಪಿಡತ್ತಿಲ್** - ಈ ಪ್ರಕರಣದಲ್ಲಿ, **ಆತ್ಮಯಾಗಮ್** - ಆತ್ಮಯಾಗವೆಂದು ಹೇಳಿಸಿಕೊಳ್ಳುವಂತಾದ್ದು ; ಸಾಧಾರಣವಾಗಿ ಯಾಗಗಳಲ್ಲಿ ಒಂದು ದೇವತೆಯ ಉದ್ದಿಶ್ಯವಾಗಿ ಒಂದು ವಿಧವಾದ ಹವಿಸ್ಸಿನ ಸಮರ್ಪಣವು, ಇದನ್ನು ಅಗ್ನಿಮುಖದಲ್ಲಿ ದ್ರವ್ಯತ್ಯಾಗಮೂಲಕ ಸಮರ್ಪಿಸತಕ್ಕದ್ದು ; ಈ ಸಂದರ್ಭದಲ್ಲಾದರೋ ಆತ್ಮಯಾಗವು ತುಂಬಾ ವಿಲಕ್ಷಣವಾದುದು:—(೧) ಯಜಮಾನನು ಹವಿಸ್ಸನ್ನು ಇತರ ಯಾಗಗಳಲ್ಲಿ ಸಮರ್ಪಿಸುವನು, ಇಲ್ಲಾದರೋ "**ಯಜ್ಞಸ್ಯಾತ್ಮಾ ಯಜಮಾನಃ**" ಎಂದು ಹೇಳಿರುವಹಾಗೆ ಸಮರ್ಪಿಸುವ ಯಜಮಾನನೂ ತಾನೇ, ಹವಿಸ್ಸೂ ತಾನೇ ; ತಾನೇ ತನ್ನನ್ನೇ ಸಮರ್ಪಿಸಿಕೊಳ್ಳುವದು. (೨) ಸಾಧಾರಣವಾಗಿ ಒಂದು ಹವಿಸ್ಸು ಒಂದು ದೇವತೆಗೆ ಮಾತ್ರವೇ ಸಮರ್ಪಿಸಲ್ಪಡುತ್ತದೆ. ಇಲ್ಲಿಯಾದರೋ ಈ ಆತ್ಮಹವಿಸ್ಸು ಲಕ್ಷ್ಮೀನಾರಾಯಣರಿಬ್ಬರಿಗೂ ಉದ್ದೇಶಿಸಿ ಸಮರ್ಪಿಸಲ್ಪಡುತ್ತದೆ ನಿಗಮಾಂತ ದೇಶಿಕರು ಇದನ್ನು ಶ್ರೀಸ್ತುತಿಯಲ್ಲಿ "**ಉದ್ದೇಶ್ಯತ್ವಂ ಜನನಿ ಭಜತೋರುಜ್ಝಿತೋಪಾಧಿ ಗಂಧಂ ಪ್ರತ್ಯಗ್ರೂಪೇ ಹವಿಷಿ ಯುವಯೋರೇಕಶೇಷಿತ್ವಯೋಗಾತ್**" ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ (ದಾಸನು ಬರೆದಿರುವ ಶ್ರೀ ಸ್ತುತಿಯ ೬ನೆಯ ಶ್ಲೋಕವನ್ನು ನೋಡಿ.) ಆದರೆ ಒಂದು ಹವಿಸ್ಸಿಗೆ ಇಬ್ಬರು ದೇವತೆಗಳು ಉದ್ದೇಶವಾಗಿರಬಹುದೋ ಎಂದರೆ ಅನೇಕ ಸಂದರ್ಭಗಳಲ್ಲಿ ಹಾಗೆ ಉಂಟು. "**ತ್ವನ್ನೋ ಅಗ್ನೇ**" ಎಂದಾರಂಭಿಸಿ ಆಜ್ಯಾಹುತಿಯನ್ನು "**ಅಗ್ನೀ ವರುಣಾಭ್ಯಾಂ ಇದಂ ನಮಮ**" ಎಂದು ಕೊಡುವದುಂಟು. (೩) ಯಾಗದಲ್ಲಿ ಹವಿಸ್ಸಮರ್ಪಣೆಯು ಮುಖ್ಯವಾಗಿ ಕಾರ್ಯರೂಪವಾದುದು. ಈ ಯಾಗವಲ್ಲಾದರೋ ಕರ್ಮವಿದ್ದರೂ ಮುಖ್ಯವಾಗಿ ಜ್ಞಾನರೂಪವಾದುದು. ಹೀಗೆ ಆತ್ಮಯಾಗವು ವಿಲಕ್ಷಣವಾದುದು ಎಂಬ ಭಾವವು.

ಮುಮುಕ್ಷುವು ಮಾಡುವ ಆತ್ಮಹವಿಸ್ಸಮರ್ಪಣವೇನೋ ಆಜ್ಞೆ ಎಂದು ಒಪ್ಪಿಕೊಳ್ಳಬಹುದು. ಇತರ ಪುರುಷಾರ್ಥಗಳಿಗಾಗಿ ಮಾಡುವ ಪ್ರಪತ್ತಿಯಲ್ಲಿ ಆಜ್ಞೆಯು ಆತ್ಮಹವಿಸ್ಸಮರ್ಪಣವಲ್ಲವಷ್ಟೇ ಆ ಸಂದರ್ಭದಲ್ಲಿ ಹೇಗೆ ಎಂದು ಪ್ರಶ್ನಿಸಬಹುದೆಂದು ಭಾವಿಸಿ ತಾವೇ ಸಮಾಧಾನವನ್ನು ಹೇಳುತ್ತಾರೆ. ಸರ್ವಫಲಾರ್ಥಿಗಳಿಗೂ ಸಾಧಾರಣವಾದ ಆತ್ಮನಿಕ್ಷೇಪರೂಪವಾದ ಆಜ್ಞೆಯು ರಕ್ಷಾಭರನ್ಯಾಸವೆಂದು ಹಿಂದೆಯೇ "**ಅತ್ರ ರಕ್ಷಾ ಭರನ್ಯಾಸ**" ವೆಂಬ ಕಾರಿಕೆಯ ಮೂಲಕ ಸಾಙ್ಗಪ್ರಪದನಾಧಿಕಾರದಲ್ಲಿ ಹೇಳಿರುತ್ತೇವೆ ಎಂದು ಹೇಳುತ್ತಾರೆ ೧೦೩೪ ನೆಯ ಪುಟ ನೋಡಿ. ಅಲ್ಲಿ ಆತ್ಮನಿಕ್ಷೇಪವು ಮೂರು ಅಂಶಗಳುಳ್ಳದು,

**ಇವ್ವಾತ್ಮ ನಿಕ್ಷೇಪತ್ತಿಲ್ ಸರ್ವಫಲಾರ್ಥಿಗಳುಕ್ಕುಮ್ ಸಾಧಾರಣ ಮಾನ ಕರ್ತವ್ಯಸ್ವರೂಪಂ ರಕ್ಷಾಭರನ್ಯಾಸಮೆನ್ನುಮಿಡಂ ಮುನ್ಬೇ ಶೊನ್ನೋಮ್.**

---

ಸ್ವರೂಪ ಫಲ, ರಕ್ಷಾಭರಸಮರ್ಪಣವುಳ್ಳದು. ಮೋಕ್ಷಾರ್ಥಿಯಾಗಿದ್ದರೆ ಇವು ಮೂರೂ ಆತ್ಮನಿಕ್ಷೇಪದಲ್ಲಿಯುಂಟು, ಮೋಕ್ಷಾರ್ಥಿಯಲ್ಲದಿದ್ದರೆ ರಕ್ಷಾಭರ ಸಮರ್ಪಣಮಾತ್ರವೇ, ಆದುದರಿಂದ ರಕ್ಷಾಭರಸಮರ್ಪಣವು, ಎಲ್ಲಾ ಪ್ರಪತ್ತಿಗಳಿಗೆ ಸಾಧಾರಣವಾದುದು ಎಂದು ಹಿಂದೆ ಹೇಳಿರುತ್ತದೆಂದು ತಿಳಿಸುತ್ತಾರೆ—**ಇವ್ವಾತ್ಮನಿಕ್ಷೇಪತ್ತಿಲ್** – ಈ ಪ್ರಪತ್ತಿಯ ಅಙ್ಗಿಯಲ್ಲಿ, **ಸರ್ವ ಫಲಾರ್ಥಿಗಳುಕ್ಕುಮ್** - ಚತುರ್ವಿಧ ಪುರುಷಾರ್ಥಗಳನ್ನು ಪ್ರಾರ್ಥಿಸುವವರಿಗೂ, **ಸಾಧಾರಣಮಾನ** - ಸಾಧಾರಣವಾದ, **ಕರ್ತವ್ಯಸ್ವರೂಪಂ** – ಅನುಷ್ಠಾನವು, ರಕ್ಷಾಭರನ್ಯಾಸವು, ಎನ್ನುಮಿಡಂ - ಎಂಬ ಸಂದರ್ಭವನ್ನು, **ಮುನ್ಬೇಶೊನ್ನೋಮ್** - ಹಿಂದೆ ಸಾಙ್ಗಪ್ರಪದನಾಧಿಕಾರದಲ್ಲಿ, **ಶೊನ್ನೋಮ್** - **"ಅತ್ರರಕ್ಷಾ ಭರನ್ಯಾಸ"** ವೆಂಬ ಕಾರಿಕೆಯ ಮೂಲಕ ಹೇಳಿದೆವು ಮೋಕ್ಷಾರ್ಥ ನಿಕ್ಷೇಪವು, ಸ್ವರೂಪ, ಫಲ ರಕ್ಷಾಭರನ್ಯಾಸವು, ಈ ಮೂರನ್ನೂ ಒಳಗೊಂಡುದೆಂದೂ, ಮುಕ್ತಿ ಫಲಾಂತರಕ್ಕಾಗಿ ಮಾಡಿದ ನಿಕ್ಷೇಪವು ರಕ್ಷಾಭರನ್ಯಾಸಮಾತ್ರವುಳ್ಳದೆಂದು ಹಿಂದೆ ಹೇಳಲ್ಪಟ್ಟಿತೆಂಬ ತಾತ್ಪರ್ಯವು ಆದುದರಿಂದ ರಕ್ಷಾಭರನ್ಯಾಸರೂಪನಿಕ್ಷೇಪವು ಸರ್ವಫಲಾರ್ಥಿಗಳ ಪ್ರಪತ್ತಿಗಳಲ್ಲೂ ಅಙ್ಗಿಯಾದುದರಿಂದ **ಸರ್ವಫಲಾರ್ಥಿಗಳುಕ್ಕುಮ್ ಸಾಧಾರಣಮ್** ಎಂದು ಹೇಳಲ್ಪಟ್ಟಿರುತ್ತದೆ.

ಪ್ರಪತ್ತಿಯ ಅಙ್ಗಿ ಸ್ವರೂಪ ವಿಷಯದಲ್ಲಿ ಈಗ ಉಪಪಾದಿಸಲ್ಪಟ್ಟದದು ಏನೆಂದರೆ—

೧ ಕೆಲವರು ಉಪಾಯತ್ವ ಪ್ರಾರ್ಥನೆಯೇ ಶರಣಾಗತಿಎಂದು ಹೇಳುತ್ತಾರೆ. ಇವರಿಗೆ ಪ್ರಮಾಣಗಳು :—

**"ತ್ವಮೇವೋಪಾಯ ಭೂತೋ ಮೇ ಭವೇತಿ ಪ್ರಾರ್ಥನಾಮತಿಃ ।**
**ಶರಣಾಗತಿರಿತ್ಯುಕ್ತಾ ಸಾದೇವೇಸ್ಮಿನ್ ಪ್ರಯುಜ್ಯತಾಂ" ॥**
**"ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಕಂ ।**
**ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ" ॥**

ಯಾಚ್ಞಾರೂಪ ಅಙ್ಗದ ಪ್ರಾಧಾನ್ಯವನ್ನು ಪ್ರದರ್ಶಿಸುವದಕ್ಕಾಗಿ ಈ ಪ್ರಮಾಣಗಳು ಅಙ್ಗವನ್ನು ಅಙ್ಗಿಯಾಗಿ ಹೇಳಿದವೆಂಬ ಸಮಾಧಾನವು.

**ಹವಿಸ್ಸಮರ್ಪಣಾದತ್ರ ಪ್ರಯೋಗ ವಿಧಿ ಶಕ್ತಿತಃ ।**
**ಆತ್ಮರಕ್ಷಾ ಭರನ್ಯಾಸೋಽಕಿಂಚನಸ್ಯಾತಿರಿಚ್ಯತೇ ॥೩೭॥**

---

೨. ಇನ್ನು ಕೆಲವರು, ಅಙ್ಗವಾದ ಮಹಾ ವಿಶ್ವಾಸವನ್ನೇ ಅಙ್ಗಿ ಎಂದು ಹೇಳುತ್ತಾರೆ. ಇವರಿಗೆ ಪ್ರಮಾಣವು—

**ನಾರಾಯಣಂ ಸಲಕ್ಷ್ಮೀಕಂ ಪ್ರಾಪ್ಯಂ ತಚ್ಚರಣದ್ವಯಂ ।**
**ಉಪಾಯ ಇತಿ ವಿಶ್ವಾಸೋ ದ್ವಯಾರ್ಥ ಶ್ಶರಣಾಗತಿಃ ॥**

ಇಲ್ಲಿಯೂ ಸಮಾಧಾನ ಹೇಗೆಂದರೆ—ಮಹಾ ವಿಶ್ವಾಸದ ಪ್ರಾಮುಖ್ಯತೆಯನ್ನು ಹೇಳುವದಕ್ಕೋಸ್ಕರ ಹಾಗೆ ಪ್ರಯೋಗವು.

ಆದುದರಿಂದ ಆತ್ಮನಿಕ್ಷೇಪವೇ ಅಙ್ಗಿಯೇವಿನಾ ಅನ್ಯಥಾ ಇಲ್ಲವೆಂದು ಹಿಂದೆ ಅನೇಕ ಪ್ರಮಾಣಗಳು (ಹತ್ತು) ಉದಾಹರಿಸಲ್ಪಟ್ಟವು ಮೋಕ್ಷಾರ್ಥಿಯು ಮಾಡುವಪ್ರಪತ್ತಿಯಲ್ಲಿ ಆತ್ಮರಕ್ಷಾಭರಸಮರ್ಪಣವೇ ಅಙ್ಗಿ ಎಂದೂ ಆದೂ ಒಂದು ಆತ್ಮಹವಿಸ್ಸಮರ್ಪಣರೂಪಯಾಗವೆಂದೂ, ಈ ಹವಿಸ್ಸಿಗೆ ಲಕ್ಷ್ಮೀನಾರಾಯಣರಿಬ್ಬರೂ ಉದ್ದೇಶ್ಯರೆಂದೂ ಹೇಳಲ್ಪಟ್ಟಿತು.

ಸ್ವತಂತ್ರಪ್ರಪತ್ತಿನಿಷ್ಠನಲ್ಲದ ಭಕ್ತ್ಯುಪಾಯನಿಷ್ಠನಿಗೂ ಆತ್ಮಸ್ವರೂಪ ಸಮರ್ಪಣವಿಲ್ಲವೆ. ಮತ್ತು ಮುಮುಕ್ಷುವಲ್ಲದ ಇತರರು ಮಾಡುವ ಶರಣಾಗತಿಯಲ್ಲೂ ಇಲ್ಲವು ಆದುದರಿಂದ ಎಲ್ಲಾ ಪ್ರಪತ್ತಿಗಳಿಗೂ ಸಾಧಾರಣವಾದ ಅಙ್ಗಿಯು ರಕ್ಷಾಭರ ಸಮರ್ಪಣವೆಂದು ಹೇಳಲ್ಪಟ್ಟಿತು.

ಇದರಮೇಲೆ ಇನ್ನೊಂದು ಆಕ್ಷೇಪವ ತೋರಿಬರುತ್ತದೆ. ಜ್ಯೋತಿಷ್ಟೋಮಾದಿಗಳಲ್ಲಿ ಹವಿಸ್ಸಮರ್ಪಣೆಯಿದ್ದರೂ ರಕ್ಷಾಭರಸಮರ್ಪಣೆಯಿಲ್ಲವು ಹೀಗಿರುವಾಗ ಈ ಪ್ರಪತ್ತಿಯಲ್ಲೂ ರಕ್ಷಾಭರಸಮರ್ಪಣೆಯನ್ನು ಪ್ರತ್ಯೇಕ ಅಙ್ಗಿಯಾಗಿ ಅಙ್ಗೀಕರಿಸತಕ್ಕದ್ದು ಎಂಬಾಕ್ಷೇಪಣೆಗೆ ಒಂದು ಕಾರಿಕೆಯ ಮೂಲಕ ಸಮಾಧಾನವನ್ನು ಹೇಳುತ್ತಾರೆ.

**ಅರ್ಥ**— ಅತ್ರ - ಈ ಪ್ರಪತ್ತಿ ಪ್ರಕರಣದಲ್ಲಿ, ಆತ್ಮರಕ್ಷಾಭರನ್ಯಾಸಃ - ಆತ್ಮರಕ್ಷಣ ಭರವನ್ನು ಸಮರ್ಪಿಸೋಣವು, **ಅಕಿಂಚನಸ್ಯ** - ಅಕಿಂಚನನಾಗಿ ಮೋಕ್ಷಾರ್ಥಿಯಾಗಿ ಪ್ರಪತ್ತಿಮಾಡಿದವನಿಗೆ, **ಹವಿಸ್ಸಮರ್ಪಣಾತ್** - ಹವಿಸ್ಸಮರ್ಪಣವಾದ ಆತ್ಮಯಾಗಕ್ಕಿಂತಲೂ ಅಥವಾ ಎಲ್ಲಾವಿಧ ಹವಿಸ್ಸಮರ್ಪಣವಿರುವ ಯಾಗಕ್ಕಿಂತಲೂ, **ಅತಿರಿಚ್ಯತೇ** - ಅಧಿಕವಾದುದು, ಶ್ರೇಷ್ಠವಾದುದು, ಏಕೆಂದರೆ ಹೇಳುತ್ತಾರೆ. **ಪ್ರಯೋಗವಿಧಿಶಕ್ತಿತಃ** - ಪ್ರಯೋಗವಿಧಿ ಸಾಮ

ರ್ಥ್ಯದಿಂದ, ಪ್ರಯೋಗಪ್ರಕಾರವನ್ನು ವಿಧಿಸುವ ವಿಧಿಯು ಪ್ರಯೋಗವಿಧಿಯು; ಪ್ರಪದನಾನುಷ್ಠಾನಪ್ರಕಾರವನ್ನು ಬೋಧಿಸುವ ವಿಧಿಯು ಯಾವುದೆಂದರೆ:—

(೧) **"ಆತ್ಮಾತ್ಮೀಯಭರಂ ಸರ್ವಂ ನಿಕ್ಷಿಪ್ಯ ಶ್ರೀಪತೇಃ ಪದೇ।**
**ಉಪಾಯಂ ವೃಣು ಲಕ್ಷ್ಮೀಶಂ ತಮುಪೇಯಂ ವಿಚಿಂತ್ಯ ಚ"॥**

ಆತ್ಮಾತ್ಮೀಯ ಉಪಾಯ ಫಲಾದಿಗಳ ಸಮಸ್ತಭರವನ್ನೂ ಲಕ್ಷ್ಮೀಪತಿಯ ಪಾದಾರವಿಂದದಲ್ಲಿ ಸಮರ್ಪಿಸಿ ಆತನನ್ನೇ ಪ್ರಾಪ್ಯನೆಂದು ನಂಬಿ, ಆ ಲಕ್ಷ್ಮೀಪತಿಯನ್ನೇ ಉಪಾಯವಾಗಿ ವರಿಸು ಎಂಬುದು ಇದರರ್ಥವು.

(೨) ಇನ್ನೊಂದು ಪ್ರಯೋಗವನ್ನು ವಿಧಿಸುವ ಪ್ರಮಾಣವೂ ಉಂಟು

**"ಹವಿರ್ಗೃಹೀತ್ವಾತ್ಮರೂಪಂ ವಸುರಣ್ಯೇತಿ ಮಂತ್ರತಃ।**
**ಜುಹುಯಾತ್ಪ್ರಣವೇನಾಗ್ನೌ ವಚ್ಯುತಾಖ್ಯೇ ಸನಾತನೇ"॥**

ಆತ್ಮರೂಪವಾದ ಹವಿಸ್ಸನ್ನು ತೆಗೆದುಕೊಂಡು "ವಸುರಣ್ಯೋ ವಿಭೂರಸಿ" ಎಂಬ ಮಂತ್ರಮೂಲಕವಾಗಿ ಸನಾತನನಾದ ಅಚ್ಯುತನೆಂಬ ಅಗ್ನಿಯಲ್ಲಿ ಓಂ ಎಂದು ಪ್ರಣವವನ್ನುಚ್ಚರಿಸುತ್ತಾ ಹೋಮಮಾಡತಕ್ಕದ್ದು.

ಈ ಎರಡರಲ್ಲಿ ಒಂದನೆಯ ಪ್ರಯೋಗವಿಧಿಯಲ್ಲಿ **"ಭರಂ ನಿಕ್ಷಿಪ್ಯ"** ಎಂದು ಕಂಠೋಕ್ತವಾಗಿರುತ್ತದೆ. ಎರಡನೆಯದರಲ್ಲಿ ಪ್ರಕರಣವನ್ನು ಪರ್ಯಾಲೋಚಿಸಿದರೆ "ಓಮಿತ್ಯಾತ್ಮಾನಂ ಯುಂಜೀತ" ಎಂದು ಅಕಿಂಚನಾಧಿಕಾರಿಯು ವಿಷಯವಾದುದರಿಂದ, ರಕ್ಷಾಭರಸಮರ್ಪಣವಿಲ್ಲದೆ ಉಪಾಯತ್ವವೇ ಸಿದ್ಧಿಸುವದಿಲ್ಲವಾದುದರಿಂದ ಈ ಪ್ರಯೋಗವಿಧಿಯಲ್ಲಿಯೂ ರಕ್ಷಾಭರನ್ಯಾಸವು ಹೇಳಲ್ಪಟ್ಟಿದೆಯೆಂದು ಗ್ರಹಿಸಬಹುದು. ಹೇಗೆಂದರೆ.—"ಓಂ ಇತ್ಯಾತ್ಮಾನಂ ಯುಂಜೀತ" ಎಂದಿರುವದರಿಂದ ಓಂ ಎಂಬ ಪ್ರಣವ ಮಂತ್ರವು ಹವಿಸ್ಸಮರ್ಪಣಕ್ಕೆ ಕರಣಮಂತ್ರವಾಯಿತು. ಆ ಪ್ರಣವದಲ್ಲಿ ಅಕಾರವಾಚ್ಯನಾದ ಲಕ್ಷ್ಮೀ ವಿಶಿಷ್ಟ ಶ್ರೀಮಹಾವಿಷ್ಣುವಿನಲ್ಲಿ ಮಕಾರವಾಚ್ಯನಾದ ಜೀವನ ಸಮರ್ಪಣವು ತೋರಿಬರುತ್ತದೆ. ಅಕಾರದಲ್ಲಿ ತೋರುವ ಅವರಕ್ಷಣೆ ಎಂಬ ಧಾತು ವ್ಯುತ್ಪತ್ತಿಯಮೂಲಕ ರಕ್ಷಣೆಯಲ್ಲಿ ಸರ್ವಸಮರ್ಥನಾದವನಲ್ಲಿ ರಕ್ಷ್ಯವಸ್ತುವಾದ ಆತ್ಮವನ್ನು ಸಮರ್ಪಿಸುವೆನೆಂದು ಅನುಸಂಧಾನದಿಂದ, ರಕ್ಷಾಭರನ್ಯಾಸವು ಕಂಠೋಕ್ತವಾಗಿ ಇಲ್ಲದಿದ್ದರೂ ಅರ್ಥವಾಗಿ ಭಾವಿಸಬಹುದು. ಇನ್ನೊಂದು ಪ್ರಯೋಗ ವಿಧಿಯು ಕಠವಲ್ಲಿಯಲ್ಲಿ **"ಸತ್ಯಂ ತದ್ದ್ವಯಂ ಸಕೃದುಚ್ಚಾರೋ ಭವತಿ"** ಎಂದು ಹೇಳಿರುವ ಹಾಗೆ ದ್ವಯೋಚ್ಚಾರಣೆಯ ಮೂಲಕ ಶರಣಾಗತಿಯು; ದ್ವಯದ ಉತ್ತರ ಖಂಡದಲ್ಲಿ ಆತ್ಮನಿಕ್ಷೇಪವು ಸೂಚಿತವು.

ಹೀಗೆ ಈ ಪ್ರಯೋಗವಿಧಿಗಳ ಆತ್ಮಾತ್ಮೀಯ ಭರನ್ಯಾಸವು ಹೇಳಲ್ಪ

## ಸ್ವಪ್ರವೃತ್ತಿನಿವೃತ್ತಿರೇವ ಪ್ರಪತ್ತಿರಿತಿ ವಾಕ್ಯಸ್ಯ ತಾತ್ಪರ್ಯಂ

ಅತಃ ಶ್ರೀ ರಾಮಮಿಶ್ರಾದ್ಯೈ ರ್ಭರನ್ಯಾಸ ವಿವಕ್ಷಯಾ
ಸ್ವಪ್ರವೃತ್ತಿನಿವೃತ್ತ್ಯಂಶಃ ಪ್ರಪತ್ತಿರಿತಿ ಲಕ್ಷಿತಃ ॥೩೮॥

---

ಟ್ಟಿತೆಂದು ಭಾವಿಸಬಹುದು. ಇತರ ಯಾಗಗಳಲ್ಲಿ ಹವಿಸ್ಸಮರ್ಪಣವಿದ್ದರೂ ಈ ರಕ್ಷಾಭರನ್ಯಾಸವು ಇಲ್ಲವು ಆದುದರಿಂದ ಇತರ ಯಾಗಗಳಿಗಿಂತ ಈ ಆತ್ಮ ಯಾಗದಲ್ಲಾದರೋ ಆತ್ಮರಕ್ಷಾಭರಸಮರ್ಪಣವು ಅಧಿಕವೆಂದು ಪ್ರಯೋಗವಿಧಿ ಪ್ರಮಾಣಗಳ ಸಾಮರ್ಥ್ಯದಿಂದ ಗ್ರಹಿಸಬಹುದೆಂಬುದು ತಾತ್ಪರ್ಯವು

ಅವತಾರಿಕೆ. ಆತ್ಮರಕ್ಷಾಭರನ್ಯಾಸವೇ ಪ್ರಪತ್ತಿಯ ಸ್ವರೂಪವು; ಅದೇ ಅಙ್ಗಿ ಎಂದು ಸಾಧಿಸಲ್ಪಟ್ಟಿತು. ಆದರೆ ಶ್ರೀರಾಮಮಿಶ್ರರೇ ಮೊದಲಾದ ಪೂರ್ವಾಚಾರ್ಯರುಗಳು, ಸ್ವಪ್ರವೃತ್ತಿನಿವೃತ್ತಿಯೇ ಪ್ರಪತ್ತಿ ಎಂದು ಹೇಳಿದರಲ್ಲಾ ಅದು ಹೇಗೆ? ಅವರುಗಳ ಅಭಿಪ್ರಾಯವು ಈ ಅಭಿಪ್ರಾಯಕ್ಕೆ ವಿರೋಧವೇ ಹೇಗೆ ಎಂಬ ಶಙ್ಕೆಗೆ ಈ ಕಾರಿಕೆಯು ಸಮಾಧಾನವನ್ನು ಹೇಳುತ್ತದೆ. ಅವರುಗಳ ಅಭಿಪ್ರಾಯವೂ ಸಹ ಈ ರಕ್ಷಾಭರನ್ಯಾಸವೇ ಪ್ರಪತ್ತಿ ಎಂಬುದನ್ನೇ ಸಮರ್ಥಿಸುತ್ತದೆ ಎಂದು ತಿಳಿಸುತ್ತಾರೆ.

### ಸ್ವಪ್ರವೃತ್ತಿಯ ನಿವೃತ್ತಿಯೇ ಪ್ರಪತ್ತಿ ಎಂಬ ವಾಕ್ಯದ ತಾತ್ಪರ್ಯವು.

**ಅತಃ**-ಆ ಕಾರಣದಿಂದಲೇ ಎಂದರೆ ಹಿಂದೆ ಉದಾಹರಿಸಲ್ಪಟ್ಟ ಅನೇಕ ಪ್ರಮಾಣಗಳಿಂದಲೂ, ಈ ಪ್ರಯೋಗವಿಧಿ ಸಾಮರ್ಥ್ಯದಿಂದಲೂ ಆತ್ಮರಕ್ಷಾಭರನ್ಯಾಸವೇ ಅಕಿಂಚನನ ಪ್ರಪತ್ತಿಯಲ್ಲಿ ಅಙ್ಗಿಯಾದುದರಿಂದಲೇ **ಶ್ರೀರಾಮಮಿಶ್ರಾದ್ಯೈಃ** - ಶ್ರೀರಾಮಮಿಶ್ರರೇ ಮೊದಲಾದ ಪೂರ್ವಾಚಾರ್ಯರುಗಳಿಂದ, **ಭರನ್ಯಾಸ ವಿವಕ್ಷಯಾ** - ಆತ್ಮರಕ್ಷಾ ಭರನ್ಯಾಸವೇ ಪ್ರಪತ್ತಿಯು ಎಂದು ಹೇಳಬೇಕೆಂಬ ತಾತ್ಪರ್ಯದಿಂದ, **ಸ್ವಪ್ರವೃತ್ತಿ ನಿವೃತ್ತ್ಯಂಶಃ ಪ್ರಪತ್ತಿರಿತಿ** – ಭರನ್ಯಾಸ ಮಾಡಿದನಂತರ ಉತ್ತರಕಾಲದಲ್ಲಿ ಬೇರೇ ಉಪಾಯಾನುಷ್ಠಾನರೂಪ ಪ್ರವೃತ್ತಿಯಿಂದ ನಿವೃತ್ತಿ ಎಂಬ ವಿಷಯವೇ ಪ್ರಪತ್ತಿಯೆಂದೂ ಅಥವಾ ಉಪಾಯಾಂತರ ಪ್ರವೃತ್ತಿಗೆ ಸಾಮರ್ಥ್ಯವಿಲ್ಲದುದರಿಂದ ಆದರಿಂದ ನಿವೃತ್ತಿರೂಪವಾದ ಆಕಿಂಚನ್ಯವೇ ಪ್ರಪತ್ತಿ ಎಂದೂ, **ಲಕ್ಷಿತಃ** – ಲಕ್ಷಣವಾಗಿ ಹೇಳಲ್ಪಟ್ಟಿತು. ಇವರಭಿಪ್ರಾಯವು ಇಷ್ಟೇ. ದೇಹವನ್ನು ಧರಿಸಿರುವ ಆತ್ಮನಿಗೆ ಎಲ್ಲಾ ಪ್ರವೃತ್ತಿಯಿಂದ ನಿವೃತ್ತಿ ಎಂಬುದು ಸಾಧ್ಯವೇ ಇಲ್ಲವು. ನಿತ್ಯನೈಮಿತ್ತಿಕ ಕರ್ಮತ್ಯಾಗವು

ಸ್ವಪ್ರವೃತ್ತಿ ನಿವೃತ್ತಿ ಎಂಬುದರಿಂದ ಎಂದಿಗೂ ಸರಿಯಾದುದಿಲ್ಲವಷ್ಟೇ. ಆದುದರಿಂದ ಸ್ವಪ್ರವೃತ್ತಿ ನಿವೃತ್ತಿ ಶಬ್ದದಿಂದ ಭಗವದ್ವ್ಯತಿರಿಕ್ತಗಳಾದ, ಮತ್ತು ಉಪಾಯಾಂತರಗಳಾದ ಪ್ರವೃತ್ತಿಗಳಿಂದ ನಿವೃತ್ತಿ ಎಂದು ಅರ್ಥಮಾಡತಕ್ಕದ್ದು. ಇಂತಹ ಪ್ರವೃತ್ತಿ ನಿವೃತ್ತಿಯು, ಭಗವಂತನೇ ಉಪಾಯವೇ ವಿನಾ ಇತರರಲ್ಲವೆಂದು ನಂಬಿ, ಅವನಲ್ಲೇ ಸಮಸ್ತ ಭರವನ್ನು ಸಮರ್ಪಿಸಿದುದಲ್ಲದೇ ಉಂಟಾಗಲಾರದು ಎಲ್ಲೆಲ್ಲ ಸ್ವವ್ಯಾಪಾರತ್ಯಾಗವಿರಬೇಕೋ ಅಲ್ಲಲ್ಲಿ ರಕ್ಷಾಭರನ್ಯಾಸವಿದ್ದೇ ಇರಬೇಕು ಎಂದು ವ್ಯಾಪ್ತಿಯನ್ನೂ ಹೇಳಬಹುದು ಆದುದರಿಂದ ಶ್ರೀರಾಮಮಿಶ್ರಾದಿಗಳು ಪ್ರಪತ್ತಿಲಕ್ಷಣವನ್ನುಪದೇಶಿಸಿದುದು ಆತ್ಮರಕ್ಷಾ ಭರನ್ಯಾಸಾಭಿಪ್ರಾಯಕ್ಕೆ ವಿರೋಧವಿಲ್ಲದೆ ಆ ಅಭಿಪ್ರಾಯವನ್ನೇ ಚನ್ನಾಗಿ ಸಮರ್ಥಿಸಿ ಹೇಳಿದರೆಂಬ ಭಾವವು ಭರನ್ಯಾಸವನ್ನು ಮಾಡದೆ ರಕ್ಷಾಪೇಕ್ಷೆಯನ್ನು ಮಾಡಿದರೆ ಸ್ವಪ್ರವೃತ್ತಿ ನಿವೃತ್ತಿಯು ಎಂದಿಗೂ ಸಿದ್ಧಿಸದು ಒಂದು ಅಮೋಘಾಭರಣವನ್ನು ರಕ್ಷಿಸುವ ಶಕ್ತಿಯಿಲ್ಲದವನು ಆಭರಣವನ್ನು ತನ್ನಲ್ಲಿಯೇ ಇಟ್ಟುಕೊಂಡು ಇನ್ನೊಬ್ಬ ಶಕ್ತನನ್ನು ಕಾಪಾಡು ಎಂದು ಪ್ರಾರ್ಥಿಸುವವರಿಂದ ತನ್ನ ಮನೋರಥವೂ ಸಿದ್ಧಿಸದು, ಮತ್ತು ಆಭರಣವು ತನ್ನಲ್ಲಿಯೇ ಇರುವದರಿಂದ ಸ್ವಪ್ರವೃತ್ತಿನಿವೃತ್ತಿಯೂ ಸಿದ್ಧಿಸದ. ಶಕ್ತನು ಅದನ್ನು ಕಾಪಾಡಬೇಕಾದರೆ ಆಭರಣವನ್ನು ಅವನಲ್ಲಿ ಸಮರ್ಪಿಸಿಬಿಟ್ಟು ರಕ್ಷಾಭರವನ್ನೂ ಅವನಲ್ಲಿಡತಕ್ಕದ್ದು. ಶ್ರೀರಾಮಮಿಶ್ರಾದಿಗಳು ಹೇಳಿದುದು ಸ್ವಪ್ರವೃತ್ತಿ ನಿವೃತ್ತಿಯೇ ಪ್ರಪತ್ತಿ ಎಂದು; ಇಲ್ಲಿ ಕಾರಿಕೆಯಲ್ಲಾದರೋ ಸ್ವಪ್ರವೃತ್ತಿ ನಿವೃತ್ತ್ಯಂಶಃ ಪ್ರಪತ್ತಿಃ ಎಂದು ; ಹೀಗೆ ಹೇಳಿರುವದರಭಿಪ್ರಾಯವು, ಪ್ರಪತ್ತ್ಯುತ್ತರಕಾಲದಲ್ಲಿ ಯಾವದೊಂದು ತದ್ವಿಷಯಿಕ ಪ್ರವೃತ್ತಿಯೂ ಬೇಡವೆಂದು ಸೂಚಿಸುತ್ತದೆ ಆದೀಗ ಅವರುಗಳ ತಾತ್ಪರ್ಯವೆಂಬ ಭಾವವು ಈ ಶ್ಲೋಕದಲ್ಲಿ ಹೇಳಿರುವ ಶ್ರೀ ರಾಮಮಿಶ್ರರು ಯಾರು ಎಂಬುದರಲ್ಲಿ ಶ್ರೀ ಶೆಟ್ಟಲೂರು ನರಸಿಂಹಾಚಾರ್ಯರವರು ಉಯ್ಯಕೊಂಡಾರರು ಎಂದು ಬರೆದಿರುತ್ತಾರೆ. ಉಯ್ಯಕೊಂಡಾರರು ನಾಥಮುನಿಗಳ ಶಿಷ್ಯರು. ಇವರಿಗೆ ಪುಂಡರೀಕಾಕ್ಷರೆಂಬ ಹೆಸರುಂಟು. ಶ್ರೀ ರಾಮ ಮಿಶ್ರರೆಂಬ ಹೆಸರುಂಟೆಂಬುದು ತಿಳಿಯದು. ಸಾರದೀಪಿಕೆ ವ್ಯಾಖ್ಯಾತೃವು ಶೋಮಾಶಿಯಾಂಡಾರ್ ಎಂದು ಬರೆದಿರುತ್ತಾರೆ. ಇದೀಗ ಸರಿಯಾದ ಅಭಿಪ್ರಾಯವಾಗಿ ತೋರುತ್ತದೆ ಯಾಮುನೇಯರ ಗುರುವಾದ ಮಣಕ್ಕಾಲ್ ನಂಬಿಗೂ ಶ್ರೀರಾಮ ಮಿಶ್ರರೆಂಬ ಹೆಸರುಂಟು.

ಈ ಅಭಿಪ್ರಾಯಗಳು ಮುಂದಿನ ಕಾರಿಕೆಯಲ್ಲಿ ಸ್ಫುಟವಾಗಿ ಉಪಪಾದಿಸಲ್ಪಡುತ್ತವೆ. ರಕ್ಷಾಪೇಕ್ಷೆಯೇ ಸಾಲದೇ? ಭರನ್ಯಾಸವು ಹೇಗೆ ಆವಶ್ಯಕವು? ಎಂಬುದು ಕೆಲವರ ಆಕ್ಷೇಪವು ರಕ್ಷಾಪೇಕ್ಷೆಯನ್ನು ಯಾಚಿಸಿದನಂತರ, ಸ್ವಪ್ರ

## ಭರನ್ಯಾಸಸ್ಯ ಆವಶ್ಯಕತ್ವಂ

ಅಕೃತೇತು ಭರನ್ಯಾಸೇ ರಕ್ಷಾಪೇಕ್ಷಣ ಮಾತ್ರತಃ ।
ಪಶ್ಚಾತ್ಸ್ವಯತ್ನ ವಿರತಿರ್ನಪ್ರಸಿಧ್ಯತಿ ಲೋಕವತ್ ॥೪೯॥

ವೃತ್ತಿ ನಿವೃತ್ತಿಯುಂಟಾಗಬೇಕೆಂದೂ ಅದೇ ಪ್ರಪತ್ತಿಎಂದೂ ಪೂರ್ವಾಚಾರ್ಯರುಗಳು ಹೇಳಿದರು. ಇದು ಆತ್ಮಾತ್ತೀಯ ಭರನ್ಯಾಸವಿಲ್ಲದೆ ಉಂಟಾಗದೆಂದು ಮುಂದಿನ ಕಾರಿಕೆಯಿಂದ ಉಪದೇಶಿಸುತ್ತಾರೆ.

### ಭರನ್ಯಾಸದ ಆವಶ್ಯಕತೆಯು.

ಅರ್ಥ:—ಭರನ್ಯಾಸೇ - ಭರನ್ಯಾಸವು, ಅಕೃತೇತು - ಮಾಡಲ್ಪಡದೇ ಇರಲಾಗಿ, ಇಲ್ಲಿ ತು ಶಬ್ದವು ಶಜ್ಕಾವನ್ನು ವ್ಯಾವರ್ತಿಸುತ್ತದೆ; ಇಲ್ಲಿ ಶಜ್ಕಾ ಯಾವುದೆಂದರೆ ಭರನ್ಯಾಸವಿಲ್ಲದೆ ಸ್ವಪ್ರಯತ್ನ ನಿವೃತ್ತಿರೂಪವಾದ ನಿರ್ಭರತ್ವವು ಉಂಟಾಗುವದಿಲ್ಲವೆಂದು ಹೇಳಲ್ಪಟ್ಟಿತು; ಹಾಗಾದರೆ ಹೇಗೆ ಭರನ್ಯಾಸವಿಲ್ಲದೆ ಬರೀ ರಕ್ಷಾಪೇಕ್ಷಣಮಾತ್ರದಿಂದ ಸ್ವಪ್ರಯತ್ನ ನಿವೃತ್ತಿಯುಂಟಾಗುತ್ತದೆ? ಎಂಬುದು ಶಜ್ಕಾ; ಈ ಶಜ್ಕಾವ್ಯಾವೃತ್ತಿಯು ಇಲ್ಲಿ ಹೇಳಲ್ಪಡುತ್ತದೆ, ಭರನ್ಯಾಸವು ಮಾಡಲ್ಪಡದೇ ಹೋದರೆ, ರಕ್ಷಾಪೇಕ್ಷಣ ಮಾತ್ರತಃ-ರಕ್ಷಾಪೇಕ್ಷೆಯನ್ನು ಮಾಡುವದರ ಮಾತ್ರದಿಂದಲೇ, ಸ್ವಯತ್ನವಿರತಿಃ - ಸ್ವಪ್ರಯತ್ನದಿಂದ ನಿವೃತ್ತಿಯು, ನ ಪ್ರಸಿಧ್ಯತಿ - ಸಿದ್ಧಿಸುವದಿಲ್ಲವು; ಹೇಗೆಂದರೆ ಹೇಳುತ್ತಾರೆ, ಲೋಕವತ್ - ಲೋಕದೃಷ್ಟಾಂತದಲ್ಲಿ ಹೇಗೋ ಹಾಗಯೇ ಈ ಸಂದರ್ಭದಲ್ಲೂ ಎಂಬ ಭಾವವು. ಒಬ್ಬನು ತನ್ನ ಧನವನ್ನು ಈ ಅಪತ್ಕಾಲದಲ್ಲಿ ತನ್ನ ಆಪೇಕ್ಷೆಯಿಲ್ಲದೇನೆ ನೀನೇ ರಕ್ಷಿಸತಕ್ಕದ್ದೆಂದು ಪ್ರಾರ್ಥಿಸಿ ತನ್ನ ಧನವನ್ನು ಒಬ್ಬ ಸಮರ್ಥನಲ್ಲಿಟ್ಟು ಬಿಟ್ಟರೆ ತಾನು ನಿರ್ಭರನಾಗಿ ಆ ಧನದ ರಕ್ಷಣೆಯಲ್ಲಿ ಏನೊಂದೂ ಪ್ರವರ್ತಿಸದೆ ನಿಶ್ಚಿಂತೆಯಿಂದ ಇರಬಹುದು. ಆದರೆ ಹಾಗೆಮಾಡದೆ ಧನವನ್ನು ತನ್ನಲ್ಲಿಯೇ ಇಟ್ಟುಕೊಂಡು ಅದನ್ನು ರಕ್ಷಿಸು ಎಂಬ ಪ್ರಾರ್ಥನೆಮಾತ್ರದಿಂದ, ಸ್ವಪ್ರವೃತ್ತಿನಿವೃತ್ತಿರೂಪ ನಿರ್ಭರತ್ವವುಂಟಾಗಲಾರದು. ಯಾವಾಗ ಕಳ್ಳರು ಬಂದು ಕದ್ದೊಯ್ವರೋ ಎಂಬ ಭೀತಿಯೂ ಚಿಂತೆಯೂ, ಅದಕ್ಕಾಗಿ ಪ್ರವೃತ್ತಿಯೂ ತಪ್ಪಿದ್ದಲ್ಲವು,

೧ ಆದುದರಿಂದ ಶ್ರೀ ರಾಮಮಿಶ್ರರ ಸ್ವಪ್ರವೃತ್ತಿ ನಿವೃತ್ತಿಯೇ ಪ್ರಪತ್ತಿಯು, ಎಂದು ಹೇಳಿದ ಲಕ್ಷಣವಾಕ್ಯದ ತಾತ್ಪರ್ಯವೇನೆಂದರೆ :—ಆತ್ಮರಕ್ಷಾ

ಭರವು, ಓ ಕೃಪಾಸಾಗರನೇ ನಿನ್ನದೇ ವಿನಾ ನನಗೆ ಅದರಲ್ಲಿ ಸ್ವಲ್ಪವೂ ಸಂಬಂಧ ವಿಲ್ಲವು ಎಂದು ಹೇಳಿ ಭರನ್ಯಾಸವನ್ನು ಮಾಡಿದರೆ, ಅನಂತರ ಅದರಿಂದ ಸ್ವಪ್ರವೃತ್ತಿಯು ನಿವೃತ್ತಿಯುಂಟಾಗಿ ತನಗೆ ಆಕಿಂಚನ್ಯವು ಪ್ರಾಪ್ತವಾಗುತ್ತದೆಂಬ ತಾತ್ಪರ್ಯವು.

೨. ಹಾಗೆಯೇ ಭರತಮುನಿಗಳ ಲಕ್ಷಣವಾಕ್ಯವಾದ

**ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಕಂ ।**

**ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ॥** ಎಂಬುದರ ತಾತ್ಪರ್ಯವೇನೆಂದರೆ, ಗೋಪ್ತೃತ್ವ ವರಣರೂಪವಾದ ಅಙ್ಗವಿಲ್ಲದೆ ಸಮರ್ಪಿಸಿದ ಭರನ್ಯಾಸವನ್ನು ಅಙ್ಗೀಕರಿಸುವದಿಲ್ಲವಾದುದರಿಂದ, ಈ ಆವಶ್ಯಕವಾದ ಅಙ್ಗವಾಗಿರುವ ಉಪಾಯತ್ವ ಪ್ರಾರ್ಥನೆಯಿಂದ ಭರಸ್ವೀಕಾರ ಸಿದ್ಧಿಯುಂಟಾಗುತ್ತದೆ ಎಂಬುದು (೧೦೫ಳ ನೆಯ ಪುಟನೋಡಿ)

೩. ಹಾಗೆಯೇ ಲಕ್ಷ್ಮೀತಂತ್ರದ ಲಕ್ಷಣವಾಕ್ಯವಾದ "**ಆತ್ಮಾತ್ಮೀಯ ಭರನ್ಯಾಸೋ ಹ್ಯಾತ್ಮನಿಕ್ಷೇಪ ಉಚ್ಯತೇ**" ಆತ್ಮ ಭರನ್ಯಾಸವೂ ಮತ್ತು ಉಪಾಯ ಫಲಾದಿಗಳ ಭರನ್ಯಾಸವೂ, ಆತ್ಮ ನಿಕ್ಷೇಪರೂಪ ಅಙ್ಗಿ ಎಂದು ಹೇಳಿಸಿಕೊಳ್ಳುತ್ತದೆ. ಹೀಗೆಯೇ ಅಹಿರ್ಬುಧ್ನ್ಯ ಸಂಹಿತೆ, ಸಾತ್ವಕಿತಂತ್ರ ಮೊದಲಾದ ಬಹು ಪ್ರಮಾಣಗಳು ಭರನ್ಯಾಸವೇ ಲಕ್ಷಣವಾಗಿ ಹೇಳುತ್ತವೆ. ಆದುದರಿಂದ ಇದೇ ಅಙ್ಗಿ ಎಂದು ಭಾವಿಸಿ, ಇದಕ್ಕೆ ವಿರೋಧವಿಲ್ಲದೆ ಇತರ ಲಕ್ಷಣ ವಾಕ್ಯಗಳನ್ನು ಅನ್ವಯಿಸತಕ್ಕದ್ದು ನ್ಯಾಯವೆಂಬ ಭಾವವು. ಈ "ಆತ್ಮಾತ್ಮೀಯ ಭರನ್ಯಾಸಃ" ಎಂಬುದಕ್ಕೆ ತನ್ನ ಮತ್ತು ತನಗೆ ಸೇರಿದವರ ರಕ್ಷಾಭರವೆಂದು ೧೦೬೩ ನೆಯ ಪುಟದಲ್ಲಿ ಬರೆದಿರುತ್ತದೆ. ಸ್ವಾಮಿ ನಿಗಮಾಂತ ದೇಶಿಕರ ನ್ಯಾಸವಿಂಶತಿಯ ೧೪ ನೆಯ ಶ್ಲೋಕ ವ್ಯಾಖ್ಯಾನದಲ್ಲಿ ಆತ್ಮೀಯ ಎಂಬುದಕ್ಕೆ ಉಪಾಯಫಲಾದಿ ಎಂದು ವ್ಯಾಖ್ಯಾನ ಮಾಡಿರುವದರಿಂದ ಆತ್ಮಭರವೇನು ಆತ್ಮೀಯವಾದ ಉಪಾಯ ಫಲಗಳೇನು ಇವುಗಳ ಭರನ್ಯಾಸವೆಂದು ಅರ್ಥಮಾಡುವದೂ ಸರಿಯಾದುದರಿಂದ ಇವೂ ಕೂಡ ಅಲ್ಲಿಯೂ ಅಂತರ್ಗತವು ಇದು ಯಥಾಶ್ರುತ ಭರನ್ಯಾಸ ಪರವಾದ ವಾಕ್ಯವು ಈ ಮೂರು ಲಕ್ಷಣವಾಕ್ಯಗಳಿಗೂ ಅರ್ಥಹೇಳಿ ಸಮನ್ವಯಮಾಡಿ ಪರಸ್ಪರ ವಿರೋಧವಿಲ್ಲವೆಂದು ತೋರಿಸುವದೇ ಮುಖ್ಯವು. ಮೂರನೆಯದರಲ್ಲಿ ಅಙ್ಗಿಯು ಸಾಕ್ಷಾತ್ತಾಗಿ ಹೇಳಲ್ಪಟ್ಟಿತು. ಮೊದಲನೆಯದರಲ್ಲಿ ಸ್ವಪ್ರವೃತ್ತಿ ನಿವೃತ್ತಿಗೂ ಭರನ್ಯಾಸಕ್ಕೂ ವ್ಯಾಪ್ಯ ವ್ಯಾಪಕ ಭಾವರೂಪದಲ್ಲಿ ಅಙ್ಗಾಙ್ಗಿಭಾವವಿರುವದರಿಂದ ಅಭೇದವು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಎಲ್ಲಿ ಭರನ್ಯಾಸವಿದೆಯೋ ಅಲ್ಲಿ ಸ್ವಪ್ರವೃತ್ತಿ ನಿವೃತ್ತಿಯುಂಟು. ಎಲ್ಲಿ ಭರನ್ಯಾಸವಿಲ್ಲವೋ, ಅಲ್ಲಿ ಸ್ವಪ್ರವೃತ್ತಿ ನಿವೃತ್ತಿ

## ಪ್ರಪತ್ತಿ ಲಕ್ಷಣ ವಾಕ್ಯಾನಾಂ ಐಕಕಂಠ್ಯಂ ಸಿದ್ಧಮ್

**ಆಕಿಂಚನ್ಯ ಭರನ್ಯಾಸೋಪಾಯತ್ವ ಪ್ರಾರ್ಥನಾತ್ಮನಾಂ।**
**ತ್ರಯಾಣಾಂ ಸೌಹೃದಂ ಸೂಕ್ಷ್ಮಂ ಯಃ ಪಶ್ಯತಿ ಸ ಪಶ್ಯತಿ॥೪೦॥**

---

ಯಿರುವವಿಲ್ಲವೆಂದು ಎರಡಕ್ಕೂ ಸಾಮಂಜಸ್ಯವನ್ನು ಹೇಳತಕ್ಕದ್ದು. ಮತ್ತು ಎರಡನೆಯದರಲ್ಲಿ ಉಪಾಯತ್ವ ಪ್ರಾರ್ಥನೆಗೂ ಭರನ್ಯಾಸಕ್ಕೂ ಜನ್ಯ ಜನಕಭಾವವಿರುವದರಿಂದ ಅಙ್ಗಾಙ್ಗಿ ಭಾವದಿಂದ ಎರಡಕ್ಕು ಅಭೇದ ಹೇಳಲ್ಪಟ್ಟಿತೆಂದು ಭಾವಿಸುವದರಿಂದ ಸಾಮಂಜಸ್ಯವುಂಟಾಗುತ್ತದೆ.

ಹೀಗೆ ಈ ಮೂರು ಲಕ್ಷಣವಾಕ್ಯಗಳು ಪರಸ್ಪರ ವಿರುದ್ಧವಾದವಲ್ಲವು, ಮೂರೂ ಐಕಕಂಠ್ಯದಿಂದ ಭರನ್ಯಾಸನೇ ಅಙ್ಗಿ ಎಂದು ಸ್ಥಾಪಿಸುತ್ತವೆಂದು ತಿಳಿಸುವದಕ್ಕಾಗಿ, ಮುಂದಿನ ಕಾರಿಕೆಯನ್ನು ಅನುಗ್ರಹಿಸುತ್ತಾರೆ. ಹೀಗೆ ಮೂರು ವಾಕ್ಯಗಳ ತಾತ್ಪರ್ಯಗಳನ್ನು ಚನ್ನಾಗಿ ವಿಮರ್ಶಿಸಿ ತಿಳಿದು ಐಕಕಂಠ್ಯವನ್ನು ಸ್ಥಾಪಿಸುವನೇ ಜ್ಞಾತಾ ಎಂದು ಹೇಳುತ್ತಾರೆ.

### ಈ ಮೂರುವಿಧ ಪ್ರಪತ್ತಿ ಲಕ್ಷಣವಾಕ್ಯಗಳಿಗೂ ಐಕಕಂಠ್ಯವು ಸಿದ್ಧವು

**ಆಕಿಂಚನ್ಯಭರನ್ಯಾಸೋಪಾಯತ್ವ ಪ್ರಾರ್ಥನಾತ್ಮನಾಂ** – ಶ್ರೀರಾಮ ಮಿಶ್ರರ ವಾಕ್ಯದಲ್ಲಿ ತೋರುವ ಆಕಿಂಚನ್ಯವೇನು, ಲಕ್ಷ್ಮೀತಂತ್ರವಾಕ್ಯದಲ್ಲಿ ಹೇಳಲ್ಪಟ್ಟ ಭರನ್ಯಾಸವೇನು, ಭರತಮುನಿಯ ವಾಕ್ಯದಲ್ಲಿ ತೋರುವ ಉಪಾಯ. ಪ್ರಾರ್ಥನೆ ಏನು, ಈ ರೂಪಗಳಾಗಿರುವ, **ತ್ರಯಾಣಾಂ** - ಮೂರಕ್ಕೂ ಸಹ, **ಸೂಕ್ಷ್ಮಂ** - ಮಂದಮತಿಗಳಿಗೆ ತೋರಲು ಅಸಾಧ್ಯವಾದ, **ಸೌಹೃದಂ** - ಪರಸ್ಪರ ಐಕಕಂಠ್ಯರೂಪ ಮೈತ್ರಿಯನ್ನು, **ಯಃ** - ಯಾವನು, **ಪಶ್ಯತಿ** – ತಿಳಿಯುತ್ತಾನೋ, **ಸಃ** - ಅವನೇ, **ಪಶ್ಯತಿ** - ಸರಿಯಾದರ್ಥವನ್ನು ಗ್ರಹಿಸಿದ ಬುದ್ಧಿವಂತನು **ಆಕಿಂಚನ್ಯ** ವೆಂದರೆ ಸ್ವರಕ್ಷಣಾರ್ಥವಾಗಿ ಉಪಾಯಾಂತರದಲ್ಲಿ ಪ್ರವೃತ್ತಿಯಿಲ್ಲವೇ ಎಂಬದಾಗಿ ತನ್ನ ಅಶಕ್ತಿ ಪ್ರದರ್ಶನವು; **ಭರನ್ಯಾಸ**ವೆಂದರೆ ಸ್ವರಕ್ಷಣಾರ್ಥವಾಗಿ ಉಪಾಯಾಂತರದಲ್ಲಿ ಪ್ರವೃತ್ತಿಗೆ ತಾನು ಅಶಕ್ತನಾದೆನೇ ಎಂದು ಸ್ವರಕ್ಷಾಭರವನ್ನು ಶಕ್ತನಲ್ಲಿ ಸಮರ್ಪಿಸುವದು; **ಉಪಾಯತ್ವ ಪ್ರಾರ್ಥನೆ** ಎಂದರೆ ಸ್ವರಕ್ಷಣಾರ್ಥವಾಗಿ ಉಪಾಯಾಂತರದಲ್ಲಿ ಪ್ರವೃತ್ತಿಗೆ ತಾನು ಅಶಕ್ತನಾಗಿದ್ದೇನೆಯಾದುದರಿಂದ ಆ ಉಪಾಯಾಂತರ ಸ್ಥಾನದಲ್ಲಿ ನೀನೇ ನಿಂತು ರಕ್ಷಿಸಬೇಕೆಂಬ ಪ್ರಾರ್ಥನೆಯು; ಹೀಗೆ ಮೂರೂ ಒಂದೇ ಅಭಿಪ್ರಾಯ ಉಳ್ಳವೇ

ವಿನಾ ಬೇರೆ ಬೇರೆಯಲ್ಲವು ; ಆಕಿಂಚನ್ಯ ಪ್ರದರ್ಶನದಲ್ಲೂ ಉಪಾಯ ಪ್ರಾರ್ಥನೆಯಲ್ಲೂ ಅಭಿಪ್ರಾಯಗಳು ಒಂದೇಯಾಗಿ ಇನ್ನೂ ಭರವನ್ನು ಸಮರ್ಪಿಸದೇ ಇರುವ ಸ್ಥಿತಿಯು, ಇಷ್ಟೇ ವ್ಯತ್ಯಾಸವೇ ಬೇರೆ ಯಿಲ್ಲವಾದುದರಿಂದ ಮೂರಕ್ಕೂ ಅಭಿಪ್ರಾಯದಲ್ಲಿ ವ್ಯತ್ಯಾಸವೇನೂ ಇಲ್ಲವು. ಇವೆರಡರೊಂದಿಗೂ ಭರಸಮರ್ಪಣ ವಾವಶ್ಯಕವಾಗಿ ಅವುಗಳ ಪ್ರಾಧಾನ್ಯವನ್ನು ತಿಳಿಸುವದಕ್ಕಾಗಿ ಹಾಗೆ ಶ್ರೀ ರಾಮ ಮಿಶ್ರರೂ ಭರತಮುನಿಗಳೂ ಹೇಳಿದರೇ ವಿನಾ ಅನ್ಯಥಾ ಇಲ್ಲವು. ಎಲ್ಲಾ ಒಂದೇ ಅಭಿಪ್ರಾಯಗಳುಳ್ಳವೆಂಬ ಭಾವವು ಆಕಿಂಚನ್ಯವಿದ್ದರೇನೆ ಭರನ್ಯಾಸವು. ಎಲ್ಲಿ ಆಕಿಂಚನ್ಯವಿದೆಯೋ ಅಲ್ಲಿ ಭರನ್ಯಾಸವು, ಆಕಿಂಚನ್ಯವಿಲ್ಲದಿದ್ದರೆ ಭರನ್ಯಾಸವಿಲ್ಲವೆಂದು ತೋರಿಸುವದಕ್ಕಾಗಿ ಹಾಗೆ ಹೇಳಿದರು ಎಂಬ ಭಾವವು. ಭರನ್ಯಾಸ ಪೂರ್ವಕಾಲಿಕ ಸ್ವಪ್ರವೃತ್ತಿ ನಿವೃತ್ತಿ ಎಂದರೆ ಉಪಾಯಾಂತರ ಪ್ರವೃತ್ತಿಗೆ ಅಶಕ್ತನೇ, ಆದುದರಿಂದ ಅದರಿಂದ ತಾನು ನಿವೃತ್ತಿಯನ್ನು ಹೊಂದಿದ್ದೇನೆಂದು ಆಕಿಂಚನ್ಯವನ್ನು ಪ್ರದರ್ಶಿಸಿ, ನೀನೇ ಆ ಸ್ಥಾನದಲ್ಲಿ ನಿಂತು ಅದರ ಫಲವನ್ನುಂಟುಮಾಡತಕ್ಕದ್ದು ಎಂಬ ಭಾವವುಂಟಾಗುತ್ತದೆ. ಸ್ವಪ್ರವೃತ್ತಿ ನಿವೃತ್ತಿಯು ಭರನ್ಯಾಸ ಉತ್ತರಕಾಲಿಕವೆಂದರೆ, ಭರನ್ಯಾಸವನ್ನು ಅಙ್ಗೀಕರಿಸಿದಂತಾಯಿತು; ಆಗ ಸ್ವಪ್ರವೃತ್ತಿ ನಿವೃತ್ತಿ ಎಂದರೆ ಉಪಾಯಾನುಷ್ಠಾನಮಾಡಿ ತಾನು ಕೃತಕೃತ್ಯನಾದುದರಿಂದ ಅದಕ್ಕಾಗಿ ಮುಂದಕ್ಕೆ ಯಾವ ಪ್ರವೃತ್ತಿಯೂ ಯಿಲ್ಲದ ಅವಸ್ಥೆಯೇ ಪ್ರಪತ್ತಿ ನಿವೃತ್ತಿ ಎಂಬುದರ ಅರ್ಥವು

ಭರತಮುನಿಯ ವಾಕ್ಯದಲ್ಲಾದರೆ ಉಪಾಯತ್ವ ಪ್ರಾರ್ಥನೆಯಿಂದಲೇ ಭರನ್ಯಾಸಕಾರ್ಯ ಉಂಟಾಗುವದರಿಂದ ಹಾಗೆ ಹೇಳಲ್ಪಟ್ಟಿತೇ ವಿನಾ, ಗೋಪ್ತೃತ್ವವರಣರೂಪ ಅಙ್ಗಕ್ಕಿಂತಲೂ ಇದು ಬೇರೆಯಾದುದಲ್ಲವು. ಹೀಗೆ ಈ ವಾಕ್ಯಗಳಲ್ಲಡಗಿರುವ ಸೂಕ್ಷ್ಮಾರ್ಥವನ್ನು ಗ್ರಹಿಸಿದವನೇ ಕುಶಲಿಯೇ ವಿನಾ, ಅಙ್ಗಗಳಾದ ಇವುಗಳನ್ನು ಅಙ್ಗಿ ಎಂದು ಭಾವಿಸುವವನು ಕುಶಲಿಯಲ್ಲವೆಂಬ ಭಾವವು.

ಆದುದರಿಂದ ಶ್ರೀ ರಾಮಮಿಶ್ರರ ವಾಕ್ಯಕ್ಕೂ, ಭರತಮುನಿಗಳ ವಾಕ್ಯಕ್ಕೂ ಮತ್ತು ಲಕ್ಷ್ಮೀತಂತ್ರ, ಅಹಿರ್ಬುಧ್ನ್ಯ ಸಂಹಿತಾ ಮೊದಲಾದ ವಾಕ್ಯಗಳಿಗೂ ಅತ್ಯಂತ ಸಾಮಂಜಸ್ಯ ಉಂಟೇ ವಿನಾ ಪರಸ್ಪರವಿರೋಧವಿಲ್ಲವು. ಈ ಸೂಕ್ಷ್ಮವನ್ನು ಎಲ್ಲರೂ ಗ್ರಹಿಸಲಾರರೆಂಬ ಭಾವವು. ಅಂತಹ ಸೂಕ್ಷ್ಮವನ್ನು ಗ್ರಹಿಸಿದವರೇ ಬಲ್ಲವರು ಎಂದು ಯಃ ಪಶ್ಯತಿ ಸ ಪಶ್ಯತಿ ಎಂದು ಹೇಳುತ್ತಾರೆ.

ಈ ಮೂರು ಲಕ್ಷಣವಾಕ್ಯಗಳಿಗೂ ಐಕಕಂಠ್ಯವು ಸಾಙ್ಗ ಪ್ರಪದನಾಧಿಕಾರದ ಆದಿ ಶ್ಲೋಕದಲ್ಲಿ ಸಹ ವ್ಯಕ್ತವು. ಹೇಗೆಂದರೆ ಭರನ್ಯಾಸಂ ಯಾಚ್ಞಾನ್ವಿತ ಮಭಿವದನ್ತಿ ಪ್ರಪದನಂ ಎಂದು ಯಾಚ್ಞಾಯೊಂದಿಗೆ ಭರನ್ಯಾಸವು ಸೇರಿರುವದರಿಂದ

## ಅಥ ಪ್ರಪತ್ತಿ ಸ್ವರೂಪಂ ನಿಗಮಯತಿ

**ಇಪ್ಪಡಿ ಅಙ್ಗ ಪಞ್ಚಕ ಸಂಪನ್ನಮಾನ ಆತ್ಮರಕ್ಷಾ ಭರನ್ಯಾಸಮೇ ಪ್ರಪತ್ತಿ ಶಾಸ್ತ್ರಮೆಲ್ಲಾತ್ತಿಲುಮ್ ಪ್ರಧಾನವಿಧೇಯಮೆನ್ರು ಶ್ರೀ ವಿಷ್ಣುಚಿತ್ತ ವಾದಿಹಂಸಾಂಬುವಾಹ ವರದಾಚಾರ್ಯಾದಿಗಳ್ ಸಙ್ಗ್ರಹಿತ್ತಾರ್‌ಗಳ್.**

---

ಭರತಮುನಿಗಳ "**ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ**" ಎಂಬ ವಾಕ್ಯಕ್ಕೂ ಲಕ್ಷ್ಮೀತಂತ್ರವಾಕ್ಯಕ್ಕೂ ಅಭೇದವು ಏರ್ಪಟ್ಟಿತು. **ಇತಃ ಪಶ್ಚಾದಸ್ಮದ್ಯತ್ನನ ನಿರಪೇಕ್ಷಣ ಭವತಾ ಸಮರ್ಥ್ಯಃ** ಎಂಬ ಮತಿ ವಿಶೇಷವು ಇರುವದರಿಂದ ಶ್ರೀ ರಾಮಮಿಶ್ರರ ವಾಕ್ಯದಲ್ಲಿರುವ ಸ್ವಪ್ರವೃತ್ತಿ ನಿವೃತ್ತಿಗೂ ಲಕ್ಷ್ಮೀತಂತ್ರವಾಕ್ಯಕ್ಕೂ ಅಭೇದವು ಏರ್ಪಟ್ಟಿತು.

### ಪ್ರಪತ್ತಿ ಸ್ವರೂಪವನ್ನು ನಿಗಮನಮಾಡಿ ಹೇಳುತ್ತಾರೆ

**ಇಪ್ಪಡಿ** ಈ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಅಙ್ಗಪಂಚಕ ಸಂಪನ್ನಮಾನ**-ಅಙ್ಗ ಪಞ್ಚಕಗಳಿಂದ ಕೂಡಿದ, **ಆತ್ಮರಕ್ಷಾ ಭರನ್ಯಾಸಮೇ, ಪ್ರಪತ್ತಿ ಶಾಸ್ತ್ರಮೆಲ್ಲಾತ್ತಿಲುಮ್** - ಪ್ರಪತ್ತಿ ಶಾಸ್ತ್ರಗಳೆಲ್ಲಾದರಲ್ಲೂ, **ಪ್ರಧಾನ ವಿಧೇಯಮೆನ್ರು** - ಮುಖ್ಯವಾಗಿ ವಿಧಿಸಿರುವದು ಎಂದು ಶ್ರೀವಿಷ್ಣುಚಿತ್ತರ, ವಾದಿಹಂಸಾಂಬುವಾಹರು, ವರದಾಚಾರ್ಯರೇ ಮೊದಲಾದವರು, **ಸಙ್ಗ್ರಹಿತ್ತಾರ್‌ಗಳ್** - ಪ್ರಪನ್ನ ಪಾರಿಜಾತ ಮೊದಲಾದ ಗ್ರಂಥಗಳಲ್ಲಿ ಸಙ್ಗ್ರಹಿಸಿ ಹೇಳಿದರು. ಇಲ್ಲಿ **ಇಪ್ಪಡಿ** ಎಂದು ಹೇಳಿದುದರಿಂದ ಶಾಸ್ತ್ರ ಮತ್ತು ಸತ್ಸಂಪ್ರದಾಯ ಸಮ್ಮತವಾದುದು ಈಗ ತಾವು ಮಾಡಿರುವ ಪ್ರಪತ್ತಿಸ್ವರೂಪ ನಿರೂಪಣವೆಂಬ ಭಾವವು. ಅಙ್ಗಪಞ್ಚಕ ಸಂಪನ್ನಮಾನ ಆತ್ಮರಕ್ಷಾಭರನ್ಯಾಸವೆಂದು ಹೇಳಿರುವದರಿಂದ ಭರನ್ಯಾಸಕಾಲದಲ್ಲಿ ಅಙ್ಗ ಪಞ್ಚಕಗಳೂ ಇದ್ದರೇನೇ ಭರನ್ಯಾಸ ಸಿದ್ಧಿಯು ಎಂಬುದು ತಿಳಿಸಲ್ಪಟ್ಟಿತು. ಎಲ್ಲೋ ಒಂದು ಪ್ರಮಾಣವನ್ನು ಮನಸ್ಸಿನಲ್ಲಿಟ್ಟು ಹೇಳಿದಭಿಪ್ರಾಯವಲ್ಲವು. ಎಲ್ಲಾ ಪ್ರಪತ್ತಿ ಶಾಸ್ತ್ರಗಳಲ್ಲೂ ಇಂತಹ ಅಙ್ಗಪಞ್ಚಕಯುಕ್ತವಾದ ರಕ್ಷಾಭರನ್ಯಾಸವೇ ಅಙ್ಗಿ ಎಂದು ಹೇಳಲ್ಪಟ್ಟಿರುತ್ತದೆಂದು ಉಪದೇಶಿಸಿರುತ್ತಾರೆ ಆಗಲಿ ಸತ್ಸಂಪ್ರದಾಯ ಸಮ್ಮತಿ ಈ ಅಭಿಪ್ರಾಯಕ್ಕೆ ಉಂಟೋ ಎಂದರೆ ಉಂಟು ಎಂದು ಮೂರು ಮಹನೀಯರುಗಳಾದ ಪೂರ್ವಾಚಾರ್ಯರು ಹಾಗೆಯೇ ಅಪ್ಪಣೆ ಕೊಡಿಸಿರುತ್ತಾರೆಂದು ತಿಳಿಸುತ್ತಾರೆ.

**ಅಥ ಕರ್ತವ್ಯತ್ವ ಶಙ್ಕಾ ಪರಿಹಾರಃ- ಶೇಷತ್ವ ಜ್ಞಾನಮಾತ್ರಂ ನಾಲಮ್.**

**ಇವ್ವಿಡತ್ತಿಲ್ ಶಿಲರ್ ಶಾಸ್ತ್ರಾರ್ಥ ತತ್ತ್ವಮ್ ತೆಳಿನ್ದ ಪೋದೇ ಶೇಷತ್ವಾನು ಸಂಧಾನಮ್ ಪಣ್ಣಿನಾನನ್ರೋ ? (೧) "ಸ್ವೋಜ್ಜೀವನೇಚ್ಛಾ**

---

**ಶ್ರೀ ವಿಷ್ಣುಚಿತ್ತ**ರೆಂಬುವರು ಶ್ರೀ ಭಾಷ್ಯಕಾರರ ಪ್ರಶಿಷ್ಯರು, ಶ್ರೀ ವರದಾಚಾರ್ಯರಿಗೆ (ನಡಾದೂರ್ ಅಮ್ಮಾಳ್‌ರವರಿಗೆ) ಆಚಾರ್ಯರು. ಇದರಿಂದ ಈ ಅಭಿಪ್ರಾಯವು ಶ್ರೀ ಭಾಷ್ಯಕಾರರಿಗೂ ಸಮ್ಮತವಾಗಿ ಪರಂಪರಯಾ ಬಂದುದೆಂದೂ ಊಹಿಸಬಹುದು. **ಶ್ರೀವಾದಿ ಹಂಸಾಂಬುವಾಹರು** ಶ್ರೀ ನಿಗಮಾಂತ ದೇಶಿಕರಿಗೆ ಸೋದರಮಾವಂದಿರು ಮತ್ತು ಆಚಾರ್ಯರು, ಇವರು ನಡದೂರ್ ಅಮ್ಮಾಳ್‌ರವರ ಶಿಷ್ಯರು. **ವರದಾಚಾರ್ಯ**ರಿಗೆ ನಡದೂರ್ ಅಮ್ಮಾಳ್ ಎಂದು ಅಪರನಾಮಧೇಯವು. ಶ್ರೀ ನಿಗಮಾಂತದೇಶಿಕರಿಗೆ ಪ್ರಾಚಾರ್ಯರು. ಇಲ್ಲಿ **ಆದಿ** ಪದದಿಂದ ಪರಾಶರ ಭಟ್ಟರು ಸುದರ್ಶನಾಚಾರ್ಯರು ಮೊದಲಾದವರು ಹೇಳಲ್ಪಟ್ಟರು. ಆಜ್ಞೆಯಾವುದು, ಅದರ ಸಮರ್ಪಣವನ್ನು ಹೇಗೆ ಮಾಡತಕ್ಕದೆಂಬುದನ್ನು ಸ್ವಾಮಿ ದೇಶಿಕರವರು ನ್ಯಾಸದಶಕದಲ್ಲಿ ಸ್ಫುಟವಾಗಿ ತಿಳಿಸಿರುತ್ತಾರೆ.

**ಮುಂದೆ ಕರ್ತವ್ಯಾಂಶದಲ್ಲಿನ ಶಙ್ಕಾ ಪರಿಹಾರವು, ಶೇಷತ್ವ ಜ್ಞಾನಮಾತ್ರ ಪ್ರಪತ್ತಿಯಲ್ಲವು.**

ಮುಂದೆ ಶೇಷತ್ವಜ್ಞಾನ ಮಾತ್ರವೇ ಪ್ರಪತ್ತಿಯು, ಇಷ್ಟುಮಾತ್ರವಿದ್ದರೆ ಸಾಕು, ಬೇರೆ ಯಾವ ಅನುಷ್ಠಾನವೂ ಬೇಕಾಗಿಲ್ಲವೆಂಬ ಕೆಲವರ ಮತವನ್ನು ಪೂರ್ವಪಕ್ಷರೂಪದಲ್ಲಿ ಅನುವಾದಮಾಡಿ ಹೇಳಿ, ಆ ಅಭಿಪ್ರಾಯವು ಸರಿಯಲ್ಲವೆಂದು ಉಪದೇಶಿಸುತ್ತಾರೆ. **ಇವ್ವಿಡತ್ತಿಲ್** - ಪ್ರಪತ್ತಿ ಸ್ವರೂಪವನ್ನು ನಿರ್ಧರಿಸುವ ಸಂದರ್ಭದಲ್ಲಿ, **ಶಿಲರ್** – ಕೆಲವರು. ಇದಕ್ಕೆ ಕ್ರಿಯಾಪದವು **ಶೊಲ್ಲುವರ್ಗಳ್** ಎಂದು ಮುಂದೆ ಇದೆ. ಏನನ್ನು ಹೇಳುತ್ತಾರ ಎಂದರೆ ತಿಳಿಸುತ್ತಾರೆ:— "**ಶಾಸ್ತ್ರಾರ್ಥ ತತ್ತ್ವಮ್ ತೆಳಿನ್ದಪೋದೆ** - ಶಾಸ್ತ್ರಾರ್ಥದ ಯಾಥಾತ್ಮ್ಯವು ತಿಳಿದಾಗಲೇ, **ಶೇಷಿತ್ವಾನುಸಂಧಾನಂ** - ಸರ್ವೇಶ್ವರನು ಶೇಷಿಯು ತಾನು ಅವನಿಗೆ ಶೇಷನು ಎಂದು ಅನುಸಂಧಾನವನ್ನು, **ಪಣ್ಣಿನಾನನ್ರೋ** - ಮಾಡಿದವಲ್ಲವೋ ಎಂದರೆ ಮಾಡಿದರೆ ಸಾಲದೋ ? ಮುಂದೆ **ಪೂರ್ವಪಕ್ಷಿ**ಯು ಉದಾ

---

(೧) ವಿಷ್ಣು ತತ್ವ.

**ಯದಿ ತೇ ಸ್ವಸತ್ತಾಯಾಂ ಸ್ಪೃಹಾಯದಿ। ಆತ್ಮದಾಸ್ಯಂ ಹರೇ ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ" ಎನ್ರದುವುಮ್ ಪರಮ ಪುರುಷಾರ್ಥ ತದುಪಾಯಙ್ಗಳೈ ವೇಣ್ಡಿಯಿರುನ್ದಾಯಾಗಿಲ್ ನೀ ದಾಸನಾಯ್ ಈಶ್ವರನ್ ಸ್ವಾಮಿಯಾಯ್ ಇರುಕ್ಕಿರದು ಸ್ವಭಾವ ಸಿದ್ಧಮೆನ್ರು ತತ್ವತ್ತಿಲ್ ತ್ತೆಳಿವ್ರೋಡೆ ವರ್ತಿ ಯೆನ್ರು ಪಡಿಯನ್ರೋ? ಅನಾಲಿಪ್ಪೋದು ಆತ್ಮ ಸಮರ್ಪಣ ಮೆನ್ರೊರು ವಿಧೇಯ ಮುಂಡೋವೆನ್ರು ಶೊಲ್ಲುವರ್‌ಗಳ್.**

---

ಹಗಿಸಬಹುದಾದ ಪ್ರಮಾಣವನ್ನು ಹೇಳಿ ಅದಕ್ಕೆ ಅವರುಗಳು ಹೇಳಬಹುದಾದ ಅರ್ಥವನ್ನು ಅನುವದಿಸುತ್ತಾರೆ. **ತೇ** - ನಿನಗೆ, **ಸ್ವೋಜ್ಜೀವನೇಚ್ಛಾ ಯದಿ** ಚೆನ್ನಾಗಿ ಉತ್ಕೃಷ್ಟ ದೆಶೆಯಲ್ಲಿ ಬಾಳಬೇಕೆಂಬ ಆಪೇಕ್ಷೆಯಿದ್ದುದಾದರೆ, ಪರಮ ಪುರುಷಾರ್ಥವನ್ನು ಹೊಂದಬೇಕೆಂಬ ಅಪೇಕ್ಷೆ ಇದ್ದುದಾದರೆ ಅವಕ್ಕಾಗಿ, **ಸ್ವಸತ್ತಾಯಾಂ ಸ್ಪೃಹಾ ಯದಿ** - ಬ್ರಹ್ಮಜ್ಞಾನದಿಂದ ನೀನು ಸತ್ತೆಯನ್ನು ಹೊಂದಬೇಕೆಂಬ ಆಶೆಯಿದ್ದರೆ, ಅದನ್ನು ಹೊಂದಲು ಮಾಡಬೇಕಾದ ಉಪಾಯ ದಲ್ಲಿ ಆಶೆಯಿದ್ದರೆ ಎಂಬರ್ಥವು, **ಆತ್ಮದಾಸ್ಯಂ** - ನೀನು ಪರಮಾತ್ಮನಿಗೆ ದಾಸನಾಗಿರುವದನ್ನೂ, **ಹರೇಸ್ವಾಮ್ಯಂ ಚ** - ಶ್ರೀಹರಿಯು ಸ್ವಾಮಿಯಾಗಿರುವನು ಎಂಬ ಭಾವವನ್ನೂ, ಸಹ, **ಸ್ವಭಾವಂ** - ಇದು ಸ್ವಭಾವಸಿದ್ಧವಾದುದೆಂಬುದನ್ನು **ಸದಾ ಸ್ಮರ** - ಯಾವಾಗಲೂ ಸ್ಮರಿಸು. ಈ ಶ್ಲೋಕಾರ್ಥವನ್ನು ಸ್ವಾಮಿ ದೇಶಿಕರೇ ಮುಂದೆ ಅನುವಾದಮಾಡಿ ಹೇಳುತ್ತಾರೆ, **ಎನ್ರದುವುಮ್** - ಎಂದು ಹೇಳಿರುವದೂ, ಪರಮ ಪುರುಷಾರ್ಥವೇನು, **ತದುಪಾಯಙ್ಗಳೈ** ಅದನ್ನು ಹೊಂದುವ ಉಪಾಯವೇನು, ಇವುಗಳನ್ನು, **ವೇಣ್ಡಿಯಿರುನ್ದಾಯಾಗಿಲ್** - ನೀನು ಅಪೇಕ್ಷಿಸಿದುದಾದರೆ, **ನೀ ದಾಸನಾಯ್** - ನೀನು ದಾಸನಾಗಿ, **ಈಶ್ವರನ್ ಸ್ವಾಮಿಯಾಯ್** - ಈಶ್ವರನು ಸ್ವಾಮಿಯಾಗಿ, **ಇರುಕ್ಕಿರದು** - ಇರುವದು ಸ್ವಭಾವಸಿದ್ಧವಾದುದೆಂದು **ತತ್ವತ್ತಿಲ್ ತೆಳಿವ್ರೋಡೆ** - ಯಥಾರ್ಥಜ್ಞಾನದೊಂದಿಗೆ **ವರ್ತಿ** - ಸದಾ ಇರು, **ಯೆನ್ರುಪಡಿಯನ್ರೋ** - ಎಂದು ಹೇಳಿದಹಾಗಲ್ಲವೋ **ಅನಾಲ್** - ಹೀಗಾದನಂತರ, **ಇಪ್ಪೋತು** - ಈ ಸಂದರ್ಭದಲ್ಲಿ, ಆತ್ಮಸಮರ್ಪಣವೆಂದು, **ಒರುವಿಧೇಯ ಮುಣ್ಡೋ** - ಒಂದು ಅನುಷ್ಠಾನಕ್ರಮ ಉಂಟೋ? **ಎನ್ರು** - ಎಂಬದಾಗಿ **ಶೊಲ್ಲುವರ್‌ಗಳ್** - ಹೇಳುವರು, ಎಂದರೆ ಆಕ್ಷೇಪಿಸುವರು ಎಂಬರ್ಥವು. ಈ ಮೇಲಿನ ಪ್ರಮಾಣಪ್ರಕಾರ ಮುಖ್ಯತತ್ವವೇನು ಎಂದರೆ ಶ್ರೀ ಹರಿಯು ಸಹಜ ಸ್ವಾಮಿಯು, ನಾವು ಆತನಿಗೆ ಸಹಜ ದಾಸ

## ಇದುವುಮ್ ವಾಕ್ಯಜನ್ಯಜ್ಞಾನಮಾತ್ರತ್ತಾಲೇ ಮೋಕ್ಷಮೆನ್ಱಪ್ಪೋಲೇ ಅನಾದರಣೀಯುಮ್

ಭೂತರು, ಈ ಜ್ಞಾನವು ಪರಮ ಪುರುಷಾರ್ಥ ಪ್ರಾಪ್ತಿಗೂ ತದುಪಾಯಕ್ಕೂ ಅತ್ಯಾವಶ್ಯಕವು, ಇವರ ಅನುಸಂಧಾನವು ಯಾವಾಗಲೂ ಇರತಕ್ಕದ್ದು. ಇಷ್ಟು ಮಾತ್ರ ಈ ಪ್ರಮಾಣಾನುಸಾರ ಸಾಲದೇ, ಇನ್ನು ಬೇರೇ ಭರನ್ಯಾಸಾನುಷ್ಠಾನ ವೆಂಬುದು ಯಾವುದು? ಎಂದು ಆಕ್ಷೇಪವು ಇದಕ್ಕೆ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ:—**ಇದುವುಮ್** - ಈ ಅಭಿಪ್ರಾಯರೂಪಾಕ್ಷೇಪವೂ ಸಹ, **ಇದುವುಮ್** ಎಂದಿರುವದರಿಂದ ಮೇಲೆ ಅನುವದಿಸಿದ ಇತರ ಆಕ್ಷೇಪಗಳ ಹಾಗೆ, ಎಂಬ ಭಾವವು; **ವಾಕ್ಯಜನ್ಯ ಜ್ಞಾನಮಾತ್ರತ್ತಾಲೇ ಮೋಕ್ಷಮ್**- ತತ್ತ್ವಮಸಿ" ಇತ್ಯಾದಿ ಉಪನಿಷದ್ವಾಕ್ಯದಿಂದುತ್ಪನ್ನವಾದ ಜ್ಞಾನಮಾತ್ರ ದಿಂದಲೇ ಮೋಕ್ಷವು, **ಎನ್ಱಪ್ಪೋಲೇ** - ಎಂದು ಶಾಂಕರರು ಹೇಳುವಹಾಗೆ, **ಅನಾದರಣೀಯುಮ್**-ಗಮನಿಸಲು ಅರ್ಹವಾದುದಲ್ಲವು. ಸರ್ವೇಶ್ವರನು ಸ್ವಾಮಿ ನಾವು ಅವನಿಗೆ ದಾಸರು ಎಂಬ ಶಾಸ್ತ್ರದಿಂದುಂಟಾಗುವ ಜ್ಞಾನವೇ ಮೋಕ್ಷ ಸಾಧಕವು, ಬೇರೆ ಪ್ರಪತ್ತ್ಯನುಷ್ಠಾನದ ಆವಶ್ಯಕತೆ ಏನು? ಎಂದರೆ ಅದ್ವೈತಿಯ ಸಿದ್ಧಾಂತಕ್ಕೂ ಈ ಅಭಿಪ್ರಾಯಕ್ಕೂ ಏನೂ ವ್ಯತ್ಯಾಸವಿಲ್ಲವೆಂದು ಹೇಳುತ್ತಾರೆ. ಅದ್ವೈತಿಗಳು ತತ್ತ್ವಮಸಿ ಎಂಬ ವಾಕ್ಯಾರ್ಥಜ್ಞಾನದಿಂದಲೇ ಮೋಕ್ಷವೆಂದು ಹೇಳುತ್ತಾರೆ. ಅದರ ಹಾಗೆ, ಶಾಸ್ತ್ರಜನ್ಯವಾದ ಶೇಷತ್ವಜ್ಞಾನದಿಂದಲೇ ಮೋಕ್ಷ ವೆಂದು ಹೇಳಿದಂತಾಗುತ್ತದೆ. ವಾಕ್ಯಜನ್ಯ ಜ್ಞಾನದಿಂದ ಮೋಕ್ಷವೆಂದಿಗೂ ಉಂಟಾಗಲಾರದೆಂದೂ, ಉಪಾಯಾನುಷ್ಠಾನದಿಂದಮಾತ್ರವೇ ಮೋಕ್ಷವೆಂದೂ ಶ್ರೀ ಭಾಷ್ಯಕಾರರು ತೋರಿಸಿರುತ್ತಾರೆ ವಾಕ್ಯಜನ್ಯಜ್ಞಾನದಿಂದಲೇ ಮೋಕ್ಷ ವೆಂದರೆ ಉಪಾಸನ ವಿಧಿಗೆ ವೈಯರ್ಥ್ಯವುಂಟಾಗುತ್ತದೆ; ಹಾಗೆಯೇ ಇಲ್ಲಿಯೂ ಪ್ರಪತ್ತಿಯನ್ನು ವಿಧಿಸುವ ಬಹು ಪ್ರಮಾಣಗಳಿಗೆ ವೈಯರ್ಥ್ಯವುಂಟಾಗುತ್ತದೆ ಎಂಬ ಭಾವವು; ಶೇಷತ್ವಜ್ಞಾನವೇ ಸಾಕು, ಭರನ್ಯಾಸವು ಆವಶ್ಯಕವಲ್ಲವು ಎಂಬ ಅಭಿಪ್ರಾಯವು ಅನಾದರಣೀಯವೆಂದು ಹೇಳಿದರು. ಏತಕ್ಕಾಗಿ ಅನಾದರಣೀಯ ವೆಂದರೆ ತಿಳಿಸುತ್ತಾರೆ:—ಇದೂ ಅಲ್ಲದೆ ಆತ್ಮನಿಕ್ಷೇಪದಲ್ಲೂ ಶೇಷತ್ವಜ್ಞಾನವೂ ಆವಶ್ಯಕವಾದುದರಿಂದ, ಅದಕ್ಕೂ ಶೇಷತ್ವಜ್ಞಾನಕ್ಕೂ ಏನೂ ವ್ಯತ್ಯಾಸವಿಲ್ಲ ವೆಂಬಾಕ್ಷೇಪಕ್ಕೂ ಕೂಡ ಸಮಾಧಾನವನ್ನು ಹೇಳುತ್ತಾರೆ.

## ಪ್ರಪತ್ತಿಃ ಪ್ರಾಯಶ್ಚಿತ್ತರೂಪೇತಿ ವಿಧೇಯಾ

**ಜಿತ ಕೌಸ್ತುಭಚೌರ್ಯಸ್ಯ ಸಮ್ರಾಜ ಸ್ಸರ್ವಪಾಪ್ಮನಾಂ ।**
**ಶಿಷ್ಟಂ ಹ್ಯಾತ್ಮಾಪಹಾರಸ್ಯ ನಿಷ್ಕೃತಿಸ್ಸ್ವಭರಾರ್ಪಣಮ್ ॥೪೧॥**

---

### ಪ್ರಪತ್ತಿಯು ಪ್ರಾಯಶ್ಚಿತ್ತರೂಪವೆಂದು ಶಾಸ್ತ್ರದಲ್ಲಿ ವಿಧಿಸಿರುವದು.

**ಜಿತಕೌಸ್ತುಭಚೌರ್ಯಸ್ಯ** - ಕೌಸ್ತುಭರತ್ನದ ಚೌರ್ಯವು ಯಾವುದಕ್ಕೆ ಜಿತವೋ ಅದು ಎಂದರೆ ಕೌಸ್ತುಭರತ್ನಚೌರ್ಯವು ಆತ್ಮಚೌರ್ಯದಿಂದ ಜಿತವು. ಕೌಸ್ತುಭರತ್ನವು ಭಗವಂತನ ಆಭರಣವು ಅಚೇತನವು; ತತ್ಸ್ಥಾನೀಯನಾಗಿರುವವನು ಚೇತನನಾದ ಜೀವಾತ್ಮನು, ಯಾವಾಗ ಆತ್ಮಚೌರ್ಯಮಾಡಿ ಸ್ವತಂತ್ರಾತ್ಮಭ್ರಾಂತಿಯುಂಟಾಯಿತೋ ಆಗ ಸರ್ವೇಶ್ವರನ ದಿವ್ಯಾಭರಣವಾದ ಕೌಸ್ತುಭರತ್ನಚೌರ್ಯಮಾಡಿದಂತಾಯಿತೆಂಬ ಭಾವವು. ಇಂತಹ ಅತಿಶಯವಾದ ಚೌರ್ಯವೆಂಬ ಭಾವವು, ಜಿತಕೌಸ್ತುಭ ಚೌರ್ಯಸ್ಯ ಎಂಬುದು ಆತ್ಮಾಪಹಾರಸ್ಯವೆಂಬುದಕ್ಕೆ ವಿಶೇಷಣವು, ಆತ್ಮಾಪಹಾರಚೌರ್ಯವು ಇನ್ನೂ ಎಂತಾದ್ದೆಂದರೆ **ಸರ್ವಪಾಪ್ಮನಾಂ ಸಮ್ರಾಜಃ** - ಸರ್ವಪಾಪಗಳಿಗೂ ಈ ಆತ್ಮಾಪಹಾರಚೌರ್ಯವು ಮೂಲಕಾರಣವಾದುದರಿಂದ ಸಮಸ್ತ ಪಾಪಗಳಿಗೂ ರಾಜಾವಾದ, **ಆತ್ಮಾಪಹಾರಸ್ಯ**-ಅಹಂ ನೇ ಎಂಬ ತಿಳುವಳಿಕೆಯಿಂದಮಾಡಿದ ಆತ್ಮಾಪಹಾರಕ್ಕೆ **ನಿಷ್ಕೃತಿಃ**-ಪ್ರಾಯಶ್ಚಿತ್ತವು, **ಸ್ವಭರಾರ್ಪಣಮ್**-ಸ್ವರೂಪ ಫಲಸಮರ್ಪಣಗಳಿಂದ ಸೇರಿದಆತ್ಮರಕ್ಷಾಭರಸಮರ್ಪಣವು ಎಂದು, **ಶಿಷ್ಟಂ ಹಿ**-ಶಾಸ್ತ್ರದಲ್ಲಿ ವಿಧಿಸಿರುತ್ತದೆಯಷ್ಟೇ? "**ಯೋನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ । ಕಿಂ ತೇನ ನಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ**" ಎಂದು ಹೇಳಿರುವದರಿಂದ ಪಾಪಗಳಲ್ಲೆಲ್ಲಾ ತುಂಬಾ ಅತಿಶಯವಾದ ಪಾಪವು. "**ಮಾಮೇಕಂ ಶರಣಂ ವ್ರಜ । ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**" ಇತ್ಯಾದಿ ಅನೇಕ ಪ್ರಮಾಣಗಳಿಂದ ಪ್ರಾಯಶ್ಚಿತ್ತವಾಗಿ ವಿಧಿಸಿರುತ್ತದೆ.

ಅಥವಾ, **ಜಿತಕೌಸ್ತುಭ ಚೌರ್ಯಸ್ಯ** - ಕೌಸ್ತುಭ ಚೌರ್ಯವು ಯಾವ ಪುರುಷನಿಂದ ಜಯಿಸಲ್ಪಟ್ಟಿತೋ ಎಂದರೆ ಕೌಸ್ತುಭಚೌರ್ಯಕ್ಕಿಂತ ಹೆಚ್ಚಾದ ಚೌರ್ಯ ಕೃತ್ಯವನ್ನು ಮಾಡಿದವನಿಗೆ, ಆ ಆತ್ಮಾಪಹಾರಿಗೆ ನಿಷ್ಕೃತಿಯು ಸ್ವಭರಾರ್ಪಣವು ಎಂದೂ ಅರ್ಥಮಾಡಬಹುದು.

ಕೌಸ್ತುಭವೂ ಭಗವಂತನ ಸ್ವತ್ತು. ತತ್ಸಾದೃಶನೀಯ ನಾದ ಆತ್ಮನೂ ಅವನ ಸ್ವತ್ತು. ಆತ್ಮನು ಪರಮಾತ್ಮನಿಗೆ ಸದಾ ಕೈಂಕರ್ಯಪರಾಧಿ ಆನಂದವನ್ನು ಹೊಂದುವನು. ಅಂತವನು ಸ್ವತಂತ್ರನೆಂದು ಭಾವಿಸಿ ಅಹಂ ಮಮ ಎಂದು ಆತ್ಮಾಪಹಾರ ಮಾಡುವವನು,ಕೌಸ್ತುಭ ಚೋರನಿಗಿಂತ ಹೆಚ್ಚು ಪಾತಕಿಯು ಎಂಬರ್ಥವು ಅಂತವನಿಗೆ, **ನಿಷ್ಕೃತಿಃ**-ಪ್ರಾಯಶ್ಚಿತ್ತವು, ಸ್ವಭರಾರ್ಪಣವೆಂದೂ ಅರ್ಥವಾದ ಬಹುದು. ಒಬ್ಬ ರಾಜನ ಆಭರಣವನ್ನು ಅಪಹರಿಸಿ ವೇಶ್ಯಾಸ್ತ್ರೀಗೆ ಕೊಡುವದರಿಂದ ಉಂಟಾದ ನಿಗ್ರಹವು, ಅದನ್ನು ಪುನಃ ಪಡೆದು ರಾಜನಿಗೇನೇ ಸಮರ್ಪಿಸುವದರಿಂದ ನಿಗ್ರಹವು ಹೇಗೆ ತಪ್ಪುತ್ತದೋ, ಮತ್ತು ಅದರೊಂದಿಗೆ ತನ್ನ ರಕ್ಷಾರೂಪ ಸರ್ವ ಭರವನ್ನು ಆತನಲ್ಲೇ ಇಟ್ಟುಬಿಟ್ಟರೆ, ಅಂತಹ ದಾಸನನ್ನು ರಾಜನು ಹೇಗೆ ಕೈಬಿಡದೆ ರಕ್ಷಿಸುತ್ತಾನೋ, ಹಾಗೆಯೇ ಆತ್ಮಸಮರ್ಪಣೆ ಆತ್ಮೀಯ ಸಮರ್ಪಣೆಗಳಿಂದ ಸರ್ವೇಶ್ವರನು ಆತ್ಮಾಪಹಾರಚೌರ್ಯವನ್ನು ಮನ್ನಿಸಿ, ಅಂತಹ ಪ್ರಪನ್ನನನ್ನು ಕೈಬಿಡದೆ ರಕ್ಷಿಸುವನೆಂಬ ಭಾವವು ಸರ್ವೇಶ್ವರನಿಗೆ ತಾನು ದಾಸನು ಎಂಬ ಜ್ಞಾನ ಉಂಟಾದುದರಿಂದಲೇ ಆತನು ತನ್ನನ್ನು ರಕ್ಷಿಸಲಾರನು. ಆತ್ಮಾಪಹಾರ ಚೌರ್ಯಕ್ಕೆ ಇದೀಗ ಪ್ರಾಯಶ್ಚಿತ್ತವೆಂದು ವಿಧಿಸಿರುವದರಿಂದ ಆ ವಿಧಿಗನುಸಾರವಾಗಿ ನಡೆದರೇನೇ ಮನ್ನಿಸುವನು ಮತ್ತು ಅನುಗ್ರಹಿಸುವನು ಸರ್ವೇಶ್ವರನು ಮಹಾ ಕೃಪಾಶಾಲಿ ನಾಯಿತಲ್ಲಾ, ಈ ಪ್ರಾಯಶ್ಚಿತ್ತವನ್ನು ತಾನೇ ಏಕೆ ಎದುರು ನೋಡುವದು ? ಏಕೆ ಮನ್ನಿಸಕೂಡದು ? ಎಂದರೆ ತನಗೆ ವೈಷಮ್ಯಾದಿಗಳ ಸಂಭವವಿಲ್ಲದೆ ಇರುವದಕ್ಕಾಗಿ ವ್ಯಾಜಗಳು ಆವಶ್ಯಕವು ; ತನ್ನ ಕಾನೂನಿಗಳಿಗನುಸಾರವಾಗಿಯಲ್ಲವೇ ರಾಜನೂ ಕೂಡ ಪ್ರವರ್ತಿಸುವನು.

ಹೀಗೆ ಈ ಪ್ರಾಯಶ್ಚಿತ್ತದಿಂದಲೇ ಸರ್ವವೂ ಸಿದ್ಧಿಸುವ ಪಕ್ಷದಲ್ಲಿ, ಶೇಷತ್ವಜ್ಞಾನದಿಂದೇನೂ ಪ್ರಯೋಜನವಿಲ್ಲವೋ ? ಶಾಸ್ತ್ರದಲ್ಲೂ ಮೂಲ ಮಂತ್ರಾದಿಗಳಲ್ಲೂ ಶೇಷತ್ವಜ್ಞಾನಕ್ಕೆ ತುಂಬಾ ಪ್ರಾಧಾನ್ಯವು ತೋರಿಬರುತ್ತದೆಯಲ್ಲಾ ? ಎಂದರೆ ಆ ಶೇಷತ್ವಜ್ಞಾನವು ಭರನ್ಯಾಸಕ್ಕೆ ಪೂರ್ವಭಾವಿಯಾಗಿಯೂ ಅನಂತರವೂ, ಹೇಗೆ ಪ್ರಯೋಜಕವೆಂಬುದನ್ನು ಮುಂದಿನ ಕಾರಿಕೆಯಿಂದ ತಿಳಿಸುತ್ತಾರೆ

**ಶೇಷತ್ವ ಜ್ಞಾನದ ಪ್ರಯೋಜನವು ಹೇಳಲ್ಪಡುತ್ತದೆ**

---

**ಪರಶೇಷತ್ವ ಧೀಮಾತ್ರಮ್**- ತಾನು ಭಗವಂತನಿಗೆ ಶೇಷಭೂತನು ಎಂಬ ಶಾಸ್ತ್ರದಿಂದುಂಟಾಗುವ ಜ್ಞಾನಮಾತ್ರವು, ತಾನು ಭಗವಂತನ ಸ್ವತ್ತಾಗಿ, ಆತನಿಗೆ ದಾಸನಾಗಿ, ಆತನ ಪ್ರಯೋಜನಕ್ಕಾಗಿಯೇ ಎಂಬ, ಭರನ್ಯಾಸವಿಲ್ಲದೆ ಬರೀಶಾಸ್ತ್ರಜ್ಞಾನವು, **ಅಧಿಕಾರವಿಶೇಷಣ(ಕ)ಮ್**- ಭರನ್ಯಾಸಕ್ಕೆ ಅಧಿಕಾರವನ್ನುಂಟುಮಾಡುವಂಥಾದ್ದು. **ಮಾತ್ರಮ್** ಎಂಬ ಪದದಿಂದ ಭರನ್ಯಾಸವಿಲ್ಲದೆ ಬರೀ ಜ್ಞಾನ ಮಾತ್ರ

## ಶೇಷತ್ವ ಜ್ಞಾನಸ್ಯ ಪ್ರಯೋಜನಮಾಹ

**ಪರಶೇಷತ್ವಧೀಮಾತ್ರಮಧಿಕಾರವಿಶೇಷಣ(ಕ)ಮ್ ।**
**ಪಶ್ಚಾದಾತ್ಮಾಪಹಾರಸ್ಯ ನಿರೋಧಾಯ ಚ ಕಲ್ಪತೇ ॥೪೨॥**

ಶೇಷತ್ವಾದಿ ವಿಶಿಷ್ಟಮಾನ ಆತ್ಮ ತತ್ವತ್ತೈ ಶಾಸ್ತ್ರತ್ತಾಲೆ ತೆಳಿನ್ದವನುಕ್ಕು ಅಧಿಕಾರ ವಿಶೇಷತ್ತೋಡುಮ್, ಪರಿಕರ ವಿಶೇಷತ್ತೋಡುಮ್

---

ಎಂಬರ್ಥವು ತೋರಿಬರುತ್ತದೆ ಇದುವರೆಗೂ ತಾನು ಆತನ ಸ್ವತ್ತು, ತಾನು ಆತನಿಗಾಗಿಯೇ ಎಂದು ತಿಳಿಯದೆ ಆತ್ಮಾಪಹಾರ ಕಾರ್ಯವು ಮಾಡಲ್ಪಟ್ಟಿತು, ಈಗ ತಿಳಿದುದರಿಂದ, ಆಕಿಂಚನ್ಯ ಅನನ್ಯಗತಿತ್ವಗಳುಂಟಾಗಿ ಅಧಿಕಾರಿಯಾಗಲು ಅರ್ಹತೆಯುಂಟಾಯಿತೆಂಬ ಭಾವವು. ಹೀಗೆ ಶೇಷತ್ವಜ್ಞಾನವು ಭರನ್ಯಾಸಕ್ಕೆ ಉಪಕಾರಕವು ಉತ್ತರಾರ್ಧದಿಂದ ಆ ಶೇಷತ್ವಜ್ಞಾನವು ಭರನ್ಯಾಸಾನಂತರವೂ ಹೇಗೆ ಉಪಕಾರಕವೆಂಬುವನ್ನು ತಿಳಿಯಪಡಿಸುತ್ತಾರೆ ಪಶ್ಚಾತ್-ಆತ್ಮಾತ್ಮೀಯ ಭರಸಮರ್ಪಣವಾದನಂತರ, ಆತ್ಮಾಪಹಾರಸ್ಯ - ಆತ್ಮಾಪಹಾರರೂಪಚೌರ್ಯದ ಎಂದರೆ ತಾನು ಸ್ವತಂತ್ರನು ಎಂಬಜ್ಞಾನದ, ನಿರೋಧಾಯ - ಪ್ರತಿಬಂಧಕಕ್ಕಾಗಿ, ಕಲ್ಪತೇ ಉಪಯುಕ್ತವಾಗುತ್ತದೆ ಹೀಗೆ ಶೇಷತ್ವಜ್ಞಾನವು ಭರನ್ಯಾಸಪೂರ್ವಕಾಲಿಕವಾಗಿಯೂ ಉತ್ತರ ಕಾಲಿಕವಾಗಿಯೂ ಪ್ರಯೋಜನವುಳ್ಳದು. ಮುಂದಿನ ವಾಕ್ಯದಲ್ಲಿ ಭರನ್ಯಾಸ ಪ್ರಕಾರವನ್ನು ಅನುಮಾನುಷರಾಗಿ ಭರನ್ಯಾಸಕಾಲದಲ್ಲೂ ಸಹ ಶೇಷತ್ವಜ್ಞಾನವು ಆವಶ್ಯಕವೆಂದು ಹೇಳುತ್ತಾರೆ ಹೀಗೆ ಮೋಕ್ಷಾರ್ಥಿಗೆ ಶೇಷತ್ವಜ್ಞಾನವು ಸದಾ ಉಪಯುಕ್ತವಾಗಿದ್ದರೂ ಶೇಷತ್ವಜ್ಞಾನವೇ ಸಾಕು, ಭರನ್ಯಾಸವು ಬೇಕಾಗಿಲ್ಲ ಎಂದು ಹೇಳಲು ಸಾಧ್ಯವಿಲ್ಲವು, ಎಂದು ಹೇಳಿ ಭರನ್ಯಾಸಕ್ರಮವನ್ನು ಸಙ್ಗ್ರಹಿಸುತ್ತಿರುವದರಮೂಲಕ, ಮೇಲಿನ ಎರಡು ಕಾರಿಕೆಗಳ ಅರ್ಥವನ್ನು ತಿಳಿಸುತ್ತಾರೆ; ಶೇಷತ್ವಾದಿ ವಿಶಿಷ್ಟಮಾನ ಆತ್ಮತತ್ತ್ವತ್ತೈ "ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ" ಎಂಬಲ್ಲಿ, ಪ್ರಣವದಲ್ಲೂ ತೋರಿಬರುವ ಶೇಷತ್ವವೇ ಮೊದಲಾದ ವಿಶೇಷಣದಿಂದ ಕೂಡಿದ ಜೀವಾತ್ಮ ತತ್ತ್ವವನ್ನು, ಶಾಸ್ತ್ರತ್ತಾಲೆ ತೆಳಿನ್ದವನುಕ್ಕು - ಇನ್ದ್ರಿಯ ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯುವದು ಸಾಧ್ಯವಲ್ಲವುದರಿಂದ ಶಾಸ್ತ್ರಮೂಲಕವಾಗಿಯೇ ತಿಳಿದವನಿಗೆ, ಅಧಿಕಾರ ವಿಶೇಷತ್ತೋಡುಂ - ಅಧಿಕಾರವಿಶೇಷಣವಾದ ಆಕಿಂಚನ್ಯಾನನ್ಯಗತಿತ್ವಗಳೊಂದಿಗೆ, ಪರಿಕರವಿಶೇಷತ್ತೋಡು-ಆನುಕೂಲ್ಯಾದಿ ಅಙ್ಗಪಞ್ಚಕಗಳೊಂದಿಗೆ, ಫಲ

**ಫಲಸಙ್ಕಲ್ಪ ವಿಶೇಷತ್ತೋಡುಮ್ ಕೂಡಿನ ಶೇಷತ್ವ ಪ್ರತಿಸಂಧಾನ ಗರ್ಭಮಾನ ಸ್ವಾತ್ಮರಕ್ಷಾಭರನ್ಯಾಸಮಿರೆ, ಅನಾದ್ಯಪರಾಧ ಮೂಲ ನಿಗ್ರಹ ನಿವೃತ್ತಿಕ್ಕು ಉಪಾಯಮಾಗ ವಿಧಿಕ್ಕಪ್ಪಡುಗಿರ ಆತ್ಮ ಸಮರ್ಪಣಮ್.**

---

**ಸಙ್ಕಲ್ಪವಿಶೇಷತ್ತೋಡು** - ಆದರಿಂದುಂಟಾಗುವ ಮೋಕ್ಷಫಲಪ್ರಾಪ್ತಿಯೂ ಕೂಡ ಭಗವಂತನಿಗೇ ಎಂಬ ಫಲತ್ಯಾಗ ಸಙ್ಕಲ್ಪದೊಂದಿಗೆ, ಇವುಗಳಿಂದೆಲ್ಲಾ **ಕೂಡಿನ** - ಸೇರಿದ, **ಶೇಷತ್ವಪ್ರತಿಸಂಧಾನ ಗರ್ಭಮಾನ** - ತಾನು ಭಗವಂತನಿಗೆ **ಶೇಷಭೂತನು** ಎಂಬ ಅನುಸಂಧಾನವನ್ನು **ಒಳಗೊಂಡಿರುವ, ಸ್ವರಕ್ಷಾಭರನ್ಯಾಸಮಿರೆ** - ತನ್ನ ಆತ್ಮಫಲ ರಕ್ಷಣಗಳ ಭರಸಮರ್ಪಣೆ ಈಗ, **ಅನಾದ್ಯಪರಾಧಮೂಲ ನಿಗ್ರಹ ನಿವೃತ್ತಿಕ್ಕು** - ಅನೇಕಾಪರಾಧಗಳ ಮೂಲಕ ಪ್ರಾಪ್ತವಾದ ಭಗವನ್ನಿಗ್ರಹಕ್ಕೆ ಉಪಾಯವಾಗಿ **ವಿಧಿಕ್ಕಪ್ಪಡುಗಿರ** - "**ಮುಮುಕ್ಷುರ್ವೈ ಶರಣ ಮಹಂ ಪ್ರಪದ್ಯೇ**", "**ಓಮಿತ್ಯಾತ್ಮಾನಂ ಯುಂಜೀತ**" "**ಬ್ರಹ್ಮಣೋಃ ಮಹಿಮಾನ ಮಾಪ್ನೋತಿ,**" "**ಮಾಮೇಕಂ ಶರಣಂವ್ರಜ ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**" ಎಂಬಿವೇ ಮೊದಲಾದ ವಾಕ್ಯಗಳಲ್ಲಿ ವಿಧಿಸಲ್ಪಟ್ಟಿರುವ **ಆತ್ಮ ಸಮರ್ಪಣವು** ಶೇಷತ್ವಜ್ಞಾನದ ಅನುಸಂಧಾನವು ಭರಸಮರ್ಪಣಕಾಲದಲ್ಲೂ ಬೇಕು, ಅದಕ್ಕೆ **ಪೂರ್ವಭಾವಿಯಾಗಿಯೂ ಬೇಕು,** ಉತ್ತರಕಾಲದಲ್ಲೂ ಬೇಕು, ಹೀಗಿಲ್ಲದಿದ್ದರೆ ಅನು ಭರನ್ಯಾಸದ ಸ್ಥಾನವನ್ನು ವಹಿಸಲಾರದು ಶೇಷತ್ವಾದಿ ವಿಶಿಷ್ಟಮಾನ ಆತ್ಮತತ್ವತ್ತೈ ತೆಳಿನ್ದು ಎಂಬುದರಿಂದ ಪೂರ್ವಭಾವಿಯಾಗಿ ಶೇಷತ್ವಜ್ಞಾನವು ಆವಶ್ಯಕವೆಂದುಹೇಳಲ್ಪಟ್ಟಿತು. **ಶೇಷತ್ವ ಪ್ರತಿಸಂಧಾನ ಗರ್ಭಮಾನ** ವೆಂಬುದರಿಂದ ತತ್ಕಾಲದಲ್ಲೂ ಅನುಸಂಧಾನಮಿರಬೇಕೆಂದು ಹೇಳಿದಂತಾಯಿತು ಆದರೂ ಭರನ್ಯಾಸವು ವಿಧೇಯವಾದುದರಿಂದ ಅನುಷ್ಠಿಸಪಡು ಆವಶ್ಯಕವು, ಅದೇ ಆತ್ಮಸಮರ್ಪಣರೂಪ ಪ್ರಪತ್ತಿಯು ಎಂಬ ತಾತ್ಪರ್ಯವು

ಆದರೆ ಭರಸಮರ್ಪಣವೂ ಜ್ಞಾನರೂಪವೇ ಆಗಿರುವಾಗ ಶೇಷತ್ವಜ್ಞಾನವೇ ಸಾಲದೋ ? "ತತ್ವಜ್ಞಾನಾನ್ಮೋಕ್ಷಃ" ಎಂದು ಶಾಸ್ತ್ರಗಳಲ್ಲಿ ಉಪಪಾದಿಸಲ್ಪಟ್ಟಿರುವದರಿಂದ ಶೇಷತ್ವಜ್ಞಾನವು ತುಂಬಾ ಆವಶ್ಯಕವಾಗಿರುವಾಗ ಶಾಸ್ತ್ರಜನ್ಯ ಶೇಷತ್ವ ಜ್ಞಾನದಿಂದಲೇ ಮೋಕ್ಷವೆಂದು ಹೇಳುವದು ಯುಕ್ತವಲ್ಲವೋ ? ತತ್ವಜ್ಞಾನದಿಂದ ಮೋಕ್ಷವೆಂಬುದಕ್ಕೆ ಅನೇಕ ಪ್ರಮಾಣಗಳನ್ನು ಉದಾಹರಿಸಬಹುದು :— "**ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ**", "**ಬ್ರಹ್ಮವೇದ**

## "ತತ್ತ್ವಜ್ಞಾನಾನ್ಮೋಕ್ಷ" ಇತಿ ವಾಕ್ಯಸ್ಯಾಭಿಪ್ರಾಯಃ

"ತತ್ತ್ವಜ್ಞಾನತ್ತಾಲೇಮೋಕ್ಷ" ಮೆಙ್ಗಿರ ವಿದುವುಮ್ ಒರು ಉಪಾಯಾನುಷ್ಠಾನತ್ತೈ ಮುನ್ನಿಟ್ಟೆನ್ನು ಮಿಡಮ್ (೧) "ಭಜಸ್ವಮಾಂ" (೨) "ಮಾಮೇಕಂ ಶರಣಂ ವ್ರಜ" ಇತ್ಯಾದಿ ವಿಧಿಬಲ ಪ್ರಾಪ್ತಮ್

---

ಬ್ರಹ್ಮೈವ ಭವತಿ", "ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ" "ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾಜುಷ್ಟಸ್ತತಸ್ತೇನಾ ಮೃತತ್ವಮೇತಿ" ಈ ಪೂರ್ವ ಪಕ್ಷಕ್ಕೆ ಸಮಾಧಾನವನ್ನು "ತತ್ವಜ್ಞಾನತ್ತಾಲೆ" ಎಂದಾರಂಭಿಸಿ ಹೇಳುತ್ತಾರೆ.

### ತತ್ವ ಜ್ಞಾನದಿಂದ ಮೋಕ್ಷವೆಂಬ ವಾಕ್ಯದ ತಾತ್ಪರ್ಯವು

ತತ್ವಜ್ಞಾನವು ಆವಶ್ಯಕವೆಂಬುದನ್ನೇನೋ ಅಙ್ಗೀಕರಿಸುವೆವ, ಆದರೆ ಅದು ಉಪಾಯಾನುಷ್ಠಾನಕ್ಕೆ ಉಪಕಾರಕವಾಗಿ ಉಪಾಯಾನುಷ್ಠಾನದ್ವಾರಾ ಮೋಕ್ಷಪ್ರಾಪ್ತಿಗೆ ಹೇತುವಾಗುತ್ತದೆಂದು ಉಪದೇಶಿಸುತ್ತಾರೆ. ತತ್ವಜ್ಞಾನದಿಂದ ಮೋಕ್ಷವು, ಎಙ್ಗಿರ ವಿದುವುಮ್ - ಎಂದು ಹೇಳುವದೂ ಕೂಡ, ಒರು ಉಪಾಯಾನುಷ್ಠಾನತ್ತೈ ಮುನ್ನಿಟ್ಟೆನ್ನು ಮಿಡಮ್ - ಭಕ್ತಿ ಪ್ರಪತ್ತಿಗಳಲ್ಲಿ ಯಾವುದಾದರೂ ಒಂದು ಉಪಾಯಾನುಷ್ಠಾನಮೂಲಕವಾಗಿ ಎಂದು ಹೇಳುವ ಸಂದರ್ಭವು (೧) "ಭಜಸ್ವ" (೨) "ಮಾಮೇಕಂ ಶರಣಂ ವ್ರಜ" ಎಂಬಿವೇ ಮೊದಲಾದ, ವಿಧಿ ಬಲಪ್ರಾಪ್ತಮ್ - ವಿಧಿವಾಕ್ಯಗಳ ಸಾಮರ್ಥ್ಯದಿಂದುಂಟಾದುದು, ಹಾಗೆ ಹೇಳದೇ ಹೋದರೆ ಉಪಾಯಾನುಷ್ಠಾನವನ್ನು ವಿಧಿಸುವ ವಾಕ್ಯಗಳು ನಿರರ್ಥಕಗಳಾಗುತ್ತವೆ; ಭಕ್ತಿ ಪ್ರಪತ್ತಿ ಶಾಸ್ತ್ರಗಳಿಗೆ ವೈಯರ್ಥ್ಯವುಂಟಾಗುತ್ತದೆಂಬ ತಾತ್ಪರ್ಯವು "ಜ್ಞಾತ್ವಾದೇವಂ ಮುಚ್ಯತೇ" ಸರ್ವೇಶ್ವರನನ್ನು ಹೀಗೆ ತಿಳಿದು (ಉಪಾಸನ ಮೂಲಕ) ಮೋಕ್ಷವನ್ನು ಹೊಂದುವನು. "ಸರ್ವ ಪಾಪೈಸ್ತಮೇವಂ ವಿದಿತ್ವಾತಿ ಮೃತ್ಯುಮೇತಿ" ಆತನನ್ನು ಹೀಗೆ (ಉಪಾಸನೆ ಮೂಲಕ) ತಿಳಿದು ಸರ್ವಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಮೃತ್ಯು ಎಂದರೆ ಸಂಸಾರವನ್ನು ದಾಟುವನು. "ಅನುವಿದ್ಯ ವಿಜಾನಾತಿ" "ವಿಜ್ಞಾಯ ಪ್ರಜ್ಞಾಂ ಕುರ್ವೀತ" ಎಂಬ ವಿಶೇಷ ವಿಧಿಗಳಿರುವದರಿಂದ ಶೇಷ ಶೇಷಿತ್ವ ಸಂಬಂಧಜ್ಞಾನ

---

(೧) ಗೀ ೯ ೩೩. (೨) ಗೀ ೧೮ ೬೬.

**ಜ್ಞಾನಾನ್ಮೋಕ್ಷೋಪದೇಶೇ(ಶೋ)ಹಿ ತತ್ಪೂರ್ವೋಪಾಸನಾದಿನಾ।**
**ಉಪಾಸನಾದಿ ರೂಪಾದ್ವಾ ಜ್ಞಾನಾನ್ಮೋಕ್ಷೋ ವಿವಕ್ಷಿತಃ॥ ॥೪೩॥**

---

ಮಾತ್ರವೇ ಸಾಕ್ಷಾತ್ತಾಗಿ ಮೋಕ್ಷಹೇತುವಾಗಲಾರದು. ಆದುದರಿಂದ "**ಭಜಸ್ವ**" ಇತ್ಯಾದಿ ವಿಧಿಗಳಲ್ಲಿ ತೋರಿಬರುವ ಉಪಾಯಾನುಷ್ಠಾನದ್ವಾರಾ ಮೋಕ್ಷವೇವಿನಾ ಅನ್ಯಥಾ ಅಲ್ಲವೆಂಬ ಭಾವವು. "**ಕಿಂಪುನ ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ। ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವಮಾಂ**" ॥ ಎಂಬುದು ಪೂರಾ ಶ್ಲೋಕವು ಅರ್ಜುನನಿಗೆ ಉಪದೇಶಿಸುತ್ತಾರೆ; ನೀನು ಇರುವ ಲೋಕವು ಅನಿತ್ಯವಾಗಿ ಸುಖವಿಲ್ಲದುದಾಗಿ ತಾಪತ್ರಯಗಳಿಂದ ಕೂಡಿರುವವಾದುದರಿಂದ ನನ್ನನ್ನು ಭಜಿಸು ಎಂದು ಹಿತೋಪದೇಶಮಾಡಿದರು. ಆ ಭಜನವು ಯಾವ ರೂಪವು ಎಂಬುದಕ್ಕೆ "**ಮನ್ಮನಾಭವ**" ಎಂದು ವಿವರಿಸಿ, **ಮಾಮೇವೈಷ್ಯಸಿ** ಎಂದು ಹೇಳಿರುತ್ತಾರೆ. ಇದಕ್ಕೆ **ವ್ಯಾಖ್ಯಾನದಲ್ಲಿ ಶ್ರೀ** ಯತಿರಾಜರು, "**ಉಕ್ತಲಕ್ಷಣ ಮಿದ ಮುಪಾಸನ ಮುಪಾದದಾನೋ ಮಾಮೇವ ಪ್ರಾಪ್ಸ್ಯಸಿ**" ಎಂದು ಮುಗಿಸಿರುವುದರಿಂದ ಪರಿಪೂರ್ಣ ತತ್ವಜ್ಞಾನವೇ ಸಾಲದು, ಅದರೊಂದಿಗೆ ಉಪಾಯಾನುಷ್ಠಾನವೂ **ಆವಶ್ಯಕವೆಂ**ಬುದು ಶ್ರೀ ಯತಿರಾಜರ ದಿವ್ಯಸೂಕ್ತಿಯ ಮೂಲಕ ಸಿದ್ಧಾಂತಿತವು.

ಹೀಗೆ ತತ್ವಜ್ಞಾನಾನ್ಮೋಕ್ಷಃ ಎಂಬುದಕ್ಕೆ ಎರಡುವಿಧವಾಗಿ ಉಪಪತ್ತಿಯನ್ನು ಕಲ್ಪಿಸಬಹುದು — (೧) ತತ್ವಜ್ಞಾನಪೂರ್ವಕೋಪಾಸನಾದಿಗಳಿಂದ ಯುಕ್ತವಾದ ಜ್ಞಾನದಿಂದಲಾಗಲಿ ಅಥವಾ (೨) ಉಪಾಸನಾದಿರೂಪಜ್ಞಾನದಿಂದಲಾಗಲಿ ಮೋಕ್ಷಪ್ರಾಪ್ತಿಯುಂಟಾಗುತ್ತದೆಂದು ತಾತ್ಪರ್ಯವನ್ನು ಕಲ್ಪಿಸುವದರಲ್ಲಿ ಏನೊಂದೂ ಬಾಧಕವಿಲ್ಲವೆಂದು ಮೂಲಕಾರಿಕೆಯು ಮೂಲಕ ತಿಳಿಸುತ್ತಾರೆ.

**ಜ್ಞಾನಾನ್ಮೋಕ್ಷೋಪದೇಶೇ** - ಜ್ಞಾನದಿಂದ ಈ ಸಂದರ್ಭದಲ್ಲಿ ತತ್ವಜ್ಞಾನದಿಂದ ಮೋಕ್ಷವುಂಟಾಗುತ್ತದೆಂದು ಉಪದೇಶಿಸುವವರಲ್ಲಿ, **ತತ್ಪೂರ್ವೋಪಾಸನಾದಿನಾ** - ತತ್ವಜ್ಞಾನ ಪೂರ್ವಕವಾಗಿ ಪ್ರಾಪ್ತವಾದ **ಉಪಾಸನವೇ** ಮೊದಲಾದ ಉಪಾಯಗಳಿಂದಾಗಲಿ, ಇಲ್ಲಿ ಮೊದಲಾದ ಎಂದು ಹೇಳಿದುದರಿಂದ ಭರನ್ಯಾಸವೂ ಹೇಳಲ್ಪಟ್ಟಿತು, ಅಥವಾ **ಉಪಾಸನಾದಿ ರೂಪಾದ್ವಾ**- ಉಪಾಸನ ಭರನ್ಯಾಸರೂಪವಾದ ಜ್ಞಾನದಿಂದಲಾಗಲಿ, ಜ್ಞಾನದಿಂದ ಮೋಕ್ಷವೆಂಬುದು, **ವಿವಕ್ಷಿತಃ** - ಹೇಳಲ್ಪಟ್ಟಿತು. **ಜ್ಞಾನಾನ್ಮೋಕ್ಷಃ ಎಂಬುದನ್ನೇನೋ ಒಪ್ಪಿ**ಕೊಳ್ಳತಕ್ಕದ್ದೇ, ಆದರೆ ವಿಧಿಸಿರುವ ಉಪಾಯಗಳಿಂದ ಭಕ್ತಿ ಪ್ರಪತ್ತಿಗಳಿಗೆ

**ಶಾಸ್ತ್ರಜನ್ಯಮಾನ ಶೇಷತ್ವಜ್ಞಾನ ಮಾತ್ರಂ ನಿವೃತ್ತಿ ಧರ್ಮಾಶ್ಚ ತಾನ ನ್ಯಾಸೋಪಾಸನಾದಿಗಳಿಲ್ಲಾ ತಸ್ತು ಕ್ಯನಾ ಪೊದುವಾಯಿರುಕ್ಕುಮ್ ; ಶೇಷ**

---

ವೈಯರ್ಥ್ಯವುಂಟಾಗದ ಹಾಗೆ ಅವರಭಿಪ್ರಾಯವನ್ನು ಗ್ರಹಿಸತಕ್ಕದ್ದು. ಶಾಸ್ತ್ರ ಜನ್ಯಜ್ಞಾನಪೂರ್ವಕವಾದ ಉಪಾಸನ ಭರನ್ಯಾಸಗಳಿಂದ ಮೋಕ್ಷವು ಎಂದಾ ದರೂ ಅರ್ಥಹೇಳತಕ್ಕದ್ದು; ಅಥವಾ, ಉಪಾಸನ ಭರನ್ಯಾಸರೂಪ ಜ್ಞಾನದಿಂದ ಮೋಕ್ಷವೆಂದಾದರೂ ಅರ್ಥಹೇಳತಕ್ಕದ್ದು, ಎಂಬುದ ಈ ಶ್ಲೋಕತಾತ್ಪರ್ಯವು ಹಾಗಲ್ಲದೆ, ಅದ್ವೈತಿಗಳು ವಾಕ್ಯಜನ್ಯ ಜ್ಞಾನದಿಂದ ಮೋಕ್ಷವೆಂದು ಹೇಳುವ ಹಾಗೆ, ಸಾಕ್ಷಾತ್ ಶಾಸ್ತ್ರಜನ್ಯ ಶೇಷತ್ವ ಜ್ಞಾನದಿಂದಲೇ ಮೋಕ್ಷವೆಂಬ ವಾದ ವನ್ನು ತಂದರ, ಶ್ರೀಭಾಷ್ಯ, ಗೀತಾಭಾಷ್ಯಗಳ ಉಪದೇಶಕ್ಕೂ, ಉಪಾಸನ ಶರಣಾಗತಿ ರೂಪೋಪಾಯಗಳನ್ನು ಪ್ರತಿಪಾದಿಸುವ ಇತಿಹಾಸ ಪುರಾಣಗಳಿಗೂ, ಪ್ರತ್ಯುತ ವಿರುದ್ಧವಾಗುವದರಿಂದ, ಶೇಷತ್ವಜ್ಞಾನವು ಎಂದಿಗೂ ಉಪಾಯವಲ್ಲವು, ಇನ್ನು ಯಾವುದು ಎಂದರೆ, ಅಂತಹ ಜ್ಞಾನದಿಂದ ಕೂಡಿದ ಆತ್ಮರಕ್ಷಾ ಭರಸಮ ರ್ಪಣವೇ ಉಪಾಯು ಎಂಬುದೇ ಸಿದ್ಧಾಂತವು

“ಸ್ವೋಜ್ಜೀವನೇಚ್ಛಾಯದಿತೇ” ಎಂಬ ಶ್ಲೋಕದಲ್ಲಿ ಶೇಷತ್ವಜ್ಞಾನವು ಮೋಕ್ಷ ಹೇತುವೆಂದು ಅದಕ್ಕೆ ಪ್ರಾಶಸ್ತ್ಯವನ್ನು ಹೇಳುವದರಿಂದ ಅದು ಮೋಕ್ಷಕ್ಕೆ ಸಾಕ್ಷಾತ್ ಹೇತುವಲ್ಲದಿದ್ದರೂ, ಹೇಗೆ ಉಪಕಾರಕವೆಂಬುದನ್ನು ಜ್ಞಾನಾನ್ಮೋಕ್ಷೋಪದೇಶೇ ಎಂಬ ಕಾರಿಕೆಯ ಮೂಲಕ ವಿಕಲ್ಪಿಸಿ ತಿಳಿಸುವದನ್ನೇ, ಮುಂದಿನ ಎರಡು ವಾಕ್ಯಗಳ ಮೂಲಕ ಉಪದೇಶಿಸುತ್ತಾರೆ **ಶಾಸ್ತ್ರಜನ್ಯಮಾನ** ಶೇಷತ್ವ ಜ್ಞಾನಮಾತ್ರಂ-ಶಾಸ್ತ್ರಗಳಿಂದುಂಟಾದ ಶೇಷತ್ವ ಜ್ಞಾನವಾದರೋ, **ನಿವೃತ್ತಿ ಧರ್ಮಙ್ಗಳಾನ** - ಫಲಾಭಿಸಂಧಿಯಿಲ್ಲದೆ ಅಂತ್ಯದಲ್ಲಿ ಸಾತ್ವಿಕ ತ್ಯಾಗವನ್ನು ಹೇಳಿ ಅನುಷ್ಠಿಸಿದ ಧರ್ಮಗಳಿಂದ, **ಭರನ್ಯಾಸ ಉಪಾಸನ** ಮೊದಲಾದ ಎಲ್ಲಾ ವಿಧಿವಾಕ್ಯಾನುಸಾರ ನಡೆಸಿದ ಕರ್ಮಾನುಷ್ಠಾನಗಳಿಗೂ, **ಪೊದುವಾಯಿರುಕ್ಕುಮ್** - ಸಾಧಾರಣವಾಗಿರುತ್ತದೆ ಶಾಸ್ತ್ರದ ವಿಧಿವಾಕ್ಯ ಗಳಿಗನುಸಾರವಾಗಿ ನಡೆಸಿದ ಕರ್ಮಗಳಿಗೆ ಧರ್ಮವೆಂಬ ಹೆಸರು. ಫಲಾಭಿಸಂಧಿ ಪೂರ್ವಕವಾಗಿ ಅನುಷ್ಠಿಸಿದ ಧರ್ಮಕ್ಕೆ ಪ್ರವೃತ್ತಿ ಧರ್ಮವೆಂದೂ ಫಲಾಭಿಸಂಧಿ ಯನ್ನು ತೊರೆದು ತ್ಯಾಗಪೂರ್ವಕವಾಗಿ ಅನುಷ್ಠಿಸಿದ ಧರ್ಮಕ್ಕೆ ನಿವೃತ್ತಿ ಧರ್ಮ ವೆಂದೂ, ಹೆಸರು. ಪ್ರವೃತ್ತಿಧರ್ಮವು ಬಂಧಕವು, ನಿವೃತ್ತಿಧರ್ಮವು ಮೋಕ್ಷಕ್ಕೆ ಉಪಕಾರಕವು; ಆದದರಿಂದಲೇ ಮೋಕ್ಷಧರ್ಮದಲ್ಲಿ ‘**ಪ್ರವೃತ್ತಿಃ ಪುನರಾ**

**ವೃತ್ತಿರೂಪಮಾನ ಕೈಙ್ಕರ್ಯಮೇ ಮುಮುಕ್ಷುವುಕ್ಕು ಪುರುಷಾರ್ಥಕಾಷ್ಠೈ ಯಾಗೈಯಾಲೇ ಶೇಷತ್ವ ಮರಿಯಾದ ಮೋಕ್ಷೋಪಾಯಂ ಅನುಷ್ಠಿಕ್ಕೈ ಘಟಿಯಾದಿರೆ.**

---

ವೃತ್ತಿರ್ನಿವೃತ್ತಿಃ ಪರಮಾಗತಿಃ" ಎಂದು ಹೇಳಲ್ಪಟ್ಟಿರುತ್ತದೆ. ಇಂತಹ ನಿವೃತ್ತಿ ಧರ್ಮಗಳಾದ ನ್ಯಾಸೋಪಾಸನಾದಿಗಳಿಗೆಲ್ಲಾ ತುಂಬಾ ಉಪಕಾರಕವು ಈ ಶಾಸ್ತ್ರಜನ್ಯ ಶೇಷತ್ವಜ್ಞಾನವೆಂಬಭಿಪ್ರಾಯವು. ಉತ್ತರಾರ್ಧದ ಅರ್ಥವನ್ನು ವ್ಯಕ್ತಪಡಿಸುತ್ತಾರೆ. **ಶೇಷವೃತ್ತಿ ರೂಪಮಾನ ಕೈಙ್ಕರ್ಯಮೇ** - ಶೇಷವೃತ್ತಿಗೆ ಸ್ವರೂಪವಾದ ಕೈಙ್ಕರ್ಯವೇ, **ಮುಮುಕ್ಷುವುಕ್ಕು**- ಮೋಕ್ಷಾರ್ಥಿಗೆ, **ಪುರುಷಾರ್ಥಕಾಷ್ಠೈಯಾಗೈಯಾಲೇ** - ಪುರುಷಾರ್ಥವು ಮೋಕ್ಷವು, ಅದರ ಪರಾಕಾಷ್ಠೆಯು ಕೈಙ್ಕರ್ಯವು, ಮೋಕ್ಷವು ಏತಕ್ಕೆಂದರೆ ದಾಸಭೂತನಾದ ತಾನು ತನ್ನ ಸ್ವಾಮಿಯಾದ ಶ್ರೀವಾಸುದೇವನಿಗೆ ಕೈಙ್ಕರ್ಯವನ್ನು ಮಾಡುವದಕ್ಕಾಗಿ, ಆದುದರಿಂದ ಕೈಙ್ಕರ್ಯವು ಪುರುಷಾರ್ಥ ಕಾಷ್ಠೆಯೆಂದು ಹೇಳಲ್ಪಟ್ಟಿತು, **ಶೇಷತ್ವಮರಿಯಾದ** - ಶೇಷತ್ವಜ್ಞಾನವಿಲ್ಲದ, **ಮೋಕ್ಷೋಪಾಯಂ**-ಮೋಕ್ಷೋಪಾಯಗಳಾದ ನ್ಯಾಸೋಪಾಸನೆಗಳಲ್ಲಿ ಒಂದನ್ನು, **ಅನುಷ್ಠಿಕ್ಕೈ** - ಅನುಷ್ಠಿಸೋಣವು, **ಘಟಿಯಾದಿರೇ** - ಸಂಘಟಿಸಲಾರದಷ್ಟೇ; ಶೇಷತ್ವ ಜ್ಞಾನವಿಲ್ಲದವನಿಗೆ ಮೋಕ್ಷೋಪಾಯವನ್ನು ಅನುಷ್ಠಿಸಲು ಅಭಿರುಚಿಯು ಉಂಟಾಗುವದಿಲ್ಲವು. ಮೋಕ್ಷದಲ್ಲಿ ತನಗುಂಟಾಗುವ ನಿರತಿಶಯ ಸಂಪತ್ತು ಯಾವುದೆಂದರೆ, **ಕಿಂಕರತ್ವಾಧಿರಾಜ್ಯಂ** ಎಂದು ಪ್ರಥಮ ಶ್ಲೋಕದಲ್ಲಿ ಹೇಳಲ್ಪಟ್ಟಿತು; ಆದುದರಿಂದ ಕೈಙ್ಕರ್ಯವೇ ತನಗೆ ಪುರುಷಾರ್ಥಕಾಷ್ಠೆ ಎಂಬಜ್ಞಾನ ಯುಕ್ತವಾದವು, ನ್ಯಾಸೋಪಸನೆಗಳು ಎಂಬ ಭಾವವು,

ಆದುದರಿಂದ ಶೇಷತ್ವಜ್ಞಾನವು ಸಾಕ್ಷಾತ್ತಾಗಿ ಮೋಕ್ಷದಾಯಕವಲ್ಲವು; ಮೋಕ್ಷಪ್ರಾಪ್ತಿಗೆ ಉಪಕಾರಕವೆಂದು ನಿಗಮನಮಾಡಿ ಮುಂದಿನ ವಾಕ್ಯವಾದ "ಶೇಷತ್ವಜ್ಞಾನ" ವೆಂಬುವ ವಾಕ್ಯದ್ವಯದಿಂದ ತಿಳಿಸುತ್ತಾರೆ- ಹಾಗೆ ಉಪಕಾರಕ ಮಾತ್ರನಾದರೆ, ಶೇಷತ್ವಜ್ಞಾನವಿಲ್ಲದೆ ಉಪಾಯಾನುಷ್ಠಾನದಲ್ಲಿ ಪ್ರವೃತ್ತಿಯುಂಟೋ ಎಂದರೆ ಉಂಟು ಎಂದು ಹೇಳಿ, ಆಗ ಶೇಷತ್ವಜ್ಞಾನವಿಲ್ಲದಿದ್ದರೂ ಅಂತಹ ಧರ್ಮಾನುಷ್ಠಾನಬಲದಿಂದ ಶೇಷತ್ವಜ್ಞಾನ ಉಂಟಾಗಿ, ಉಪಾಯಾನುಷ್ಠಾನ ಪೂರ್ತಿಯಿಂದ ಮೋಕ್ಷಪ್ರಾಪ್ತಿಯುಂಟಾಗುತ್ತದೆಂದು ಹೇಳುತ್ತಾರೆ.

## ಅತಃ ಶೇಷತ್ವಜ್ಞಾನಮಾತ್ರಂ ನಾಲಮಿತಿ ನಿಗಮನಂ.

**ಶೇಷತ್ವಜ್ಞಾನಮಿನ್ರಿಕ್ಕೇ ಮೋಕ್ಷಾರ್ಥಮಾಗ ವಿಧಿತ್ತ ಧರ್ಮಙ್ಗಳೈ ಅನುಷ್ಠಿತ್ತಾನಾಗಿಲುಮ್ ಇಧ್ಧರ್ಮಙ್ಗಳ್ ತಾನೇ, ಶೇಷತ್ವಜ್ಞಾನತ್ತೈಯುಮ್ ಉಣ್ಡಾಕ್ಕಿ, ಪೂರ್ಣಾನುಷ್ಠಾನ ಮುಖತ್ತಾಲೇಯಿರೆ ಮೋಕ್ಷಹೇತುವಾವದು**

## ಆದುದರಿಂದ ಶೇಷತ್ವಜ್ಞಾನಮಾತ್ರವೇ ಸಾಲದು ಭರನ್ಯಾಸವೂ ಆವಶ್ಯಕವೆಂದು ನಿಗಮನವು.

ಶೇಷತ್ವಜ್ಞಾನ ಮಿನ್ರಿಕ್ಕೇ - ಶೇಷತ್ವಜ್ಞಾನವಿಲ್ಲದೇನೇ, **ಮೋಕ್ಷಾರ್ಥಮಾಗವಿಧಿತ್ತಧರ್ಮಂಗಳೈ** - ಮೋಕ್ಷಕ್ಕೆ ಸಾಧ್ಯೋಪಾಯಗಳೆಂದು ವಿಧಿಸಿದ ನ್ಯಾಸೋಪಾಸನೆಗಳನ್ನು, **ಅನುಷ್ಠಿತ್ತಾನಾಗಿಲುಮ್** - ಅನುಷ್ಠಿಸಿದರೂ ಕೂಡ, **ಇದ್ಧರ್ಮಙ್ಗಳ್ ತಾನೇ** - ಈ ಭರನ್ಯಾಸ ಮತ್ತು ಕರ್ಮಯೋಗಾದಿ ಧರ್ಮಗಳೇ, **ಶೇಷತ್ವಜ್ಞಾನವನ್ನು**, **ಉಂಡಾಕ್ಕಿ** - ಉಂಟುಮಾಡಿ, **ಪೂರ್ಣಾನುಷ್ಠಾನ ಮುಖತ್ತಾಲೇಯಿರೆ** - ಅನುಷ್ಠಾನಪೂರ್ತಿದ್ವಾರಾವಾಗಿ ತಾನೇ, **ಮೋಕ್ಷಹೇತುವಾವದು** - ಮೋಕ್ಷಹೇತುವಾಗುತ್ತವೆ ಇದರಿಂದ ಮೋಕ್ಷಕ್ಕೆ ಸಾಕ್ಷಾತ್ತಾಗಿ ಹೇತುವು ನ್ಯಾಸೋಪಾಸನರೂಪ ಉಪಾಯಾನುಷ್ಠಾನವೇವಿನಾ ಅನ್ಯಥಾ ಯಿಲ್ಲವೆಂಬ ಭಾವವು ಶೇಷತ್ವ ಜ್ಞಾನವಾದರೋ ಉಪಾಯಾನುಷ್ಠಾನಕ್ಕೆ ಪೂರ್ವಭಾವಿಯಾಗಿ ಇಲ್ಲದಿದ್ದರೂ ಪರಂಪರಯಾ ಉತ್ಪನ್ನವಾಗಿ, ಉಪಾಯಾನುಷ್ಠಾನಪೂರ್ತಿಯನ್ನುಂಟುಮಾಡಿ, ಮೋಕ್ಷಹೇತುವಾಗುತ್ತದೆಂಬ ಭಾವವು ಸುಕೃತ ಪರಿಪಾಕಮೂಲಕವಾಗಿ, **"ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್"** ಎಂದು ಹೇಳಿರುವ ಪ್ರಕಾರ ಭಕ್ತಿಮಾರ್ಗದಲ್ಲೇನೋ ಕರ್ಮಯೋಗಾರಂಭ ಉಂಟಾದನಂತರೆ, ತನ್ಮೂಲಕವಾಗಿ ಈತನಿಗೆ ಪರಂಪರಯಾ ಶೇಷತ್ವಜ್ಞಾನವೂ, ಉಪಾಸನ ನಿಷ್ಪತ್ತಿಮೂಲಕ ಉಪಾಯಾನುಷ್ಠಾನಪೂರ್ತಿಯೂ ಉಂಟಾಗಬಹುದು. ಆದರೆ ಭರನ್ಯಾಸವು ಸಕೃದನುಷ್ಠೇಯವಾಗಿರುವಾಗ, **"ಶೇಷತ್ವ ಜ್ಞಾನತ್ತೈಯುಮ್ ಉಣ್ಡಾಕ್ಕಿ ಪೂರ್ಣಾನುಷ್ಠಾನ ಮುಖತ್ತಾಲೆ"** ಎಂಬುದು, ಹೇಗೆ ಪ್ರಪತ್ತಿ ಧರ್ಮಕ್ಕೆ ಅನ್ವಯಿಸುತ್ತದೆ ಎಂದು ಪ್ರಶ್ನಿಸಬಹುದು. ಭರನ್ಯಾಸವೂ ಆಚಾರ್ಯಮುಖೇನ ನಡೆಯುವದರಿಂದ ಅವರುಗಳ ಮೂಲಕ ಶೇಷತ್ವಜ್ಞಾನೋಪದೇಶ ಉಂಟಾಗಿ

**ಆಗೈಯಾಲ್ ಇಙ್ಗು ವಿಧೇಯಮಾನ ಸಮರ್ಪಣಂ ಶೇಷತ್ವಜ್ಞಾನ ಮಾತ್ರಮನ್ರು ; ಮಱ್ಱೆದೆನ್ನಿಲ್, ಶೇಷತ್ವಜ್ಞಾನಾದಿ ಯುಕ್ತಮಾನ ಸ್ವರಕ್ಷಾ ಭರನ್ಯಾಸಮ್.**

---

ಉಪಾಯಪೂರ್ತಿಯಾಗುತ್ತದೆಂಬ ಭಾವವು. ಅನುಷ್ಠಾನ ಕರಣಮಂತ್ರವೇ ಈ ಜ್ಞಾನವನ್ನು ಉಂಟುಮಾಡುತ್ತದೆ

**ಆಗೈಯಾಲ್** - ಆ ಕಾರಣದಿಂದ ಎಂದರೆ ಶೇಷತ್ವಜ್ಞಾನವು **ಅಧಿಕಾರಿ** ವಿಶೇಷಣವಾದುದರಿಂದಲೂ, ಆಕಿಂಚನ್ಯದಿಂದ ಕೂಡಿದ ಉಪಾಯಾನುಷ್ಠಾನವು ವಿಧಿಸಲ್ಪಟ್ಟಿರುವದರಿಂದಲೂ, **ಇಙ್ಗು** – ಈ ಸಂದರ್ಭದಲ್ಲಿ ಎಂದರೆ ಪ್ರಪದನಕ್ಕೆ ಆಜ್ಞೆಯಾವುದೆಂದು ನಿರ್ಧರಿಸುವ ಪ್ರಕರಣದಲ್ಲಿ, **ವಿಧೇಯಮಾನ ಸಮರ್ಪಣವು** - **"ಆತ್ಮಾನಂ ಮಯಿನಿಕ್ಷಿಪೇತ್"** ಇತ್ಯಾದಿಗಳಲ್ಲಿ ವಿಧಿಸಲ್ಪಟ್ಟ ಸಮರ್ಪಣವು, **ಶೇಷತ್ವಜ್ಞಾನಮನ್ರು** – ಬರೀ ಶೇಷತ್ವ ಜ್ಞಾನವಲ್ಲವು; **ಮಱ್ಱೆದೆನ್ನಿಲ್** - ಇನ್ನು ಯಾವುದು ಎಂದರೆ, **ಶೇಷತ್ವ ಜ್ಞಾನಾದಿಯುಕ್ತಮಾನ** - ಶೇಷತ್ವಜ್ಞಾನವೇ ಮೊದಲಾದುದರಿಂದ ಕೂಡಿದ, **ಸ್ವರಕ್ಷಾ ಭರನ್ಯಾಸಮ್** – ತನ್ನ ರಕ್ಷಾ ಭರನ್ಯಾಸವು ; ಇದರಲ್ಲಿ ಉಪಾಯ ಫಲಗಳ ಭರನ್ಯಾಸವೂ ಅಂತರ್ಗತವು. ಇದೀಗ ಆಜ್ಞೆಯು ಎಂಬ ಭಾವವು.

## ಭಗವಂತನಲ್ಲಿ ಉಪಾಯತ್ವಜ್ಞಾನಮಾತ್ರವೇ ಪ್ರಪತ್ತಿಯು ಎಂಬ ವಾದದ ಖಂಡನವು

ಈ ಶ್ಲೋಕಕ್ಕೆ ಎರಡು ವಿಧವಾಗಿ ತಾತ್ಪರ್ಯವನ್ನು ಹೇಳುತ್ತಾರೆ.

(೧) ಹಿಂದೆ ಶೇಷತ್ವ ಜ್ಞಾನವೇ ಪ್ರಪತ್ತಿಯು ಎಂಬ ಕೆಲವರ ಅಭಿಪ್ರಾಯವನ್ನು ಖಂಡಿಸಿ, ಭಗವಂತನೇ ನಮಗೆ ಸಿದ್ಧೋಪಾಯನೆಂಬ ಜ್ಞಾನವೇ ಪ್ರಪತ್ತಿಯು ಎಂಬ ಪಕ್ಷವನ್ನು ಮುಂದಿನ ಕಾರಿಕೆಯಿಂದ ನಿರಾಕರಿಸುತ್ತಾರೆ. ಈ ಕಾರಿಕೆಯಲ್ಲಿ ಪೂರ್ವಪಕ್ಷವನ್ನು ಅನುವಾದಮಾಡಿ, ನಾಲ್ಕನೆಯ ಪಾದದಿಂದ ಸಮಾಧಾನವನ್ನು ಹೇಳುತ್ತಾರ :—

**ವಾಕ್ಯಮಾತ್ರೇಣ ಸಿದ್ಧತ್ವಾತ್** - ಚರಮಶ್ಲೋಕದ ವಾಕ್ಯವಾದ **"ಶರಣಂ ವ್ರಜ"** ಎಂಬುದರಿಂದ ಮಾತ್ರ ಎಂದರೆ ಯಾವ ಅನುಷ್ಠಾನದ ಆವಶ್ಯಕತೆಯೂ ಇಲ್ಲದೆ ಸಿದ್ಧಿಸುವದರಿಂದ ಎಂದು ಸಾರದೀಪಿಕೆ ಸಾರವಿವರಣೆಯವರು ಅರ್ಥಮಾಡಿರುತ್ತಾರೆ, ಸಾರಸಂಗ್ರಹದವರು "ನ್ಯಾಸ ಇತಿ ಬ್ರಹ್ಮ"ಎಂದು ಸಮಾನಾಧಿಕರಣ್ಯವು ಶಾಸ್ತ್ರದಲ್ಲಿ ಹೇಳಿರುವದರಿಂದ ಪರಬ್ರಹ್ಮನು ಹೇಗೆ ಸಿದ್ಧೋಪಾಯನೋ ಹಾಗೆಯೇ

## ಭಗವತ್ಯುಪಾಯತ್ವೆ ಜ್ಞಾನಮಾತ್ರಮೇವ ಪ್ರಪತ್ತಿರಿತಿಪಕ್ಷಸ್ಯ ನಿರಸನಂ

**ವಾಕ್ಯಮಾತ್ರೇಣ ಸಿದ್ಧತ್ವಾತ್ಸಿದ್ಧೋಪಾಯ ಇಹೋಚ್ಯತೇ (ತಾಂ) ।**
**ಪ್ರಪತ್ತಿರಿತಿ ವಾದೋಽಪಿ ವಿಧಿನಾತ್ರ ವಿಹನ್ಯತೇ ॥೪೪॥**

**"ಶರಣಂ ವ್ರಜ" ಎಂಬ್ಗರವಿದು "ಇಮ ಮರ್ಥಂ ಜಾನೀಹಿ"**

---

ಪ್ರಪತ್ತಿಯೂ ಸಿದ್ಧೋಪಾಯವೆಂಬುದು ವಾಕ್ಯದಿಂದ ಸಿದ್ಧಿಸುವದರಿಂದ, ಅಥವಾ ಪ್ರಪತ್ತಿಯೆಂದು ಶಾಸ್ತ್ರದಲ್ಲಿ ತೋರಿಬರುವ ವಾಕ್ಯಮಾತ್ರದಿಂದಲೇ ಸಿದ್ಧಿಸುವದರಿಂದ, **ಪ್ರಪತ್ತಿಃ** - ಪ್ರಪತ್ತಿಯು, **ಇಹ** – ಈ ಪ್ರಪತ್ತಿ ಶಾಸ್ತ್ರದಲ್ಲಿ, **ಸಿದ್ಧೋಪಾಯ ಇತಿ** - ಸಿದ್ಧೋಪಾಯವೆಂದು, **ಉಚ್ಯತೇ** - ಹೇಳಲ್ಪಡುತ್ತದೆ, **ಇತಿ ವಾದೋಽಪಿ** – ಎಂಬ ವಾದವೂ ಕೂಡ, **ಅತ್ರ** - ಈ ಸಂದರ್ಭದಲ್ಲಿ, **ವಿಧಿನಾ**- **ವ್ರಜ** ಎಂಬ ಧಾತುವಿನಲ್ಲಿರುವ ವಿಧಿ ಪ್ರತ್ಯಯದಿಂದ, **ವಿಹನ್ಯತೇ**-ಹೊಡೆಯಲ್ಪಡುತ್ತದೆ, ನಿರಸನ ಮಾಡಲ್ಪಡುತ್ತದೆ. **ಮಾಮೇಕಂ ಶರಣಂ ವ್ರಜ** - ಶರಣವನ್ನು ಹೊಂದು ಎಂಬ ವಿಧಿಮೂಲಕವಾಗಿ ಕೃತಿಯಿಂದ ಸಾಧ್ಯವಾದ ಒಂದು ಸಾಧ್ಯೋಪಾಯವು ಬೋಧಿತವಾಗುವದರಿಂದ "ಅನುಷ್ಠಾನ ಬೇಕಿಲ್ಲವು, ವಾಕ್ಯಜ್ಞಾನಮಾತ್ರವೇ ಪ್ರಪತ್ತಿ" ಎಂಬ ವಾದವು ನಿರಸನ ಮಾಡಲ್ಪಟ್ಟಿತು

(೨) ಕಾರಿಕಾ ದರ್ಪಣದಲ್ಲಿ ಬೇರೇ ವಿಧವಾಗಿ ಅನ್ವಯಿಸಿರುತ್ತಾರೆ

**ವಾಕ್ಯಮಾತ್ರೇಣ ಸಿದ್ಧತ್ವಾತ್**-ಯಾವುದು ವಾಕ್ಯಮಾತ್ರದಿಂದ ಸಿದ್ಧಿಸಲ್ಪಟ್ಟಿದುದು ಎಂದರೆ, **ಪ್ರಪತ್ತಿಃ** - ಎಂದು ಉತ್ತರಾರ್ಧದಲ್ಲಿರುವದಕ್ಕೆ ಇತರರು ಅನ್ವಯಿಸಿದರು, ಇವರು ಶೇಷತ್ವಜ್ಞಾನಂ ಎಂದು ಅಧ್ಯಾಹಾರ ಮಾಡಿಕೊಂಡು ಶೇಷತ್ವಜ್ಞಾನವು ಶಾಸ್ತ್ರಜನ್ಯಜ್ಞಾನದಿಂದ ಸಿದ್ಧಿಸುವದರಿಂದ ಈ ಶೇಷತ್ವಜ್ಞಾನವು ಭಗವಂತನಹಾಗೆ ಸಿದ್ಧೋಪಾಯವೆಂದೇ, **ಉಚ್ಯತೇ** ಅಥವಾ **ಉಚ್ಯತಾಂ** - ಹೇಳಲ್ಪಡಲಿ, ಆ ಸಿದ್ಧೋಪಾಯವಾದ ಶೇಷತ್ವಜ್ಞಾನವೇ, **ಪ್ರಪತ್ತಿಃ** - ಪ್ರಪತ್ತಿಯು, **ಇತಿ ವಾದಃ** - ಎಂಬವಾದವು, **ವಿಧಿನಾ** – ಕೃತಿಸಾಧ್ಯವಾದ ವಿಧಿವಾಕ್ಯವಾದ **ಶರಣಂವ್ರಜ** ಎಂಬುದರಿಂದ, **ವಿಹನ್ಯತೇ**- ಹೊಡೆಯಲ್ಪಡುತ್ತದೆ.

ಈ ಕಾರಿಕಾ ವ್ಯಾಖ್ಯಾಕೃವಿನ ಅಭಿಪ್ರಾಯಪ್ರಕಾರ ಜ್ಞಾನರೂಪವಾದ ಸಿದ್ಧೋಪಾಯವೇ ಸಾಲದು, ಶರಣಂ ವ್ರಜ ಎಂಬ ವಿಧಿವಾಕ್ಯವಿರುವದರಿಂದ, ಕೃತಿಸಾಧ್ಯವಾದ ಒಂದು ಸಾಧ್ಯೋಪಾಯವಾದ ಭರಸಮರ್ಪಣವು ಅವಶ್ಯಕವೆಂದುಸಾಧಿಸಲ್ಪಟ್ಟಿತು. ಇದರಮೇಲೆ ಪುನಃ ಇನ್ನೊಂದು ಪೂರ್ವಪಕ್ಷವೇನೆಂದರೆ, ವ್ರಜ ಶಬ್ದವು ಗತ್ಯರ್ಥ

**ಎಙ್ಙಿರ ಮಾತ್ರಮಾಯ್ ಒರು ಕರ್ತವ್ಯೋಪಾಯ ವಿಧಿ ಪರ ಮನ್ರಿಕ್ಕೇ ಯೊಳಿನ್ದಾಲೋ ಎನ್ನಿಲ್ ? ಇದು ಶಬ್ದಸ್ವಾರಸ್ಯ ವಿರುದ್ಧಮ್.**

---

ವಾದುದು, ಗತ್ಯರ್ಥವುಳ್ಳವುಗಳೆಲ್ಲಾ ಬುದ್ಧ್ಯರ್ಥದಲ್ಲೂ ಪ್ರಯೋಗವುಳ್ಳವುಗಳಾದುದರಿಂದ, **ಶರಣಂವ್ರಜ** ಎಂಬಲ್ಲಿ ಕೃತಿಸಾಧ್ಯವಾದುದು ಯಾವುದೂ ಇಲ್ಲವು, **ಶರಣಂ ವ್ರಜ** ಎಂದರೆ **ಶರಣಮಿತಿ ಜಾನೀಹಿ,** ಶರಣವೆಂದು ತಿಳಿಯತಕ್ಕದ್ದೆಂಬರ್ಥವು, ಆದುದರಿಂದ ಪ್ರಪತ್ತಿಗೆ ಅನುಷ್ಠಾನ ಬೇಕಿಲ್ಲವು, ಬರೀ ಜ್ಞಾನ ಮಾತ್ರವೇ ಎಂಬದಾಗಿ ಪೂರ್ವಪಕ್ಷವು, ಇದಕ್ಕೆ ಸಮಾಧಾನವನ್ನು ಹೇಳುತ್ತಾರೆ. **ಶರಣಂ ವ್ರಜ ಎಙ್ಙಿರುವುದು** - ಶರಣಂವ್ರಜ ಎಂದು ಹೇಳಿರುವುದು, **"ಇನುಮರ್ಥಂಜಾನೀಹಿ"** - "ಶ್ರೀಕೃಷ್ಣನಾದ ನಾನು **ಶರಣವೆಂಬಭಿಪ್ರಾಯವನ್ನು** ಅರ್ಜುನನಾದ ನೀನು ತಿಳಿಯುತಕ್ಕದ್ದು" **ಎಙ್ಙಿರಮಾತ್ರಮಾಯ್** - ಇಷ್ಟು ಮಾತ್ರ ಅಭಿಪ್ರಾಯವುಳ್ಳದಾಗಿ, ಮಾತ್ರಶಬ್ದದಿಂದ ಅನುಷ್ಠಾನ ಪರವಲ್ಲವೆಂಬ ಭಾವವು, ಇದನ್ನೇ ಮುಂದೆ ವಿವರಿಸುತ್ತಾರೆ, **ಒರುಕರ್ತವ್ಯೋಪಾಯ ವಿಧಿಪರಮನ್ರಿಕ್ಕೇ** - ಒಂದು ಮಾಡಬೇಕಾಗಿರುವ **ಉಪಾಯವನ್ನು** ವಿಧಿಸುವದಿಲ್ಲವಾಗಿ, **ಒಳಿನ್ದಾಲೋ ಎನ್ನಿಲ್**-ಪ್ರಾಪ್ತವಾದುದು ಎಂದರೋ, ಹೀಗೆ **ಪೂರ್ವಪಕ್ಷ** ತಂದರೆ ಎಂಬ ಭಾವವು, **ಮಾಮೇಕಂ ಶರಣಂ** - ನಾನೊಬ್ಬನೇ ನಿನಗೆ **ಉಪಾಯವು** ಎಂದು **ವ್ರಜ** - ತಿಳಿ ಎಂಬುದೀಗ ಅರ್ಥವಾಗಿ, ಆ ಕಾರಣದಿಂದ ಅನುಷ್ಠಿಸಬೇಕಾದ ಯಾವ ಸಾಧ್ಯೋಪಾಯವೂ ಬೇಕಿಲ್ಲವೆಂದು ಅರ್ಥಮಾಡಿದರೆ ಎಂಬರ್ಥವು, ಹೀಗೆ ಅರ್ಥಮಾಡಿದರೆ ಇದು, **ಶಬ್ದಸ್ವಾರಸ್ಯ ವಿರುದ್ಧಮ್** - ವ್ರಜ ಎಂಬುದು **ಲೋಟ್,** ಅದಕ್ಕೆ ಕೃತಿಸಾಧ್ಯವಾದ ವಿಧಿಯಲ್ಲೇ ಅರ್ಥಸ್ವಾರಸ್ಯವಿರುವದರಿಂದ, ಅದಕ್ಕೆ ವಿರುದ್ಧವಾಯಿತು ಎಂಬ ಭಾವವು. **ಶರಣಂ ವ್ರಜ** ವೆಂಬುದಕ್ಕೆ ಶರಣಾಗತ್ಯನುಷ್ಠಾನದಲ್ಲಿ ಅರ್ಥಸ್ವಾರಸ್ಯವೇ ವಿನಾ, ಜ್ಞಾನಮಾತ್ರೋಪದೇಶದಲ್ಲಿ ಸ್ವಾರಸ್ಯವಿಲ್ಲವೆಂಬ ಭಾವವು. ಇಷ್ಟುಮಾತ್ರವೇ ಅಲ್ಲವು, ಇನ್ನೂ ಒಂದು ದೋಷವುಂಟು, ಅದೇನಂದರೆ ಪ್ರಪತ್ತಿಯನ್ನು ಸ್ಫುಟತರವಾಗಿ ವಿಧಿಸುವ ಅನೇಕ ಪ್ರಮಾಣಗಳಿಗೆ ವಿರುದ್ಧವಾದುದೂ ಆಗುತ್ತದೆಂದು ಮುಂದೆ ಹೇಳುತ್ತಾರೆ

**"ತಾಂ ಪ್ರಪತ್ತಿಂ** - ಅಂತಹ ಪರಿಕರಗಳುಳ್ಳ ಪ್ರಪತ್ತಿಯನ್ನು, **ಪ್ರಯುಂಜೀತ** – ಅನುಷ್ಠಿಸತಕ್ಕದ್ದು" **ಇತ್ಯಾದಿಗಳಾನ** - ಇವೇ ಮೊದಲಾದ, **ಸಪರಿಕರ ಸ್ಫುಟತರ ಪ್ರಪತ್ತಿ ವಿಧಿಗಳೋಡುಮ್** - ಇದು ಅಂಗಗಳಿಂದ ಕೂಡಿ

(೧)"ಪ್ರಪತ್ತಿಂ ತಾಂ ಪ್ರಯುಂಜೀತ ಸ್ವಾಙ್ಗೈಃ ಪಂಚಭಿರಾವೃತಾಂ" ಇತ್ಯಾದಿಗಳಾನ ಸಪರಿಕರ ಸ್ಫುಟತರ ಪ್ರಪತ್ತಿ ವಿಧಿಗಳೋಡುಮ್ ವಿರೋಧಿಕ್ಕುಮ್. ಈಶ್ವರರ್ ಮೋಕ್ಷೋಪಾಯ ಮೆಙ್ಗಿರ ವಿವ್ವಳವೇ ಇಙ್ಗು ವಕ್ತವ್ಯಮಾಯ್, ಮೋಕ್ಷಾಧಿಕಾರಿಕ್ಕು ವಿಧೇಯಾಂತರ ಮನ್ರಿಕ್ಕೇಯೊಳಿಂದಾಲ್, ಇನ್ನಿಡಮ್ ಪ್ರಸ್ತುತಮಾನ ಭಕ್ತಿಯೋಗತ್ತುಕ್ಕಪೇಕ್ಷಿತಮಾನ ತತ್ತ್ವೋಪದೇಶ ಮಾತ್ರಮಾಮ್.

---

ಬಹು ವ್ಯಕ್ತವಾಗಿ ತೋರುವ ಪ್ರಪತ್ತಿ ವಿಧಿಗಳಿಗೂ ಸಹ, ವಿರೋಧಿಕ್ಕುಮ್ - ವಿರುದ್ಧವಾದುದಾಗುತ್ತದೆ. ಯಾವುದು ಎಂದರೆ "ಶರಣಂ ವ್ರಜ ಎಂಬಲ್ಲಿ ವ್ರಜ ಎಂಬ ವಿಧಿಗೆ ಬುದ್ಧ್ಯರ್ಥವನ್ನು ಕಲ್ಪಿಸೋಣವು" ಎಂದು ಇಟ್ಟುಕೊಳ್ಳತಕ್ಕದ್ದು ಲಕ್ಷ್ಮೀತಂತ್ರದಲ್ಲಿರುವ ಪೂರಾವಾಕ್ಯವು, "ಪ್ರಪತ್ತಿಂ ತಾಂ ಪ್ರಯುಂಜೀತ ಸ್ವಾಂಗೈಃ ಪಂಚಭಿ ರಾವೃತಾಂ" ಎಂದಿರುವುದರಿಂದ ಸಪರಿಕರ ಸ್ಫುಟತರ ಪ್ರಪತ್ತಿ ಎಂದು ಹೇಳಿರುತ್ತಾರೆ ಇಲ್ಲಿ ಇತ್ಯಾದಿ ಎಂದು ಆದಿ ಪದದಿಂದ ಪ್ರಪತ್ತಿಯನ್ನು ಬೋಧಿಸುವ ಇತರ ವಿಧಿವಾಕ್ಯಗಳೆಲ್ಲಾ ಸೂಚಿಸಲ್ಪಟ್ಟವು (ನೆಯ ಪುಟವನ್ನು ನೋಡಿ) ಶರಣಂ ವ್ರಜ ಎಂಬಲ್ಲಿ ಕಷ್ಟಪಟ್ಟು ವ್ರಜ ಶಬ್ದಕ್ಕೆ ಜಾನೀಹಿ ಎಂದು ಅರ್ಥಮಾಡಿದಿರಿ ; ಪ್ರಯುಂಜೀತ ಎಂಬ ವಿಧಿಗೆ ಹಾಗೆ ಅರ್ಥ ಕಲ್ಪಿಸೋಣವು ಸಾಧ್ಯವಿಲ್ಲವಷ್ಟೇ ಎಂಬಭಿಪ್ರಾಯವು. ಪ್ರಾಪ್ತವಾಗುವ ಪೂರನೆಯ ದೋಷವನ್ನು ಹೇಳುತ್ತಾರೆ, ಈಶ್ವರರ್ - ಸರ್ವೇಶ್ವರನು, ಮೋಕ್ಷೋಪಾಯವು, ಎಙ್ಗಿರ - ಎಂದು ಹೇಳುವ, ಇವ್ವಳವೇ - ಇಷ್ಟುಮಾತ್ರವೇ, ವಕ್ತವ್ಯಮಾಯ್-ಹೇಳತಕ್ಕದ್ದಾಗಿ, ಮೋಕ್ಷಾಧಿಕಾರಿಗೆ, ವಿಧೇಯಾಂತರ ಮನ್ರಿಕ್ಕೇ-ಬೇರೆ ವಿಧಿರೂಪದಲ್ಲಿ ವಿಧಿಸತಕ್ಕದ್ದು ಯಾವುದೂ ಇಲ್ಲದಿರೋಣ ಹೇಗೋಹಾಗೆ, ಒಳಿಂದಾಲ್ - ಬಿಟ್ಟು, ಬಿಟ್ಟರೆ, ಇನ್ನಿಡಂ - ಈ ಸಂದರ್ಭವು ಎಂದರೆ ಶರಣಂ ವ್ರಜ ಎಂಬ ಪ್ರಕರಣವು, ಪ್ರಸ್ತುತಮಾನ ಭಕ್ತಿಯೋಗತ್ತುಕ್ಕು - ಈಗ ಉದ್ದಿಶ್ಯವಾದ ಭಕ್ತಿಯೋಗಕ್ಕೆ ಅಪೇಕ್ಷಿತಮಾನ - ಬೇಕಾಗಿರುವ, ತತ್ತ್ವೋಪದೇಶಮಾಮ್ - ಪ್ರಪತ್ತಿರೂಪ ಸಾಧ್ಯೋಪಾಯ ವಿಧಿಯನ್ನು ಬೋಧಿಸುವದಕ್ಕೆ ಬದಲಾಗಿ ಸುಮ್ಮನೆ ತತ್ತ್ವೋಪದೇಶವನ್ನು ಮಾತ್ರ ಮಾಡಿದಹಾಗಾಗುತ್ತದೆ ಶ್ರೀ ಭಾಷ್ಯಕಾರರು ಇದನ್ನು ಮೋಕ್ಷೋಪಾಯ ವಿಧಿಯೆಂಬದಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಅದಕ್ಕೆ ವಿರೋಧಿಸುತ್ತದೆ ಎಂಬ ಭಾವವು.

---

(೧) ಲಕ್ಷ್ಮೀ ತಂತ್ರ ೨೮. ೧೧ ೭

## ಸ್ವಯತ್ನ ನಿವೃತ್ತಿರೇವ ಪ್ರಪತ್ತಿರಿತಿ ಪಕ್ಷಸ್ಯ ಪ್ರತಿಕ್ಷೇಪಃ.

ಇಹ ತತ್ತ್ವಜ್ಞಾನ ಮುಮುಕ್ಷೋರ್ಯುವನುಕ್ಕು ಸ್ವರಕ್ಷಣಾರ್ಥ ಸ್ವವ್ಯಾಪಾರ ನಿವೃತ್ತಿಯೇ ಪ್ರಪತ್ತಿಯಾಯ್. ಸರ್ವಧರ್ಮ ಸ್ವರೂಪತ್ಯಾಗ ಮಾತ್ರಮ್ ಸಾಧ್ಯಮಾಗ ವಿಧಿಕ್ಕ ಪಡಾಗಿರದೆನ್ಬಾರುಕ್ಕು, ನಿವೃತ್ತಿರೂಪಮೇಯಾಗಿಲುಮ್, ಸಾಧ್ಯಮಾಗ ವಿಧಿಕ್ಕಪ್ಪಟ್ಟ ಸರ್ವಧರ್ಮತ್ಯಾಗಮ್ ತಾನ್, ಸ್ವರಕ್ಷಣಾರ್ಥ ಸ್ವವ್ಯಾಪಾರ ಮಾಗೈಯಾಲೇ, ಸ್ವವಚನ ವಿರೋಧಮುಮ್, ಸಾಙ್ಗಪ್ರಪತ್ತಿ ವಿಧಾಯಕಮಾನ ವಾಕ್ಯ ವಿರೋಧಮುಮ್, ವರುಮ್

---

## ಸ್ವಯತ್ನ ನಿವೃತ್ತಿಯೇ ಪ್ರಪತ್ತಿಯು ಎಂಬ ಅಭಿಪ್ರಾಯದ ಖಂಡನವು

ಇಹ - ಈ ಸಂದರ್ಭದಲ್ಲಿ. ತತ್ತ್ವಜ್ಞಾನವಿರುವ ಮೋಕ್ಷಾರ್ಥಿಗೆ, ಸ್ವರಕ್ಷಣಾರ್ಥ-ಸ್ವರಕ್ಷಣವೇ ಪ್ರಯೋಜನವಾಗಿ ವುಳ್ಳ, ಸ್ವವ್ಯಾಪಾರ ನಿವೃತ್ತಿಯೇ- ತನ್ನ ವ್ಯಾಪಾರಗಳನ್ನು ತ್ಯಜಿಸುವದೇ, ಪ್ರಪತ್ತಿಯಾಯ್ - ಪ್ರಪತ್ತಿ ಎಂದು ಹೇಳಿಸಿಕೊಂಡು, ಸರ್ವಧರ್ಮ ಸ್ವರೂಪತ್ಯಾಗ ಮಾತ್ರಮ್ - ಸರ್ವಧರ್ಮಾನ್ ಪರಿತ್ಯಜ್ಯ ಎಂಬ ವಿಧಿಯ ಮೂಲಕ ಸಮಸ್ತ ಧರ್ಮಗಳ ಸ್ವರೂಪತ್ಯಾಗ ಮಾತ್ರವೇ, ಸಾಧ್ಯಮಾಗ - ಸಾಧ್ಯವಾದುದಾಗಿ, ವಿಧಿಕ್ಕಪಡಾಗಿರದು - ವಿಧಿಸಲ್ಪಡುವದು, ಎನ್ಬಾರ್ಕ್ಕು - ಎಂದು ಹೇಳುವವರಿಗೆ, ನಿವೃತ್ತಿ ರೂಪಮೇಯಾಗಿಲುಮ್ - ಪ್ರವೃತ್ತಿ ರೂಪ ವಿಲ್ಲದೆ ಬರೀ ತ್ಯಾಗರೂಪವಾದುದಾದರೂ, ಸಾಧ್ಯಮಾಗ ವಿಧಿಕ್ಕಪ್ಪಟ್ಟ-ಸಾಧ್ಯವಾದುದೆಂದು ವಿಧಿಸಿರುವ, ಸರ್ವಧರ್ಮಗಳ ತ್ಯಾಗವೂ ಕೂಡ, ಸ್ವರಕ್ಷಣಾರ್ಥ ಸ್ವವ್ಯಾಪಾರ ಮಾಗೈಯಾಲೇ - ಸ್ವರಕ್ಷಣಕ್ಕಾಗಿ ಮಾಡಿದ ನಿವೃತ್ತಿರೂಪ ವ್ಯಾಪಾರವಾದುದರಿಂದ, ಸ್ವವಚನ ವಿರೋಧಮುಮ್ - ತ್ಯಾಗ ಮಾಡಿದೆ ಎಂಬ ವಚನಕ್ಕೆ ವಿರೋಧವೂ, ಸಾಙ್ಗಪ್ರಪತ್ತಿ ವಿಧಾಯಕಮಾನ ವಾಕ್ಯ ವಿರೋಧಮುಮ್ ವರುಮ್ - ಐದು ಅಙ್ಗಗಳಿಂದ ಕೂಡಿದ ಅಙ್ಗಿಯಾದ ಆತ್ಮನಿಕ್ಷೇಪವನ್ನು ವಿಧಿಸುವ ಪ್ರಮಾಣ ವಾಕ್ಯಗಳಿಗೂ ವಿರೋಧ ಉಂಟಾಗುತ್ತದೆ. ಸರ್ವಧರ್ಮಾನ್ ಪರಿತ್ಯಜ್ಯ ಎಂದು ವಿಧಿಸುವದರಿಂದ, ಸ್ವರಕ್ಷಣಕ್ಕಾಗಿ ಎಲ್ಲಾ ಪ್ರವೃತ್ತಿಗಳನ್ನೂ ಬಿಡತಕ್ಕದ್ದು ಎಂದ ಏರ್ಪಟ್ಟಿತು ; ಇದೇ ಪ್ರಪತ್ತಿಯೆಂದೇ ಭಾವಿಸತಕ್ಕದ್ದೇ ವಿನಾ, ಬೇರೆ ಇನ್ನು

**ಪ್ರಪತ್ತಿಕ್ಕು ಸಾಧನತ್ವಮಾದಲ್ ಸಿದ್ಧಸಾಧನ ಸಹಕಾರಿತ್ವ ಮಾದಲ್ ಕೊಳ್ಳಿಲ್, ಸಿದ್ಧೋಪಾಯಮಾನ ಈಶ್ವರನುಡೈಯ ಏಕತ್ವಂ, ಸಿದ್ಧತ್ವಂ, ಪರಮಚೇತನತ್ವಂ, ಪರಮ ಕಾರುಣಿಕತ್ವಂ, ಸರ್ವಶಕ್ತಿತ್ವಂ, ನಿರಪೇಕ್ಷತ್ವಂ, ಮುದಲಾನ ಸ್ವಭಾವ ವಿಶೇಷಙ್ಗಳುಕ್ಕು ವಿರುದ್ಧಮಾಮೆನ್ನುಮ್ ಪ್ರಸಙ್ಗಗಳ್, ಶ್ರುತಿ ಸ್ಮೃತಿ ವಿರೋಧ, ವ್ಯಾಪ್ತಿಶೂನ್ಯತ್ವಾದಿ ದೋಷಙ್ಗಳಾಲೇ ತರ್ಕಾಭಾಸಙ್ಗಳ್.**

---

**ಯಾವ** ಪ್ರವೃತ್ತಿರೂಪವಾದ ಪ್ರಪತ್ತ್ಯನುಷ್ಠಾನವೂ ಸರಿಯಲ್ಲವೆಂದು ಕೆಲವರ **ಮತವು** ಈ ಅಭಿಪ್ರಾಯ ಸರಿಯಲ್ಲವೆಂದು ಎರಡು ಕಾರಣಗಳಿಂದ **ತಿಳಿಸು ತ್ತಾರೆ.** (೧) ಸ್ವರಕ್ಷಣ ದಾಗ ಸ್ವಧರ್ಮಸ್ವರೂಪ ತ್ಯಾಗವೂ ಕೂಡ ಸ್ವರಕ್ಷಣಾರ್ಥವಾಗಿ ಮಾಡಿದ ಒಂದು ಉಪಾಯವಾಗಲಿಲ್ಲವೋ? ಆಗ ಸ್ವರಕ್ಷಣಾರ್ಥ ಸ್ವವ್ಯಾಪಾರ ನಿವೃತ್ತಿಯಾಗಲಿಲ್ಲನೇ? ಸ್ವವಚನ ವಿರೋಧ ಉಂಟಾಯಿತಲ್ಲವೇ ಎಂಬ ಭಾವವು (೨) ನ್ಯಾಸಪ್ರಪದನವನ್ನು ವಿಧಿಸುವ ಅನೇಕ ಪ್ರಮಾಣಗಳಿವೆ, ಅವುಗಳಿಗೆಲ್ಲಾ ವಿರೋಧವಾಗುವುದೂ ಆಗುತ್ತದೆ

ಹೀಗೆ ಎರಡು ಕಾರಣಗಳಿಂದ ಸ್ವರಕ್ಷಣಾರ್ಥ ಸ್ವವ್ಯಾಪಾರ ನಿವೃತ್ತಿಯೇ **ಪ್ರಪತ್ತಿ**ಯೆಂಬ ಅಭಿಪ್ರಾಯವು ಸರಿಯಲ್ಲವೆಂದು ತೋರಿಸಿ, ಈ ಪಕ್ಷದವರು ತಮ್ಮ ಅಭಿಪ್ರಾಯದ ಮೇಲೆ ಅಪಾದಿಸುವ ದೋಷಗಳಿಗೆ ಸಮಾಧಾನಗಳನ್ನು **"ಪ್ರಪತ್ತಿಕ್ಕು"** ಎಂಬ ಮುಂದಿನ ವಾಕ್ಯದಿಂದ ಹೇಳುತ್ತಾರೆ

**ಪ್ರಪತ್ತಿಕ್ಕು** - ಪ್ರಪದನಕ್ಕೆ, **ಸಾಧನತ್ವ ಮಾದಲ್** - ಸಾಧ್ಯೋಪಾಯ ರೂಪದಲ್ಲಿ ಸಾಧನತ್ವವನ್ನಾಗಲಿ, ಅಥವಾ, **ಸಿದ್ಧಸಾಧನ ಸಹಕಾರಿತ್ವ ಮಾದಲ್** - ಸಿದ್ಧೋಪಾಯತ್ವಕ್ಕೆ ಸಹಕಾರಿಯಾಗಿರವದನ್ನಾಗಲಿ **ಕೊಳ್ಳಿಲ್** - ಅಙ್ಗೀಕರಿಸಿದರೆ, ಸಿದ್ಧೋಪಾಯವಾದ **ಸರ್ವೇಶ್ವರನ, ಏಕತ್ವ** - ಒಬ್ಬನೇ ಎನ್ನುವದಕ್ಕೂ, **ಸಿದ್ಧತ್ವಂ** - ಸಿದ್ಧೋಪಾಯನೆಂಬ ಭಾವಕ್ಕೂ, **ಪರಮಚೇತನತ್ವಂ**- ಆತನ ಸರ್ವೋತ್ಕೃಷ್ಟ ಚೇತನ ಭಾವಕ್ಕೂ, **ಪರಮ ಕಾರುಣಿಕತ್ವಂ** - ಪರಮ ಕಾರುಣಿಕನೆಂಬ ಭಾವಕ್ಕೂ, **ಸರ್ವಶಕ್ತಿತ್ವಂ** - ಸರ್ವಶಕ್ತಿಯುಳ್ಳ ಭಾವಕ್ಕೂ, **ನಿರಪೇಕ್ಷತ್ವಂ** - ಆತನು ಯಾವುವನ್ನೂ ಅಪೇಕ್ಷಿಸದೇ ಇರುವ ಭಾವಕ್ಕೂ, **ಮುದ, ಲಾನ ಸ್ವಭಾವ ವಿಶೇಷಙ್ಗಳುಕ್ಕು** - ಇವೇ ಮೊದಲಾದ ಗುಣವಿಶೇಷಗಳಿಗೆ ಇವೇ ಮೊದಲಾದ ಎಂಬುದರಿಂದ **ಪೂರ್ಣತ್ವಕ್ಕೂ** ವಿರೋಧವು, ಸಾಧ್ಯೋಪಾಯ ಸಾಪೇಕ್ಷತ್ವವಿರುವದರಿಂದ ಈಶ್ವರನ ಪರಿಪೂರ್ಣತ್ವಕ್ಕೆ ವಿರೋಧವೆಂಬ ಭಾವವೂ,

**ವಿರುದ್ಧಮಾಮ್** - ವಿರುದ್ಧವಾಗುತ್ತದೆ, **ಎನ್ನುಪಸ್ ಪ್ರಸಙ್ಗಗಳ್** - ಎನ್ನುವ ಆಕ್ಷೇಪಗಳು, ಶ್ರುತಿ ಸ್ಮೃತಿಗಳಿಗೆ ವಿರೋಧವೇನು, ವ್ಯಾಪ್ತಿ **ಶೂನ್ಯತ್ವ**-ಪಕ್ಷದಲ್ಲಿ ಹೇತುವಿಲ್ಲದಿರುವ ವ್ಯಾಪ್ತಿಯಿಲ್ಲದಿರೋಣವೇನು, **ಆದಿ** - ಇವೇ ಮೊದಲಾದ, **ದೋಷಙ್ಗಳಾಲೇ**-ದೋಷಗಳ ಮೂಲಕವಾಗಿ, ತರ್ಕಾಭಾಸಙ್ಗಳ್ - ಕುತರ್ಕಗಳು, ಪ್ರಪತ್ತಿ ಬೇರೆ ಬೇಕಾದುದಲ್ಲವು, ಸ್ವರಕ್ಷಣ ಪ್ರವೃತ್ತಿ ನಿವೃತ್ತಿಯೇ ಪ್ರಪತ್ತಿ ಎಂದು ಕೆಲವರು ಅಭಿಪ್ರಾಯಪಡುವರು, ಇದು ಸ್ವವಚನ ವಿರೋಧವಾದುದೆಂದೂ ಅನೇಕ ವಿಧಿಪ್ರಮಾಣಗಳಿಗೂ ವಿರೋಧವಾದುದೆಂದೂ ಹೇಳಿದರು. ಅವರುಗಳು ಪ್ರಪತ್ತಿಯನ್ನು ನಿರಾಕರಿಸಲು ಕಾರಣವನ್ನು ಹೇಳುತ್ತಾರೇನೆಂದರೆ— ಪ್ರಪತ್ತಿಯನ್ನು ಅಂಗೀಕರಿಸುವದರಿಂದ ಆತನ ಅನೇಕ ಮಹತ್ವಗಳಿಗೆ ಕುಂದಕವಾಗುತ್ತದೆ ಹೇಗೆಂದರೆ :—

(೧) ಸಾಧ್ಯೋಪಾಯವೂ ಒಂದು ಬೇಕು ಎಂಬುದರಿಂದ ಸಿದ್ಧೋಪಾಯನಾಗಿ ಒಬ್ಬನೇ ಎಂಬುದಕ್ಕೆ ಕುಂದಕವು (೨) ಸಾಧ್ಯೋಪಾಯವೂ ಒಂದು ಬೇಕು ಎಂದರೆ, ಸಿದ್ಧತ್ವಕ್ಕೆ ಹಾನಿಯು. (೩) ಗೋಪ್ತೃತ್ವವರಣದ ಮೂಲಕ ಸ್ವಾಭಿಪ್ರಾಯವನ್ನು ತಿಳಿಸಬೇಕು ಎಂದರೆ ಸರ್ವೋತ್ಕೃಷ್ಟ ಚೇತನತ್ವಕ್ಕೆ ಕುಂದಕವು, ಸರ್ವಜ್ಞನಾದುದರಿಂದ ತಾನೇ ತಿಳಿಯತಕ್ಕದ್ದು. (೪) ಸಾಧ್ಯೋಪಾಯದಿಂದ ಆತನನ್ನು ವಶಮಾಡಿಕೊಳ್ಳಬೇಕು ಎಂದರೆ, ಆತನ ಪರಮಕಾರುಣಿಕತ್ವಕ್ಕೆ ಭಂಗವು (೫) ಪ್ರಪತ್ತಿಯ ಸಹಕಾರಿತ್ವವಿಲ್ಲದೆ ರಕ್ಷಿಸುವನಲ್ಲವು ಎಂದರೆ ಪ್ರಪತ್ತಿಯಿಲ್ಲದೆ ಆತನಿಗೆ ರಕ್ಷಿಸಲು ಶಕ್ತಿಯಿಲ್ಲವೆಂದಾಗಿ ಸರ್ವಶಕ್ತಿತ್ವಕ್ಕೆ ವಿರೋಧವು. (೬) ಶಕ್ತನಾಗಿದ್ದರೂ ಪ್ರಪತ್ತಿಯ ಸಹಕಾರಿತ್ವವನ್ನು ಅಪೇಕ್ಷಿಸುವನೆಂದರೆ ಆತನ ನಿರಪೇಕ್ಷತ್ವಕ್ಕೆ ಕುಂದಕವು, ಹೀಗೆ ಅವರ ಆಕ್ಷೇಪಗಳು. ಇವುಗಳೆಲ್ಲಾ ಶ್ರುತಿ ಸ್ಮೃತಿ ವಿರೋಧವೇನು, ವ್ಯಾಪ್ತಿಶೂನ್ಯತೆ ಏನು, ಇಂತಹ ದೋಷಯುಕ್ತಗಳಾದುದರಿಂದ ಸತ್ತರ್ಕಗಳಲ್ಲವೆಂದು ಹೇಳುತ್ತಾರೆ. ಹೇಗೆಂದರೆ—

(೧) "ಬ್ರಹ್ಮಣೇತ್ವಾಮಹಸ ಓಮಿತ್ಯಾತ್ಮಾನಂ ಯುಂಜೀತ" ತೈ. ನಾರಾ (ಹಿಂದೆ ನೆಯ ಪುಟ ನೋಡಿ) ಎಂಬ ಶ್ರುತಿಗೆ ವಿರೋಧವು.

(೨) "ಹವಿರ್ನ್ಯರ್ಹಿತ್ವಾತ್ಮರೂಪಂ ವಸುರಣ್ಯೇತಿ ಮಂತ್ರತಃ ।
ಜುಹುಯಾತ್ಪ್ರಣವೇನಾಗ್ನಾ ವಚ್ಯುತಾಖ್ಯೇ ಸನಾತನೇ ॥

(೩) ಮುಮುಕ್ಷುರ್ವೈಶರಣಮಹಂ ಪ್ರಪದ್ಯೇ" ಇದಕ್ಕೂ ವಿರೋಧವು

(೪) "ಭಕ್ತ್ಯಾ ಪರಮಯಾವಾಪಿ ಪ್ರಪತ್ತ್ಯಾವಾ ಮಹಾಮತೇ"
ಪ್ರಾಪ್ಯೋಹಂ ನಾನ್ಯಥಾ ಪ್ರಾಪ್ಯೋ ಮಮಕೈಙ್ಕರ್ಯಲಿಪ್ಸುಭಿಃ

ಎಂಬ ಸ್ಮೃತಿಗೆ ವಿರೋಧವು.

ವಿಭೀಷಣ, ಗಜೇಂದ್ರ, ಕಾಕ, ಕಾಳೀಯನು ಪ್ರಸದನವನ್ನು ಅನುಷ್ಠಿಸಿದರೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ ಭಗವಂತನ ಏಕತ್ವ ಸಿದ್ಧತ್ವ, ಪರಮ ಚೇತನತ್ವ, ಪರಮ ಕಾರುಣಿಕತ್ವ, ಸರ್ವ ಶಕ್ತಿತ್ವ, ನಿರಪೇಕ್ಷತ್ವಗಳಿಗೆ ಏನೊಂದೂ ವಿರೋಧವಿಲ್ಲವು. ಹಾಗೆ ವಿರುದ್ಧವಾಗಿದ್ದರೆ ಮಹರ್ಷಿಗಳು ಉಪಪಾದಿಸುವರೇ ? ಹಾಗೆಯೇ ಸರ್ವೇಶ್ವರನು ಸರ್ವಜ್ಞನಾಗಿ, ಪರಮಕಾರುಣಿಕನಾಗಿ ಯಿದ್ದರೂ ಧ್ರುವನು ತಪಸ್ಸನ್ನು ಮಾಡಿದನಂತರವೇ, ಅದನ್ನು ಸಾಧನವೆಂದು ಭಾವಿಸಿ ಆತನ ಅಭೀಷ್ಟವನ್ನು ನಡೆಸಿಕೊಟ್ಟನು.

೧. ಎಲ್ಲಿ ಸಹಕಾರಿ ಸಾಪೇಕ್ಷತ್ವವಿದೆಯೋ ಅಲ್ಲಿ ಏಕತ್ವವಿರುವದಿಲ್ಲವೆಂದು ಹೇಳಬೇಕಾಗುತ್ತದೆ. ಸಹಕಾರಿಸಾಪೇಕ್ಷತ್ವವಿದ್ದರೂ ಏಕತ್ವವಿರುವದುಂಟು. ಭಗವಂತನು ಒಬ್ಬನಾಗಿಯೇ ಅನೇಕ ನಿತ್ಯಸೂರಿಗಳ ಸಹಕಾರಿತ್ವವನ್ನು ಹೊಂದಿರುವನು.

೨ ಎಲ್ಲಿ ಸಹಕಾರಿ ಸಾಪೇಕ್ಷತ್ವವಿದೆಯೋ ಅಲ್ಲಿ ಸಿದ್ಧತ್ವವಿಲ್ಲವೆಂದು ಹೇಳಬೇಕಾಗುತ್ತದೆ ಆದರೆ ಸಿದ್ಧತ್ವವಿದ್ದೂ ಸಹಕಾರಿ ಸಾಪೇಕ್ಷತ್ವವುಂಟು ರಾಜರುಗಳು ಸಿದ್ಧರಾಗಿದ್ದರೂ ವಿಶೇಷ ಸಹಕಾರಿ ಸಾಪೇಕ್ಷತ್ವವುಳ್ಳವರಾಗಿರುತ್ತಾರೆ.

೩. ಹಾಗೆಯೇ ಎಲ್ಲಿ ಸಹಕಾರಿ ಸಾಪೇಕ್ಷತ್ವವಿದೆಯೋ, ಅಲ್ಲಿ ಪರಮ ಚೇತನತ್ವವಿಲ್ಲವು, ಅಲ್ಲಿ ಪರಮ ಕಾರುಣಿಕತ್ವವಿಲ್ಲವು, ಅಲ್ಲಿ ಸರ್ವಶಕ್ತಿತ್ವವಿಲ್ಲವು, ಹೀಗೆಲ್ಲಾ ಹೇಳಬೇಕಾಗುತ್ತದೆ. ಪರಮ ಚೇತನನಾದ, ಪರಮ ಕಾರುಣಿಕನಾದ, ಸರ್ವಶಕ್ತನಾದ ಶ್ರೀರಾಮನು, ಸುಗ್ರೀವಾದಿಗಳ ಸಹಕಾರಿತ್ವವನ್ನು ಬಯಸಿದನು **ಪಿಶಾಚಾನ್ ದಾನವಾನ್ ಯಕ್ಷಾನ್ ಅಂಗುಳ್ಯಗ್ರೇಣತಾನ್ ಹನ್ಯಾಮಿಚ್ಛನ್ ಹರಿಗಣೇಶ್ವರ** । ಎಂದು ಶ್ರೀರಾಮನು ಹೇಳಿಯೂ ಕೂಡ, **ಲೋಕನಾಥಃ ಪುರಾಭೂತ್ವಾ ಸುಗ್ರೀವಂ ನಾಥಮಿಚ್ಛತಿ** । ಎಂಬು ಹೇಳಿರುವಹಾಗೆ ಸುಗ್ರೀವಾದಿಗಳ ಸಹಾಯವನ್ನು ಬಯಸಿದನು. ಹೀಗೆ ವ್ಯಾಪ್ತಿ ಶೂನ್ಯತೆ ಎಂಬ ದೋಷವೂ ಉಂಟಾಗುವದರಿಂದ ತರ್ಕಾಭಾಸವೆಂಬ ಭಾವವು.

ಇದೂ ಅಲ್ಲದೆ, ಸಹಕಾರಿ ಸಾಪೇಕ್ಷತ್ವವೂ ಏಕತ್ವಾದಿ ಅರು ಧರ್ಮಗಳೂ ಪರಸ್ಪರ ವಿರೋಧವಾದುವು ಎಂದು ಹೇಳಿದರೆ, ಶಾಸ್ತ್ರಗಳಲ್ಲೂ ಸರ್ವೇಶ್ವರನಿಗೆ ಪರಸ್ಪರ ವಿರುದ್ಧಭಾವಗಳು ಹೇಳಲ್ಪಟ್ಟಿವೆ. ಹೇಗೆಂದರೆ:—ಒಂದು ಕಡೆಯಲ್ಲಿ **ಅರಸಂ ಅರೂಪಂ ಗಂಧವರ್ಜಿತಂ** ಎಂದೂ, ಇನ್ನೊಂದು ಕಡೆಯಲ್ಲಿ **ಸ್ವರ ಗಂಧಸ್ಸರ್ವರಸಃ** ಎಂದೂ, ಹೇಳಲ್ಪಟ್ಟಿದೆ; ಹಾಗೆಯೇ ಒಂದು ಕಡೆಯಲ್ಲಿ ಸಗುಣನೆಂದೂ ಇನ್ನೊಂದು ಕಡೆಯಲ್ಲಿ ನಿರ್ಗುಣನೆಂದೂ ಹೇಳಲ್ಪಟ್ಟಿದೆ. ಇವುಗಳಿಗೆ ಸಾಮಂಜಸ್ಯ ಉಂಟಾಗುವಹಾಗೆ, ಹೇಗೆ ಅರ್ಥಗಳನ್ನು ಹೇಳುತ್ತೇವೋ, ಹಾಗೆಯೇ

ಇಲ್ಲಿಯೂ ಭಾವಿಸತಕ್ಕದ್ದು. ಕಲ್ಯಾಣಗುಣಾಕರನಾಗಿ ಸಗುಣನು, ಪ್ರಾಕೃತ ಹೇಯಗುಣ ರಹಿತನಾಗಿ ನಿರ್ಗುಣನು ಎಂದು ಹೇಗೆ ಹೇಳುತ್ತೇವೋ, ಹಾಗೆಯೇ ಇಲ್ಲಿಯೂ ತನಗೆ ಸ್ವಾಧೀನವಾದ ಸಹಕಾರಿಯನ್ನು ಅಪೇಕ್ಷಿಸಿದರೂ, ಅಂತಾದ್ದನ್ನು ಅಪೇಕ್ಷಿಸದೆಯೂ ಇರಬಹುದಾದುದರಿಂದ ನಿರಪೇಕ್ಷತ್ವ, ಏಕತ್ವ, ಸಿದ್ಧತ್ವ ಯಾವುದಕ್ಕೂ ಕುಂದಕವಿಲ್ಲವು. ತನಗೆ ಸ್ವಾಧೀನವಾದ ವಿಶೇಷ ಸಹಕಾರಿಯನ್ನು ಹೊಂದಿದ್ದರೂ ಸರ್ವಶಕ್ತತೆಗೆ ಕುಂದಕವಿಲ್ಲವು, ಹಾಗೆ ನೋಡಿದರೆ ಸರ್ವ ಶಕ್ತತೆಯಿಲ್ಲದಿದ್ದರೇನೇ ಸ್ವಾಧೀನವಾದ ಸಹಕಾರಿತ್ವವನ್ನು ಹೊಂದಲು ಸಾಧ್ಯವಿಲ್ಲವು ತನ್ನ ಕರುಣೆಯು ಅನೇಕರಿಗೆ ಉಪಯೋಗವಾಗಲೆಂದು ಅನೇಕ ಸಾಧನಗಳನ್ನು ಏರ್ಪಡಿಸಿಕೊಂಡಿರೋಣವೇ ಪರಮ ಕಾರುಣಿಕ ಲಕ್ಷಣವು, ಹಾಗೆಯೇ ಈ ಪ್ರಪತ್ತಿ ಎಂಬ ಸುಲಭೋಪಾಯವನ್ನವಲಂಬಿಸಿದವರನ್ನೆಲ್ಲಾ ರಕ್ಷಿಸಿ ಬಿಡುವೆನೆಂದು ಏರ್ಪಡಿಸಿರುವದೇ ಪರಮಕಾರುಣಿಕತ್ವದ ಮಾಹಾತ್ಮ್ಯೆಯು, ಸರ್ವಜ್ಞನಾಗಿ ಶರಣಾಗತನ ಅಭಿಲಾಷೆ ಏನಿರಬಹುದು ಎಂದು ತಿಳಿದಿದ್ದರೂ, ಫಲವು ಪುರುಷಾರ್ಥವೆಂದು ತಿಳಿಯುವದಕ್ಕಾಗಿಯೂ, ಲೋಕದಲ್ಲಿ ಭಕ್ತಾಭೀಷ್ಟವನ್ನು ಭಗವಂತನು ಸಲ್ಲಿಸಿದನೆಂಬ ಪ್ರತೀತಿಯುಂಟಾಗುವದಕ್ಕಾಗಿಯೂ, ಗೋಪ್ತೃತ್ವವರಣವು ; ಇದರಿಂದ ಸರ್ವಜ್ಞತ್ವವುಳ್ಳ ಪರಮಚೇತನತ್ವಕ್ಕೇನೂ ಕುಂದಕ ವಿಲ್ಲವು. **ವ್ಯಾಪ್ತಿ ಶೂನ್ಯತ್ವಾದಿ ದೋಷಙ್ಗಳ್** ಎಂಬಲ್ಲಿ ಆದಿಪದದಿಂದ ವೈಷಮ್ಯ ನೈರ್ಘೃಣ್ಯದೋಷವೂ ಕೂಡ ಸರ್ವೇಶ್ವರನಿಗೆ ಆರೋಪಿಸದಂತಾಗುತ್ತದೆ ಉಪಾಯಾನುಷ್ಠಾನಮಾಡಿದ ಪರಮಭಕ್ತನನ್ನೂ, ಮಹಾ ಪಾಪಿಯಾದವನನ್ನೂ, ಉಪಾಯದ ಆವಶ್ಯಕತೆಯಿಲ್ಲದೆ ರಕ್ಷಿಸಿಬಿಟ್ಟರೆ, ಸರ್ವೇಶ್ವರನು ಪಕ್ಷಪಾತಿಯೆಂದೆನಿಸಲ್ಪಡುವನು. ಇಂತಹ ದೋಷಗಳೆಲ್ಲಾ ಪ್ರಾಪ್ತವಾಗುವದರಿಂದ ತರ್ಕಾಭಾಸಗಳು.

ಹೀಗೆ ಮೇಲೆ ಹೇಳಿದ ಪೂರ್ವಪಕ್ಷಗಳೆಲ್ಲಾ ದೋಷಯುಕ್ತಗಳೆಂದು ತೋರಿಸಿದರು ಶ್ರುತಿ ಸ್ಮೃತಿಗಳಿಗೆ ವಿರೋಧವೂ, ತರ್ಕಗಳಲ್ಲಿ ಆಭಾಸವೂ, ಸರ್ವೇಶ್ವರನು ಪಕ್ಷಪಾತಿಯೂ, ಇತ್ಯಾದಿ ದೋಷಗಳು ಪ್ರಾಪ್ತವಾಗುತ್ತವೆ ಎಂದು ಹೇಳಿದರು. ಅವರುಗಳು ಹೇಳಿರುವ ತರ್ಕಗಳಲ್ಲಿ ಏನೊಂದೂ ದೋಷ ವಿಲ್ಲವೆಂದೂ ಅವುಗಳು ಆ ಕಾರಣದಿಂದ ಸತ್ತರ್ಕಗಳೆಂದೂ ಒಪ್ಪಿಕೊಂಡರೂ ಆಗಲೂ ಉಂಟಾಗುವ ಬಾಧಕಗಳನ್ನು ತಿಳಿಸುತ್ತಾರೆ.

**ಇವತ್ತೈ** - ಮೇಲೆ ಹೇಳಿದ ಆಕ್ಷೇಪಣೆಗಳನ್ನು, **ಸತ್ತರ್ಕಙ್ಗಳಾಗ** - ನ್ಯಾಯವಾದವುಗಳೆಂದು, **ನಿನ್ಱೈಕ್ಕಿಲ್** – ಒಪ್ಪಿಕೊಂಡರೂ, ಎಂದರೆ ಉಪಾಯದ ಆವಶ್ಯಕತೆಯನ್ನು ಒಪ್ಪಿಕೊಂಡರೆ, ಸರ್ವೇಶ್ವರನ ಏಕತ್ವ, ಸಿದ್ಧತ್ವ, ಪರ

**ಇವತ್ತಿೃ ಸತ್ತರ್ಕ್ಕಙ್ಙಳಾಗ ನಿನ್ನೈಕ್ಕಿಲ್ ಉಪಾಸನತ್ತುಕ್ಕಿಶೈನ್ದ ಸಾಧನಭಾವಾದಿಗಳಿಲುಮ್ ಇಪ್ರಸಙ್ಗಙ್ಗಳ್ ವರುಮ್.**

**ಉಪಾಸನಂ ತಾನುಮ್ ಸಾಧನ ಮನ್ರೆನ್ನಿಲ್, "ಸರ್ವಧರ್ಮಾನ್ ಪರಿತ್ಯಜ್ಯ" ಎಙ್ಗಿರ ವಿಡತ್ತಿಲ್ ಉಪಾಸನತ್ತೈಯುಮ್ ಧರ್ಮಶಬ್ದಾರ್ಥವಾಗ ವ್ಯಾಖ್ಯಾನಮ್ ಪಣ್ಣುಗೈಯಾಲೇ ಸ್ವವಚನ ವಿರೋಧ ಮುಣ್ಡಾಮ್.**

---

ಮಹಾಕಾರುಣಿಕತ್ವಾದಿಗಳಿಗೆ ವಿರೋಧವಾಗುತ್ತದೆ ಎಂಬ ವಾದವು ಸಮಂಜಸವಾದುದೆಂದು ಒಪ್ಪಿದರೂ, **ಉಪಾಸನತ್ತುಕ್ಕು** – ಉಪಾಸನಕ್ಕೆ, **ಇಶೈನ್ದ** – ಪ್ರತಿಕಕ್ಷಿಗಳಪೇಕ್ಷಿಸುವ, **ಸಾಧನ ಭಾವಾದಿಗಳಿಲುಮ್** – ಸಾಧನ ಭಾವವೇ ಮೊದಲಾದುವುಗಳಲ್ಲೂ, **ಇಪ್ರಸಙ್ಗಙ್ಗಳ್** – ಈ ಆಕ್ಷೇಪಗಳು, **ವರುಮ್** – ಪ್ರಾಪ್ತವಾಗುತ್ತವೆ ಪ್ರಪತ್ತಿಗೆ ಸಾಧನತ್ವವನ್ನು ಅಙ್ಗೀಕರಿಸದವರು ಉಪಾಸನಕ್ಕೆ ಮಾತ್ರ ಸಾಧನತ್ವವನ್ನು ಅಙ್ಗೀಕರಿಸಿರುತ್ತೀರಲ್ಲಾ, ಆಗಲೂ ಏಕತ್ವ, ಸಿದ್ಧತ್ವ, ಪರಮಚೇತನತ್ವ ಪರಮಕಾರುಣಿಕತ್ವ, ಸರ್ವಶಕ್ತಿತ್ವ, ನಿರಪೇಕ್ಷತ್ವ ಮೊದಲಾದ ಸ್ವಭಾವ ವಿಶೇಷಗಳಿಗೆ ವಿರುದ್ಧವಾಗುವದಿಲ್ಲವೇ ? ಇಲ್ಲಿ ವಿರುದ್ಧವಲ್ಲವಾದರೆ, ಪ್ರಪತ್ತಿ ವಿಷಯದಲ್ಲೂ ವಿರುದ್ಧವಲ್ಲವೆಂದು ಹೇಳಲು ಅಭ್ಯಂತರವೇನೆಂಬ ಭಾವವು ಈ ಆಕ್ಷೇಪಣೆಯಿಂದ ತಪ್ಪಿಸಿಕೊಳ್ಳುವದಕ್ಕಾಗಿ, ಉಪಾಸನವೂ ಸಾಧನವಲ್ಲವೆಂದೇ ಹೇಳುತ್ತೇವೆ ಎಂದರೆ ಆಗಲೂ ದೋಷ ತಪ್ಪಿದ್ದಲ್ಲವೆಂದು ತೋರಿಸುತ್ತಾರೆ.

**ಉಪಾಸನಮ್ ತಾನುಮ್** – ಉಪಾಸನವೂ ಕೂಡ ಪ್ರಪತ್ತಿಯ ಹಾಗೆ **ಸಾಧನ ಮನ್ರೆನ್ನಿಲ್** - ಸಾಧನವಲ್ಲವೆಂದು ನೀವು ಒಂದು ವೇಳೆ ಹೇಳಿದರೆ, **ಸರ್ವಧರ್ಮಾನ್ ಪರಿತ್ಯಜ್ಯ ಎಙ್ಗಿರ ವಿಡತ್ತಿಲ್** - ಎಂದು ಹೇಳುವ ಸ್ಥಳದಲ್ಲಿ **ಉಪಾಸನತ್ತೈಯುಮ್** – ಉಪಾಸನವನ್ನೂ ಕೂಡ, **ಧರ್ಮಶಬ್ದಾರ್ಥವಾಗ**- ಧರ್ಮಶಬ್ದಕ್ಕೆ ಅರ್ಥವಾಗಿ, ಎಂದರೆ ಅಲೌಕಿಕ ಶ್ರೇಯಸ್ಸಾದ ಮೋಕ್ಷವನ್ನು ಸಾಧಿಸುವದು ಎಂಬ ಅರ್ಥವಾಗಿ, **ವ್ಯಾಖ್ಯಾನಮ್ ಪಣ್ಣುಗೈಯಾಲೇ** - ನೀವೇ ವ್ಯಾಖ್ಯಾನ ಮಾಡಿರುವದರಿಂದ, **ಸ್ವವಚನ ವಿರೋಧಮುಣ್ಡಾಮ್** – ನಿಮ್ಮ ಅಭಿಪ್ರಾಯವೇ ನಿಮಗೆ ವಿರುದ್ಧವಾದುದು ಆಗುತ್ತದೆ ಹೇಗೆಂದರೆ, ಉಪಾಸನವು ಸಾಧ್ಯೋಪಾಯವೆಂದು ಒಪ್ಪಿಕೊಂಡಿರುತ್ತೀರಿ, ಯಾವ ಸಂದರ್ಭದಲ್ಲಿ ಎಂದರೆ ಸರ್ವಧರ್ಮಾನ್ ಎಂಬುದಕ್ಕೆ ವ್ಯಾಖ್ಯಾನ ಮಾಡುವಾಗ ಧರ್ಮಶಬ್ದವು ಅಲೌಕಿಕ ಶ್ರೇಯಸ್ಸಾಧನ ಉಪಾಸನವನ್ನು ಬೋಧಿಸುತ್ತದೆಂದು ವ್ಯಾಖ್ಯಾನ ಮಾಡಿರು

ಶೆರುಕ್ಕೈ ಡಕ್ಕ್ಯಗ್ಗೈಕ್ಕಾಗ ವೇಣ್ಡಾಚ್ಚುವೈಗಳ್ಳೈ ಯೆಡುಪ್ಪಿಕ್ಕೇಯಾಲೆ ಅನ್ಯಪರಮಾನ ಉಪದೇಶತ್ತಾಲೆ ಪಿರನ್ದ ಆರ್ಜುನ ಬುದ್ಧಿಯಾಲೆ ಧರ್ಮಮೆನ್ರು ತೋತ್ತಿನವತ್ತೈ "ಸರ್ವಧರ್ಮಾನ್ ಎನ್ರು ಅನುವದಕ್ಕಿರದೆನ್ನಿಲ್,

---

ತ್ತೀರಿ. ಹಾಗೆ ಮಾಡಿರುವವರು ಯಾರು ಎಂಬುದು ಇಲ್ಲಿ ಹೇಳಲ್ಪಡಲಿಲ್ಲವು ಶ್ರೀ ಪಿಳ್ಳೈಲೋಕಾಚಾರ್ಯರು ಪ್ರಭೃತಿಗಳು ಎಂಬಭಿಪ್ರಾಯವು; ಅವರು ಬರೆದಿರುವ ರಹಸ್ಯವಾದ ಶ್ರೀವಚನ ಭೂಷಣ ಮುಂತಾದವುಗಳಲ್ಲಿ, ಹಾಗೆ ವ್ಯಾಖ್ಯಾನ ಮಾಡಿರುತ್ತಾರೆಂಬ ತಾತ್ಪರ್ಯವು. ಅಲ್ಲಿ ಮೋಕ್ಷ ಸಾಧನವೆಂದು ಹೇಳಿ, ಈಗ ಸಾಧನವಲ್ಲವೆಂದರೆ ಸ್ವವಚನ ವಿರೋಧವೆಂಬ ಭಾವವು. ಸ್ವವಚನ ವಿರೋಧವನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಧರ್ಮಶಬ್ದಕ್ಕೆ ಸಾಧನವಾದ ಉಪಾಯವೆಂಬರ್ಥವಲ್ಲವು; ಅರ್ಜುನನು ಅನುಪಾಯವಾದುದನ್ನು ಉಪಾಯವೆಂದು ಭ್ರಮಿಸಿದ ಧರ್ಮವೆಂದು ಅರ್ಥ ಹೇಳುವೆವು; ಅರ್ಜುನನು ಧರ್ಮವಲ್ಲದುದನ್ನು ಧರ್ಮವೆಂದು ಭ್ರಮಿಸಿದನಲ್ಲಾ ಅಂತಹ ಧರ್ಮಗಳೀಗ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ಧರ್ಮಶಬ್ದದಿಂದ ಹೇಳಲ್ಪಟ್ಟಿತು, ಆ ಕಾರಣದಿಂದ ಸ್ವವಚನ ವಿರೋಧವೆಂದು ಹೇಳಲು ಸಾಧ್ಯವಲ್ಲವು, ಎಂದರೆ ಹೇಳುತ್ತಾರೆ. ಆಗಲೂ ದೋಷವು ತಪ್ಪಿದ್ದಲ್ಲವೆಂದು ತೋರಿಸುತ್ತಾರೆ:—

ಶೆರುಕ್ಕು - ಗರ್ವವನ್ನು, ಆಡಕ್ಕ್ಯಗ್ಗೈಕ್ಕಾಗ - ಅಡಗಿಸುವದಕ್ಕಾಗಿ ಎಂದರೆ ಪರಿಹರಿಸುವದಕ್ಕಾಗಿ, ವೇಣ್ಡಾಚ್ಚುವೈಗಳ್ಳೈ - ಬೇಡದ ಎಂದರೆ ನಿರರ್ಥಕಗಳಾದ ಹೊರೆಗಳನ್ನು, ಯೆಡುಪ್ಪಿಕ್ಕೈಯಾಲೆ - ಹೊರೆಸುವವರಿಂದ, ಇದು ಹೇಗೆಂದರೆ ಮದಸಿಹ ಗೂಳಿಯ ಗರ್ವವನ್ನು ಮುರಿಯುವದಕ್ಕಾಗಿ ಅದರ ಮೇಲೆ ತುಂಬಾ ಭಾರವಾದ ಮರಳು ತುಂಬಿದ ಚೀಲಗಳನ್ನು ಹೊರಿಸುವ ಹಾಗೆ ಎಂಬ ತಾತ್ಪರ್ಯವು; ಅನ್ಯಪರಮಾನ ಉಪದೇಶತ್ತಾಲೆ ಪಿರನ್ದ ಅರ್ಜುನಬುದ್ಧಿಯಾಲೇ - ಹಾಗೆ ನಿರರ್ಥಕವಾದ ಉಪದೇಶದಿಂದ ಹುಟ್ಟಿದ ಅರ್ಜುನ ಬುದ್ಧಿಯಿಂದ, ನಿರರ್ಥಕ ಹೇಗೆಂದರೆ, ಉಪಾಯಗಳಲ್ಲದ ಕರ್ಮಯೋಗಾದಿಗಳನ್ನು ಉಪಾಯವೆಂದು ಉಪದೇಶಮಾಡುವದರಿಂದ ಹುಟ್ಟಿದ ಅರ್ಜುನ ಬುದ್ಧಿಯಿಂದ, ಧರ್ಮಮೆನ್ರು ತೋತ್ತಿನವತ್ತೈ - ಧರ್ಮವೆಂದು ತೋರಿದವನ್ನು, "ಸರ್ವಧರ್ಮಾನ್" - ಇಲ್ಲಿ ಸರ್ವ ಧರ್ಮವೆಂದು, ಅನುವದಕ್ಕಿರದು - ಅನುವಾದ ಮಾಡಿ ಹೇಳುತ್ತದೆ. ಸರ್ವಧರ್ಮಾನ್ ಎಂಬಲ್ಲಿರುವ ಧರ್ಮಶಬ್ದವು ನಿರರ್ಥಕವಾದ ಕರ್ಮಯೋಗ ಮೊದಲಾದ ಬಹಳ ಭಾರವನ್ನು ಹೊರಿಸಿ, ಅರ್ಜುನ ಬುದ್ಧಿಗೆ ಧರ್ಮವಾಗಿ

(೧) "ಇಜ್ಯಾಚಾರ ದಮಾ ಹಿಂಸಾ ದಾನ ಸ್ವಾಧ್ಯಾಯ ಕರ್ಮಣಾಂ। ಅಯಂತು ಪರಮೋಧರ್ಮೋ ಯದ್ಯೋಗೇನಾತ್ಮದರ್ಶನಮ್" (೨) "ಸರ್ವೇಷಾ ಮೇವ ಧರ್ಮಾಣಾಂ ಮುತ್ತಮೋ ವೈಷ್ಣವೋ ವಿಧಿಃ"

---

ತೋರಿದುದನ್ನು ಬೋಧಿಸುತ್ತದೆ ಎಂದರೆ ಆಗ, ಶಾಸ್ತ್ರವು ಬೋಧಿಸುವ ಕರ್ಮಯೋಗಾದಿ ರೂಪವಾದ ನಿವೃತ್ತಿ ರೂಪಧರ್ಮವೇ ಧರ್ಮವಲ್ಲದಿರುವದರಿಂದ ಪ್ರವೃತ್ತಿ ರೂಪ ಧರ್ಮವೂ ಧರ್ಮವಲ್ಲದುದಾಗಿ, ಶಾಸ್ತ್ರವೇ ಪ್ರಮಾಣವಲ್ಲದೆ ನಿರರ್ಥಕವಾಗಿ ಬಾಹ್ಯಕುದೃಷ್ಟಿಗಳ ಅಭಿಪ್ರಾಯಕ್ಕೆ ಸಮಾನವಾಗುತ್ತದೆಂದು ಹೇಳುತ್ತಾರೆ ಇಲ್ಲಿ ಪೂರ್ವಪಕ್ಷಿಗಳು ಕರ್ಮಯೋಗಾದಿ ಸಾಧನಗಳನ್ನು ಧರ್ಮವಲ್ಲವೆಂದು ಸಮಾಧಾನ ಹೇಳಿದರು. ಆದರೆ ಶಾಸ್ತ್ರಗಳಲ್ಲಿ ಈ ಕರ್ಮಯೋಗಾದಿ ಧರ್ಮಗಳು ಪರಮ ಧರ್ಮಗಳಾಗಿ ಹೇಳಲ್ಪಟ್ಟಿವೆ ಎಂದು ತೋರಿಸಲು ಮೂರು ಪ್ರಮಾಣಗಳನ್ನು ಉದಾಹರಿಸುತ್ತಾರೆ.

(೧) "ಇಜ್ಯಾ - ಭಗವದಾರಾಧನವೂ, ಆಚಾರ - ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನವೂ, ದಮ - ಇಂದ್ರಿಯ ನಿಗ್ರಹವೂ ಅಹಿಂಸಾ - ಪ್ರಾಣಹಿಂಸೆ ಮಾಡದಿರೋಣವೂ, ದಾನ - ತನ್ನಲ್ಲಿರುವ ದ್ರವ್ಯ ಮೊದಲಾದವುಗಳನ್ನು ಸತ್ಪಾತ್ರದಲ್ಲಿ ಉಚಿತವಾಗಿ ಪ್ರತಿಫಲಾಪೇಕ್ಷೆಯಿಲ್ಲದೆ ಅರ್ಪಿಸೋಣವೂ, ಸ್ವಾಧ್ಯಾಯ - ವೇದಾಧ್ಯಯನ ಮಾಡೋಣವೂ ಕರ್ಮಣಾಂ - ಸಪ್ತಮ್ಯರ್ಥದಲ್ಲಿ ಷಷ್ಠಿಯು, ಕರ್ಮಗಳ ಮಧ್ಯದಲ್ಲಿ, ಯತ್ - ಯಾವುದು, ಯೋಗೇನ - ಕರ್ಮಯೋಗಾದಿ ಭಕ್ತಿಯೋಗಗಳ ಮೂಲಕ, ಆತ್ಮದರ್ಶನಮ್ - ಮೊದಲು ಆತ್ಮಾವಲೋಕನ ಉಂಟಾಗಿ ಅನಂತರ ಪರಮಾತ್ಮ ಸಾಕ್ಷಾತ್ಕಾರ ಉಂಟಾಗುತ್ತದೋ, ಅಯಂ - ಇದು, ಪರಮೋಧರ್ಮಃ - ಸರ್ವೋತ್ಕೃಷ್ಟವಾದ ನಿವೃತ್ತಿರೂಪಧರ್ಮವು. ಆದುದರಿಂದ ಅರ್ಜುನ ಬುದ್ಧಿಗೆ ತೋರಿದುದು ಪರಮಧರ್ಮವೇ ವಿನಾ ಅನ್ಯಥಾ ಅಲ್ಲವೆಂಬ ಭಾವವು.

(೨) ಸರ್ವೇಷಾಂ ಮೇವ ಧರ್ಮಾಣಾಂ - ಸಮಸ್ತವಾದ ಧರ್ಮಗಳಲ್ಲೆಲ್ಲಾ, ವೈಷ್ಣವೋ ವಿಧಿಃ - ಪರತತ್ವವಾದ ಶ್ರೀ ಮಹಾವಿಷ್ಣುವನ್ನು ಕುರಿತು ಮಾಡುವ ಧರ್ಮವು, ಉತ್ತಮಃ - ಸರ್ವೋತ್ಕೃಷ್ಟವಾದುದು ಅದು ಯಾವುದೆಂದರೆ ಇಹ ಲೋಕದ ಸಂಸಾರವನ್ನು ಪುನಃ ಹೊಂದದವಹಾಗೆ ಆತನನ್ನು ಹೊಂದುವ ಉಪಾಯ

---

(೧) ಯಾಜ್ಞವಲ್ಕ್ಯಸ್ಮೃತಿ. ೧.೮ (೨) ಭಾರತ ಅನು. ೩೬.೨೪.

**(೩) "ನವಿಷ್ಣ್ವಾರಾಧನಾತ್ಪುಣ್ಯಂ ವಿದ್ಯತೇ ಕರ್ಮವೈದಿಕಮ್" ಇತ್ಯಾದಿ ಗಳಾಲೇ ಪರಮ ಧರ್ಮಙ್ಗಳಾಗ ಪ್ರಸಿದ್ಧಙ್ಗಳಾನ ನಿವೃತ್ತಿ ಧರ್ಮಙ್ಗಳೈ ಧರ್ಮ ಙ್ಗಳನ್ರೆನ್ರಾಲ್ ಕೈಮುತಿಕ ನ್ಯಾಯತ್ತಾಲೆ ಪ್ರಪತ್ತಿ ಧರ್ಮಙ್ಗಳುಮ್ ಧರ್ಮ ಙ್ಗಳನ್ರಿಕ್ಕೇ ಸರ್ವ ಶಾಸ್ತ್ರಙ್ಗಳುಕ್ಕುಮ್ ಪ್ರಾಮಾಣ್ಯಮಿಲ್ಲಾದ ಪಡಿಯಾ ಯ್ ಪರಬಾಹ್ಯ ಕುದೃಷ್ಟಿ ಪಕ್ಷಙ್ಗಳಿಲೇ ಪ್ರವೇಶಮಾಮ್.**

---

ರೂಪವಾದ ಉಪಾಸನವು. ಇದರ **ಉತ್ತ**ರಾರ್ಧವು :— "**ರಕ್ಷತೇ ಭಗವಾನ್ ವಿಷ್ಣುರ್ಭಕ್ತಮಾತ್ಮಶರೀರವತ್**" ಭಗವಂತನಾದ ವಿಷ್ಣುವು ತನ್ನ ಶರೀರ ವನ್ನೋಪಾದಿಯಲ್ಲಿ ಭಕ್ತನನ್ನು ರಕ್ಷಿಸುವನು ಎಂಬರ್ಥವು. ಶ್ರುತಿಯ ಪ್ರಕಾರ ಎಲ್ಲಾ ಜೀವಾತ್ಮರೂ ಆತನಿಗೆ ಶರೀರವು, ಆದುದರಿಂದ ಸರ್ವರೂ ರಕ್ಷ್ಯ ವರ್ಗಕ್ಕೆ ಸೇರಿದವರೇ, ಆತನೇ ರಕ್ಷಕನೇ ಸರಿ. ಆದರೂ ಮುಕ್ತಿಯನ್ನು ಕೊಟ್ಟು ರಕ್ಷಿಸ ಬೇಕಾದರೆ ಉತ್ತಮ ವೈಷ್ಣವ ವಿಧಿರೂಪವಾದ ಧರ್ಮವನ್ನು ಅವಲಂಬಿಸಿದವರನ್ನು ರಕ್ಷಿಸುತ್ತಾನೆಯೇ ವಿನಾ, ಅನ್ಯಥಾ ಅಲ್ಲವು. ಹಾಗೆ ಮಾಡದೆ ಎಲ್ಲರನ್ನೂ ರಕ್ಷಿಸಿ ಬಿಟ್ಟರೆ, ವೈಷಮ್ಯಾದಿಗಳು ಪ್ರಾಪ್ತವಾಗುತ್ತವೆ ಎಂಬ ಭಾವವು.

(೩) ವಿಷ್ಣ್ವಾರಾಧನಾತ್–ದೈವಯಜ್ಞವಾದ ವಿಷ್ಣುವಿನ ಆರಾಧನೆಗಿಂತಲೂ, **ವೈದಿಕಮ್**–ವೇದೋದಿತವಾದ, **ಪುಣ್ಯಂ ಕರ್ಮ**–ಪವಿತ್ರಕರವಾದ ಶ್ರೇಯಸ್ಕರವಾದ ಕರ್ಮವು, ನವಿದ್ಯತೆ – ಇರುವದಿಲ್ಲವು. **ಇತ್ಯಾದಿಗಳಾಲೇ** ಇವೇ ಮೊದಲಾದ ಪ್ರಮಾಣಗಳ ಮೂಲಕವಾಗಿ, **ಪರಮಧರ್ಮಙ್ಗಳಾಗ** ಸರ್ವೋತ್ಕೃಷ್ಟ ಧರ್ಮಗಳೆಂದು, ಪ್ರಸಿದ್ಧಗಳಾದ ನಿವೃತ್ತಿ ಧರ್ಮಗಳನ್ನೇ, **ಧರ್ಮಙ್ಗಳನ್ರೆನ್ರಾಲ್** – ಧರ್ಮಗಳಲ್ಲವೆಂದು ಹೇಳಿಬಿಟ್ಟರೆ, ಕೈಮುತಿಕ ನ್ಯಾಯದಿಂದ, **ಪ್ರವೃತ್ತಿ** ಧರ್ಮಗಳೂ ಕೂಡ, **ಧರ್ಮಙ್ಗಳನ್ರಿಕ್ಕೇ** – ಧರ್ಮಗಳಲ್ಲದವುಗಳಾಗಿ, **ಸರ್ವಶಾಸ್ತ್ರಙ್ಗಳುಕ್ಕುಮ್**– ಸಮಸ್ತ ಶಾಸ್ತ್ರಗಳಿಗೂ, **ಪ್ರಾಮಾಣ್ಯಮಿಲ್ಲಾದ ಪಡಿಯಾಯ್** – ಪ್ರಾಮಾಣ್ಯ ವಿಲ್ಲದಹಾಗಾಗಿ, ಎಂದರೆ ನಿವೃತ್ತಿ ಧರ್ಮಗಳೂ ಪ್ರವೃತ್ತಿ ಧರ್ಮಗಳೂ ಇವುಗಳ ವಿಷಯವೇ ಶಾಸ್ತ್ರಗಳಲ್ಲಿ ಹೇಳಿರುವದು, ಇವೆರಡೂ ಧರ್ಮಗಳಲ್ಲದೆ ಹೋದರೆ ಶಾಸ್ತ್ರದಿಂದ ಪ್ರಮಾಣರೂಪದಲ್ಲಿ ಗ್ರಹಿಸತಕ್ಕದ್ದು ಯಾವುದೂ ಇಲ್ಲವಾಗುತ್ತದೆ, ಆದುದರಿಂದ ಶಾಸ್ತ್ರವು ನಿರರ್ಥಕವಾದುದಾಗಿ, **ಪರಬಾಹ್ಯಕುದೃಷ್ಟಿಪಕ್ಷಙ್ಗಳಿಲೇ ಪ್ರವೇಶಮಾಯ್** – ಪ್ರತಿಕಕ್ಷಿಗಳಾದ ವೇದಬಾಹ್ಯರು ಮತ್ತು ವೇದಗಳಿಗೆ ಅಪಾರ್ಥ

---

(೩) ವ್ಯಾಸಸ್ಮೃತಿ.

**ಪ್ರಪತ್ತೇಸ್ಸಾಧನತ್ವೇ ಸಿದ್ಧಸಾಧನ ಸಹಕಾರಿತ್ವೇವಾ ಚರಮಶ್ಲೋಕ ವಿರೋಧ ಇತಿ ಶಙ್ಕಾ ನಿರಾಸಃ**

---

**ಆನಾಲುಮ್ ಉಪಾಸನಾದಿಗಳ್ ಪೋಲೆ ಶರಣವರಣಂ ಧರ್ಮಶಬ್ದ ವಾಚ್ಯಮಾಗೈಯಾಲೇ ಇಙ್ಗ ಸರ್ವಶಬ್ದ ಸಙ್ಕೋಚಮ್ ವಾರಾಮೈಕ್ಕಾಗ**

---

ಗಳನ್ನು ಹೇಳುವವರು, ಇವರ ಅಭಿಪ್ರಾಯಗಳಲ್ಲಿ ಪ್ರವೇಶ ಉಂಟಾಗುತ್ತದೆ; ಎಂದರೆ ಇವರುಗಳಿಗೆ ಶಾಸ್ತ್ರಗಳು ಹೇಗೆ ನಿರರ್ಥಕವೋ ಹಾಗೆಯೇ ಪ್ರವೃತ್ತಿ ನಿವೃತ್ತಿ ಧರ್ಮಗಳೆಲ್ಲಾ ಧರ್ಮಗಳಲ್ಲವೆಂದು ಹೇಳುವವರಿಗೂ ಶಾಸ್ತ್ರಗಳು ನಿರರ್ಥಕ ವಾಗುತ್ತವೆಂಬ ಭಾವವು ಶಾಸ್ತ್ರಗಳಲ್ಲಿ ಧರ್ಮಗಳೇ ಇಲ್ಲದುದರಿಂದ ವಿಧೇಯಾಂಶವೇ ಇಲ್ಲವಾಗಿ ನಾವು ಧರ್ಮೋಪದೇಶವನ್ನು ಹೊಂದಿ ಧರ್ಮಾನುಷ್ಠಾನವನ್ನು ಮಾಡತಕ್ಕದ್ದು ಯಾವುದೂ ಇರುವದಿಲ್ಲವಾಗುತ್ತದೆಂಬ ಭಾವವು

**ಪ್ರಪತ್ತಿಗೆ ಸಾಧನತ್ವವನ್ನಾಗಲಿ ಸಿದ್ಧ ಸಾಧನ ಸಹಕಾರಿತ್ವವನ್ನಾಗಲಿ ಸ್ವೀಕರಿಸಿದರೆ ಚರಮಶ್ಲೋಕ ವಿರೋಧವೆಂಬ ಶಙ್ಕಾ ಪರಿಹಾರವು.**

---

ಆದರೆ ಪ್ರಪತ್ತಿಗೆ ಸಾಧನತ್ವವನ್ನಾಗಲಿ, ಸಿದ್ಧ ಸಾಧನಕ್ಕೆ ಸಹಕಾರಿ ಎಂಬುದನ್ನಾಗಲಿ ಸ್ವೀಕರಿಸಿದರೆ, ಚರಮಶ್ಲೋಕದ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ಸರ್ವಶಬ್ದದಲ್ಲಿ ಇರುವ ಕೂಡ ಸೇರಿ ಇರುವ ತ್ಯಾಜ್ಯವಲ್ಲವೋ? ಇದು ಅಲ್ಲವು ಎಂದರೆ ಆಗ ಸರ್ವ ಶಬ್ದಕ್ಕೆ ಸಙ್ಕೋಚಾರ್ಥವನ್ನು ಹೇಳಿದಂತಾಗಲಿಲ್ಲವೋ? ಇವೇ ಮೊದಲಾದ ಆಕ್ಷೇಪಣೆಗಳನ್ನು ಉಪಪಾದಿಸಿ ಅವುಗಳಿಗೆ ಸಮಾಧಾನವನ್ನು ಹೇಳುತ್ತಾರೆ.

**ಆನಾಲುಮ್** - ಪ್ರಪತ್ತಿಗೆ ಸಾಧನತ್ವವನ್ನಾಗಲಿ, ಸಿದ್ಧ ಸಾಧನ ಸಹಕಾರಿತ್ವವನ್ನಾಗಲಿ ಅಙ್ಗೀಕರಿಸದಿದ್ದರೆ ಮೇಲೆ ಹೇಳಿದ ದೋಷಗಳುಂಟಾಗುತ್ತವೆಂದು ಒಪ್ಪಿಕೊಂಡರೂ **ಉಪಾಸನಾದಿಗಳ್ ಪೋಲೆ** - ಉಪಾಸನಾದಿಗಳು ಧರ್ಮಗಳೆಂದು ಅಙ್ಗೀಕರಿಸಿರುವ ಹಾಗೆ, **ಶರಣವರಣಂ** - ಶರಣಾಗತಿಯು ಮೂಲಕ ಪ್ರಾರ್ಥನೆಯೂ ಕೂಡ ಎಂದರೆ ಪ್ರಪತ್ತಿಯೂ, **ಧರ್ಮಶಬ್ದ ವಾಚ್ಯಮಾಗೈಯಾಲೇ** - ಧರ್ಮಶಬ್ದದಿಂದ ಹೇಳಿಸಿಕೊಳ್ಳುವದರಿಂದ, **ಇಙ್ಗ** - ಈ ಚರಮ ಶ್ಲೋಕದಲ್ಲಿ, **ಸರ್ವಶಬ್ದ ಸಙ್ಕೋಚಮ್ ವಾರಾಮೈಕ್ಕಾಗ** - "ಸರ್ವ ಧರ್ಮಾನ್" ಎಂಬಲ್ಲಿರುವ ಸರ್ವಶಬ್ದಕ್ಕೆ ಸಙ್ಕೋಚವು ಬಾರದೆ ಇರುವದಕ್ಕಾಗಿ,

**ಇದುವುಮ್ ಸಾಧನತ್ವ ವೇಷತ್ತಾಲೆ ತ್ಯಾಜ್ಯಮನ್ರೋ ? ಆಗೈಯಾಲ್ ಪ್ರಪತ್ತಿಕ್ಕು ಸಾಧನತ್ವಮಾದಲ್ ಸಿದ್ಧಸಾಧನ ಸಹಕಾರಿತ್ವಮಾದಲ್ ಕೊಳ್ಳುಗೈ, ಇವ್ವಚನಮ್ ತನಕ್ಕು ವಿರುದ್ಧಮನ್ರೋ ವೆನ್ನಿಲ್ ? ಇಙ್ಙ ಸಾಕ್ಷಾತ್ಸಾಧನತ್ವಬುದ್ಧಿಯೈ ವಿಡವೇಣು ಮೆನ್ನುಮ್ ಪೋದು, ಭಕ್ತಿಯೋಗಾದಿಗಳಿಲುಮ್ ತುಲ್ಯಮ್.**

---

**ಇದುವುಮ್** – ಈ ಪ್ರಪತ್ತಿಯೂ, **ಸಾಧನತ್ವ ವೇಷತ್ತಾಲೇ** – ಸಾಧನತ್ವ ರೂಪದಲ್ಲಿ, **ತ್ಯಾಜ್ಯಮನ್ರೋ ?** ಪರಿತ್ಯಜ್ಯ ಎಂದು ಹೇಳಿರುವದರಿಂದ ತ್ಯಾಜ್ಯ ವಲ್ಲವೋ ? **ಆಗೈಯಾಲೇ** – ಹೀಗೆ ಸಾಧನತ್ವ ರೂಪದಲ್ಲಿ ತ್ಯಾಜ್ಯವಾದುದರಿಂದ, **ಪ್ರಪತ್ತಿಕ್ಕುಮ್** - ಪ್ರಪತ್ತಿಗೂ ಕೂಡ ಉಪಾಸನದಹಾಗೆ, **ಸಾಧನತ್ವಮಾದಲ್** – ಸಾಧನತ್ವವನ್ನಾದರೂ, ಸಿದ್ಧಸಾಧನಕ್ಕೆ ಸಹಕಾರಿತ್ವವನ್ನಾದರೂ, **ಕೊಳ್ಳುಗೈ** - ಅಙ್ಗೀಕರಿಸೋಣವು, **ಇವ್ವಚನಮ್** – ಹೀಗೆ ಪ್ರಪತ್ತ್ಯನುಷ್ಠಾನವು ಆವಶ್ಯಕವೆಂದು ಹೇಳೋಣವು, **ತನಕ್ಕೇ ವಿರುದ್ಧಮನ್ರೋ** - ತನಗೇನೇ ವಿರುದ್ಧವಾದುದಲ್ಲವೋ, **ಎನ್ನಿಲ್** - ಎಂದು ಆಕ್ಷೇಪವನ್ನು ತಂದರೆ, **ಇಙ್ಙ** - ಈ ಪ್ರಪತ್ತಿಯ ಸಂದರ್ಭದಲ್ಲಿ, **ಸಾಕ್ಷಾತ್ಸಾಧನತ್ವ ಬುದ್ಧಿಯೈವಿಡವೇಣು ಮೆನ್ನುಮ್ ಪೋದು** – ಪ್ರಪತ್ತಿಯ ವಿಷಯದಲ್ಲಿ ಸಾಕ್ಷಾತ್ತಾಗಿ ಮೋಕ್ಷಕ್ಕೆ ಸಾಧನವೆಂಬ ಅಭಿಪ್ರಾಯವನ್ನು ಬಿಡಬೇಕೆಂದು ಹೇಳುವಾಗ, **ಭಕ್ತಿಯೋಗಾದಿಗಳಿಲುಮ್ ತುಲ್ಯಮ್** - ಭಕ್ತಿಯೋಗಾದಿಗಳಲ್ಲೂ ಅದು ಸಮಾನವಾದುದೇ ; ಎಂದರೆ, ಪ್ರಪತ್ತಿಯ ವಿಷಯದಲ್ಲಿ ಸಾಧನತ್ವಬುದ್ಧಿಯನ್ನು ಬಿಡತಕ್ಕದ್ದೆಂದರೆ, ಭಕ್ತಿಯೋಗವೂ ಪ್ರಪತ್ತಿಯಹಾಗೆ ಉಪಾಯವಾದುದರಿಂದ ಭಕ್ತಿಯೋಗದಲ್ಲೂ ಸಾಧನತ್ವ ಬುದ್ಧಿಯನ್ನು ಬಿಡಬೇಕಾಗುತ್ತದೆ ಎಂಬ ಭಾವವು; ಭಕ್ತಿಯೋಗಕ್ಕೆ ಸಾಧನತ್ವವನ್ನು ಅಙ್ಗೀಕರಿಸುವದಾದರೆ ಪ್ರಪತ್ತಿಗೂ ಏಕೆ ಅಙ್ಗೀಕರಿಸಕೂಡದೆಂಬ ಅಭಿಪ್ರಾಯವು. ಪೂರ್ವಪಕ್ಷಿಗಳು ಪ್ರಪತ್ತಿಗೆ ಸಾಧನತ್ವವನ್ನಾಗಲಿ ಸಿದ್ಧಸಾಧನ ಸಹಕಾರಿತ್ವವನ್ನಾಗಲಿ ಅಙ್ಗೀಕರಿಸಿದರೆ ಚರಮಶ್ಲೋಕಾರ್ಥಕ್ಕೆ ವಿರೋಧವಾದುದಾಗುತ್ತದೆ ; ಸರ್ವಧರ್ಮಾನ್ ಪರಿತ್ಯಜ್ಯ - ಎಂದು ಅಲ್ಲಿ ವಿಧಿಸಿರುವದರಿಂದ, ಪ್ರಪತ್ತಿಯೂ, ಧರ್ಮವಾದುದರಿಂದ ಪ್ರಪತ್ತಿಗೆ ಸಾಧನತ್ವ ಬುದ್ಧಿಯನ್ನು ಅಙ್ಗೀಕರಿಸುವದು ಯುಕ್ತವಲ್ಲವೆಂದು ಆಕ್ಷೇಪಿಸುತ್ತಾರೆ. ಅದಕ್ಕೆ ಸಮಾಧಾನವಾಗಿ ಪ್ರಪತ್ತಿಗೆ ಸಾಧನತ್ವಬುದ್ಧಿಯು ಸರಿಯಿಲ್ಲವಾದರೆ ಉಪಾಸನೆಗೂ ಕೂಡದೆಂದಾಗುತ್ತದೆ, ಎಂದು ಹೇಳುತ್ತಾರೆ.

**ಪ್ರಸಾದನತ್ವವೇಷತ್ತಾಲುಮ್ ಧರ್ಮತ್ವಮಿದುಕ್ಕು ವಿಡುವೇಣು ಮೆನ್ನಿಲ್, ಸರ್ವ ಶಬ್ದ ಸಙ್ಕೋಚಂ ವಾರಾಮೈಕ್ಕಾಗ "ಕೃಷ್ಣಂ ಧರ್ಮಂ ಸನಾತನಂ" ಇತ್ಯಾದಿಗಳಿರ್ಪಡಿಯೇ ಧರ್ಮಮಾನ ಸಿದ್ಧೋಪಾಯತ್ತಿ ಲುಮ್ ಸಾಧನತ್ವ ಬುದ್ಧಿಯೈ ವಿಡಪ್ರಸಙ್ಗಿಕ್ಕುಮ್. ಇವ್ವಾಕ್ಯತ್ತಿಲ್**

---

**ಸರ್ವ ಧರ್ಮಾ್ಞ ಪರಿತ್ಯಜ್ಯ** - ಎಂದಿರುವದರಿಂದ ಪ್ರಪತ್ತಿಯೂ ಒಂದು ಧರ್ಮವಾದುದರಿಂದ ಪರಿತ್ಯಾಗಮಾಡತಕ್ಕದ್ದೆಂದು ಪೂರ್ವಪಕ್ಷ ತಂದುದರಿಂದ, ಆ ಪೂರ್ವಪಕ್ಷವನ್ನು ಎರಡಾಗಿ ವಿಕಲ್ಪಿಸಿ ಕೇಳುತ್ತಾರೆ. ಪ್ರಪತ್ತಿಯೂ ಧರ್ಮವಾದುದರಿಂದ ಪರಿತ್ಯಾಗವೆಂದು ಹೇಳಲ್ಪಟ್ಟಿತಲ್ಲಾ, ಅದೇನು ಸಾಕ್ಷಾತ್ಸಾಧನತ್ವ ಬುದ್ಧಿಯ ತ್ಯಾಗವೇ ಇಲ್ಲವೇ ಪ್ರಸಾದನತ್ವವೇಷದಿಂದ ತ್ಯಾಗವೇ ಎಂದು ವಿಕಲ್ಪಿಸಿ, ಸಾಕ್ಷಾತ್ಸಾಧನತ್ವಬುದ್ಧಿಯು ಕೂಡದೆಂದು ಹೇಳಿದರೆ, ಆಗ ಉಪಾಸನವೂ ಸಾಧನವಲ್ಲವಾಗುತ್ತದೆಂದು ಹೇಳಿದರು ಈಗ ಎರಡನೆಯ ವಿಕಲ್ಪವಾದ, ಪ್ರಸಾದನತ್ವವೇಷಧರ್ಮವಾಗುವದರಿಂದ ತ್ಯಾಜ್ಯವೆಂದು ಹೇಳಿದರೆ, ಸಿದ್ಧೋಪಾಯನೂ ಪ್ರಸಾದನತ್ವರೂಪಧರ್ಮವೆಂದು ಹೇಳಿರುವ ಪ್ರಮಾಣವಿರುವದರಿಂದ ಅದನ್ನೂ ಬಿಡಬೇಕೆಂದು ಆಗುವದರಿಂದ ಈ ವಾದಗಳು ಸರಿಯಲ್ಲವೆಂದು ಹೇಳುತ್ತಾರೆ.

**ಪ್ರಸಾದನತ್ವವೇಷತ್ತಾಲುಮ್** - ಭಗವದನುಗ್ರಹ ಸಂಪಾದಕ ರೂಪದಿಂದಲೂ, ಧರ್ಮತ್ವವು, **ಇದುಕ್ಕು** - ಈ ಪ್ರಪತ್ತಿಗೆ, ಸಿದ್ಧಿಸುವದರಿಂದ **ವಿಡುವೇಣುಮೆನ್ನಿಲ್** - ಬಿಡತಕ್ಕದ್ದು ಎಂದರೂ, **ಸರ್ವಶಬ್ದ ಸಂಕೋಚಮ್ ವಾರಾಮೈಕ್ಕಾಗ** - "ಸರ್ವಧರ್ಮಾ್ಞ ಪರಿತ್ಯಜ್ಯ" ಎಂಬಲ್ಲಿರುವ ಸರ್ವ ಶಬ್ದಕ್ಕೆ ಸಂಕೋಚವು ಬಾರದೇ ಇರುವದಕ್ಕಾಗಿ, **"ಕೃಷ್ಣಂ ಧರ್ಮಂ ಸನಾತನಮ್"** ಶ್ರೀ ಕೃಷ್ಣನೂ ಅನಾದಿಯಾದ ಧರ್ಮವು" **ಇತ್ಯಾದಿಗಳಿರ್ಪಡಿಯೇ** - ಎಂಬಿವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವ ರೀತ್ಯಾ, **ಧರ್ಮಮಾನ ಸಿದ್ಧೋಪಾಯತ್ತಿಲುಮ್**- ಧರ್ಮವಾಗಿರುವ ಸಿದ್ಧೋಪಾಯದಲ್ಲೂ, **ಸಾಧನತ್ವ ಬುದ್ಧಿಯೈ** ಉಪಾಯವೆಂಬ ಬುದ್ಧಿಯನ್ನು **ವಿಡಪ್ರಸಙ್ಗಿಕ್ಕುಮ್** - ಬಿಡಬೇಕಾಗಿ ಬರುವದು. ಸರ್ವಧರ್ಮಾ್ಞ ಪರಿತ್ಯಜ್ಯ ಎಂದು ಹೇಳಿರುವದರಿಂದ ಪ್ರಪತ್ತಿಯು ಭಗವತ್ಪ್ರಸಾದನರೂಪಧರ್ಮವಾದುದರಿಂದ ಅದನ್ನೂ ಪರಿತ್ಯಾಗಮಾಡಬೇಕೆಂಬ ವಾದ ತಂದರೆ, **ಕೃಷ್ಣಂ ಧರ್ಮಂ ಸನಾತನಮ್** ಎಂದು ಸಿದ್ಧೋಪಾಯನೂ ಧರ್ಮವೆಂದು ಹೇಳಲ್ಪಟ್ಟಿರುವದರಿಂದ ಸಿದ್ಧೋಪಾಯನಲ್ಲೂ ಸಾಧನತ್ವಬುದ್ಧಿಯನ್ನು ಬಿಡಬೆಕೆದು ಹೇಳಬೇಕಾಗುತ್ತದೆ.

**ಪ್ರತಿಪಾದ್ಯಮಾನ ಧರ್ಮತ್ತೈ ಯೊಳಿನ್ದ ಧರ್ಮಙ್ಗಳೆನ್ನೋ ತ್ಯಾಜ್ಯಙ್ಗಳಾವನ ವೆನ್ನಿಲ್, ಇಙ್ಗು ವಿಹಿತ್ತೈಯಾನ ಶರಣಾಗತಿಯಿಲುಮ್ ತುಲ್ಯಮ್.**

---

ಈ ದೂಷಣದಿಂದ ತಪ್ಪಿಸಿಕೊಳ್ಳುವದಕ್ಕಾಗಿ, **ಸರ್ವಧರ್ಮಾನ್ ಪರಿತ್ಯಜ್ಯ** ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಧರ್ಮವನ್ನು ಬಿಟ್ಟು ಇತರ ಧರ್ಮಗಳೆಲ್ಲಾ ತಾಜ್ಯವೆಂದಲ್ಲವೇ ಅನ್ವಯಿಸತಕ್ಕದ್ದು; ಹಾಗೆ ಹೇಳುವದರಿಂದ ಸಿದ್ಧೋಪಾಯನೂ ಧರ್ಮವೆಂದಾದರೂ, ಸಿದ್ಧೋಪಾಯವೂ ತ್ಯಾಜ್ಯವಾಗುವದಿಲ್ಲವೆಂದು ಹೇಳುವೆವು; ಎಂದರೆ ಅದಕ್ಕೆ ಪುನಃ ಸಮಾಧಾನವನ್ನು ಹೇಳುತ್ತಾರೇನೆಂದರೆ— ಹಾಗಾದರೆ ಈ ಚರಮ ಶ್ಲೋಕದಲ್ಲಿ **ಮಾಮೇಕಂ ಶರಣಂವ್ರಜ** ಎಂದು ಶರಣಾಗತಿರೂಪ ಧರ್ಮವು ಹೇಳಲ್ಪಟ್ಟಿರುವದರಿಂದ ನಿಮ್ಮ ವಾದಕ್ಕೆ ಸಮಾನವಾಗಿ ಅದನ್ನು ಬಿಟ್ಟು ಮಿಕ್ಕ ಧರ್ಮಗಳೆಲ್ಲಾ ತಾಜ್ಯಗಳೆಂದು ನಾವು ಹೇಳುವೆವು ಎಂಬದಾಗಿ "ಇವ್ವಾಕ್ಯತ್ತಿಲ್" ಎಂಬ ವಾಕ್ಯದಿಂದ ತಿಳಿಸುತ್ತಾರೆ. **ಇವ್ವಾಕ್ಯತ್ತಿಲ್** - **ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ** ಎಂಬ ವಾಕ್ಯದಲ್ಲಿ, **ಪ್ರತಿಪಾದ್ಯಮಾನ ಧರ್ಮತ್ತೈ** - ಪ್ರತಿಪಾದಿಸಲ್ಪಟ್ಟ ಧರ್ಮವನ್ನು, **ಒಳಿನ್ದ** - ಬಿಟ್ಟ ಮಿಕ್ಕ, **ಧರ್ಮಙ್ಗಳೆನ್ನೋ** - ಕರ್ಮಾನುಷ್ಠಾನಗಳನ್ನಲ್ಲವೋ, **ತ್ಯಾಜ್ಯಙ್ಗಳಾವನ ವೆನ್ನಿಲ್** - ತಾಜ್ಯಗಳಾಗಿ ಹೇಳಿರವುವು ಎಂದು ಒಂದು ವೇಳೆ ಸಮಾಧಾನ ಹೇಳಿದರೆ, **ಇಙ್ಗು ವಿಹಿತ್ತೈಯಾನ** - ಈ ವಾಕ್ಯದಲ್ಲಿ **ಶರಣಂ ವ್ರಜ** ಎಂಬದಾಗಿ ವಿಧಿಸಿರುವ, **ಶರಣಾಗತಿಯಿಲುಮ್** - ಪ್ರಸತ್ತ್ಯನುಷ್ಠಾನದಲ್ಲೂ, **ತುಲ್ಯಮ್** - ಸಮಾನವು; **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ಸರ್ವಶಬ್ದಕ್ಕೆ ಸಂಕೋಚವಿಲ್ಲದೆ ಅನ್ವಯಿಸಿ, ಎಲ್ಲಾ ಧರ್ಮಗಳನ್ನೂ ಬಿಡತಕ್ಕದ್ದೆಂದು ಹೇಳುವದಾದರೆ, **ಕೃಷ್ಣಂ ಧರ್ಮಂ ಸನಾತನಂ** ಎಂಬಲ್ಲಿ ಸಿದ್ಧೋಪಾಯನಾದ **ಸರ್ವೇಶ್ವರನೂ** ಕೂಡ ಸಿದ್ಧೋಪಾಯ ಶೋಧನಾಧಿಕಾರದಲ್ಲಿ ಧರ್ಮವೆಂದು ಸ್ಥಾಪಿತವಾಗಿರುವದರಿಂದಲೂ, ಅಲ್ಲಿ ಧರ್ಮಶಬ್ದವು ಔಪಚಾರಿಕವಲ್ಲದೆ ಮುಖ್ಯಾರ್ಥವನ್ನೇ ಉಳ್ಳದೆಂದು ವ್ಯಕ್ತಪಡಿಸುವದರಿಂದಲೂ ( ನೆಯ ಪುಟವನ್ನು ನೋಡಿ) **ಉಪಾಸನಾದಿಗಳ್ಪೋಲೆ** ಎಂದಾರಂಭಿಸಿದ ವಾಕ್ಯಮೂಲಕ ಸಿದ್ಧೋಪಾಯನನ್ನೂ ಬಿಡಬೇಕೆಂದಾಗುವದರಿಂದ, ಪ್ರತಿಕಕ್ಷಿಗಳ ಅಭಿಪ್ರಾಯವು ಸರಿಯಲ್ಲವೆಂದು ಹೇಳಿದುದಕ್ಕೆ ಸಮಾಧಾನವಾಗಿ ಎಲ್ಲಾ ಧರ್ಮವು ಎಂದು ಅರ್ಥ ಮಾಡತಕ್ಕದ್ದಲ್ಲವು, ಆ ವಾಕ್ಯದಲ್ಲಿ ಹೇಳಲ್ಪಟ್ಟ ಧರ್ಮವನ್ನು ಬಿಟ್ಟು ಇತರ ಎಲ್ಲಾ ಧರ್ಮಗಳನ್ನೂ ತ್ಯಜಿಸತಕ್ಕದ್ದೆಂದು ಅರ್ಥ ಹೇಳಬೇಕು; ಆಗ **ಕೃಷ್ಣಂ**

ಧರ್ಮಂ ಸನಾತನಂ ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಸಿದ್ಧೋಪಾಯನು ತ್ಯಾಜ್ಯನಾಗುವದಿಲ್ಲವು ಮಾಮೇಕಂ ಶರಣಂವ್ರಜ ಎಂಬಲ್ಲಿ ಸಿದ್ಧೋಪಾಯನೇ ಹೇಳಲ್ಪಟ್ಟನೆಂದು ಪೂರ್ವಪಕ್ಷವನ್ನು ತಂದರೆ, ಇದಕ್ಕೆ ಸಮಾಧಾನವಾಗಿ ಶರಣಂವ್ರಜ ಎಂಬುದರಿಂದ ಸಾಧ್ಯೋಪಾಯವಾದ ಪ್ರಪತ್ತಿಯು ಹೇಳಲ್ಪಟ್ಟು ಸರ್ವಧರ್ಮಾ್ನ್ ಪರಿತ್ಯಜ್ಯ ಎಂಬಲ್ಲಿ ಈ ಶರಣಾಗತಿಯನ್ನು ಬಿಟ್ಟು ಮಿಕ್ಕ ಎಲ್ಲಾ ಧರ್ಮವನ್ನೂ ಬಿಡತಕ್ಕದ್ದೆಂದು ನಿಮ್ಮ ಅಭಿಪ್ರಾಯಕ್ಕೆ ಸಮಾನವಾಗಿ ನಾವೂ ಹೇಳುವೆವು ಆದುದರಿಂದ ಪ್ರಪತ್ತಿಯು ಸಾಧನತ್ವರೂಪದಲ್ಲಿಯಾಗಲಿ, ಸಿದ್ಧಸಾದನಕ್ಕೆ ಸಹಕಾರಿ ರೂಪದಲ್ಲಿಯಾಗಲಿ, ಧರ್ಮವಾಗುವದರಿಂದ ತ್ಯಾಜ್ಯವೆಂಬ ನಿಮ್ಮಗಳ ಅಭಿಪ್ರಾಯವು ಸಮಂಜಸವಲ್ಲವೆಂಬ ಭಾವವು.

## ಸಿದ್ಧೋಪಾಯ ವಿಷಯದಲ್ಲಿ ಭಕ್ತಿ ಪ್ರಪತ್ತಿಗಳು ಹೇಗೆ ಉಪಕಾರಕಗಳು ?

ಇನ್ನೊಂದು ಪೂರ್ವಪಕ್ಷವೇನೆಂದರೆ:—ಸಿದ್ಧೋಪಾಯನು ನಿತ್ಯನು, ಹೀಗಿರುವಾಗ ಆ ಸಿದ್ಧೋಪಾಯವನ್ನೇನಾದರೂ ಈ ಸಾಧ್ಯೋಪಾಯಗಳು ಉಂಟುಮಾಡಬೇಕೇ? ಏನೂ ಇಲ್ಲವು; ಹೀಗಿರುವಾಗ ಸಾಧ್ಯೋಪಾಯಗಳ ಅಪೇಕ್ಷೆ ಏತಕ್ಕೆ?

ಸಿದ್ಧೋಪಾಯನಿಗೆ ಉಪಚಯಾಪಚಯಗಳು ಎಂದರೆ ವೃದ್ಧಿ ಹ್ರಾಸಗಳು ಇಲ್ಲವು ಹೀಗಿರುವಾಗ ಈ ಸಾಧ್ಯೋಪಾಯಗಳೇನು ಸಿದ್ಧೋಪಾಯಕ್ಕೆ ವರ್ಧಕವೇ? ಹಾಗಲ್ಲದ ಪಕ್ಷದಲ್ಲಿ ಸಾಧ್ಯೋಪಾಯಗಳ ಅಪೇಕ್ಷೆ ಏತಕ್ಕೆ?

ಸಿದ್ಧೋಪಾಯನು ಸರ್ವದಾ ಸಹಜಕಾರುಣ್ಯ ಪರಿಪೂರ್ಣನು, ಹೀಗಿರುವಾಗ ಅವನಿಗೆ ಯಾವ ಸಹಕಾರಿಯ ಆವಶ್ಯಕತೆಯೂ ಇಲ್ಲವು ಈ ಸಾಧ್ಯೋಪಾಯಗಳು ಸಹಕಾರಿಯಲ್ಲದ ಪಕ್ಷದಲ್ಲಿ ಅವುಗಳಪೇಕ್ಷೆ ಏತಕ್ಕೆ?

ಸಿದ್ಧೋಪಾಯನು ಸತ್ಯಸಙ್ಕಲ್ಪನು, ಯಾವುದರ ದ್ವಾರಾ ಇಲ್ಲದೆ ಸ್ವತಂತ್ರನಾಗಿ ಸಙ್ಕಲ್ಪಿಸುವ ಶಕ್ತಿಯುಳ್ಳವನು. ಇಂತವನು ಸಾಧ್ಯೋಪಾಯಗಳ ದ್ವಾರಾ ಸಿದ್ಧೋಪಾಯನಾಗಬೇಕೇ? ಹಾಗಿಲ್ಲದೆ ಪಕ್ಷದಲ್ಲಿ ಈ ಸಾಧ್ಯೋಪಾಯಗಳ ಆವಶ್ಯಕತೆ ಏನು ? ಇತ್ಯಾದಿ ಪೂರ್ವಪಕ್ಷಗಳನ್ನು ಮುಂದೆ ಅನುವಾದ ಮಾಡಿ ಇನ್ನೈ ಅನಾದಿಯಾನ ಎಂಬ ವಾಕ್ಯಮೂಲಕ ಸಮಾಧಾನವನ್ನು ಹೇಳುತ್ತಾರೆ. ಹೇಗೆ ಉಪಕಾರಕವೆಂದರೆ, ಈ ಚೇತನನು ಮಾಡಿರುವ ಅನಂತಾಪರಾಧಗಳಿಂದ ಭಗವನ್ನಿಗ್ರಹಕ್ಕೆ ಗುರಿಯಾಗಿರುತ್ತಾನೆ ಈ ಸಾಧ್ಯೋಪಾಯಗಳು ಅಂತಹ ನಿಗ್ರಹವನ್ನು ಶಮನಮಾಡಿ, ಅನುಗ್ರಹ ಸಂಪಾದಕಗಳಾಗುತ್ತವೆ; ಆದುದರಿಂದ ಅವ

## ಭಕ್ತಿಃ ಪ್ರಪತ್ತ್ಯೋಃ ಸಿದ್ಧೋಪಾಯೋಪಕಾರಕತ್ವಂ

**ಉಪಾಸನಾದಿಗಳೈಪ್ಪೋಲೆ ತನಕ್ಕು ಉತ್ಪಾದಕ ಮಾಗವಾದಲ್, ವರ್ಧಕಮಾಗವಾದಲ್, ಸಹಕಾರಿಯಾಗವಾದಲ್, ದ್ವಾರಮಾಗವಾದಲ್, ಒನ್ರಾಲಪೇಕ್ಷೈ ಯರುಮ್ಪಡಿ, ನಿತ್ಯಮಾಯ್, ಉಪಚಯಾಪಚಯ ರಹಿತಮಾಯ್, ಸರ್ವದಾ ಪರಿಪೂರ್ಣಮಾನ ಸಹಜ ಕಾರುಣ್ಯಾದಿಗಳೈ ಯುಡೈತ್ತಾಯ್, ಸಙ್ಕಲ್ಪ ಮುಂಡಾನಪೋದುದ್ವಾರ ನಿರಪೇಕ್ಷಮಾಗ ಕಾರ್ಯಂ ಪಿರುಕ್ಕುಮ್ಪಡಿ ಸತ್ಯಸಙ್ಕಲ್ಪಮಾಯ್ ಇರುಕ್ಕಿರ ಸಿದ್ಧೋ**

---

ಶ್ಯಕವೆಂದು ಹೇಳುತ್ತಾರೆ. ಇವುಗಳು ಸಿದ್ಧೋಪಾಯಕ್ಕೆ ಉತ್ಪಾದಕಗಳಾಗಲಿ, ವರ್ಧಕಗಳಾಗಲಿ, ಸಹಕಾರಿಗಳಾಗಲಿ, ದ್ವಾರಗಳಾಗಲಿ ಅಲ್ಲವು. ಪುನಃಪುನಃ ಸಂಸಾರ ಬಂಧಕ್ಕೆ ಹೇತು ಭೂತವಾದ ಸರ್ವೇಶ್ವರನ ನಿಗ್ರಹವನ್ನು ತಪ್ಪಿಸಿ, ಅನುಗ್ರಹವನ್ನು ಸಂಪಾದಿಸಿ ಕೊಡುತ್ತವೆಂದು ಹೇಳುತ್ತಾರೆ.

**ಉಪಾಸನಾದಿಗಳೈಪ್ಪೋಲೆ** - ಉಪಾಸನಾದಿಗಳ ಹಾಗೆ, ಇದು ವ್ಯತಿರೇಕ ದೃಷ್ಟಾಂತವು, ಹೇಗೆ ವ್ಯತಿರೇಕವೆಂಬುದು ಮುಂದೆ ವ್ಯಕ್ತಪಡಿಸಲ್ಪಡುತ್ತದೆ, **ತನುಕ್ಕು** - ಸಿದ್ಧೋಪಾಯನಾದ ಸರ್ವೇಶ್ವರನಿಗೆ, **ಉತ್ಪಾದಕ ಮಾಗವಾದಲ್** - ಉಂಟು ಮಾಡುವದಾಗಿಯಾಗಲಿ **ವರ್ಧಕಮಾಗಿಯಾದಲ್**-ಅಭಿವೃದ್ಧಿ ಮಾಡುವದಾಗಿಯಾಗಲಿ, **ಸಹಕಾ ರಿಯಾಗವಾದಲ್** - ಸಹಾಯ ಮಾಡುವ ದಾಗಿಯಾಗಲಿ, **ದ್ವಾರಮಾಗವಾದಲ್** - ಈ ಉಪಾಯಗಳ ಮೂಲಕವಾಗಿ ಯಾಗಲಿ, **ಒನ್ರಾಲಪೇಕ್ಷೈಯುರುಂಬಡಿ** - ಹೀಗೆ ಯಾವದೊಂದು ವಿಧದಲ್ಲೂ ಅಪೇಕ್ಷೆ ಇಲ್ಲದಿರುವಹಾಗೆ, **ನಿತ್ಯಮಾಯ್** - ತಾನು ನಿತ್ಯನಾಗಿ ಆ ಕಾರಣದಿಂದ ಯಾವ ಉತ್ಪಾದಕದ ಅಪೇಕ್ಷೆಯೂ ಬೇಡದವನಾಗಿ, **ಉಪಚಯಾಪಚಯ ರಹಿತಮಾಯ್** - ವೃದ್ಧಿಹ್ರಾಸಗಳಿಲ್ಲದಿರುವದರಿಂದ ಯಾವುದರಿಂದಲೂ ವರ್ಧಕಾ ಪೇಕ್ಷೆಯಿಲ್ಲದವನಾಗಿ, **ಸರ್ವದಾ ಪರಿಪೂರ್ಣಮಾನ ಸಹಜ ಕಾರುಣ್ಯಾದಿ ಗಳೈ ಯುಡತ್ತಾಯ್** - ಯಾವಾಗಲೂ ಸಹಜಕಾರುಣ್ಯಪರಿಪೂರ್ಣನಾಗಿ ಕರು ಣಾಸಾಗರನೆನಿಸಿರುವದರಿಂದ ಯಾವುದರ ಸಹಾಯಾಪೇಕ್ಷೆಯೂ ಇಲ್ಲದವ ನಾಗಿ, **ಸಙ್ಕಲ್ಪಮುಂಡಾನಪೋದು ದ್ವಾರನಿರಪೇಕ್ಷಮಾಗ ಕಾರ್ಯಂ ಪಿರುಕ್ಕುಂಪಡಿ ಸತ್ಯಸಙ್ಕಲ್ಪಮಾಯ್** - ಯಾವಾಗ ತಾನು ಸಙ್ಕಲ್ಪಿಸು ತ್ತಾನೋ ಆಗಯಾವುದರ ದ್ವಾರಾ ಇಲ್ಲದೆ ತನ್ನ ಸಙ್ಕಲ್ಪಾನುಸಾರವಾಗಿ ಕಾರ್ಯವು

**ಪಾಯತ್ತುಕ್ಕು ಭಕ್ತಿಪ್ರಪತ್ತಿಗಳ್ ಎವ್ವಾಕಾರತ್ತಾಲೆ ಉಪಕಾರಕಙ್ಗಳಾಗಿರನ ವೆನ್ನಿಲ್, ಇವ್ವೈಯಸಾದಿಯಾನ ಅಪಚಾರ ಪರಂಪರೈಯಾಲೇ ಉತ್ಪನ್ನಮಾಯ್ ಸಂಸಾರ ಹೇತುವಾಯ್‌ಕ್ಕಿಡಕ್ಕಿರ ನಿಗ್ರಹತ್ತೈ ಶಮಿಪ್ಪಿತ್ತುಕೊಂಡು ಉಪಕರಿಕ್ಕಿರನ. ಇವ್ವೈ ಫಲಾಂತರತ್ತುಕ್ಕು ಉಪಾಯ**

ನಡೆಯುವಹಾಗೆ ಸತ್ಯಸಙ್ಕಲ್ಪನಾಗಿ, **ಇರುಕ್ಕಿರ ಸಿದ್ಧೋಪಾಯತ್ತುಕ್ಕು**- ಇರುವ ಸಿದ್ಧೋಪಾಯನಿಗೆ, ಭಕ್ತಿ ಪ್ರಪತ್ತಿಗಳು, **ಎವ್ವಾಕಾರತ್ತಾಲೇ ಉಪಕಾರಕಗಳಾಗಿರನ ಎನ್ನಿಲ್** - ಯಾವ ರೀತಿಯಲ್ಲಿ ಉಪಕಾರಗಳಾಗುತ್ತವೆ ಎಂದರೆ, **ಇವ್ವೈ** - ಈ ಸಾಧ್ಯೋಪಾಯಗಳಾದ, ಭಕ್ತಿಪ್ರಪತ್ತಿಗಳು, **ಅಪಚಾರ ಪರಂಪರೈಯಾಲೆ** - ಭಗವಂತನ ವಿಧಿ ನಿಷೇದವಾಕ್ಯಗಳಿಗೆ ವಿರೋಧವಾಗಿ ನಡೆದು ಮಾಡಿದ **ಅಕೃತ್ಯಕರಣ** ಕೃತ್ಯಾಕರಣ ರೂಪಗಳಾದ ಪಾಪಸಮೂಹಗಳಿಂದ, **ಉತ್ಪನ್ನಮಾಯ್** - ಉಂಟಾದ, **ಸಂಸಾರ ಹೇತುವಾಯ್ ಕಿಡಕ್ಕಿರ** - ಪುನಃ ಪುನಃ ಬಂಧಕಗಳಾಗಿ ಜನ್ಮ ಪರಂಪರೆಗಳನ್ನು ಎತ್ತುವದಕ್ಕೆ ಕಾರಣಭೂತವಾಗಿರುವ, **ನಿಗ್ರಹತ್ತೈ** - ಭಗವಂತನ ಕೋಪರೂಪವಾದ ನಿಗ್ರಹವನ್ನು, **ಶಮಿಪ್ಪಿತ್ತುಕೊಂಡು** - ಶಮನಮಾಡಿ, **ಉಪಕರಿಕ್ಕಿರನ** ಉಪಕಾರಕಗಳಾಗುತ್ತವೆ. **ಉಪಾಸನಾದಿಗಳೈಪ್ಪೋಲೆ** ಎಂಬುದು ವ್ಯತಿರೇಕ ದೃಷ್ಟಾಂತ ಹೇಗೆ ಎಂದರೆ, ಉಪಾಸನವು ಕರ್ಮಯೋಗಾದಿಗಳಿಂದ ಉತ್ಪಾದ್ಯವು, ಅಹರಹರನುಷ್ಠಿಸಲ್ಪಟ್ಟ ಅಭ್ಯಾಸದಿಂದ ವರ್ಧಿತವು, ನಿತ್ಯ ನೈಮಿತ್ತಿಕ ಕರ್ಮಗಳ ಸಹಕಾರಿಯನ್ನಪೇಕ್ಷಿಸುವಂತಾದ್ದು ಸರ್ವೇಶ್ವರದ್ವಾರಾ ಫಲಪ್ರದವು, ಏವಂ ಸಿದ್ಧೋಪಾಯನಿಗೆ ಉಪಾಸನೆಗೆ ಇರುವಹಾಗೆ ಉತ್ಪಾದಕವಿಲ್ಲವು ಇತ್ಯಾದಿ

ಮೋಕ್ಷಪ್ರಾಪ್ತಿಗಾಗಿ ಮುಮುಕ್ಷುವು ಮಾಡುವ ಉಪಾಯಾನುಷ್ಠಾನವು ಭಗವನ್ನಿಗ್ರಹವನ್ನೇನೋ ಶಮನ ಮಾಡುತ್ತದೆಂದು ಒಪ್ಪಿಕೊಳ್ಳೋಣ, ಮುಮುಕ್ಷುವಲ್ಲದೆ ಇತರರು ಸ್ವರ್ಗಾದಿ ಫಲಾಂತರಕ್ಕಾಗಿ ಮಾಡುವ ಉಪಾಯಾನುಷ್ಠಾನಗಳಲ್ಲಿ ಅಂತಹ ಭಗವನ್ನಿಗ್ರಹಕ್ಕೆ ಕಾರಣವಿಲ್ಲವಲ್ಲಾ, ಆಗ ಈ ಸಾಧ್ಯೋಪಾಯಗಳು ಹೇಗೆ ಉಪಕಾರಕಗಳು ಎಂದರೆ "ಇವ್ವೈ ಫಲಾಂತರತ್ತುಕ್ಕು" ಎ ದಾರಂಭಿಸಿದ ವಾಕ್ಯದಿಂದ ಹೇಳುತ್ತಾರೆ:—ನಿಗ್ರಹಕ್ಕೇನೋ ಕಾರಣವಿಲ್ಲವು, ಅನುಗ್ರಹಕ್ಕೆ ಕಾರಣವಾಗಕೂಡದೋ ? ಆದುದರಿಂದ ಭಗವತ್ಪ್ರೀತಿಜನಕವಾಗಿ ಆ ಮೂಲಕ ಈ ಸಾಧ್ಯೋಪಾಯಗಳು ಉಪಕಾರಕಗಳಾಗಬಹುದು ಎಂದು ಹೇಳುತ್ತಾರೆ **ಇವ್ವೈ** - ಈ ಉಪಾಯಗಳಾದ ಭಕ್ತಿ ಪ್ರಪತ್ತಿಗಳು, **ಫಲಾಂತರ**

**ವರ್ತಾಂಪ್ಪೋದು ಜ್ಯೋತಿಷ್ಟೋಮಾದಿಗಳ್ಳೈ ಪ್ಪೋಲೆ ತತ್ತದನುಗುಣ ಪ್ರೀತಿ ವಿಶೇಷಙ್ಗಳ್ಳೈ ಉತ್ಪಾದಿತ್ತು ಕ್ಕೊಂಡು ಅವ್ವುಮುಖತ್ತಾಲೆ ಉಪ ಕಾರಕಙ್ಗಳಾವ್**

---

ತ್ತುಕ್ಕು - ಮೋಕ್ಷೇತರವಾದ ಐಶ್ವರ್ಯ ಸ್ವರ್ಗಭೋಗಾದಿಗಳಿಗೆ, **ಉಪಾಯ ವರ್ತಾಂಪ್ಪೋದು** - ಉಪಾಯಗಳಾಗುವಾಗ, ಜ್ಯೋತಿಷ್ಟೋಮಾದಿಗಳಹಾಗೆ, **ತತ್ತದನುಗುಣ ಪ್ರೀತಿ ವಿಶೇಷಙ್ಗಳ್ಳೈ**- ಆಯಾ ಫಲಗಳಿಗೆ ಬೇಕಾದ ಪ್ರೀತಿ ವಿಶೇಷ ಗಳನ್ನು, **ಉತ್ಪಾದಿತ್ತುಕೊಂಡು** - ಉಂಟುಮಾಡಿಕೊಂಡು, **ಅವ್ವುಮುಖ ತ್ತಾಲೆ** - ಆ ಮೂಲಕವಾಗಿ, **ಉಪಕಾರಕಙ್ಗಳಾವ್** - ಸಹಾಯಕಗಳಾಗ ಬಹುದು. ಸಾಧ್ಯೋಪಾಯಗಳಿಂದ ಆಗತಕ್ಕ ಉಪಕಾರಗಳು ಎರಡು ವಿಧವು (೧) ಅನಿಷ್ಟ ನಿವೃತ್ತಿಯು. (೨) ಇಷ್ಟಪ್ರಾಪ್ತಿಯು ; ಮುಮುಕ್ಷುವಿನ ವಿಷಯ ದಲ್ಲಿ ಇಷ್ಟಪ್ರಾಪ್ತಿಗೆ ಅನಿಷ್ಟ ನಿವೃತ್ತಿಯು ಎಂದರೆ ಭಗವನ್ನಿಗ್ರಹರೂಪ ಪ್ರತಿ ಬಂಧಕ ನಿವೃತ್ತಿಯು ಅತ್ಯಾವಶ್ಯಕವು ಈ ಸಾಧ್ಯೋಪಾಯಗಳು ಈ ಎರಡು ಫಲಗಳನ್ನೂ ಉಂಟುಮಾಡುತ್ತವೆ ಆದರೆ ಮುಮುಕ್ಷುವಲ್ಲವೆ, ಸ್ವರ್ಗೈಶ್ವರ್ಯಾದಿ ಫಲಗಳನ್ನು ಅಪೇಕ್ಷಿಸುವವನಿಗೆ ಪ್ರತಿಬಂಧಕ ನಿವೃತ್ತಿಯು ಆವಶ್ಯಕವಿಲ್ಲದುದ ರಿಂದ, ಭಗವತ್ಪ್ರೀತಿ ಅನುಗ್ರಹಗಳಿಗೆ ಮಾತ್ರವೇ ಸಂಪಾದಕಗಳಾಗಿ ಈ ಸಾಧ್ಯೋಪಾಯಗಳು ಉಪಕಾರಕಗಳೆಂಬ ತಾತ್ಪರ್ಯವು. ಮೋಕ್ಷಕ್ಕಾಗಿ ಸಾಧ್ಯೋಪಾಯಗಳನ್ನನುಷ್ಠಿಸುವವನಿಗೂ ಕೂಡ ಈತನು ಅಪೇಕ್ಷಿಸದಿದ್ದರೂ ಐಹಿಕ ಭೋಗಗಳನ್ನೂ, **ಪ್ರಿಯೋಹಿ ಜ್ಞಾನಿನೋತ್ಯರ್ಥಂ ಅಹಂ** ಎಂದು ಹೇಳಿ ರುವ ಹಾಗೆ ತನ್ನ ಪ್ರಿಯಭಕ್ತನಿಗೆ ಕುಚೇಲಾದಿಗಳಿಗೆ ಕೊಟ್ಟ ಹಾಗೆ ಐಹಿಕ ಭೋಗಗಳನ್ನೂ ಸಹ ಕೊಡಬಹುದು ದೇಹಾವಸಾನದಲ್ಲಿ ಮೋಕ್ಷವನ್ನು ಪ್ರಾರ್ಥಿ ಸಿರುವದರಿಂದ ಸ್ವರ್ಗಾದಿ ಲೋಕಗಳ ಭೋಗಗಳನ್ನು ಕೊಡುವದಿಲ್ಲವು. ಏಕೆಂ ದರೆ ಅವುಗಳು ಬಂಧಕಗಳಾದುದರಿಂದ ಕೊಡುವದಿಲ್ಲವು. ಮೋಕ್ಷೇತರ ಫಲಾ ರ್ಥಿಗಳಾದರೋ ಈ ಸಾಧ್ಯೋಪಾಯಗಳನ್ನು ವ್ಯಾಜಮಾಡಿಕೊಂಡು ತತ್ತದಿಷ್ಟಾನು ಸಾರ ಫಲಗಳನ್ನು ಅನುಗ್ರಹಿಸುವನು ಎಂಬ ತಾತ್ಪರ್ಯವು. ಅಂತೂ ಈ ಎಲ್ಲಾ ಸಂದರ್ಭಗಳಲ್ಲೂ ಸಾಧ್ಯೋಪಾಯಗಳ ಆವಶ್ಯಕತೆಯು ತಪ್ಪಿದ್ದಲ್ಲವು. ಆದುದರಿಂ ದಲೇ ಗೀತೆಯಲ್ಲಿ (೧) **ಚತುರ್ವಿಧಾ ಭಜಂತೇಮಾಂ ಜನಾಸ್ಸುಕೃತಿನೋಽ ರ್ಜುನ । ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚ ಭರತರ್ಷಭ ॥** ಎಂದು (ಗೀ. ೭ ೧೬ರಲ್ಲಿ) ಸಾಧ್ಯೋಪಾಯಗಳ ಆವಶ್ಯಕತೆಯು ಹೇಳಲ್ಪಟ್ಟಿರುತ್ತದೆ. ಇಲ್ಲಿ

## ಮೋಕ್ಷ ಫಲಪ್ರದತ್ವೇ ಸಿದ್ಧೋಪಾಯ ಸಾಧ್ಯೋಪಾಯಯೋಃ ಉಪಕಾರಾಃ.

**ಮುಮುಕ್ಷುವುಕ್ಕು ಸಾಧ್ಯೋಪಾಯಙ್ಗಳಾಗಿರ ವ್ಯಾಜಮಾತ್ರತ್ತಾಲೆ ಶಾಂತ ನಿಗ್ರಹಮಾನ ಸಿದ್ಧೋಪಾಯಮ್ ನಿಗ್ರಹಫಲಮಾನ ಜ್ಞಾನ ಸಙ್ಕೋಚಾದಿಗಳೈ ಕ್ಕಳೈತ್ತು ಪರಿಪೂರ್ಣ ಕೈಙ್ಕರ್ಯ ಪರ್ಯಂತ ಫಲತ್ತೈ ಕೊಡುತ್ತು ಯಾವದಾತ್ಮಭಾವಿಯಾಗ ಉಪಕರಿಕ್ಕುಮ್.**

---

ಜ್ಞಾನಿಯು ಮಾತ್ರ ಮುಮುಕ್ಷುವು. ಮಿಕ್ಕ ಮೂವರು ಫಲಾಂತರಾಪೇಕ್ಷಿಗಳು. ಸಾಧ್ಯೋಪಾಯವಾದ ಭಜನವು ಉಪಾಸನಾರೂಪವಾದುದು.

ಆದರೆ ಇಲ್ಲಿ ಸಾಧ್ಯೋಪಾಯವು ಫಲಪ್ರದವೇ ? ಸಿದ್ಧೋಪಾಯವು ಫಲಪ್ರದವೇ ? ಸಾಧ್ಯೋಪಾಯ ಸಿದ್ಧೋಪಾಯಗಳೆರಡೂ ಸೇರಿ ಫಲಪ್ರದವೇ ? ಎಂದು ವಿಕಲ್ಪಿಸಿದರೆ, ಒಂದೊಂದೇ ಫಲಪ್ರದವೆಂದರೆ ಮತ್ತೊಂದು ನಿರರ್ಥಕವಾಗುತ್ತದೆ. ಆದರೆ ಈಗ ಸಾಧ್ಯೋಪಾಯವು ಆವಶ್ಯಕವೆಂದು ಹೇಳಿದನಂತರ ಸಿದ್ಧೋಪಾಯವು ನಿರರ್ಥಕವೆಂದಾಗುತ್ತದೆ. ಇವೆರಡರಲ್ಲಿ ಸಿದ್ಧೋಪಾಯವೇ ಪ್ರಧಾನವಾದುದಾಗಿ, ಸಿದ್ಧೋಪಾಯ ಶೋಧನಾಧಿಕಾರದಲ್ಲಿ ಅದರ ಆವಶ್ಯಕತೆಯು ಹಿಂದೆಯೇ ಉಪಪಾದಿತವಾಗಿರುತ್ತದೆ. ಆದುದರಿಂದ ಎರಡೂ ಆವಶ್ಯಕವೆಂದು ಹೇಳಿದಂತೇ ಆಯಿತು. ಹಾಗೆ ಎರಡೂ ಆವಶ್ಯಕವಾದರೆ ಈ ಫಲಪ್ರದತ್ವದಲ್ಲಿ ಸಾಧ್ಯೋಪಾಯ ಕೃತ್ಯವು ಎಷ್ಟರಮಟ್ಟಿಗೆ, ಸಿದ್ಧೋಪಾಯ ಕೃತ್ಯವು ಎಷ್ಟರಮಟ್ಟಿಗೆ ಎಂಬುದನ್ನು ವಿಮರ್ಶಿಸಿ ಉಪದೇಶಿಸುತ್ತಾರೆ.

### ಮೋಕ್ಷಫಲಕ್ಕೆ ಸಿದ್ಧೋಪಾಯ ಸಾಧ್ಯೋಪಾಯಗಳು ಎಷ್ಟರಮಟ್ಟಿಗೆ ಉಪಕಾರಕಗಳು.

ಮುಮುಕ್ಷುವುಕ್ಕು-ಮೋಕ್ಷಾರ್ಥಿಗೆ, ಸಾಧ್ಯೋಪಾಯಗಳಾಗಿರುವ, ವ್ಯಾಜಮಾತ್ರತ್ತಾಲೆ - ನೆಪಮಾತ್ರದಿಂದ, ಶಾಂತನಿಗ್ರಹಮಾನ ಸಿದ್ಧೋಪಾಯಂ-ಅನಂತಾಪರಾಧ ಮಾಡಿದುದರಿಂದ ಇದುವರೆಗೂ ಭಗವನ್ನಿಗ್ರಹಕ್ಕೆ ಗುರಿಯಾದುದು ತಪ್ಪಿ ನಿಗ್ರಹ ಮಾಡಬೇಕೆಂಬುದು ಶಮನವಾದ ಸಿದ್ಧೋಪಾಯನು, ಜ್ಞಾನಸಙ್ಕೋಚಾದಿಗಳೈ ಕಳೈತ್ತು - ಇವನಿಗೆ ಪ್ರಾಪ್ತವಾಗಿದ್ದ ಜ್ಞಾನಸಙ್ಕೋಚವು ತಪ್ಪಿ, ಪರಿಪೂರ್ಣ ಬ್ರಹ್ಮಾನುಭವವೇನು, ಸರ್ವೇಶ್ವರನಿಗೆ ಮಾಡುವ ವಿವಿಧ ಕೈಙ್ಕರ್ಯಗಳೇನು, ಅವುಗಳ ಪರ್ಯಂತವಾದ ಫಲವನ್ನು,

**ಕೊಡುತ್ತು** - ಕೊಟ್ಟು, **ಯಾವದಾತ್ಮಭಾವಿಯಾಗ** - ಆತ್ಮನು ನಿತ್ಯನಾದುದರಿಂದ ಮುಂದೆ ಇರುವ ಕಾಲದಲ್ಲೆಲ್ಲಾ, **ಉಪಕರಿಕ್ಕುಮ್** - ಅನುಗ್ರಹಿಸುತ್ತಾನೆ; **ಸಾಧ್ಯೋಪಾಯಗಳು** ಜಡಗಳಾದುದರಿಂದ ಅವುಗಳು ಸಾಕ್ಷಾತ್ತಾಗಿ ಫಲಪ್ರದಗಳಲ್ಲವು, ಅವು ನಿಮಿತ್ತಮಾತ್ರವು; ಸರ್ವೇಶ್ವರನು ಈ ಭಕ್ತಿ ಪ್ರಪತ್ತಿರೂಪ ಉಪಾಯಾನುಷ್ಠಾನಮಾಡಿದವರಿಗೇನೆ ಮೋಕ್ಷಕೊಡುವದಾಗಿ ಸಙ್ಕಲ್ಪಿಸಿರುವದರಿಂದ, ಆ ಉಪಾಯಾನುಷ್ಠಾನಗಳು ವ್ಯಾಜಮಾತ್ರಗಳೆಂದು ಹೇಳಲ್ಪಟ್ಟವು. ವ್ಯಾಜಗಳಾದರೂ, ಸರ್ವೇಶ್ವರನು ಹಾಗೆ ವಿಧಿಸಿರುವದರಿಂದ ಅವುಗಳನ್ನು ಅನುಷ್ಠಿಸಲೇಬೇಕು. ಈ ಸಾಧ್ಯೋಪಾಯಾನುಷ್ಠಾನಗಳಿಂದ ಸುಪ್ರೀತನಾದ ಸರ್ವೇಶ್ವರನು ಇದುವರೆಗೂ ನಿಗ್ರಹಿಸಿ ಪುನಃಪುನಃ ಬಂಧನಕ್ಕೆ ಗುರಿಮಾಡಿದವನನ್ನು ಮನ್ನಿಸಿ, ಆತನಿಗುಂಟಾಗಿದ್ದ ಪ್ರಕೃತಿಸಂಬಂಧದಿಂದ ಪ್ರಾಪ್ತವಾದ ಜ್ಞಾನತಿರೋಹಿತತ್ವವನ್ನು ಹೋಗಲಾಡಿಸಿ, ಪ್ರಕೃತಿ ಸಂಬಂಧವನ್ನು ತಪ್ಪಿಸಿ, **ಸ್ವೇನರೂಪೇಣಾಭಿನಿಷ್ಪದ್ಯತೇ** ಎಂದು ಶ್ರುತಿಯಲ್ಲೂ, **ಸಂಪದ್ಯಾವಿರ್ಭಾವಸ್ಸ್ವೇನಶಬ್ದಾತ್** ಎಂದು ಬ್ರಹ್ಮಸೂತ್ರದಲ್ಲೂ, ಹೇಳಿರುವಹಾಗೆ ಸರ್ವಜ್ಞತೆಯನ್ನು ಹೊಂದಿದವನಾಗಿ, ಭಗವತ್ಕೈಙ್ಕರ್ಯಪ್ರಾಪ್ತಿಯವರೆಗೂ ಹೇಳಿರುವ ಮೋಕ್ಷಫಲವನ್ನು ಹೊಂದಿಸುವನು ಹೀಗೆ ಈ ಎರಡು ಉಪಾಯಗಳೂ ಆವಶ್ಯಕವು; ಎರಡೂ ಉಪಕಾರಕಗಳೂ ಎಂಬ ತಾತ್ಪರ್ಯವು. ಹೀಗೆ ಅಭಿಪ್ರಾಯಪಡುವದರಿಂದ ಸಾಧ್ಯೋಪಾಯದ ಆವಶ್ಯಕತೆಯೂ ಸಿದ್ಧೋಪಾಯದ ಪ್ರಾಧಾನ್ಯವೂ ಎರಡೂ ಸಾರ್ಥಕ್ಯವನ್ನು ಹೊಂದಿದವು.

ಮುಂದೆ ಹೀಗೆ ಅಭಿಪ್ರಾಯಪಟ್ಟರೇನೇ ಶಾಸ್ತ್ರಗಳಲ್ಲಿ ಕೆಲವುಕಡೆ ಸಾಧ್ಯೋಪಾಯಗಳು ಮೋಕ್ಷಪ್ರಾಪ್ತಿಗೆ ಆವಶ್ಯಕವೆಂದೂ, ಇನ್ನೂ ಕೆಲವು ಕಡೆ ಸಿದ್ಧೋಪಾಯನು ಆವಶ್ಯಕವೆಂದೂ ಹೇಳುವ ಪ್ರಮಾಣಗಳೆರಡೂ ಸುಸಙ್ಗತಗಳೆಂದು ತಿಳಿಸುತ್ತಾರೆ.

## ಸಿದ್ಧ ಸಾಧ್ಯೋಪಾಯಗಳನ್ನು ಬೋಧಿಸುವ ಎರಡು ವಿಧ ಪ್ರಮಾಣಗಳೂ ಸುಸಙ್ಗತಗಳು.

---

**ಅಗ್ಯೆಯಾಲ್** – ಹೀಗೆ ಸಾಧ್ಯೋಪಾಯ ಸಿದ್ಧೋಪಾಯಗಳೆರಡರಿಂದಲೂ ಮೋಕ್ಷಪ್ರಾಪ್ತಿಯೆಂದು ಹೇಳುವದರಿಂದ ಎಂದರೆ ಸಾಧ್ಯೋಪಾಯದಿಂದ ವಶೀಕೃತನಾದ ಸಿದ್ಧೋಪಾಯನಿಂದಲೇ ಮೋಕ್ಷವುಂಟಾಗುತ್ತದೆಂದು ಹೇಳುವದರಿಂದ, **ಮುಮುಕ್ಷುವಿನುಡೈಯ** - ಮೋಕ್ಷಾರ್ಥಿಯ, ಸರ್ವಾನಿಷ್ಟ ನಿವೃತ್ತಿಪೂರ್ವಕವಾಗಿ ಪರಿಪೂರ್ಣ ಬ್ರಹ್ಮಾನುಭವ ತತ್ಕೈಙ್ಕರ್ಯಪ್ರಾಪ್ತಿಯ ವರೆಗೂ

## ಸಿದ್ಧ ಸಾಧ್ಯೋಪಾಯ ಪರೋಭಯ ಪ್ರಮಾಣಾನಿ ಸುಸಙ್ಗತಾನಿ.

ಆಗೈಯಾಲ್ ಮುಮುಕ್ಷುವಿನುಡೈಯ ಸರ್ವಾನಿಷ್ಟ ನಿವೃತ್ತಿಪೂರ್ವಕ ಮಾಯ್ ಪರಿಪೂರ್ಣಕೈಙ್ಕರ್ಯ ಪರ್ಯನ್ತಮಾನ ಫಲಪರಂಪರೈಯೆ ಲ್ಲಾಮ್ ಸಿದ್ಧೋಪಾಯ ಕಾರ್ಯಮೆನ್ನುಮ್, ಪ್ರಸಾದನಮಾನ ಸಾ ಧ್ಯೋಪಾಯ ಮಡಿಯಾಗ ವರುಗಿರದೆನ್ನುಮ್, ಪ್ರಮಾಣಙ್ಗಳಿರಣ್ಡುಮ್ ಸುಸಙ್ಗತಙ್ಗಳ್.

---

ಉಂಟಾಗುವ ಫಲಪರಂಪರೆಗಳೆಲ್ಲಾ, **ಸಿದ್ಧೋಪಾಯ ಕಾರ್ಯಮೆನ್ನುಮ್**- ಸಿದ್ಧೋಪಾಯನ ಕಾರ್ಯವೆಂದೂ, **ಪ್ರಸಾದನಮಾನ** - ಭಗವನ್ನಿಗ್ರಹವನ್ನು ಹೋಗಲಾಡಿಸಿ, ಆತನ ಅನುಗ್ರಹವನ್ನು ಸಾಧಿಸಿಕೊಡುವ, **ಸಾಧ್ಯೋಪಾಯ ಮಡಿಯಾಗ** - ಸಾಧ್ಯೋಪಾಯದ ಮೂಲಕವಾಗಿ, **ವರುಗಿರುದೆನ್ನುಮ್** - ಈ ಫಲಪರಂಪರೆಗಳೆಲ್ಲಾ ಬರುತ್ತವೆಂದೂ ಹೇಳುವ, **ಪ್ರಮಾಣಙ್ಗಳಿರಣ್ಡುಮ್** - ಎರಡುವಿಧ ಪ್ರಮಾಣಗಳೂ, **ಸುಸಙ್ಗತಙ್ಗಳ್** - ಸಮಂಜಸವಾದವು ಪರ ಸ್ಪರ ವಿರುದ್ಧವೆಂದಿಗೂ ಅಲ್ಲವು ಎಂಬ ತಾತ್ಪರ್ಯವು.

ಅಂತಹ ಪ್ರಮಾಣಗಳು ಯಾವುವೆಂದರೆ :—

ಸಿದ್ಧೋಪಾಯನೇ ಮೋಕ್ಷಪ್ರದನೆಂಬುದಕ್ಕೆ :—

**೧. ಅಮೃತಸ್ಯ ಪರಂ ಸೇತುಮ್. ೨ ಅಮೃತಸ್ಯೈಷಸೇತುಃ ೩ ಸಕಲ ಫಲ ಪ್ರದೋಹಿ ವಿಷ್ಣುಃ ೪ ಅಪವರ್ಗ ಪ್ರದೋಹರಿಃ ೫ ತೇಷಾಮಹಂ ಸಮುದ್ಧರ್ತಾ ಮೃತ್ಯು ಸಂಸಾರ ಸಾಗರಾತ್. ೬. ಯಮೇವೈಷವೃಣುತೇ ತೇನಲಭ್ಯಃ**

ಸಾಧ್ಯೋಪಾಯಗಳು ಮುಕ್ತಿಪ್ರದಗಳೆಂಬುದಕ್ಕೆ :—

**೧. ನಿಚಾಯ್ಯತಂ ಮೃತ್ಯು ಮುಖಾತ್ಪ್ರಮುಚ್ಯತೇ. ೨. ಜ್ಞಾತ್ವಾ ದೇವಂ ಮುಚ್ಯತೇ ಸರ್ವ ಪಾಪೈಃ. ೩, ತಮೇವಂ ವಿದ್ವಾ ನಮೃತ ಇಹ ಭವತಿ. ೪. ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ. ೫ ತಂಗಚ್ಛ ಶರಣಂ ಹರಿಂ. ೬ ಮಾಮೇಕಂ ಶರಣಂ ವ್ರಜ ೭. ಮಾಂ ಪ್ರಪ ನ್ನೋ ವಿಮುಚ್ಯತೇ ೮ ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾವಾ ಮಹಾಮತೇ । ಪ್ರಾಪ್ಯೋಹಂ ನಾನ್ಯಥಾ ಪ್ರಾಪ್ಯಃ ಮಮ ಕೈಙ್ಕರ್ಯ ಲಿಪ್ಸುಭಿಃ**

## ಚರಮಶ್ಲೋಕೋ ನವಿಧಿಃ, ಕಿಂತ್ವನುವಾದ ಇತಿ ವಾದಸ್ಯ ಖಂಡನಂ.

### ೪. ಆನಾಲುಮ್ ಇಪ್ರಪತ್ತಿಯಾಗಿರ ಉಪಾಯ ವಿಶೇಷತ್ತೈ ಶಾಸ್ತ್ರಂ

---

ಹೀಗಿರುವ ಎರಡು ವಿಧ ಪ್ರಮಾಣಗಳೂ ನಮಗೆ ಸಮಂಜಸವೇ. ಸಿದ್ಧೋಪಾಯನೇ ಸರ್ವಫಲಗಳನ್ನೂ ಕೊಡುವವನು. ಆದುದರಿಂದ ಸಿದ್ಧೋಪಾಯನೇ ಸರ್ವ ಫಲಪ್ರದನೆಂಬ ಪ್ರಮಾಣಗಳೇನೋ ಸಮಂಜಸವಾದುವೇ. ಆದರೆ ಸಿದ್ಧೋಪಾಯನು ಸಾಧ್ಯೋಪಾಯಗಳಿಂದ ವಶೀಕೃತನಾಗಿ ಸುಪ್ರೀತನಾಗಿ ಫಲಪ್ರದೋನ್ಮುಖನಾಗುವದರಿಂದ ಸಾಧ್ಯೋಪಾಯಗಳೇ ಫಲಪ್ರದಗಳೆಂಬ ಪ್ರಮಾಣಗಳೂ ಕೂಡ ಸಮಂಜಸವಾದುವೇ ಎಂಬ ತಾತ್ಪರ್ಯವು. ಆದುದರಿಂದ ಪ್ರಪತ್ತಿಯೂ ಒಂದು ಸಾಧ್ಯೋಪಾಯವು ಸಾಧ್ಯೋಪಾಯವಲ್ಲವೆಂಬ ಪೂರ್ವಪಕ್ಷಿಗಳೆಲ್ಲಾ ನಿರಸ್ತವಾದವು.

ಆದಕ್ಕಾಗಿ ಚರಮಶ್ಲೋಕದಲ್ಲಿ "ಮಾಮೇಕಂ ಶರಣಂ ವ್ರಜ" ಎಂಬ ವಾಕ್ಯವೇನು ವಿಧಿಯೇ? ಅನುವಾದವೇ? ಎಂದು ವಿಕಲ್ಪಿಸಿ, ಕೆಲವರು ಇದನ್ನು ವಿಧಿವಾಕ್ಯವೆಂದು ಒಪ್ಪುವದಿಲ್ಲವೆಂದೂ ಅನುವಾದಮಾತ್ರವೆಂದೂ ಹೇಳುವರು. ಪ್ರಪತ್ತಿಯು ಅನುಷ್ಠಿಸತಕ್ಕದ್ದೆಂದು ಒಪ್ಪಿದರೂ, ಅಸಮರ್ಥನು ತನ್ನಿಷ್ಟವು ನೆರವೇರುವದಕ್ಕಾಗಿ ಸಮರ್ಥನನ್ನಾಶ್ರಯಿಸುವನೆಂಬುದು ಲೋಕಸಿದ್ಧವಾದುದನ್ನು ವಿಧಿಸಬೇಕೇ? ಯಾವಾಗ ವಿಧಿಯುಲ್ಲವೆ ಅನುವಾದ ಮಾತ್ರವೆಂದಾಯಿತೋ, ಆಗ ಭಕ್ತಿ ಸ್ಥಾನದಲ್ಲಿ ಪ್ರಪತ್ತಿಯು ಹೇಳಲ್ಪಟ್ಟಿತೆಂಬುದು ಸರಿಹೋಗುವದಿಲ್ಲವು; ಹೀಗೆ ಪೂರ್ವಪಕ್ಷವನ್ನು ಕೆಲವರು ಮಾಡುತ್ತಾರೆಂದು ಹೇಳಿ, ಅದನ್ನು ನಿರಸನ ಮಾಡುತ್ತಾರೆ. ಪ್ರಪತ್ತಿಯು ಚರಮ ಶ್ಲೋಕದಲ್ಲಿ ವಿಧೇಯವೆಂದು ಒಪ್ಪಿದರೆ ತಾನೇ, ಅದು ಸಾಧ್ಯೋಪಾಯವೆಂದು ಇಲ್ಲಿ ವಿಧಿಸಲ್ಪಟ್ಟಿದೆ ಎಂದು ಹೇಳಬಹುದು. ಹಾಗೆ ವಿಧಿವಾಕ್ಯವೇ ಅಲ್ಲವು ಎಂದು ಪೂರ್ವಪಕ್ಷವು.

### ಚರಮ ಶ್ಲೋಕವು ವಿಧಿವಾಕ್ಯವಲ್ಲವು, ಅನುವಾದ ಮಾತ್ರವೇ ಎಂಬ ವಾದದ ಖಂಡನವು.

---

೪. **ಆನಾಲುಮ್** - ಪ್ರಪತ್ತಿಯು ಅವಶ್ಯ ಕರ್ತವ್ಯವೆಂದು ಒಪ್ಪಿದರೂ, **ಇಪ್ರಪತ್ತಿಯಾಗಿರ ಉಪಾಯವಿಶೇಷತ್ತೈ** - ಈ ಪ್ರಪತ್ತಿ ಎಂಬುವ ಉಪಾಯ ವಿಶೇಷವನ್ನು, **ಶಾಸ್ತ್ರಂ ವಿಧಿಕ್ಕ ವೇಣಮೋ?** - ಅಧ್ಯಾತ್ಮ ಶಾಸ್ತ್ರವು ವಿಧಿಸಬೇಕೇ? ವಿಧಿಸಬೇಕಾದುದೇನೂ ಇಲ್ಲವೆಂಬ ತಾತ್ಪರ್ಯವು; **ಲೋಕತ್ತಿಲ್-**

**ವಿಧಿಕ್ಕವೇಣುಮೋ? ಲೋಕತ್ತಿಲ್ ತನ್ನೈ ರಕ್ಷಿತ್ತುಕ್ಕೊಳ್ಳ ವಿರಗಿಲ್ಲಾದೆ ಯಳುನ್ದುವಾ ನೊರುವರ್ ಅಪ್ಪೋದು ಸನ್ನಿಹಿತನಾನ ರಕ್ಷಣಸಮರ್ಥನ್ನೈ ಪ್ಪತ್ತು ಮಾಪ್ಪೋಲೆ, ತನ್ನೈಯುಮ್ ಈಶ್ವರನ್ನೈಯುಮ್ ಸಿದ್ಧಪರಮಾನ ಶಾಸ್ತ್ರತ್ತಾಲೆ ತೆಳಿನ್ದಾಲ್, ತಾನೇ ಯವನ್ನೈ ಶರಣಮಾಗಪ್ಪತ್ತಾನೋ? ಆಕೈಯಾಲ್ ಅಕಿಂಚನನುಕ್ಕು ಭಕ್ತಿಸ್ಥಾನತ್ತಿಲೆ ಪ್ರಪತ್ತಿಯೈ ವಿಧಿಕ್ಕಿರದೆನ್ಗೈ ಕೂಡಾದೇ? ಎನ್ರು ಶಿಲರ್ ಶೊಲ್ಲುವರ್ಗಳ್.**

---

ಈ ಲೋಕದಲ್ಲಿ, **ತನ್ನೈ ರಕ್ಷಿತ್ತುಕ್ಕೊಳ್ಳ ವಿರಗಿಲ್ಲಾದೇ** - ತನ್ನ ರಕ್ಷಿಸಿಕೊಳ್ಳುವ ಮಾರ್ಗವು ಇಲ್ಲದೇ, **ಅಳುನ್ದುವಾರ್**-ಅಳುವವನು, ಶೋಕಿಸುವವನು, (**ಮಾಶುಚಃ** ಎಂಬ ವಾಕ್ಯ ತಾತ್ಪರ್ಯವನ್ನು ಮನಸ್ಸಿನಲ್ಲಿಟ್ಟು ಹೇಳಿದುದು), **ಒರುವರ್** - ಒಬ್ಬನು, **ಅಪ್ಪೋದು ಸನ್ನಿಹಿತನಾನ** - ಆಗಲೇ ಸಮೀಪಿಸಿ ಬಂದ, **ರಕ್ಷಣ ಸಮರ್ಥನ್ನೈಪ್ಪತ್ತುಮಾಪ್ಪೋಲೆ** - ರಕ್ಷಿಸಲು ಸಾಮರ್ಥ್ಯವಿರುವವನನ್ನು ಆಶ್ರಯಿಸುವ ಹಾಗೆ, **ತನ್ನೈಯುಮ್ ಈಶ್ವರನ್ನೈಯುಮ್** - ತನ್ನನ್ನೂ ಸರ್ವೇಶ್ವರನನ್ನೂ, **ಸಿದ್ಧಪರಮಾನಶಾಸ್ತ್ರತ್ತಾಲೇ** - ಸ್ವರೂಪಶೋಧಕವಾಕ್ಯಗಳುಳ್ಳ ಶಾಸ್ತ್ರದಿಂದ, **ತೆಳಿನ್ದಾಲ್**—"**ಈಶಾನೀಶೌ**" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ ತಾನು ಅಸಮರ್ಥನೆಂದೂ ಸರ್ವೇಶ್ವರನು ಸಮರ್ಥನೆಂದೂ ತಿಳಿದರೆ, ತಾನೇ, **ಅವನ್ನೈ** - ಅವನನ್ನು, **ಶರಣಮಾಗಪ್ಪತ್ತಾನೋ?** - ಉಪಾಯವಾಗಿ ಆಶ್ರಯಿಸಲಾರನೋ? ಅದಕ್ಕೆ ಶಾಸ್ತ್ರದ ವಿಧಿವಾಕ್ಯ ಬೇಕೆ? ಎಂಬ ತಾತ್ಪರ್ಯವು. ಅಸಮರ್ಥನು ಸಮರ್ಥನನ್ನು ಆಶ್ರಯಿಸುವದು ಲೋಕಾನುಭವವಾದ ವಿಷಯವು, ಇದಕ್ಕೆ ಶಾಸ್ತ್ರ ವಿಧಿಯು ಬೇಕಿಲ್ಲವೆಂಬ ಭಾವವು, **ಆಗೈಯಾಲ್** - ಆದುದರಿಂದ, **ಅಕಿಂಚನನುಕ್ಕು** - ಬೇರೇ ಗತಿಯಿಲ್ಲದ ಅಸಮರ್ಥನಿಗೆ, ಭಕ್ತಿಸ್ಥಾನದಲ್ಲಿ ಎಂದರೆ ಉಪಾಸನದ ಸ್ಥಳದಲ್ಲಿ, ಪ್ರಪತ್ತಿಯನ್ನು, **ವಿಧಿಕ್ಕಿರದೆನ್ಗೈಕೂಡಾದು** - ವಿಧಿಸುತ್ತದೆ ಎಂದು ಹೇಳುವದು ಸರಿಯಲ್ಲವು, **ಎನ್ರು** - ಕೆಲವರು, **ಶೊಲ್ಲುವರ್ಗಳ್** - ಹೇಳುವರು, **ಪೂರ್ವಪಕ್ಷ** ತರುವರು ಎಂಬ ಭಾವವು. ಮುಂದೆ ಈ ವಾದವನ್ನು ಖಂಡಿಸುತ್ತಾರೆ. ಸಕ್ಕರೆ ಸೀಯದಾಗಿದೆ ಎಂಬುದಕ್ಕೆ ಶಾಸ್ತ್ರವಿಧಿ ಬೇಕೇ ಎಂಬುದು ಅವರ ಆಕ್ಷೇಪವು

**ಲೋಕಸಿದ್ಧವಾದ ಪ್ರಪತ್ತಿಗೆ ಶಾಸ್ತ್ರ ವಿಧಿ ಬೇಕಿಲ್ಲವೆಂಬ ವಾದದ ಖಂಡನವು.**

---

**ಇದುವುಮ್** - ಹೀಗೆ ಸಮರ್ಥನನ್ನು ಅಸಮರ್ಥನು ತಾನಾಗಿಯೇ ವಿಧಿ

## ಪ್ರಪತ್ತೇಃ ಲೋಕಸಿದ್ಧತ್ವಾತ್ ಅವಿಧೇಯತ್ವಮಿತಿ ವಾದಸ್ಯ ಖಂಡನಂ

ಇದುವು ವೌಚಿತ್ಯ ಮೂಲಮಾನ ವತಿವಾದಮ್ :—ಎಙ್ಙನೇ ಯೆನ್ನಿಲ್ ಲೋಕತ್ತಿಲೆ ಒರುವನ್ನೈ ಒರುವರ್ ಆಶ್ರಯಿಕ್ಕುಮ್‌ಪೋದು, ಇನ್ನಪಡಿಯೇ‌ಯಾಶ್ರಯಿತ್ತಾಲ್ ಇವನಿರಙ್ಗುಮೆನ್ನುಮಿಡತ್ತೈಯೊರು ಪ್ರಮಾಣತ್ತಾಲೆ ಯರಿನ್ದಾಶ್ರಯಿಕ್ಕುಮಾಪ್ಪೋಲೆ, ಇಙ್ಗುಮೀಶ್ವರನ್ನೈ ಯಿನ್ನ ಪ್ರಕಾರತ್ತಾಲೆ ಯಿನ್ನವಧಿಕಾರಿ ಪತ್ತಿನಾಲ್, ಇವನ್ನೈ ಈಶ್ವರನ್ ರಕ್ಷಿಕ್ಕುಮೆನ್ನುಮಿಡಮ್ ಅರಿಯುಮ್ಪೋದು ಕರ್ತವ್ಯ ಪರಮಾನ ಶಾಸ್ತ್ರಂ ಮೊಳಿಯ ವೇರು ಪ್ರಮಾಣಮಿಲ್ಲೈ.

---

ಬಲದ ಆವಶ್ಯಕತೆಯಿಲ್ಲದೆ ಆಶ್ರಯಿಸುವನೆಂದು ಹೇಳುವದೂ ಕೂಡ, **ಔಚಿತ್ಯ ಮೂಲಮಾನ** - ಸರ್ವೇಶ್ವರನು ಸರ್ವಶಕ್ತನೆಂದೂ, ಜೀವಾತ್ಮನು ಆತನಿಗೆ ಪರತಂತ್ರನೆಂದೂ, ಆ ಸಾಮರ್ಥ್ಯದೊಂದಿಗೆ ತನಗೆ ಪರತಂತ್ರನಾಗಿ ದೀನನಾದವನಲ್ಲಿ ಪೂರ್ಣದಯೆಯು ಸರ್ವೇಶ್ವರನಿಗೆ ಉಂಟೆಂದು ತೋರಿಸುವ ಔಚಿತ್ಯಮೂಲವಾದ, **ಅತಿವಾದಮ್** - ಶಾಸ್ತ್ರವನ್ನು ಬಿಟ್ಟು ಮಾಡುವ ಯುಕ್ತಿವಾದವು. **ಎಙ್ಙನೇ ಯೆನ್ನಿಲ್** - ಅದು ಹೇಗೆ ಎಂದರೆ, ಈ ಲೋಕದಲ್ಲಿ ಒಬ್ಬನನ್ನು ಒಬ್ಬನು ಆಶ್ರಯಿಸುವಾಗ, **ಇನ್ನಪಡಿಯೇ ಆಶ್ರಯಿತ್ತಾಲ್** – ಈ ರೀತಿಯಲ್ಲಿ ಆಶ್ರಯಿಸಿದರೆ, **ಇವನಿರಙ್ಗುಮೆನ್ನುಮಿಡತ್ತೈ** - ಇವನು ರಕ್ಷಿಸುವನೆಂಬ ಸಂದರ್ಭದಲ್ಲಿ, **ಒರು ಪ್ರಮಾಣತ್ತಾಲ್ ಅರಿನ್ದು** – ಒಂದು ಪ್ರಮಾಣದಿಂದ ತಿಳಿದು, **ಆಶ್ರಯಿಕ್ಕುಮಾಪ್ಪೋಲೆ** - ಆಶ್ರಯಿಸುವಹಾಗೆ, **ಇಙ್ಗುಮ್**– ಈ ಸಂದರ್ಭದಲ್ಲೂ, ಎಂದರೆ ಪ್ರಪತ್ತ್ಯನುಷ್ಠಾನ ಸಂದರ್ಭದಲ್ಲೂ, **ಈಶ್ವರನ್ನೈ**- ಸರ್ವೇಶ್ವರನನ್ನು **ಇನ್ನಪ್ರಕಾರತ್ತಾಲೇ** – ಈ ಪ್ರಕಾರದಲ್ಲಿ ಎಂದರೆ ಗುರುಮುಖೇನ ಐದು ಅಙ್ಗಗಳಿಂದ ಕೂಡಿ, **ಇನ್ನವಧಿಕಾರಿ**- ಈ ಅಧಿಕಾರಿಯು ಎಂದರೆ, ಭಕ್ತ್ಯುಪಾಯಕ್ಕೆ ಅಸಮರ್ಥನಾದ ಅಧಿಕಾರಿಯು, **ಪತ್ತಿನಾಲ್** - ಆಶ್ರಯಿಸಿದರೆ, **ಇವನ್ನೈ** – ಈ ಆಕಿಂಚನ್ಯ, ಅನನ್ಯಗತಿತ್ವಗಳಿಂದ ಯುಕ್ತನಾದ ಇವನನ್ನು ಸರ್ವೇಶ್ವರನು ರಕ್ಷಿಸುವನು, **ಎನ್ನುಮಿಡಮ್** – ಹೇಳುವ ಸಂದರ್ಭವನ್ನು, **ಅರಿಯುಮ್ ಪೋದು** – ತಿಳಿಯುವಾಗ, **ಕರ್ತವ್ಯ ಪರಮಾನ** – ವಿಧಿಪರವಾದ, **ಶಾಸ್ತ್ರ ಮೊಳಿಯ** - ಶಾಸ್ತ್ರವನ್ನು ಬಿಟ್ಟರೆ, **ವೇರು ಪ್ರಮಾಣಮಿಲ್ಲೈ**-ಬೇರೇ

**ನಾಮ್ ಆಶ್ರಯಿಕ್ಕ ರಕ್ಷಿಕ್ಕುಮ್ ಎನ್ರು ಅನುಮಾನತ್ತಾಲೆ ಯರುದಿ ಯಿಟ್ಟು ಆಶ್ರಯಿಕ್ಕಿಲ್ ಈಶ್ವರ ತತ್ವಜ್ಞಾನಮುಡೈಯಾರಿಲ್ಲಾ**

---

ಪ್ರಮಾಣವಿಲ್ಲವು ಶಾಸ್ತ್ರಪ್ರಮಾಣ ವಿನಾ ಪ್ರತ್ಯಕ್ಷಾನುಮಾನಗಳು ಯಾವುವೂ ಇಲ್ಲವು. ಈ ಹಿಂದಿನ ವಾಕ್ಯದ ಮೂಲಕ,ಲೋಕದಲ್ಲಿ ಪರಮಕಾರುಣಿಕನಾದ ಸಮರ್ಥನು ತನಗೆ ಅಧೀನನಾಗಿ ದೀನನಾದವನನ್ನು ರಕ್ಷಿಸುವವನ್ನು ಲೋಕದಲ್ಲಿ ಕಂಡಿರುವದರಿಂದ, ಇದಕ್ಕೆ ವಿಧಿವಾಕ್ಯ ಪ್ರಮಾಣವೇನೂ ಬೇಕಿಲ್ಲವೆಂಬುದನ್ನು ಲೋಕದಲ್ಲಿ ಪ್ರತ್ಯಕ್ಷವಾಗಿ ಕಂಡಿರುವೆವು ಎಂದು ತಂದ ಆಕ್ಷೇಪಕ್ಕೆ ಆ ಲೋಕ ದೃಷ್ಟಾಂತ ಮೂಲಕವಾಗಿಯೇ ಆಶ್ರಯಿಸುವದಕ್ಕೆ ಪ್ರಮಾಣ ಬಲವು ಆವಶ್ಯಕವೆಂದು ತೋರ್ಪಡಿಸುತ್ತಾರೆ. ಲೋಕದಲ್ಲೂ ಕಾರುಣಿಕನಾದ ಸಮರ್ಥನು ರಕ್ಷಿಸುವನೆಂಬ ಆಶಯದಿಂದ ಆಶ್ರಯಿಸುವಾಗಲೂ ಆತನನ್ನು ಎಂತವನು ಯಾವರೀತಿಯಲ್ಲಿ ಆಶ್ರಯಿಸಿದರೆ ರಕ್ಷಿಸುವನೆಂಬುದನ್ನು ಪ್ರಮಾಣಮುಖೇನ ತಿಳಿದು ಹೇಗೆ ಆಶ್ರಯಿಸುವನೋ, ಹಾಗೆಯೇ ಈ ಸಂದರ್ಭದಲ್ಲೂ ಎಂತಹ ಅಧಿಕಾರಿಯು ಯಾವ ಅಙ್ಗಗಳಿಂದ ಕೂಡಿ ಹೇಗೆ ಆಶ್ರಯಿಸಿದರೆ ಸರ್ವೇಶ್ವರನು ರಕ್ಷಿಸುವನು ಎಂಬುದನ್ನು ಶಾಸ್ತ್ರಪ್ರಮಾಣದ ವಿಧಿವಾಕ್ಯದ ಮೂಲಕ ತಿಳಿದು ಹಾಗೆಯೇ ಅನುಷ್ಠಿಸಿದರೆ ಮೋಕ್ಷಪ್ರಾಪ್ತಿಯುಂಟಾಗುತ್ತದೆ, ಅನ್ಯಥಾ ಇಲ್ಲವು. ವಿಧಿವಾಕ್ಯಗಳಾದ **"ಓಮಿತ್ಯಾತ್ಮಾನಂ ಯುಂಜೀತ ಏತದ್ವೈ ಮಹೋಪನಿಷದಂ ದೇವಾನಾಂ ಗುಹ್ಯಂ, ಯ ಏವಂ ವೇದ ಬ್ರಹ್ಮಣೋ ಮಹಿಮಾನ ಮಾಪ್ನೋತಿ"** ಇತ್ಯಾದಿಗಳಲ್ಲಿ ಪ್ರಪತ್ತಿಯು ವಿಧಿಸಿರುವದರಿಂದ, ಅದನ್ನು ಪರಿಕರಗಳೊಂದಿಗೆ ಅನುಷ್ಠಿಸಲೇಬೇಕೆಂಬ ತಾತ್ಪರ್ಯವು. ಹೀಗೆ ಪ್ರತ್ಯಕ್ಷ ಸಿದ್ಧವಾದುದಕ್ಕೆ ಶಾಸ್ತ್ರವಿಧಿಬೇಕೇ ಎಂಬ ನ್ಯಾಯವನ್ನು ಆರೋಪಿಸಿ ಹೇಳಿದ ಪೂರ್ವಪಕ್ಷವು ನಿರಸನ ಮಾಡಲ್ಪಟ್ಟಿತು.

ಮುಂದೆ ಅನುಮಾನ ಪ್ರಮಾಣರೀತ್ಯಾ ನೋಡಿದರೂ ಸರ್ವೇಶ್ವರನು ಈ ಮೋಕ್ಷಾರ್ಥಿಯನ್ನು ರಕ್ಷಿಸುವನು, ಹೀಗಿರುವಾಗ ಇದಕ್ಕೆ ಶರಣಂ ವ್ರಜ ಎಂಬ ವಿಧಿವಾಕ್ಯ ಬೇಕೇ? ಆದುದರಿಂದ ಶರಣಂ ವ್ರಜ ಎಂಬುದು ಅನುವಾದವೇ ವಿನಾ ವಿಧಿಯಲ್ಲವು, ಎಂಬ ವಾದವು ನಿರಸನಮಾಡಲ್ಪಡುತ್ತದೆ. **ನಾಮ್ ಆಶ್ರಯಿಕ್ಕ ರಕ್ಷಿಕ್ಕುಮ್**-ನಾವು ಆಶ್ರಯಿಸಿದರೆ ರಕ್ಷಿಸುವನು, ಸಾಮರ್ಥ್ಯವೂ ಕರುಣೆಯೂ ಇರುವದರಿಂದ ಎಂಬದಾಗಿ, **ಅನುಮಾನತ್ತಾಲೆ** - ಅನುಮಾನ ಪ್ರಮಾಣದಿಂದ **ಅರುದಿಯಿಟ್ಟು** - ನಿಶ್ಚಯಿಸಿ, **ಆಶ್ರಯಿಕ್ಕಿಲ್** - ಸರ್ವೇಶ್ವರನನ್ನು ಆಶ್ರಯಿ

**ರ್ಗಳ್ ಇಪ್ಪಡಿ ಅನುಷ್ಠಿಕ್ಕಲಾಮಾಗೈಯಾಲೇ ಉಪಾಸನ ವಿಧಾಯಕ ಶಾಸ್ತ್ರಙ್ಗಳ್ ನಿರರ್ಥಙ್ಗಳಾಮ್. ಸಮರ್ಥ ಉಪಾಸನಾದಿಗಳೈ ಪ್ಪಣ್ಣ, ಅವತ್ತಿಲ್ ಸಮರ್ಥನಲ್ಲಾದವ ಪ್ರಪತ್ತಿಯೈಪ್ಪಣ್ಣವೆನ್ರು ವಿಶೇಷಿತ್ತು ನಿಯಮಿಕ್ಕೈ ಅನುಮಾನತ್ತಾಲ್ ಕಡಪ್ಪಡಾದು ಮತ್ತುಳ್ಳೈ ಉಪಾ**

---

ಸಿದರೆ, **ಈಶ್ವರ ತತ್ತ್ವಜ್ಞಾನಮುಡೈಯಾರೆಲ್ಲಾರ್ಕ್ಕುಮ್** - ಸಮರ್ಥನಾದ ಸರ್ವೇಶ್ವರನೊಬ್ಬನಿದ್ದಾನೆಂಬ ಜ್ಞಾನವಿರುವರೆಲ್ಲರಿಗೂ, ಇಂತಹ ಜ್ಞಾನವು ನಾಸ್ತಿಕರಲ್ಲದೆ ಇತರರಿಗೆಲ್ಲರಿಗೂ ಉಂಟು, ಆದುದರಿಂದ ಉಪಾಯಾನುಷ್ಠಾನ ಮಾಡದ ಎಲ್ಲರಿಗೂ, **ಇಪ್ಪಡಿ ಅನುಷ್ಠಿಕ್ಕ ವತ್ತಾಗೈಯಾಲೆ**- ಈ ರೀತಿಯಾಗಿ ನಡತೆಯುಂಟಾಗಬಹುದಾದುದರಿಂದ, **ಉಪಾಸನ ವಿಧಾಯಕ ಶಾಸ್ತ್ರಙ್ಗಳ್**- ಉಪಾಸನವನ್ನು ಉಪಾಯವಾಗಿ ವಿಧಿಸಿರುವ ಶಾಸ್ತ್ರಗಳು ಎಂದರೆ ಬ್ರಹ್ಮ ವಿದ್ಯೆಗಳೆಲ್ಲಾ, **ನಿರರ್ಥಙ್ಗಳಾಮ್** - ನಿರರ್ಥಕವಾದುವುಗಳಾಗುವುವು, ಆದುದರಿಂದ ಇಲ್ಲಿ ಪ್ರತ್ಯಕ್ಷಾನುಮಾನ ಪ್ರಮಾಣಗಳು ನಿಷ್ಪ್ರಯೋಜನಗಳು, ಶಾಸ್ತ್ರ ಪ್ರಮಾಣವೇ ಉಪಾದೇಯವಾಗಿ ಪ್ರಪತ್ತಿ ವಿಧಾಯಕ ಶಾಸ್ತ್ರಗಳಿರುವದರಿಂದ ಅವುಗಳನ್ನನುಸರಿಸಿದ ಅನುಷ್ಠಾನವೇ ಶಿಷ್ಟಸಮ್ಮತವಾಗುವದರಿಂದ, **ಮಾಮೇಕಂ ಶರಣಂವ್ರಜ** ಎಂಬ ಗೀತೋಪನಿಷತ್ತಿನ ವಾಕ್ಯವು ವಿಧಿಯೇ ವಿನಾ ಅನುವಾದವಲ್ಲವೆಂಬ ತಾತ್ಪರ್ಯವು

ಈ ದೂಷಣವನ್ನು ತಪ್ಪಿಸಿಕೊಳ್ಳುವದಕ್ಕಾಗಿ **ಪೂರ್ವ** ಪಕ್ಷಿಯು "ಉಪಾಸನ ವಿಧಿವೈಯರ್ಥ್ಯಕ್ಕೆ ಕಾರಣವಿಲ್ಲವು, ಸಮರ್ಥನಿಗೆ ಉಪಾಸನಾದಿಗಳನ್ನು ಶಾಸ್ತ್ರವು ವಿಧಿಸಿರುತ್ತದೆಂದು ಒಪ್ಪಿಕೊಳ್ಳುವೆವು ; ಅಸಮರ್ಥನಾದರೋ ಅನುಮಾನಮೂಲಕವಾಗಿ ತನಗೆ ಪ್ರಪತ್ತಿ ಎಂಬದಾಗಿ ಊಹಿಸಬಹುದು; ಎಂದರೆ ಅಸಮರ್ಥನು ಸಮರ್ಥನನ್ನಾಶ್ರಯಿಸಿದರೆ ರಕ್ಷಿಸುವನು ಎಂಬುದನ್ನು ಅನುಮಾನ ಮೂಲಕ ಸಾಧಿಸಬಹುದು" ಎಂದು ಹೇಳಬಹುದೆಂದು ಭಾವಿಸಿ, ಅದನ್ನು ಅನುವಾದಮಾಡಿ ಖಂಡಿಸುತ್ತಾರೆ. **ಸಮರ್ಥ ಉಪಾಸನಾದಿಗಳೈಪ್ಪಣ್ಣ**- ಸಮರ್ಥ ಸಾಧಕನು ಉಪಾಸನಾದಿಗಳನ್ನೂ, **ಪಣ್ಣ** - ಶಾಸ್ತ್ರರೀತ್ಯಾ ವಿಧಿಯನ್ನನುಸರಿಸಿ ಮಾಡಬಹುದು, **ಅವತ್ತಿಲ್** - ಆ ಉಪಾಸನಾದಿಗಳಲ್ಲಿ, **ಸಮರ್ಥನಲ್ಲಾದವ** - ಅಸಮರ್ಥನು, **ಪ್ರಪತ್ತಿಯೈಪ್ಪಣ್ಣ** - ಸಮರ್ಥನನ್ನು ಆಶ್ರಯಿಸಬಹುದು, **ಎನ್ರು** - ಎಂಬದಾಗಿ, **ವಿಶೇಷಿತ್ತು ನಿಯಮಿಕ್ಕೈ** - ಹೀಗೆ ವ್ಯತ್ಯಾಸವನ್ನು ಪ್ರದರ್ಶಿಸಿ ನಿಯಮಿಸೋಣವು, ಅನುಮಾನ ಪ್ರಮಾಣದಿಂದ ಸಾಧಿಸು

**ಯುಙ್ಗಳಿಲ್ ಸಮರ್ಥನನ್ರಿಕ್ಕೇ ಯೊಳಿನ್ದಾಲ್ ಅವತ್ತಿನುಡೈಯ ಸ್ಥಾನ ತ್ತಿಲೇ ಪ್ರಪತ್ತಿಯೈ ಪಣ್ಣುವದೆನ್ರು ಶಾಸ್ತ್ರಮ್ ವಿಧಿಯಾದಪ್ಪೋದು**

ವದು, **ಕಡಪ್ಪಡಾದು** - ಸಾಧ್ಯವಲ್ಲವು, ಅನುಮಾನ ಪ್ರಮಾಣದಿಂದಲೇ ಹೇಳುತ್ತೇವೆ, ಶಾಸ್ತ್ರವಿಧಿಯು ಬೇಕಾಗಿಲ್ಲವು ಎಂದು ಹೀಗೆ ಹೇಳಿದರೆ, ಭಕ್ತ್ಯುಪಾಯ ವಿಧಿವಾಕ್ಯಕ್ಕೆ ನೈರರ್ಥ್ಯಕ್ಯವು ಉಂಟಾಗಲಾರದಷ್ಟೇ ಎಂದರೆ ಅದಕ್ಕೆ ಉತ್ತರವನ್ನು ಹೇಳುತ್ತಾರೆ. ಸಮರ್ಥನನ್ನು ಅಸಮರ್ಥನು ಆಶ್ರಯಿಸಿದರೆ ರಕ್ಷಿಸುವನೆಂಬುದನ್ನು ಊಹಿಸಿಯೇ ತಿಳಿಯಬಹುದು; ಇದಕ್ಕೆ ಶಾಸ್ತ್ರವಿಧಿಯು ಬೇಕಿಲ್ಲವು, ಶಾಸ್ತ್ರವೀಗ ಅಪ್ರಾಪ್ತವಿಷಯದಲ್ಲೇ ವಿನಾ ಇಂತಹ ಸಿದ್ಧವಿಷಯದಲ್ಲಿ ಬೇಕಿಲ್ಲವು, ಎಂದು ಪೂರ್ವಪಕ್ಷಿಯು ಹೇಳಿದುದಕ್ಕೆ ಸಮರ್ಥನು ಅಸಮರ್ಥನನ್ನು ರಕ್ಷಿಸುವನೆಂಬುದು ಅನುಮಾನ ಪ್ರಮಾಣದಿಂದಲೇ ಯಾವಾಗ ಏರ್ಪಟ್ಟಿತೋ, ಆಗ ಎಲ್ಲರೂ, ಸಮರ್ಥನೇ ಆಗಲಿ ಅಸಮರ್ಥನೇ ಆಗಲಿ ಹೀಗೆ ಆಶ್ರಯಿಸಿಯೇ ರಕ್ಷಣವನ್ನು ಹೊಂದುವದರಿಂದ, ಕಷ್ಟತರವಾದ ಉಪಾಸನವು ಯಾರಿಗೂ ಬೇಕಾಗದೆ, ಉಪಾಸನ ವಿಧಿಗೆ ನೈರರ್ಥ್ಯಕ್ಯವು ಪ್ರಾಪ್ತವಾಗುತ್ತದೆ ಎಂದು ದೂಷಣವನ್ನು ಹೇಳಿದರು ಇದಕ್ಕೆ ಪೂರ್ವಪಕ್ಷಿಯು ಉಪಾಸನ ಶಾಸ್ತ್ರ ನೈರರ್ಥ್ಯಕ್ಕೇನೂ ಕಾರಣವಿಲ್ಲವು; ಸಮರ್ಥನಿಗೆ ಉಪಾಸನರೂಪ ಶಾಸ್ತ್ರವಿಧಿಯು, ಅಸಮರ್ಥನಿಗಾದರೋ ಶಾಸ್ತ್ರವಿಧಿಯು ಬೇಕಿಲ್ಲವು, ಲೋಕದಲ್ಲಿ ಸಮರ್ಥನು ಅಸಮರ್ಥನನ್ನು ರಕ್ಷಿಸುವದು ವ್ಯಕ್ತವಾಗಿರುವದರಿಂದ, ಅನುಮಾನ ಪ್ರಮಾಣದಿಂದಲೇ ಸಿದ್ಧವು, ಹೀಗೀಗ ನಿಯಮವು ಎಂದರೆ ಸಮರ್ಥನಿಗೆ ಶಾಸ್ತ್ರವಿಧಿಯೂ ಅಸಮರ್ಥನಿಗೆ ಅದು ಬೇಕಿಲ್ಲವು ಎಂಬುವನ್ನು ಅನುಮಾನದಿಂದ ಸಾಧಿಸುವದು ಸಾಧ್ಯವಿಲ್ಲವೆಂಬ ಭಾವವು. ಅದೇಕೆಂದರೆ ತಿಳಿಸುತ್ತಾರೆ. **ಮತ್ತುಳ್ಳ ಉಪಾಯಙ್ಗಳಿಲ್** - ಬೇರೇ ಉಪಾಯಗಳಲ್ಲಿ ಎಂದರೆ **ಉಪಾಸನೆ** ಯಲ್ಲಿ, **ಸಮರ್ಥನನ್ರಿಕ್ಕೈಯೊಳಿಂದಾಲ್** - ಸಮರ್ಥನಲ್ಲದೇ ಹೋದರೆ, **ಅವತ್ತಿನುಡೈಯ ಸ್ಥಾನತ್ತಿಲೆ** - ಆ ಉಪಾಸನೆಯ ಸ್ಥಾನದಲ್ಲಿ, **ಪ್ರಪತ್ತಿಯೈ ಪಣ್ಣುವದೆನ್ರು** - ಪ್ರಪತ್ತಿಯನ್ನನುಷ್ಠಿಸತಕ್ಕದ್ದೆಂದು, **ಶಾಸ್ತ್ರಮ್ ವಿಧಿಯಾದ ಪ್ಪೋದು** - ಶಾಸ್ತ್ರವು ವಿಧಿಸದೆ ಹೋದರೆ, **ಮುನ್ಪು ವಿಧಿತ್ತ ಉಪಾಯತ್ತುಕ್ಕು** - ಮೊದಲು ವಿಧಿಸಿದ ಉಪಾಯವಾದ ಉಪಾಸನೆಗೆ, **ಅನರ್ಹನಾನಪಡಿಯಾಲೇ** - ಸಮರ್ಥನಲ್ಲದೆ ಇರುವದರಿಂದ ಅನರ್ಹನಾದುದರಿಂದ, **ಅರ್ಥಫಲತ್ತೈ** - ಅದರ ಫಲವು, **ಯಿಳಕ್ಕುಮ್ ಪಡಿಯಾಮ್** - ಸಿದ್ಧ

**ಮುನ್ಬು ವಿಧಿತ್ತ ಉಪಾಯತ್ತುಕ್ಕನರ್ಹನಾನ ಪಡಿಯಾಲೇ ಯದಿನ್ ಫಲತ್ತೈ ಯಿಳಕ್ಕುಮ್ ಪಡಿಯಾಮ್.**

---

ಸದೇ ಹೋಗಬೇಕಾಯಿತು. ಸಮರ್ಥನಿಗೆ ಉಪಾಸನೆಯನ್ನು ಹೇಳಿರುವ ಶಾಸ್ತ್ರವಿಧಿ ಎಂದು ಒಪ್ಪಿಕೊಳ್ಳುವದರಿಂದ, ಅತೀಂದ್ರಿಯ ವಿಷಯವಾದ ಮೋಕ್ಷಪ್ರಾಪ್ತಿಗೆ ವಿಧಿ ಬೇಕೆಂದು ಶಾಸ್ತ್ರ ಹೇಳಿದಂತಾಯಿತು ಅಸಮರ್ಥನಿಗೆ ಶಾಸ್ತ್ರವಿಧಿ ಬೇಕಿಲ್ಲ ವೆಂದರೆ, ಅತೀಂದ್ರಿಯ ಮೋಕ್ಷಪ್ರಾಪ್ತಿಯೂ ಬೇಕಿಲ್ಲವೆಂದು ಹೇಳಿದಂತಾಯಿತು; ಆಗ ಅಸಮರ್ಥನಿಗೆ ಮೋಕ್ಷವೇ ಇಲ್ಲವೆಂದೂ ಹೇಳಿದಂತಾಯಿತು. ಅತೀಂದ್ರಿಯ ವಿಷಯವಾದ ಮೋಕ್ಷವು ಅಸಮರ್ಥನಿಗೆ ಎಲ್ಲಿಯಾದರೂ ಇಲ್ಲದೇ ಇರಬಹುದೋ ಎಂದರೆ ಆಗ ಅಸಮರ್ಥನಿಗೆ ಉಪಾಸನಕ್ಕೆ ಬದಲಾಗಿ ಪ್ರಪತ್ತಿಯನ್ನನುಷ್ಠಿಸಬಹುದು ಎಂಬ ಅಪ್ರಾಪ್ತವಿಷಯದಲ್ಲಿ ಶಾಸ್ತ್ರವಿಧಿಯು ಆವಶ್ಯಕವು, ಈ ಶಾಸ್ತ್ರವಿಧಿಯನ್ನು ನಾವು ಅಙ್ಗೀಕರಿಸಿ ಅಶಕ್ತನು ಪ್ರಪದನವನ್ನನುಷ್ಠಿಸುವನು, ಅದರಿಂದ ಮೋಕ್ಷವನ್ನು ಹೊಂದುವನು ಎಂದು ಹೇಳುವೆವು. ನೀವು ಈ ಶಾಸ್ತ್ರವಿಧಿಯನ್ನು ಅಙ್ಗೀಕರಿಸದೇ ಇರುವದರಿಂದ ಅಸಮರ್ಥನಿಗೆ ಮೋಕ್ಷವೇ ಇಲ್ಲವೆಂದು ಒಪ್ಪಬೇಕಾಯಿತು ಹಿಗೆಲ್ಲಾದರೂ ಉಂಟೋ? ಕೃಪಾಳುವಾದ ಸಮರ್ಥನಾದ ಸರ್ವೇಶ್ವರನು ಅಸಮರ್ಥನನ್ನು ರಕ್ಷಿಸಿಯೇ ರಕ್ಷಿಸುವನು ಎಂದರೆ ಆಗ ಈ ಮಾರ್ಗವನ್ನೇ ಎಲ್ಲರೂ ಅವಲಂಬಿಸುವದರಿಂದ ಉಪಾಸನ ಶಾಸ್ತ್ರ ನೈರರ್ಥ್ಯಕ್ಯವು ತಪ್ಪಿದ್ದಲ್ಲವೆಂಬ ಭಾವವು.

ಈಗ ಪೂರ್ವಪಕ್ಷಿಗಳು ಹೇಳಿದುದು ಹೇಗೆಂದರೆ, "ಉಪಾಸನ ವಿಧಿಯ ಬಲದಿಂದ ಸಮರ್ಥನಿಗೆ ಅದರಲ್ಲಿ ಪ್ರವೃತ್ತಿಯೂ, ಅಸಮರ್ಥನಿಗಾದರೋ ಲೋಕದೃಷ್ಟಿಯಿಂದ ಶಕ್ತನಾದವನನ್ನು ಆಶ್ರಯಿಸೋಣವೂ, ಎಂದು ಹೀಗೆ ಹೇಳಿದರೆ ಪ್ರಪತ್ತಿಯನ್ನು ಅನುಷ್ಠಿಸಲೇಬೇಕೆಂಬ ನಿರ್ಬಂಧವೂ ಇಲ್ಲವು, ಅಂತವನಿಗೆ ಮೋಕ್ಷದ ಸಿದ್ಧಿಯಿಲ್ಲವೆಂದು ಹೇಳಿದಂತೆಯೂ ಆಗಲಿಲ್ಲವು" ಎಂಬುದು. ಪ್ರಪತ್ತಿಗೆ ಶಾಸ್ತ್ರವಿಧಿ ಬೇಡವೆಂಬ ವಾದಕ್ಕೆ ಒಂದು ನಿದರ್ಶನದ ಮೂಲಕ ಪ್ರತಿದ್ವಂದಿರೂಪದಲ್ಲಿ ಭಗವತ್ಸೇವಾರೂಪಕೈಙ್ಕರ್ಯಾದಿಗಳಿಗೂ ಕೂಡ ಆಗ ಶಾಸ್ತ್ರವಿಧಿಯು ಬೇಕಿಲ್ಲವೆಂಬ, ಪೂರ್ವಪಕ್ಷಿಗೆ ಅನಭಿಮತವಾದುದು ಪ್ರಾಪ್ತವಾಗುತ್ತದೆಂದು, ಎಙ್ಗನೇ ಯೆನ್ನಿಲ್ ಎಂದಾರಂಭಿಸಿ ಹೇಳುತ್ತಾರೆ.

ಎಙ್ಗನೇ ಎನ್ನಿಲ್-ಅಸಮರ್ಥನು ಉಪಾಸನದ ಸ್ಥಾನದಲ್ಲಿ ಪ್ರಪದನಾನುಷ್ಠಾನಮಾಡಬೇಕೆಂಬ ವಿಧಿಯು ಆವಶ್ಯಕವೆಂಬುದನ್ನು ಸದೃಷ್ಟಾಂತವಾಗಿ ತೋರಿ

ಎಙ್ಗನೇ ಯೆನ್ನಿಲ್-ಲೋಕತ್ತಿಲ್ ರಾಜಸೇವಾದಿಗಳುಮ್ ತತ್ಫಲ ಙ್ಗಳುಮ್ ಕಾಣಚ್ಚೈಯ್‌ದೇ, ಮಾಲಾಕರಣ ದೀಪಾರೋಪಣಸ್ತುತಿ ನಮಸ್ಕಾರಾದಿಗಳೈ ಶಾಸ್ತ್ರ ನಿರಪೇಕ್ಷಮಾಗ ಅನುಷ್ಠಿತ್ತಾಲ್ ಅಪ ಚಾರಙ್ಗಳ್ ವರುಮ್ಪಡಿಯಾ ಯಿರುಕ್ಕೈಯಾಲೇ, ಪರಿಕರ ನಿಯಮ ಙ್ಗಳೋಡು ಕೂಡಿನ ಭಗವತ್ಸೇವಾದಿ ಪ್ರಕಾರಙ್ಗಳುಮ್ ತತ್ಫಲಙ್ಗ ಳುಮ್ ನಿಯತಙ್ಗಳಾಗ ಶಾಸ್ತ್ರಮ್ ಕೊಂಡರಿಗಿರಾಪ್ಪೋಲೆ, ಇಙ್ಗುಮ್, ಲೋಕತ್ತಿಲ್ ಪ್ರಪತ್ತಿಯುಮ್ ತತ್ಫಲಂಗಳುಮ್ ಕಣ್ಡು ಪೋನ್ದಾಲುಮ್, ಸದಾಚಾರ್ಯೋಪದೇಶ ಸಾಪೇಕ್ಷ ಮಂತ್ರ ವಿಶೇಷಾದಿಗಳೋಡೇ ಕೂಡಿನ ಪ್ರಪತ್ತಿಕ್ಕುಮ್ ಫಲವಿಶೇಷಙ್ಗಳುಕ್ಕುಮ್ ಸಾಧ್ಯಸಾಧನ ಭಾವಮ್

---

ಸುವೆವು, ಹೇಗೆಂದರೆ ಹೇಳುತ್ತಾರೆ :—**ಲೋಕತ್ತಿಲ್** - ಲೋಕದಲ್ಲಿ, **ರಾಜ ಸೇವಾದಿಗಳುಮ್** - ರಾಜನಿಗೆ ಮಾಡುವ ಕೈಙ್ಕರ್ಯಗಳನ್ನೂ, **ತತ್ಫಲಙ್ಗ ಳುಮ್** - ಅದರಿಂದುಂಟಾಗುವ ಫಲಗಳನ್ನೂ ಸಹ, **ಕಾಣಚ್ಚೆಯ್‌ದೇ** - ನಾವು ಕಂಡೇ ಇದ್ದರೂ ಎಂದರೆ ಶಾಸ್ತ್ರ ನಿರಪೇಕ್ಷವಾಗಿರುವದನ್ನೂ ನಾವು ಕಂಡಿದ್ದರೂ ಕೂಡ, **ಮಾಲಾಕರಣ** - ಪುಷ್ಪಹಾರವನ್ನು ಮಾಡುವದು, **ದೀಪಾರೋಪಣ**- ದೀಪಗಳನ್ನು ಹಚ್ಚೋಣವು, **ಸ್ತುತಿ** - ಸ್ತೋತ್ರವು, ನಮಸ್ಕಾರ ಮೊದಲಾದವು ಗಳು, ಇವುಗಳನ್ನು, **ಶಾಸ್ತ್ರನಿರಪೇಕ್ಷಮಾಗ ಅನುಷ್ಠಿತ್ತಾಲ್** - ಶಾಸ್ತ್ರದ ಪೇಕ್ಷೆಯಿಲ್ಲದಹಾಗೆ ಅನುಷ್ಠಿಸಿದರೆ, **ಅಪಚಾರಙ್ಗಳ್ ವರುಮ್ಪಡಿಯಾ ಯಿರು ಕ್ಕೈಯಾಲೇ** - ಭಗವದಪಚಾರಗಳು ಉಂಟಾಗಬಹುದಾಗಿರುವದರಿಂದ, **ಪರಿ ಕರನಿಯಮಙ್ಗಳೋಡೇ ಕೂಡಿನ** - ಆಯಾ ಸೇವೆಗಳಿಗೆ ಯಾವಯಾವ ಅಙ್ಗ ಗಳು ಬೇಕೋ ಆಯಾ ಅಙ್ಗಗಳಿಂದ ಸೇರಿದ, **ಭಗವತ್ಸೇವಾದಿ ಪ್ರಕಾರಙ್ಗ ಳುಮ್** - ಭಗವತ್ಸೇವೆ ಕೈಙ್ಕರ್ಯದ ಪ್ರಕಾರಗಳನ್ನೂ, ತತ್ಫಲಗಳನ್ನೂ, **ನಿಯ ತಙ್ಗಳಾಕ** -ಹೀಗೆಯೇ ಮಾಡಬೇಕೆಂಬ ನಿಯಮವಿರುವವನ್ನಾಗಿ, **ಶಾಸ್ತ್ರಮ್ ಕೊಂಡರಿಗಿರಾಪ್ಪೋಲೆ** - ಹೇಗೆ ಶಾಸ್ತ್ರದ ಮೂಲಕ ತಿಳಿಯುತ್ತೇವೋ ಹಾಗೆ, **ಇಙ್ಗುಮ್** - ಈ ಸಂದರ್ಭದಲ್ಲೂ, **ಲೋಕತ್ತಿಲ್ ಪ್ರಪತ್ತಿಯುಮ್ ತತ್ಫ ಲಙ್ಗಳುಮ್ ಕಂಡು ಪೋನ್ದಾಲುಮ್** - ಈ ಲೋಕದಲ್ಲೂ ಅಸಮರ್ಥನು ಸಮರ್ಥನನ್ನಾಶ್ರಯಿಸಿ ಅದಕ್ಕೆ ಫಲಗಳುಂಟಾಗಿರುವದನ್ನು ನಾವು ಕಂಡಿದ್ದರೂ, **ಸದಾಚಾರ್ಯೋಪದೇಶ ಸಾಪೇಕ್ಷ ಮಂತ್ರ ವಿಶೇಷಾದಿಗಳೋಡೆ ಕೂಡಿನ**- ಕರ್ಮನಿಷ್ಠೆ ಜ್ಞಾನನಿಷ್ಠೆಗಳಿರುವ ಆಚಾರ್ಯರ ಉಪದೇಶ ಬೇಕಾಗಿರುವ ದ್ವಯಾದಿ

**ಶಾಸ್ತ್ರಮ್ ಕೊಣ್ಡರಿಯವೇಣ್ಡುಗೈಯಾಲ್ ಅವ್ವೋ ಫಲಙ್ಗಳುಕ್ಕಾಗ. ಸೇವಾ ವಿಶೇಷಙ್ಗಳೈ ವಿಧಿಕ್ಕಿರಾಪ್ಪೋಲೆಪ್ರಪತ್ತಿಯೈಯುಮ್ ವಿಧಿಕ್ಕಿರದು.**

---

ಮಂತ್ರವಿಶೇಷಗಳಿಂದ ಸೇರಿದ, **ಪ್ರಪತ್ತಿಕ್ಕುಮ್ ಫಲವಿಶೇಷಙ್ಗಳುಕ್ಕುಮ್**- ಪ್ರಪತ್ತಿಗೂ ಅದರಿಂದ ಪ್ರಾರ್ಥಿಸಲ್ಪಟ್ಟ ಫಲವಿಶೇಷಗಳಿಗೂ, **ಸಾಧ್ಯ ಸಾಧನ ಭಾವವನ್ನು, ಶಾಸ್ತ್ರಮ್ ಕೊಂಡರಿಯವೇಣ್ಡುಗೈಯಾಲ್** - ಶಾಸ್ತ್ರ ಮೂಲಕವಾಗಿಯೇ ತಿಳಿಯಬೇಕಾಗಿರುವದರಿಂದ, **ಆಗೈಯಾಲ್** - ಆ ಕಾರಣ ದಿಂದ, **ಅವ್ವೋಫಲಙ್ಗಳುಕ್ಕಾಕ** - ಆಯಾ ಫಲಗಳಿಗಾಗಿ, **ಸೇವಾ ವಿಶೇಷ ಙ್ಗಳೈ** - ಭಗವತ್ಕೈಙ್ಕರ್ಯ ವಿಶೇಷಗಳನ್ನು, **ವಿಧಿಕ್ಕಿರಾಪ್ಪೋಲೆ** - ಶಾಸ್ತ್ರವು ವಿಧಿಸಿರುವಹಾಗೆ, **ಪ್ರಪತ್ತಿಯುಮ್ ವಿಧಿಕ್ಕಿರದು** - ಶಾಸ್ತ್ರವು ಪ್ರಪತ್ತಿ ಯನ್ನೂ ವಿಧಿಸಿರುತ್ತದೆ, ಯಾವ ಯಾವ ಪರಿಕರಗಳೊಂದಿಗೆ ಯಾವ ರೀತಿಯಲ್ಲಿ ಯಾವ ಫಲಗಳಿಗಾಗಿ ಅನುಷ್ಠಿಸತಕ್ಕದ್ದೆಂಬುದನ್ನು ಶಾಸ್ತ್ರವು ವಿಧಿಸಿರುತ್ತದೆ. ಈ ಮೇಲಿನ ವಾಕ್ಯದ ತಾತ್ಪರ್ಯವು ಇಷ್ಟೇ :—ಲೋಕದಲ್ಲಿ ರಾಜಸೇವೆಗಳು ನಡೆ ದಿರುವದನ್ನೂ ಅದರಿಂದ ರಾಜ ಕೈಙ್ಕರ್ಯವನ್ನು ಮಾಡಿದವರು ಫಲಗಳನ್ನು ಪಡೆ ದಿರುವದನ್ನೇನೋ ನಾವು ಕಂಡಿರುತ್ತೇವೆ ಇದು ಲೌಕಿಕ ವಿಷಯವು. ಈ ಲೋಕ ನ್ಯಾಯವು ಪಾರಲೌಕಿಕ ವಿಷಯದಲ್ಲಿ ಸರಿಹೋಗುವದಿಲ್ಲವೆಂದು ಹೇಳುವದಕ್ಕಾಗಿ **ಲೋಕತ್ತಿಲ್ ಕಾಣಚ್ಚೆಯ್ದೇ** ಎಂಬ ಪ್ರಯೋಗವು. ಯದ್ಯಪಿ ಲೋಕದಲ್ಲಿ ಅಸ ಮರ್ಥನು ಸಮರ್ಥನನ್ನು ಆಶ್ರಯಿಸಿ ಇಹಲೋಕ ಫಲಗಳನ್ನು ಹೊಂದಿರುವ ದನ್ನೇನೋ ಕಂಡಿರುವೆವು. ಇವುಗಳಿಗೇನೋ ಶಾಸ್ತ್ರದ ಆವಶ್ಯಕತೆಯಿಲ್ಲವು. ಈಗ ಭಗವತ್ಕೈಙ್ಕರ್ಯಗಳಾದ ಮಾಲಾಕರಣ ದೀಪಾರೋಪಣ, ಸ್ತುತಿ ನಮ ಸ್ಕಾರಾದಿಗಳಿವೆ. ಇವುಗಳನ್ನು ಶಾಸ್ತ್ರನಿರಪೇಕ್ಷವಾಗಿ ಮಾಡಬಹುದೋ ? ಹಾಗೆ ಶಾಸ್ತ್ರವಿರುದ್ಧವಾಗಿ ಈ ಕೈಙ್ಕರ್ಯಗಳನ್ನು ಮಾಡಿದರೆ, ಭಗವತ್ಪ್ರೀತಿ ಯುಂಟಾಗಿ ಶುಭಫಲವುಂಟಾಗುವದಕ್ಕೆ ಬದಲಾಗಿ ಭಗವದಪ್ರೀತಿಯುಂಟಾಗಿ ಅಶುಭ ಫಲವು ಪ್ರಾಪ್ತವಾಗುತ್ತದೆಂಬುದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಶಾಸ್ತ್ರವಿಹಿತವಾದ ಪುಷ್ಪಗಳನ್ನು ಸಂಪಾದಿಸಿ ಹಾರವನ್ನು ಮಾಡಬೇಕು. ತುಳಸಿಯನ್ನು ಶಾಸ್ತ್ರ ನಿಷಿದ್ಧವಲ್ಲದ ದಿನಗಳಲ್ಲಿ ಎತ್ತಿತಂದು ಮಾಲೆಯನ್ನು ರಚಿಸಬೇಕು. ಇಲ್ಲದಿದ್ದರೆ ಪ್ರತ್ಯವಾಯ ಉಂಟು. ಶುಚಿರ್ಭೂತನಾಗಿ ಸ್ತುತಿಸ ಬೇಕು. ಜಲಸ್ಪರ್ಶಮಾಡಿ ಬಿಟ್ಟು ಸ್ತುತಿಸಬಾರದು ನಮಸ್ಕಾರವನ್ನು "**ಯುಗ್ಮಾ ನೇವತು ಕಾರಯೇತ್**" ಎಂಬ ಪ್ರಮಾಣವಿರುವಾಗ ಒಂದು ಸಲವಾಗಲಿ ಮೂರು

ಸಲವಾಗಲಿ ನಮಸ್ಕಾರ ಮಾಡಕೂಡದು ; ಮತ್ತು ಒಂದು ಕೈಯಿಂದ ನಮಸ್ಕಾರ ಮಾಡಕೂಡದು. ನಮಸ್ಕಾರವು ಅಷ್ಟಾಂಗ ಸಂಯುತವಾಗಿರಬೇಕು ಹೀಗೆ ಶಾಸ್ತ್ರದಲ್ಲಿ ಹೇಳಿರುವಹಾಗೆ ಭಗವತ್ಸೇವೆಗಳನ್ನು ಮಾಡತಕ್ಕದ್ದು. ಇಲ್ಲವಾದರೆ ಅಪಚಾರಕ್ಕೆ ಕಾರಣವಾಗುತ್ತದೆ ಎಂಬ ಭಾವವು. ಇಂತಹ ಭಗವತ್ಕೈಙ್ಕರ್ಯಗಳನ್ನು ನಡೆಸತಕ್ಕದ್ದೆಂಬುದನ್ನು ಶಾಸ್ತ್ರಮೂಲಕ ತಿಳಿದು ಹೇಗೆ ನಡೆಸುತ್ತೇವೋ, ಹಾಗೆಯೇ ಈ ಪ್ರಪತ್ತಿಯ ಸಂದರ್ಭದಲ್ಲೂ ಎಂದು ಹೇಳುತ್ತಾರೆ; ಲೋಕದಲ್ಲೂ ಅಸಮರ್ಥನು ಸಮರ್ಥನನ್ನು ಶರಣುಹೊಂದಿ ಫಲಗಳನ್ನು ಹೊಂದಿರುವದನ್ನು ಕಂಡಿರುವೆವು; ಆದರೂ ಅದೃಷ್ಟ ಫಲವನ್ನು ಕೊಡುವ ಪ್ರಪತ್ತಿಯು ಸದಾಚಾರ್ಯೋಪದೇಶ ಲಬ್ಧಶಾಸ್ತ್ರದಲ್ಲಿ ಹೇಳಿರುವ ಮಂತ್ರಾರ್ಥಜ್ಞಾನವೇನು, ಅನುಷ್ಠಾನವೇನು, ಇವುಗಳನ್ನು ಒಳಗೊಂಡಿರುತ್ತದೆ; ಆ ಪ್ರಪತ್ತಿಗೂ ಅದರ ಫಲಕ್ಕೂ ಸಾಧನ ಸಾಧ್ಯಭಾವಗಳು ಹೇಗೆ ಎಂಬುದನ್ನೂ ಶಾಸ್ತ್ರಮೂಲಕವಾಗಿಯೇ ತಿಳಿಯತಕ್ಕದ್ದು, ಆದುದರಿಂದ ಭಗವತ್ಸೇವಾರೂಪ ಕೈಙ್ಕರ್ಯಗಳು ಹೇಗೆ ಶಾಸ್ತ್ರವಿಹಿತಗಳಾಗಿ ಶಾಸ್ತ್ರನಿಯತ ಕ್ರಮದಲ್ಲಿ ನಡೆಸತಕ್ಕವೋ, ಹಾಗೆಯೇ ಪ್ರಪತ್ತಿಯೂ ಕೂಡ ಶಾಸ್ತ್ರವಿಹಿತವಾದ ಉಪಾಯವಾದುದರಿಂದ ಶಾಸ್ತ್ರವು ವಿಧಿಸಿದ ರೀತಿಯಲ್ಲಿ ಸದಾಚಾರ್ಯರ ಮೂಲಕ ನಡೆಸತಕ್ಕದ್ದು.

ಹಾಗೆ ಪ್ರಪತ್ತಿಗೆ ಶಾಸ್ತ್ರವಿಧಿಯು ಬೇಕಿಲ್ಲವೆಂದರೆ, ರಾಜಸೇವೆಗೆ ಹೇಗೆ ಶಾಸ್ತ್ರವಿಧಿ ಬೇಕಾಗಿಲ್ಲವೋ ಹಾಗೆಯೇ ಭಗವತ್ಸೇವಾರೂಪ ಕೈಙ್ಕರ್ಯಗಳಿಗೂ ಶಾಸ್ತ್ರವಿಧಿ ಬೇಕಾಗಿಲ್ಲವೆಂದು ಒಪ್ಪಬೇಕಾಗುತ್ತದೆ ಎಂದು ಪ್ರತಿದ್ವಂದಿರೂಪ ದೂಷಣವನ್ನು ಹೇಳುತ್ತಾರೆ. ರಾಜಸೇವೆಗೆ ಶಾಸ್ತ್ರವು ಬೇಕಿಲ್ಲವು, ಭಗವತ್ಸೇವೆಗೆ ಶಾಸ್ತ್ರವಿಧಿಯಾವಶ್ಯಕವು ; ಹೇಗೆಂದರೆ ಅಶುಚಿಯಾದ ಪುಷ್ಪದಿಂದ ರಚಿಸಿದ ಪುಷ್ಪಮಾಲೆಯು ಶಾಸ್ತ್ರನಿಷಿದ್ಧವಾಗಿ ಭಗವತ್ಸೇವೆಗೆ ಅನರ್ಹವು ; ನೋಡಲು ಚನ್ನಾಗಿದ್ದರೆ ರಾಜನಿಗೆ ಅರ್ಹವಾದುದು. ಹಾಗೆಯೇ ಮಿಕ್ಕ ಸೇವೆಗಳಲ್ಲೂ ಊಹಿಸಬಹುದು. ಈ ಅಭಿಪ್ರಾಯವು ಪ್ರತಿಕಕ್ಷಿಗಳಿಗೆ ಅನಭಿಮತವಾದ ವಿಷಯವು ಭಗವತ್ಕೈಂಕರ್ಯಗಳಿಗೆ ಅವರುಗಳು ತುಂಬಾ ಮಾಹಾತ್ಮ್ಯೆಯನ್ನು ಹೇಳುವದರಿಂದ ಅವು ಶಾಸ್ತ್ರರೀತ್ಯಾ ನಡೆಯುತಕ್ಕವುಗಳೆಂದು ಹೇಳುತ್ತಾರೆ **ಅಜ್ಞನಲ್ಲಾದಪ್ಪೋದು** - ಪ್ರಪತ್ತಿಗೆ ಶಾಸ್ತ್ರವಿಧಿಯು ಬೇಕಿಲ್ಲವು, ಅನುಮಾನದಿಂದಲೇ ವ್ಯಕ್ತವೆಂದು ಅಭಿಪ್ರಾಯಪಟ್ಟರೆ, **ರಾಜಸೇವೆಯ್ಪೊಪ್ಪೋಲೆ** - ರಾಜಸೇವೆಗೆ ಹೇಗೆ ಶಾಸ್ತ್ರವಿಧಿ ಬೇಕಿಲ್ಲವೋ, ಹಾಗೆಯೇ, ಭಗವತ್ಸೇವೆಯೂ ಕೂಡ, **ವಿಧಿಕ್ಕವೇಂಡಾದೊಳಿಯುಮ್** - ಶಾಸ್ತ್ರ ವಿಧಿಮೂಲಕ ವಿಧಿಸಬೇಕಾದುದಿಲ್ಲವಾಗಿ ಹೋಗಬೇಕಾಗುತ್ತದೆ. ಭಗವತ್ಸೇವೆಗೆ

**ಅಜ್ಞನಲ್ಲಾದಪೋದು ರಾಜಸೇವೈಯ್ಯೈಪ್ಪೋಲೆ ಭಗವತ್ಸೇವೆಯುಂವ್ ವಿಧಿಕ್ಕವೇಣ್ಡಾದೊಳಿಯುಮ್; ಪ್ರಪತ್ತಿಕ್ಕುಮ್ ಸದಾಚಾರ್ಯೋಪದೇಶಪೂರ್ವಕ ಮಂತ್ರ ಗ್ರಹಣಾದಿಗಳ್ ಅನಪೇಕ್ಷಿತಙ್ಗಳಾಗ ಪ್ರಸಙ್ಗಿಕ್ಕುಮ್.**

---

ನೀವು ಹೇಗೆ ಶಾಸ್ತ್ರವಿಧಿಯು ಆವಶ್ಯಕವೆಂದು ಹೇಳುತ್ತೀರೋ ಹಾಗೆಯೇ ಪ್ರಪತ್ತಿಗೂ ಕೂಡ ಶಾಸ್ತ್ರವಿಧಿಯು ಆವಶ್ಯಕವು, ಅಸಮರ್ಥನ ವಿಷಯದಲ್ಲಿ ಅನುಮಾನ ಪ್ರಮಾಣದಿಂದಲೇ ವ್ಯಕ್ತವೆಂದು ಹೇಳುವ ವಾದವು ಅತೀಂದ್ರಿಯ ವಿಷಯದಲ್ಲಿ ನ್ಯಾಯವಲ್ಲವೆಂಬ ಭಾವವು.

ಹೀಗೆ ವಾದಿಸುವವರು ಪ್ರಪದನ ಮಂತ್ರವಾದ ದ್ವಯ ಮೊದಲಾದ ಮಂತ್ರಗಳ ಉಪದೇಶಮಾತ್ರ ಆಚಾರ್ಯ ಮೂಲಕವಾಗಿ ಶಾಸ್ತ್ರರೀತ್ಯಾ ನಡೆಸತಕ್ಕದ್ದೆಂದು ಹೇಳುವರು ಪ್ರಪದನಾನುಷ್ಠಾನಕ್ಕೆ ಶಾಸ್ತ್ರವಿಧಿ ಬೇಕಾಗಿಲ್ಲವೆಂದು ಹೇಳುವವರಿಗೆ, ಈ ಮಂತ್ರೋಪದೇಶಮಾತ್ರ ಶಾಸ್ತ್ರ ವಿಧಿಪ್ರಕಾರ ನಡೆಯಬೇಕೆಂಬುದು ತಾನೇ ಏಕೆ? ಎಂದು ಕೇಳಬೇಕಾಗುತ್ತದೆ. ಇದೂ ಕೂಡ ಶಾಸ್ತ್ರ ನಿರಪೇಕ್ಷವಾಗಿಯೂ ಸದಾಚಾರ್ಯೋಪದೇಶ ನಿರಪೇಕ್ಷವಾಗಿಯೂ ನಡೆಯಬಹುದಾಗಿ ಬರುತ್ತದೆಂದು ಮುಂದೆ ಹೇಳುತ್ತಾರೆ:—**ಪ್ರಪತ್ತಿಕ್ಕುಮ್** - ಪ್ರಪತ್ತಿಗೂ ಕೂಡ **ಸದಾಚಾರ್ಯೋಪದೇಶ ಪೂರ್ವಕವಾದ, ಮಂತ್ರಗ್ರಹಣಾದಿಗಳ್**- ಮೂಲಮಂತ್ರದ್ವಯ ಚರಮಶ್ಲೋಕಾದಿಗಳ ಉಪದೇಶಗಳೂ ಕೂಡ, **ಅನಪೇಕ್ಷಿತಙ್ಗಳಾಗ**-ಬೇಕಾಗಿಲ್ಲದವುಗಳಾಗಿ, **ಪ್ರಸಙ್ಗಿಕ್ಕುಮ್** - ಉಂಟಾಗಬಹುದು. ಯಾವಾಗ ಮಂತ್ರೋಪದೇಶಕ್ಕೆ ಮಾತ್ರ ಆಚಾರ್ಯೋಪದೇಶರೂಪವಾದ ಶಾಸ್ತ್ರವಿಧಿಯು ಆವಶ್ಯಕವೆಂದಾಯಿತೋ, ಮಂತ್ರಾರ್ಥೋಪದೇಶ ಮೂಲಕವಾದ ಪ್ರಪದನಕ್ಕೂ ಶಾಸ್ತ್ರವಿಧಿಯು ಅತ್ಯಾವಶ್ಯಕವು ಎಂಬ ಭಾವವು.

ಇದರಮೇಲೆ ಪೂರ್ವಪಕ್ಷಿಗಳು ಇನ್ನೊಂದು ವಾದವನ್ನು ತರಬಹುದು, ಹೇಗೆಂದರೆ:—ಪ್ರಪದನಕ್ಕೆ ಸರ್ವಾಧಿಕಾರತ್ವವುಂಟು. ಗೀತೆಯಲ್ಲಿ (೯—೩೨)

**"ಮಾಂಹಿ ಪಾರ್ಥ ವ್ಯಪಾಶ್ರಿತ್ಯ ಯೇಪಿಸ್ಯುಃ ಪಾಪಯೋನಯಃ।**
**ಸ್ತ್ರಿಯೋವೈಶ್ಯಾಸ್ತಥಾಶೂದ್ರಾಃ ತೇಪಿಯಾನ್ತಿ ಪರಾಂಗತಿಂ"॥**

ಎಂದು ಹೇಳಿರುವದರಿಂದ ಸ್ತ್ರೀಯರೂ ವೈಶ್ಯರೂ ಶೂದ್ರರೂ ಚಂಡಾಲರೂ ಸಹ ಪ್ರಪದನಾಧಿಕಾರಿಗಳೆಂದು ಹಿಂದೆಯೇ ಪ್ರಪತ್ತಿ ಯೋಗ್ಯಾಧಿಕಾರದಲ್ಲಿ ಶಾಸ್ತ್ರರೀತ್ಯಾ ಸ್ಥಾಪಿಸಲ್ಪಟ್ಟಿರುವದು ಸರಿಯಷ್ಟೇ, ಇವರಿಗೆ ಮಂತ್ರಗಳ ಉಪದೇಶವಿಲ್ಲವು, ಭಾಷಾಮಂತ್ರಕ್ಕೆ ಮಾತ್ರ ಅರ್ಹರು ಎಂದು ಅಙ್ಗೀಕರಿಸಿರುವದ

**ಮಂತ್ರಾದ್ಯನರ್ಹರ್ಕ್ಯವರ್ ಶರಣ್ಯವಿಶೇಷ ಫಲವಿಶೇಷಾನುಬಂಧಿಯಾನ ಅನ್ಯೂನಾನಧಿಕ ಕರ್ತವ್ಯ ವಿಶೇಷತ್ತಿನುಡೈಯ ವಧ್ಯವಸಾಯತ್ತುಕ್ಕು ಅನನ್ಯಥಾ ಸಿದ್ಧಮಾನವನುಮಾನಙ್ಕಿಡೈಯಾದು.**

---

ರಿಂದ ಹಾಗೆಯೇ, ಎಲ್ಲರಿಗೂ ಎಂದರೆ ವೈದಿಕ ಮಂತ್ರಕ್ಕೆ ಅರ್ಹರಿಗೂ ಕೂಡ, ಏಕೆ ಕೂಡದು ? ಶೂದ್ರಾದಿಗಳ ವಿಷಯದಲ್ಲಿ ಶಾಸ್ತ್ರನಿರಪೇಕ್ಷತ್ವವನ್ನು ಒಪ್ಪುವದಾದರೆ, ಎಲ್ಲಾ ಸಂದರ್ಭಗಳಲ್ಲೂ ಒಪ್ಪಬಹುದಲ್ಲಾ ಎಂದು ಆಕ್ಷೇಪಿಸಬಹುದೆಂದು ಯೋಚಿಸಿ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ.

**ಮಂತ್ರಾದ್ಯನರ್ಹರ್ಕ್ಯವರ್**-ದ್ವಯಮೂಲ ಮೊದಲಾದ ವೈದಿಕ ಮಂತ್ರಾದಿಗಳಿಗೆ ಅನರ್ಹರಾದ ಶೂದ್ರ ಪಂಚಮರುಗಳಿಗೂ, **ಶರಣ್ಯವಿಶೇಷ**-ಸತ್ಯತ್ವಜ್ಞಾನತ್ವಾದಿಗಳಾದ ಸ್ವರೂಪ ನಿರೂಪಕಧರ್ಮವೇನು, ವಾತ್ಸಲ್ಯ ಕೃಪಾದಿಗಳಾಗಿ ಉಪಾಯನಾಗಿರುವದಕ್ಕೆ ಯೋಗ್ಯವಾದ ಗುಣಗಳುಳ್ಳ ಶರಣ್ಯ ವಿಶೇಷವು, **ಫಲವಿಶೇಷ**-ಮೋಕ್ಷೇತರ ಪ್ರಪನ್ನರಾಗಿ ಅಪೇಕ್ಷಿಸುವ ಫಲವಿಶೇಷವು ಮತ್ತು ಮೋಕ್ಷಾರ್ಥಿಗಳಿಗೆ ಬೇಕಾದುದು, ಇವುಗಳಿಗೆ, **ಅನುಬಂಧಿಯಾನ** - ಸಂಬಂಧಿಸಿಕೊಂಡಿರುವ, **ಅನ್ಯೂನಾನಧಿಕ** - ಕಮ್ಮಿಯೂ ಇಲ್ಲದೆ ಅಧಿಕವೂ ಇಲ್ಲದೆಯೂ, **ಕರ್ತವ್ಯ ವಿಶೇಷತ್ತಿನುಡೈಯ** - ಮಾಡತಕ್ಕ ಪ್ರಪತ್ತ್ಯನುಷ್ಠಾನದ, **ಅಧ್ಯವಸಾಯತ್ತುಕ್ಕು** - ನಿಶ್ಚಯಜ್ಞಾನಕ್ಕೆ, **ಅನನ್ಯಥಾ ಸಿದ್ಧಮಾನ** - ಶಾಸ್ತ್ರವಿಧಿ ಬೇಕಾಗದೇ ಸ್ವತಂತ್ರವಾಗಿ ಉಂಟಾಗುವ, **ಅನುಮಾನಂ ಕಿಡಿಯಾದು** - ಅನುಮಾನ ಪ್ರಮಾಣವು ಇಲ್ಲವು ವೈದಿಕ ಮಂತ್ರೋಪದೇಶಗಳಿಗೆ ಅನರ್ಹರಾದ ಶೂದ್ರ ಪಂಚಮಾದಿಗಳು, ಮೋಕ್ಷಕ್ಕಾಗಿಯೂ ಇತರ ಫಲಗಳಿಗಾಗಿಯೂ ಶರಣಾಗತಿಯನ್ನು ಮಾಡುತ್ತಾರೆ. ಆ ಶರಣಾಗತಿಯನ್ನು ಮಾಡುವಾಗ ಶರಣ್ಯನು ಎಂತವನೆಂಬುದು ತಿಳಿದಿರಬೇಕು ಆತನ ಸ್ವರೂಪ ನಿರೂಪಕ ಧರ್ಮಗಳು ಯಾವುವು ? ಆತನು ಸಿದ್ಧೋಪಾಯನಾಗಿರುವ ಉಪಯುಕ್ತ ಗುಣಗಳಾವುವು? ಆತನು ಯಾವಾಗಲೂ ಲಕ್ಷ್ಮಿಯೊಂದಿಗೇನೇ ಇರುವದರಿಂದಾಗುವ ಪ್ರಯೋಜನವೇನು ? ಇದೆಲ್ಲಾ ಆವಶ್ಯಕವಾಗಿ ತಿಳಿಯ ಬೇಕಾದ ವಿಷಯವು ಇದು ಶಾಸ್ತ್ರದಿಂದಲೇ ತಿಳಿಯಬೇಕಾದ ವಿಷಯವು. ಹಾಗೆಯೇ ಈ ಶರಣಾಗತಿಯಿಂದುಂಟಾಗುವ ಫಲಗಳು ಯಾವುವು ? ಮೋಕ್ಷಕ್ಕಾಗಿ ಮಾಡುವ ಶರಣಾಗತಿಗೂ ಇತರ ಫಲಗಳಿಗಾಗಿ ಮಾಡುವ ಶರಣಾಗತಿಗೂ, ಕ್ರಮದಲ್ಲಿ ವ್ಯತ್ಯಾಸವೇನು ? ಪರಿಕರಗಳು ಯಾವುವು ? ಅಙ್ಗಿಯಾವುದು ? ಇವೆಲ್ಲಾ ತಿಳಿಯ ತಕ್ಕ

## ಏವಂ ಪ್ರಪತ್ತೇಃ ಕರ್ತವ್ಯತ್ವಂ ವಿಧೇಯತ್ವಂಚ ಸ್ಥಾಪಯಿತ್ವಾ ನಿಗಮಯತಿ

**ಆಗೈಯಾಲ್ ಸಪರಿಕರ ಸೇವಾ ವಿಶೇಷಙ್ಗಳ್ ಪೋಲೆ ಸಪರಿಕರ ಭರಸಮರ್ಪಣಮುಂ ಇಙ್ಗು ವಿಧೇಯಮಾಗಕ್ಕುರೈಯಿಲ್ಲೈ.**

---

ವಿಷಯಗಳಾಗಿವೆ ಇವೆಲ್ಲಾ ಶಾಸ್ತ್ರದಿಂದ ತಿಳಿಯತಕ್ಕವುಗಳೇ ವಿನಾ ಕೇವಲ ಅನುಮಾನ ಪ್ರಮಾಣದಿಂದ ಸಾಧಿಸಲು ಅಸಾಧ್ಯವು ಎಂಬ ತಾತ್ಪರ್ಯವು.

## ಪ್ರಪತ್ತಿಯು ಶಾಸ್ತ್ರ ವಿಧಿ ಬಲಾತ್ ಅವಶ್ಯಕವಾಗಿ ಕರ್ತವ್ಯವೆಂದು ನಿಗಮನವು

ಅತೀಂದ್ರಿಯ ಗೋಚರನಾದ ಶರಣ್ಯನಲ್ಲಿ ಅತೀಂದ್ರಿಯ ಫಲವಾದ ಮೋಕ್ಷಾದಿಗಳಲ್ಲಿ ಪ್ರತ್ಯಕ್ಷಾನುಮಾನ ಪ್ರಮಾಣಗಳು ದುರ್ಬಲಗಳಾದುದರಿಂದ ಶಾಸ್ತ್ರಪ್ರಮಾಣವಿಧಿ ಬಲದಿಂದಲೇ ಪ್ರಪತ್ತಿಯು ಅವಶ್ಯಕವಾಗಿ ಕರ್ತವ್ಯವು. ಇದು ಗುರುಮುಖೇನ ವರ್ಣಾಶ್ರಮೋಚಿತ ಕ್ರಮದಲ್ಲಿ ಪರಿಕರಗಳೊಂದಿಗೆ ಅನುಷ್ಠಿಸತಕ್ಕದ್ದು. ಅಧಿಕಾರಾನುಗುಣವಾಗಿ ಯಾವ ಮಂತ್ರದಮೂಲಕ ಅನುಷ್ಠಿಸತಕ್ಕದ್ದೆಂಬುದನ್ನು ಶಾಸ್ತ್ರವಿಧಿಮೂಲಕ ತಿಳಿಯತಕ್ಕದ್ದು. ಆದುದರಿಂದ **ಶರಣಂವ್ರಜ** ಎಂಬುದು ವಿಧಿಯೇ ವಿನಾ ಅನುವಾದವಲ್ಲವು **ಆಗೈಯಾಲ್**- ಹೀಗೆ ಪ್ರತ್ಯಕ್ಷಾನುಮಾನಗಳಿಂದ ಪ್ರಪತ್ತಿಯು ಸಿದ್ಧವಾದುದಲ್ಲವೆ ಶಾಸ್ತ್ರಮೂಲಕ ಕರ್ತವ್ಯತ್ವವೂ ವಿಧೇಯತ್ವವೂ ಅವಶ್ಯಕವಾಗಿರುವದರಿಂದ, **ಸಪರಿಕರ ಸೇವಾ ವಿಶೇಷಙ್ಗಳ್ ಪೋಲೇ**-ಭಗವತ್ಕೈಂಕರ್ಯಕಳೆಲ್ಲಾ ಶಾಸ್ತ್ರವಿಧಿರೀತ್ಯಾ ಅಙ್ಗಗಳೊಂದಿಗೆ ಹೇಗೆ ಅನುಷ್ಠಿಸತಕ್ಕವೋ, ಹಾಗೆಯೇ, **ಇಙ್ಗು**-ಈ ಪ್ರಪತ್ತಿಯ ಸಂದರ್ಭದಲ್ಲೂ ಅದು, **ವಿಧೇಯಮಾಗ**- ಶಾಸ್ತ್ರವಿಧಿರೀತ್ಯಾ ಅನುಷ್ಠಿಸತಕ್ಕದ್ದಾಗಲು, **ಕುರೈಯಿಲ್ಲೈ**- ಯಾವ ನ್ಯೂನತೆಯೂ ಇಲ್ಲವು ಗುರುಮುಖೇನ ಭರಸಮರ್ಪಣವು ಅನಾವಶ್ಯಕವೆಂದು ಬಿಟ್ಟಿರುವದು ಸರಿಯಲ್ಲವೆಂದು, ತಮ್ಮ ಹಿತದಲ್ಲಿ ತಮಗೇನೇ ಮಮತೆಯಿಲ್ಲದೆ ಈ ಅನುಷ್ಠಾನವನ್ನು ಪರಿತ್ಯಜಿಸಿರುತ್ತಾರಲ್ಲಾ ಎಂಬ ಪರಿತಾಪದಿಂದ ಮಾಡಿದ ಹಿತೋಪದೇಶವಾಗಿರುತ್ತದೆ ಈ ಹಿತೋಪದೇಶವನ್ನರಿಯದೆ ತಮ್ಮ ವಾದವನ್ನು ಖಂಡಿಸಿರುತ್ತಾರಲ್ಲಾ ಎಂದು ಶ್ರೀ ದೇಶಿಕರವರನ್ನು ಕೆಲವರು ನಿಂದಿಸುವರು ಇದು ಸರಿಯಲ್ಲವು.

**(೫) ಭಕ್ತ್ಯುಪಾಯಸ್ಯ ಸ್ವರೂಪ ವಿರುದ್ಧ ಇತಿವಾದಸ್ಯನಿರಾಸಃ**

**ಇಪ್ಪಡಿ ಯಥಾಧಿಕಾರಮ್ ಶಾಸ್ತ್ರಮ್ ವಿಧಿತ್ತವತ್ತಿಲುಮ್ ಉಪಾಸನಾದಿಗಳ್ ಸ್ವರೂಪ ವಿರುದ್ಧಙ್ಗಳೆನ್ರು ಶಿಲರ್ ಶೊಲ್ಲುವರ್‌ಗಳ್.**

---

**ಭಕ್ತ್ಯುಪಾಯವು ಸ್ವರೂಪ ವಿರುದ್ಧವೆಂಬ ವಾದದ ಖಂಡನವು.**

ಇದುವರೆಗೂ ಸಾಧ್ಯೋಪಾಯವಾದ ಪ್ರಪತ್ತಿಯ ಸ್ವರೂಪ ವಿಷಯದಲ್ಲಿ ಮಾಡಿದ ಆಕ್ಷೇಪಗಳಿಗೆ ಪರಿಹಾರಗಳನ್ನು ಹೇಳಿದರು ಪ್ರಾಸಙ್ಗಿಕವಾಗಿ ಸಾಧ್ಯೋಪಾಯವಾದ ಭಕ್ತಿಸ್ವರೂಪದಲ್ಲಿನ ಆಕ್ಷೇಪಗಳಿಗೆ ಸಮಾಧಾನವನ್ನು ಹೇಳುತ್ತಾರೆ. ಶಾಸ್ತ್ರವು ಉಪಾಯವಾಗಿ ವಿಧಿಸಿರುವದರಲ್ಲಿ ಪ್ರಪತ್ತಿಯಾದರೂ ಸರ್ವೇಶ್ವರನ ನಿರ್ಹೇತುಕ ಕೃಪೆಗೆ ಅನುರೂಪವಾದುದೆಂದಾದರೂ ಒಪ್ಪಬಹುದು. ಪ್ರಪತ್ತಿಗೆ ಸರ್ವಾಧಿಕಾರತ್ವವೂ ಉಂಟು. ಹೀಗಿರುವಲ್ಲಿ ಸಮರ್ಥನಿಗೆ ಭಕ್ತಿರೂಪ ಸಾಧ್ಯೋಪಾಯವೂ, ಅಸಮರ್ಥನಿಗೆ ಪ್ರಪತ್ತಿಯೂ ಹೀಗೆಲ್ಲಾದರೂ ಉಂಟೋ? ಎಂಬುದು ಆಕ್ಷೇಪವು. ಶಾಸ್ತ್ರವು ಉಪಾಸನವನ್ನು ಒಂದು ಸಾಧ್ಯೋಪಾಯವೆಂದು ವಿಧಿಸಿದ್ದರೂ, ಅದು ಸ್ವರೂಪ ವಿರುದ್ಧವಾದುದೇ ಎಂದು ಕೆಲವರು ಹೇಳಬಹುದು.

**ಇಪ್ಪಡಿ** – ಹೀಗೆ ಎಂದರೆ ಹಿಂದೆ ಪ್ರಪತ್ತಿಯನ್ನು ಯಥಾಧಿಕಾರವಾಗಿ ಶಾಸ್ತ್ರವು ವಿಧಿಸಿರುವಂಥಾದ್ದು ಎಂದು ಸ್ಥಾಪಿಸಿದ ಸಂದರ್ಭದಲ್ಲಿ, ಭಕ್ತಿ ಮಾರ್ಗವು ಸಮರ್ಥನಿಗೂ ಅಸಮರ್ಥನಾದ ಅಕಿಂಚನನಿಗೆ ಪ್ರಪದನವೂ ಎಂದು ಶಾಸ್ತ್ರವು ವಿಧಿಸಿರುವಾಗ ಎಂಬ ಭಾವವು, **ಯಥಾಧಿಕಾರಮ್** - ಬ್ರಾಹ್ಮಣ ಕ್ಷತ್ರಿಯ ವೈಶ್ಯರಾಗಿ ಸಮರ್ಥರಾಗಿರುವವರಿಗೆ ಭಕ್ತ್ಯುಪಾಯವೆಂದೂ, ಶೂದ್ರಾದಿಗಳೂ ಅಸಮರ್ಥರೂ ಇವರುಗಳಿಗೆ ಪ್ರಪತ್ತಿ ಎಂದೂ ಹೀಗೆ ಅಧಿಕಾರಾನುಗುಣವಾಗಿ, **ಶಾಸ್ತ್ರಮ್ ವಿಧಿತ್ತವತ್ತಿಲುಮ್** - ಶಾಸ್ತ್ರವು ವಿಧಿಸಿರುವದರಲ್ಲೂ, **ಉಪಾಸನಾದಿಗಳ್** - ಉಪಾಸನ ಮತ್ತು ಆದಿಪದದಿಂದ ಅದಕ್ಕೆ ಸಹಕಾರಿಯಾದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಾದಿಗಳು, **ಸ್ವರೂಪ ವಿರುದ್ಧಙ್ಗಳೆನ್ರು** - ತನ್ನ ಪರತಂತ್ರವಾದ ಸ್ವರೂಪಕ್ಕೆ ವಿರುದ್ಧವಾದವುಗಳೆಂದು, **ಶಿಲರ್ ಶೊಲ್ಲುವರ್‌ಗಳ್** - ಕೆಲವರು ಹೇಳುವರು **ಶ್ರೀ ಪಿಳ್ಳೈ ಲೋಕಾಚಾರ್ಯರು** ಅವರನುಗ್ರಹಿಸಿರುವ ಶ್ರೀ ವಚನ ಭೂಷಣದಲ್ಲಿ ಹಾಗೆ ಹೇಳಿರುತ್ತಾರೆ. ನಮಗೆ ಈ ಗ್ರಂಥವು ಹೇಗೋ, ಅವರಿಗೆ ಶ್ರೀವಚನ ಭೂಷಣವು

ಶ್ರೀಮದ್ರಹಸ್ಯತ್ರಯದ ಮಾಹಾತ್ಮ್ಯೆಯನ್ನು ಪ್ರದರ್ಶಿಸುವ ಉಪದೇಶ ಗ್ರಂಥವು. ಈ ಸಂದರ್ಭದಲ್ಲಿ ಅವರು ಹೇಳಿರುವದೇನೆಂದರೆ :—"ಪ್ರಾಪಕಾಂತರ ಪರಿತ್ಯಾಗತ್ತುಕ್ಕುಮ್ ಅಜ್ಞಾನಾಶಕ್ತಿಗಳನ್ರು; ಸ್ವರೂಪ ವಿರೋಧಮೇ ಪ್ರಧಾನಹೇತು. ಪ್ರಾಪಕಾಂತರಮ್ ಅಜ್ಞರ್ಕ್ಕುಪಾಯಮ್, ಜ್ಞಾನಿಗಳಕ್ಕಪಾಯಮ್; ಅಪಾಯಮಾಯಿರ್ರು ದುಸ್ವರೂಪನಾಶಕಮಾಗೈಯಾಲೆ ವರ್ತತೇಮೇ ಮಹದ್ಭಯಮ್ ಎನ್ಗೈಯಾಲೇ ಭಯಜನಕಮ್; ಮಾಶುಚಃ ಎನ್ಗೈಯಾಲೇ ಶೋಕಜನಕಮ್; ಮದಿರಾ ಬಿಂದುಮಿಶ್ರಮಾನ ಶಾತಕುಂಭಮಯ ಕುಂಭಗತ ತೀರ್ಥಸಲಿಲಮ್ಪೋಲೆ ಅಹಂಕಾರ ಮಿಶ್ರಂ; ರತ್ನತ್ತುಕ್ಕು ಪಲಕರೈಪ್ಪೋಲವುಮ್; ರಾಜ್ಯತ್ತುಕ್ಕು ಎಲುಮಿಚ್ಚಮ್ಪಳ ಪೋಲುವುಮ್, ಫಲತ್ತುಕ್ಕು ಸದೃಶಮನ್ರು, ಔಷಧಸೇವೆ ಪಣ್ಣಾದವರ್ಗಳುಕ್ಕು ಅಭಿಮತವಸ್ತುಕ್ಕಳಿಲೆ ಅತ್ತೈ ಕಲಶಿಯಿಡುವಾರೈಪೋಲೆ, ಈಶ್ವರನೈಕ್ಕಲನ್ದು ವಿಧಿಕ್ಕಿರ ವಿತ್ತನ್ನೈ; ಇತ್ತೈ ಪ್ರವರ್ತಿಪ್ಪಿತ್ತದು ಪರಹಿಂಸೆಯೈ ನಿವರ್ತಿಪ್ಪಿಕ್ಕೈಕಾಕ ಇದುತಾನ್ ಪೂರ್ವವಿಹಿತ ಹಿಂಸೈಪೋಲೆ ವಿಧಿನಿಷೇಧಙ್ಗಳಿರಂಡುಕ್ಕುಮ್ ಕುರೈಯಿಲ್ಲೈ ಅತ್ತೈ ಶಾಸ್ತ್ರ ವಿಶ್ವಾಸತ್ತುಕ್ಕಾಗ ವಿಧಿತ್ತದು, ಇತ್ತೈಸ್ವರೂಪ ವಿಶ್ವಾಸತ್ತುಕಾಗ ವಿಧಿತ್ತದು ; ಅದು ತೋಲ್ ಪುರಯೈಪೋಲ್, ಇದುಮರ್ಮಸ್ಪರ್ಶಿ. ಇದುತಾನ್ ಕರ್ಮಸಾಧ್ಯಮಾಗೈಯಾಲೇ ದುಷ್ಕರಮುಮಾಯಿರುಕ್ಕುಮ್" ಸಙ್ಗ್ರಹವಾಗಿ ಇದರ ತಾತ್ಪರ್ಯವೇನೆಂದರೆ (೧) ಪ್ರಾಪಕಾಂತರವಾದ ಭಕ್ತಿಮಾರ್ಗವನ್ನು ಈಗಿನವರು ತ್ಯಜಿಸಿರುವದಕ್ಕೆ ಅಜ್ಞಾನ ಮತ್ತು ಅಶಕ್ತಿಗಳೂ ಕಾರಣವೆಂದು ಹೇಳುವರು. ಹಾಗಲ್ಲವು ಪ್ರಪನ್ನರ ಸ್ವರೂಪಕ್ಕೆ ವಿರುದ್ಧವಾಗಿರುವದೇ ಕಾರಣವು. (೨) ಅದನ್ನು ಅಜ್ಞರಿಗೆ ಉಪಾಯವೆಂದು ಇಟ್ಟುಕೊಳ್ಳಬಹುದು. ಜ್ಞಾನಿಗಳಿಗೆ ಇದು ಅಪಾಯವು. ಚೇತನರ ಸ್ವರೂಪವು ಸರ್ವೇಶ್ವರನಿಗೆ ಅತ್ಯಂತ ಪರತಂತ್ರನಾಗಿರುವದು, ಇದು ಸ್ವಯತ್ನರೂಪವಾದುದರಿಂದ ಸ್ವರೂಪನಾಶಕವು. (೩) "ವರ್ತತೇಮೇ ಮಹದ್ಭಯಂ" ಎಂದಿರುವದರಿಂದ ತುಂಬಾ ಭಯಾವಹವೆಂಬ ಭಾವವು. (೪) "ಮಾಶುಚಃ" ಎಂದು ಹೇಳಿರುವದರಿಂದ ಅದು ಶೋಕಜನಕವು. (೫) ಹಾಗೆ ಸ್ವರೂಪನಾಶಕವೆಂದು ಒಪ್ಪಿಕೊಳ್ಳದಿದ್ದರೆ, ಇದಕ್ಕೆ ಪ್ರಾಯಶ್ಚಿತ್ತವಿಧಿಯನ್ನು ಏಕೆ ವಿಧಿಸಿತು ಎಂದು ಕೇಳಬೇಕಾಗುತ್ತದೆ. (೬) ಶ್ರೀ ಭಾಷ್ಯಕಾರರ ಶಿಷ್ಯರಾದ ತಿರುಕ್ಕುರಿಗೈಪ್ಪಿರಾನ್ ಎಂಬುವರು ಇದು ಸುವರ್ಣದ ಕುಂಭದಲ್ಲಿಟ್ಟ ಪವಿತ್ರವಾದ ಗಂಗಾತೀರ್ಥಕ್ಕೆ ಒಂದು ಬಿಂದು ಹೆಂಡವು ಸೇರಿಸಿದಹಾಗೆ ಅಹಂಕಾರ ಮಿಶ್ರವಾದುದು. ಹೇಗೆಂದರೆ ಈ ಚೇತನನು ಸ್ವತಃ ಮಹಾ ಪರಿಶುದ್ಧನು ಕುಂಭಗತ ಗಂಗಾಜಲದಹಾಗೆ ಭಗವಚ್ಛೇಷತ್ವ ಜ್ಞಾನದಿಂದಲೂ ಪರಿಶುದ್ಧನು.

ಭಕ್ತ್ಯುಪಾಯವನ್ನು ಸ್ವತಂತ್ರಿಸಿ ಅನುಷ್ಠಿಸುವದರಿಂದ, ಗಂಗಾಜಲಕ್ಕೆ ಹೆಂಡದ ಸಂಬಂಧ ಬಂದಹಾಗೆ ಅಹಂಕಾರ ಮಿಶ್ರವಾಯಿತು. (೭) ಎರಡು ಸಿಂಬೆಯ ಹಣ್ಣುಗಳನ್ನು ಕೊಟ್ಟು ಪ್ರತಿಯಾಗಿ ರಾಜ್ಯವನ್ನು ಕೊಡು ಎಂದು ಕೇಳಿದಹಾಗೆ, ಅಲ್ಪವಾದ ಭಕ್ತ್ಯುಪಾಯವನ್ನು ಮಾಡಿಬಿಟ್ಟು ಅಮೋಘಫಲವಾದ ಮೋಕ್ಷ ವನ್ನು ಪ್ರಾರ್ಥಿಸುವದು ಆ ಫಲಕ್ಕೆ ಸದೃಶವಾದ ಉಪಾಯವಲ್ಲದುದರಿಂದಲೂ ಸ್ವರೂಪ ವಿರುದ್ಧವಾದುದು (೮) ಆತನಿಗೆ ಕೊಡಲು ಯಾವುದೂ ತನ್ನಲ್ಲಿ ಲ್ಲವು. ಹೀಗಿದ್ದರೂ ಆತ್ಮವನ್ನು ಅವನು ಕೊಟ್ಟಿದ್ದನ್ನೇ ಹಿಂತಿರುಗಿಕೊಟ್ಟರೂ ಅಥವಾ ಸುಮ್ಮನೇ ಅವನಿಗೆ ಸಮರ್ಪಿಸಿದರೂ ಅದು ಉಪಾಯವಾಗಲಾರದು (ಅಙ್ಗಶರಣಾಗತಿ) ಹಾಗಲ್ಲದೆ ತನ್ನ ಆತ್ಮಾವನ್ನು ಸಮರ್ಪಿಸುತ್ತೇನೆಂಬ ಬುದ್ಧಿ ಯಿಂದ ಸಮರ್ಪಿಸಿದರೂ ಚೋರಕೃತ್ಯವಾಯಿತು. (೯) ಅಥವಾ ಭರ್ತೃಭೋಗ್ಯ ವನ್ನುಂಡು ಹೊಟ್ಟೆಹೊರಕೊಳ್ಳುವ ಭಾರ್ಯೆಯ ಹಾಗೆ ಇಬ್ಬರ ಸ್ವರೂಪಕ್ಕೂ ಹಾನಿಯು. ಸತಿಯು ಭರ್ತೃವಿನ ಉಪಭೋಗಕ್ಕಾಗಿಯೇ ತಾನು ಮಾಡುವ ದೆಲ್ಲವು ಎಂದು ಭಾವಿಸದೇ ಇರುವದರಿಂದ ಸ್ವರೂಪ ಹಾನಿಯು ಅಂತವಳ ಸಂಬಂಧವಿರುವದರಿಂದ ಭರ್ತಾವಿಗೆ ಸ್ವರೂಪಹಾನಿಯು ಹಾಗೆಯೇ ಇಲ್ಲಿಯೂ ಎಂಬ ಭಾವವು. (೧೦) ಅವರೆ ಶಾಸ್ತ್ರವಿಧಿ ಏತಕ್ಕೆಂದರೆ ಔಷಧವನ್ನು ತೆಗೆದು ಕೊಳ್ಳದಿರುವವರಿಗೆ ಔಷಧವನ್ನು ಸಕ್ಕರೆಯಲ್ಲಿ ಕಲಿಶಿಕೊಡುವಹಾಗೆ ಈ ಭಕ್ತಿಯ ಈಶ್ವರನೊಂದಿಗೆ ಸೇರಿಸಲ್ಪಟ್ಟು ವಿಧಿಸಲ್ಪಟ್ಟಿರುತ್ತದೆ. (೧೧) ಇದು ಪಶ್ವಾ ಲಂಭನಾದಿಗಳಹಾಗೆ ಸುಕೃತ ಅಥವಾ ಪುಣ್ಯರೂಪವಾಗಿ ತೋರಿದರೂ, ಪುಣ್ಯವೂ ಪಾಪವೇ ಹೇಗೋ, ಹಾಗೆ ಉಪಾಸನವು ಪಾಪರೂಪವಾದುದು. (೧೨) ಇದು ಪಶ್ವಾಲಂಭನಕ್ಕಿಂತಲೂ ಕ್ರೂರವು ಅದು ದುಃಖಮಿಶ್ರವಾಗಬಹುದು : ಇದಾ ದರೋ ಆತ್ಮಜ್ಞಾನ ಉಂಟಾದವನಿಗೆ ಭಗವದೇಕ ಪಾರತಂತ್ರ್ಯ ಸ್ವರೂಪ ನಾಶ ವೆಂಬ ಭಾವವು". ಈ ಅಭಿಪ್ರಾಯಗಳನ್ನೆಲ್ಲಾ ಶ್ರೀ ನಿಗಮಾಂತ ದೇಶಿಕರವರು ಮುಂದೆ ಖಂಡಿಸುತ್ತಾರೆ. ಉಪಾಸನವು ಸ್ವರೂಪ ವಿರುದ್ಧವೆಂದು ಉಪಪಾದಿಸಿರು ವುದು ಸ್ವಾಮಿದೇಶಿಕರವರಿಗೆ ಶಾಸ್ತ್ರಪಙ್ಕ್ತಿಗಳಿಗೆ ವಿರುದ್ಧಾಭಿಪ್ರಾಯವಾಗಿ ಸರ್ವಾ ತ್ಮನಾ ಹಿತವಲ್ಲವು. ಹೀಗೆ ಬ್ರಹ್ಮವಿದ್ಯೆಗಳೆಲ್ಲಾ ಉಪಾಸನೆಯರೂಪದಲ್ಲಿ ಬ್ರಹ್ಮ ಸೂತ್ರಗಳಲ್ಲೂ ಗೀತೆಯಲ್ಲೂ ಪುರಾಣೇತಿಹಾಸಗಳಲ್ಲೂ ಉಪಬೃಹ್ಮಣವಾಗಿ ದ್ದರೂ, ಮತ್ತೂ ಶ್ರುತಿಯಲ್ಲೂ ಉಪಾಸನ ವಿಧಿಯು ಕೊಂಡಾಡಲ್ಪಟ್ಟಿದ್ದರೂ, ಅದು ಸ್ವರೂಪ ವಿರುದ್ಧವೆಂದು ಹೇಳಿಬಿಟ್ಟರೆ, ಶಾಸ್ತ್ರ ಮರ್ಯಾದೆಯಲ್ಲಿ ವಿಶೇಷ ಮಮತೆಯುಳ್ಳವರು ಸುಮ್ಮನಿರುವದು ಸರಿಯಲ್ಲವೆಂದು ಭಾವಿಸಿ, ಈ ವಿಷಯವು ತಮ್ಮ ಉಪಪಾದನೆಯಾದ ಪ್ರಪದನ ಧರ್ಮಕ್ಕೆ ಅನುಪಯುಕ್ತವಾಗಿದ್ದರೂ

**ಇದುವುನ್ ಪ್ರಪತ್ತಿಯೈ ಸ್ತುತಿಕ್ಕೈಕ್ಕಾಗ ಅತಿವಾದನ್ ಪಣ್ಣಿನಾರ್‌ಗಳ್, ಅದು ಎಙ್ಙನೇ ಎನ್ನಿಲ್—**

(೧) ಭಕ್ತ್ಯುಪಾಯವು ಆತ್ಮನಾಶಕತಯಾ ಸ್ವರೂಪ ವಿರುದ್ಧತ್ವಮಿತಿವಾದ ನಿರಾಸಃ

**ನಿತ್ಯಮಾನ ಆತ್ಮಸ್ವರೂಪತ್ತುಕ್ಕು ಇವೈ ನಾಶಕಙ್ಗಳಾಯ್‌ಕ್ಕೊಂಡು ಸ್ವರೂಪ ವಿರದ್ಧಙ್ಗಳೆನ್ನವೊಣ್ಣಾದು**

---

"**ಅತಿವಾದನ್ ಪಣ್ಣಿನಾರ್‌ಗಳ್**" ಎಂದು ಖಂಡಿಸಿ ಅದು ಹೇಗೆ ಶಾಸ್ತ್ರವನ್ನು ತಿರಸ್ಕರಿಸಿದ ಅತಿವಾದವೆಂಬುದನ್ನು ತೋರಿಸಿ ಖಂಡಿಸುತ್ತಾರೆ

**ಇದುವುನ್** - ಹೀಗೆ ಸ್ವರೂಪವಿರುದ್ಧವೆನ್ನುವ ದೋಷಾರೋಪಣವೂ ಕೂಡ, **ಪ್ರಪತ್ತಿಯೈ ಸ್ತುತಿಕ್ಕೈಕ್ಕಾಗ** - ಸುಲಭೋಪಾಯವಾದ ಪ್ರಪತ್ತಿಯನ್ನು ಸ್ತೋತ್ರಮಾಡುವದಕ್ಕಾಗಿ, ಎರಡು ಮಾರ್ಗವಿದ್ದು, ಒಂದು ಮಾರ್ಗವು ದೋಷಾವಹವಾದರೆ ಇನ್ನೊಂದು ಉತ್ತಮವಾದುದೆಂದು ಏರ್ಪಡುತ್ತದೆ, ಆದುದರಿಂದ ಇನ್ನೊಂದುಪಾಯವಾದ ಪ್ರಪತ್ತಿಯನ್ನು ಶ್ಲಾಘಿಸುವದಕ್ಕಾಗಿ, **ಅತಿವಾದನ್ ಪಣ್ಣಿನಾರ್‌ಗಳ್** - ಶಾಸ್ತ್ರಪ್ರಮಾಣವನ್ನು ದೂರೀಕರಿಸಿದ ವಾದವನ್ನು ಮಾಡಿದರು ಅದು ಹೇಗೆ ಎಂಬುದನ್ನು ಉಪಪಾದಿಸುತ್ತಾರೆ **ಎಙ್ಙನೇ ಎನ್ನಿಲ್** - ಅದು ಹೇಗೆ ಎಂದರೆ :—

**(೧) ಭಕ್ತ್ಯುಪಾಯವು ಆತ್ಮನಾಶಕವಾಗಿ ಸ್ವರೂಪ ವಿರುದ್ಧವೆಂಬ ವಾದದ ಖಂಡನವು**

ಆತ್ಮಸ್ವರೂಪಕ್ಕೇ ಭಕ್ತ್ಯುಪಾಯಾದಿಗಳು ವಿರುದ್ಧವೆಂದು **ಹೇಳುವ**ದೇನು, (೧) ಆತ್ಮಸ್ವರೂಪದಲ್ಲೇ ನಾಶಕತ್ವವೇ ಅಥವಾ (೨) ಅಸಂಭಾವಿತತ್ವವೇ ಅಥವಾ (೩) ಅನರ್ಥಾವಹತ್ವವೇ ಎಂದು ಮೂರು ವಿಧವಾಗಿ ವಿಕಲ್ಪಿಸಿ, ಮೊದಲನೆಯುದನ್ನು ಮೊದಲು ಖಂಡಿಸುತ್ತಾರೆ **ನಿತ್ಯಮಾನ ಆತ್ಮಸ್ವರೂಪತ್ತುಕ್ಕು** - ನಿತ್ಯವಾದ ಆತ್ಮಸ್ವರೂಪಕ್ಕೆ, **ಇವೈ** - ಭಕ್ತ್ಯಾದಿ **ಉಪಾ**ಯಗಳು, **ನಾಶಕಙ್ಗಳಾಯ್‌ಕ್ಕೊಂಡು** - ನಾಶಕವಾದವುಗಳಾಗಿ, ಸ್ವರೂಪವಿರುದ್ಧವೆಂದು ಹೇಳಲು ಆಗುವದಿಲ್ಲವು ಆತ್ಮಸ್ವರೂಪವು ನಿತ್ಯವಾಗಿರುವಾಗ ಅವರ ಸ್ವರೂಪಕ್ಕೆ ನಾಶಕಗಳು ಹೇಗೆ ಆಗುತ್ತವೆ ಎಂಬ ತಾತ್ಪರ್ಯವು.

## ಅಸಂಭಾವಿತತ್ವೇನ ಸ್ವರೂಪ ವಿರುದ್ಧಮಿತಿವಾದ ನಿರಾಸಃ

**ಪ್ರಪತ್ತ್ಯನುಷ್ಠಾನತ್ತಿಲುಮ್ ಕೈಙ್ಕರ್ಯತ್ತಿಲುಮ್ ಪೋಲೆ ಭಕ್ತ್ಯಾದಿಗಳಿಲುಮ್ (೧) "ಕರ್ತಾ ಶಾಸ್ತ್ರಾರ್ಥವತ್ವಾತ್" (೨)" ಪರಾತ್ತು**

---

ಮುಂದೆ **ಪ್ರಪತ್ತ್ಯನುಷ್ಠಾನತ್ತಿಲುಮ್** ಎಂದು ಆರಂಭಿಸಿದ ವಾಕ್ಯದಿಂದ ಎರಡನೆಯ ಪಕ್ಷವನ್ನು ದೂಷಿಸುತ್ತಾರೆ ಆ **ಪೂರ್ವಪಕ್ಷವು** ಹೇಗೆಂದರೆ:—ಜೀವನು **ಅಣು** ಸ್ವರೂಪನು, ಅಂತವನಿಗೆ ಕರ್ತೃತ್ವವು ದೇಹಮೂಲಕವಾಗಿಯೇ ವಿನಾ ಸ್ವರೂಪ ಮೂಲಕವಲ್ಲವು ಹಾಗೆಯೇ ಗೀತೆಯಲ್ಲಿ ಕರ್ಮ ಸನ್ಯಾಸವನ್ನು ಬೋಧಿಸುವ ಸಂದರ್ಭದಲ್ಲಿ "**ಬ್ರಹ್ಮಣ್ಯಾಧಾಯ ಕರ್ಮಾಣಿ**" (ಗೀ. ೫. ೧೦ ) ಕರ್ಮಗಳು ಜೀವಸ್ವರೂಪಕ್ಕೆ ಸೇರಿದವಲ್ಲವಾದುದರಿಂದ **ಬ್ರಹ್ಮಣಿ** ಎಂದರೆ ಪ್ರಕೃತಿಯಲ್ಲಿ ಸಮರ್ಪಿಸಿ ಎಂಬರ್ಥವು **ಹೇಳಲ್ಪಟ್ಟಿರುತ್ತದೆ**. ಹಾಗೆಯೇ "**ನಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ** (ಗೀ. ೫ ೧೦) ಈ ಜೀವಾತ್ಮ ಸ್ವರೂಪಕ್ಕೆ ಕರ್ತೃತ್ವವು ಸೇರಿದುದಲ್ಲವೆಂದು ಹೇಳಲ್ಪಟ್ಟಿರುತ್ತದೆ. ಇದೂ ಅಲ್ಲದೆ "**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ । ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ**" ॥ (ಗೀ. ೩ ೨೭ ) ದೇಹಸಂಬಂಧವಿಂದುಂಟಾಗತಕ್ಕ ಕರ್ಮಗಳಿಗೆ ಸ್ವರೂಪತಃ ಕರ್ತೃತ್ವವು ಸಾಧ್ಯವಲ್ಲದ ಆತ್ಮನು ತಾನು ಆ ಕರ್ಮಗಳನ್ನು ಮಾಡಿದೆನೆಂದು ತನ್ನ ಈ ಅವಿಜ್ಞತೆಯಿಂದ ತಿಳಿಯುವನೆಂದೂ ಹೇಳಲ್ಪಟ್ಟಿರುತ್ತದೆ. ಮತ್ತು "**ಗುಣಾ ಗುಣೇಷು ವರ್ತಂತೇ ಇತಿಮತ್ವಾ ನ ಸಜ್ಜತೇ**" ಸತ್ವರಜಸ್ತಮೋಗುಣಗಳಿಂದ ಯುಕ್ತವಾದ ದೇಹವು ಸತ್ವರಜಸ್ತಮೋಗುಣರೂಪವಾದ ಕಾರ್ಯಗಳಲ್ಲಿ ಪ್ರವರ್ತಿಸುತ್ತದೆ ಎಂದು ತಿಳಿದು ಅವುಗಳಲ್ಲಿ ತಾನು ಸಂಬಂಧವನ್ನು ಇಟ್ಟುಕೊಳ್ಳುವದಿಲ್ಲವು ಇತ್ಯಾದಿ ಬಹು ಪ್ರಮಾಣಗಳುಂಟು ಆದುದರಿಂದ ಹೀಗೆ ಜೀವಸ್ವರೂಪಕ್ಕೆ ಕರ್ತೃತ್ವವಿಲ್ಲವುದರಿಂದ ಭಕ್ತ್ಯಾದಿ ಕರ್ಮಗಳು ಅಸಂಭಾವಿತಗಳಾಗಿ ಸ್ವರೂಪ ವಿರುದ್ಧವು ಎಂಬುದು ಪೂರ್ವ ಪಕ್ಷಿಗಳ ತಾತ್ಪರ್ಯವು ಇದನ್ನು ಖಂಡಿಸುತ್ತಾರೆ: **ಪ್ರಪತ್ತ್ಯನುಷ್ಠಾನತ್ತಿಲುಮ್** - ಪ್ರಪತ್ತಿಯನ್ನು ಅನುಷ್ಠಿಸುವದರಲ್ಲೂ ಸಹ, **ಕೈಙ್ಕರ್ಯತ್ತಿಲುಮ್ಪೋಲೆ**-ಕೈಂಕರ್ಯಮಾಡುವದರಲ್ಲಿ ಹೇಗೋ ಹಾಗೆ, ಭಕ್ತ್ಯಾದಿಗಳಲ್ಲೂ ಸಹ, **ಕರ್ತಾಶಾಸ್ತ್ರಾರ್ಥವತ್ವಾತ್** ಎಂದರೆ ಶಾಸ್ತ್ರದಲ್ಲಿ **ಯಜೇತ ಉಪಾಸೀತ** - ಸ್ವರ್ಗಕಾಮನಾದರೆ ಯಜ್ಞವನ್ನು ಮಾಡು, ಮೋಕ್ಷಾರ್ಥಿಯಾದರೆ

---

(೧) ಬ್ರ. ಸೂ. ೨ ೩ ೩೩. (೨) ಬ್ರ. ಸೂ. ೨. ೩ ೪೦.

**ತಚ್ಛ್ರುತೇಃ” ಎಙ್ಗಿರಪಡಿಯೇ ಭಗವದಧೀನ ಕರ್ತೃತ್ವ ಮುಂಡಾಗೈಯಾಲುಮ್,**

---

ಉಪಾಸನೆಯನ್ನು ಮಾಡು ಎಂಬ ಶಾಸ್ತ್ರಗಳಿಗೆ ಸಾರ್ಥಕ್ಯ ಉಂಟಾಗಬೇಕಾದುದರಿಂದ ಆತ್ಮಾ ಕರ್ತಾವೆಂದು ಒಪ್ಪತಕ್ಕದ್ದು ಎಂದೂ, **ಪರಾತ್ತು ತಚ್ಛ್ರುತೇಃ** ಎಂದರೆ ಈ ಮೇಲೆ ಹೇಳಿದ ಕರ್ತೃತ್ವವು ಭಗವಂತನಿಗೆ ಅಧೀನವಾದುದೆಂದೂ, **ಎಙ್ಗಿರಪಡಿಯೇ**-ಎಂದು ಹೇಳಿರುವಹಾಗೆ ಭಗವದಧೀನವಾದ, **ಕರ್ತೃತ್ವ ಮುಂಡಾಗೈಯಾಲುಮ್** - ಜೀವನಿಗೆ ಕರ್ತೃತ್ವಉಂಟಾಗುವದರಿಂದಲೂ; ಪೂರ್ವಪಕ್ಷಿಗೆ ಏನು ಸಮಾಧಾನವೆಂದರೆ, ಜೀವನಿಗೆ ಸ್ವರೂಪತಃ ಕರ್ತೃತ್ವವೇ ಇಲ್ಲವೆಂಬ ವಾದವೇ ನಿಜವಾದುದಲ್ಲವು; ಆತನಿಗೆ ಪರಾಯತ್ತ ಕರ್ತೃತ್ವ ಉಂಟೆಂದು-ಶಾಸ್ತ್ರವು ಹೇಳುತ್ತದೆಂಬುದು ಈ ಎರಡು ಬ್ರಹ್ಮಸೂತ್ರಗಳಿಂದಲೂ ವ್ಯಕ್ತವೆಂಬ ಭಾವವು; ಆದರೆ ಇನ್ನೊಂದು ಪೂರ್ವಪಕ್ಷವು ಬರಬಹುದು, ಏನೆಂದರೆ, ಹೀಗೆ ಜೀವನ ಕರ್ತೃತ್ವವು ಪರಮಾತ್ಮಾಧೀನವಾದರೆ, **ಯಜೇತ ಉಪಾಸೀತ** ಇತ್ಯಾದಿ ವಿಧಿಗಳೆಲ್ಲಾ ಪರಮಪುರುಷನಿಗೆ ನ್ಯಾಯವೇ ವಿನಾ ಜೀವಾತ್ಮನಿಗೆ ಹೇಗೆ ಎಂದರೆ **"ಕೃತ ಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ”** ಎಂಬ ಬ್ರಹ್ಮಸೂತ್ರ (೨. ೩. ೪೧) ಪ್ರಕಾರ ಪ್ರಥಮ ಪ್ರವೃತ್ತಿಯಲ್ಲಿ ಸರ್ವೇಶ್ವರನು ಜೀವನನ್ನು ಸಙ್ಕಲ್ಪಪ್ರಯತನಗಳಲ್ಲಿ ಸ್ವತಂತ್ರನಾಗಿಬಿಟ್ಟು ಬಿಡುವದರಿಂದ ಕರ್ತೃತ್ವವು ಜೀವಾತ್ಮನಿಗೆ ಕೂಡುತ್ತದೆ. ಆದುದರಿಂದ ಜೀವಾತ್ಮನಿಗೆ ಕರ್ತೃತ್ವವಿಲ್ಲವೆಂಬ ವಾದವು ಅಸಂಗತವು. ಆದರೆ ಗೀತೆಯಲ್ಲಿ ಹೇಳಿರುವ ಪ್ರಮಾಣಗಳಿಗೆಲ್ಲಾ ತಾತ್ಪರ್ಯವೇನೆಂದರೆ, ಈ ಕರ್ಮಗಳೆಲ್ಲಾ ಪೂರ್ವ ಕರ್ಮಾನುಸಾರವಾಗಿ ದೇಹಮೂಲಕವಾಗಿ ತನ್ನ ಕರ್ತೃತ್ವಮೂಲಕ ನಡೆದರೂ ದೇಹವೇ ನಡೆಸುತ್ತದೆ ಎಂಬ ಅನುಸಂಧಾನವಿರಬೇಕೆಂದೂ ಆ ಕರ್ಮಗಳಲ್ಲಿ ತನಗೆ ಸಂಬಂಧ ಉಂಟೆಂದು ಭಾವಿಸಬಾರದೆಂಬ ತಾತ್ಪರ್ಯವು ಶ್ರುತಿಯೂ ಕೂಡ **"ಏಷಹಿ ದ್ರಷ್ಟಾ ಕರ್ತಾ ಭೋಕ್ತಾ ವಿಜ್ಞಾನಾತ್ಮಾ ಪುರುಷಃ”** ಆತ್ಮಾವಿಗೆ ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವಗಳುಂಟೆಂದು ಹೇಳುತ್ತದೆ, ಆದುದರಿಂದ ಅಸಂಭಾವಿತವಾದುದರಿಂದ ಸ್ವರೂಪ ವಿರುದ್ಧವೆಂಬ ವಾದವು ಕೂಡುವದಿಲ್ಲವೆಂಬ ತಾತ್ಪರ್ಯವು. ಈ ವಾಕ್ಯಾರಂಭದಲ್ಲಿ **ಪ್ರಪತ್ತ್ಯನುಷ್ಠಾನತ್ತಿಲುಮ್ ಕೈಂಕರ್ಯಂಪೋಲೆ**-ಭಗವದಧೀನ ಕರ್ತೃತ್ವ ಉಂಟು ಎಂದು ಏಕೆ ಹೇಳಲ್ಪಟ್ಟಿತೆಂದರೆ, ಈ ಪೂರ್ವ ಪಕ್ಷಿಗಳು ಭಗವದ್ಭಾಗವತ ಕೈಙ್ಕರ್ಯಗಳು ಅವಶ್ಯಕವೆಂದು ಹೇಳುವರು. ಹಾಗಾದರೆ ಆತ್ಮಾವಿಗೆ ಕೈಙ್ಕರ್ಯಕ್ಕೆ ಕರ್ತೃತ್ವ

**ಆತ್ಮಸ್ವರೂಪ ಮತ್ಯಂತ ನಿರ್ವ್ಯಾಪಾರ ಮೆನ್ನುಮ್ಪೋದು ಸತ್ವಲಕ್ಷಣಮಾನ ಅರ್ಥಕ್ರಿಯಾಕಾರಿತ್ವ ಮಿಲ್ಲಾಮೈಯಾಲೇ ತುಚ್ಛತ್ವಂ ಪ್ರಸಜ್ಗಿಕ್ಕೈಯಾಲುಮ್,**

---

ಇದ್ದರೆ ಪ್ರಪತ್ತ್ಯನುಷ್ಠಾನಕ್ಕಾಗಲಿ ಭಕ್ತ್ಯುಪಾಯಾನುಷ್ಠಾನಕ್ಕಾಗಲಿ ಏಕೆ ಕರ್ತೃತ್ವವಿಲ್ಲವೆಂಬ ವಾದವು? ಎಂಬಭಿಪ್ರಾಯವು; ಅದಕ್ಕಾಗಿ ಹಾಗೆ ಪ್ರಯೋಗವು. ಮುಂದೆ ಇನ್ನೊಂದು ದೂಷಣವನ್ನು ಹೇಳುತ್ತಾರೆ.

(೨) **ಆತ್ಮಸ್ವರೂಪವು, ಅತ್ಯಂತ ನಿರ್ವ್ಯಾಪಾರಮೆನ್ನುಮ್ಪೋದು**-ಅಣುವಾಗಿರುವದರಿಂದ ಸರ್ವವ್ಯಾಪಾರಗಳಿಂದಲೂ ಶೂನ್ಯವಾದುದು ಎಂದು ಹೇಳುವಾಗ, **ಸತ್ವಲಕ್ಷಣಮಾನ** - ವಸ್ತುವಿನ ಸತ್ತೆಗೆ ಲಕ್ಷಣವಾದ, **ಅರ್ಥಕ್ರಿಯಾಕಾರಿತ್ವಂ** - ಪ್ರಯೋಜನ ರೂಪವಾದ ಒಂದು ವ್ಯಾಪಾರವನ್ನು ಮಾಡೋಣವು, **ಇಲ್ಲಾಮೈಯಾಲೇ** ಈ ಆತ್ಮಾವಿಗೆ ಇಲ್ಲವೆಂಬ **ಪೂ**ರ್ವಪಕ್ಷಿಯ ಅಭಿಪ್ರಾಯವಾಗುವದರಿಂದ, **ತುಚ್ಛತ್ವಂ ಪ್ರಸಜ್ಗಿಕ್ಕೈಯಾಲುಮ್**-ಗಗನಾರವಿಂದ ಶಶಶೃಂಗ ಇವುಗಳಹಾಗೆ ಸ್ವರೂಪವೇ ಇಲ್ಲದಹಾಗೆ ಆಗುವದರಿಂದಲೂ; ಇದು ಎರಡನೆಯ ದೋಷವು; ಆತ್ಮನು ಅಣುವಾಗಿರುವದರಿಂದ ಯಾವದೊಂದು ವ್ಯಾಪಾರವು ಆತನಿಗಿಲ್ಲವೆಂದು ಹೇಳಿಬಿಟ್ಟರೆ, ಆಗ ಆತ್ಮಾವಿಗೆ ಸತ್ತೆಯೇ ಇಲ್ಲವೆಂದು ಹೇಳಬೇಕಾಗುತ್ತದೆ. ಸತ್ತೆಗೆ ಲಕ್ಷಣವೇನೆಂದರೆ, ಅರ್ಥ ಕ್ರಿಯಾಕಾರಿತ್ವವು. ಪ್ರಯೋಜನರೂಪ ವ್ಯಾಪಾರವು, ಇದು ಆತ್ಮಾವಿಗೂ ಉಂಟು. ಮೇಲಿನ ಶ್ರುತಿವಾಕ್ಯಾನುಸಾರವಾಗಿ ಜ್ಞಾತೃತ್ವವೂ, ಇಚ್ಛೆಸೋಣವೂ, ಪ್ರಯತ್ನವೂ ಇವೆಲ್ಲಾ ಉಂಟು ಕರ್ತೃತ್ವಕ್ಕೆ ಇವುಗಳಿರಬೇಕು. ಇವು ಯಾವುದೂ ಇಲ್ಲವೆಂದರೆ ಗಗನ ಪುಷ್ಪದಹಾಗೂ ಮೊಲನ ಕೋಡಿನಹಾಗೂ ಸ್ವರೂಪಶೂನ್ಯವಾದ ತುಚ್ಛತ್ವವು ಪ್ರಾಪ್ತವಾಗುತ್ತವೆಂಬ ಭಾವವು ಹೀಗೆ ತುಚ್ಛತ್ವ ವಾದವನ್ನು ತಂದರೆ ಕಾಲವು ವಿಭುವಾದುದು, ಅಚೇತನವು, ಆದುದರಿಂದ ನಿರ್ವ್ಯಾಪಾರವಾದುದು, ಎಂದು ಹೇಳಿ ಅದಕ್ಕೆ ತುಚ್ಛತ್ವವನ್ನು ಹೇಳುತ್ತೀರಾ ಎಂದರೆ, ಅದಕ್ಕೆ ಕ್ಷಣ ಪರಿಣಾಮಾದಿ ರೂಪವ್ಯಾಪಾರವೂ ಉತ್ಪತ್ತಿ ವಿನಾಶರೂಪವ್ಯಾಪಾರವೂ ತನ್ಮೂಲಕ ಉಂಟಾಗುವದರಿಂದ ತುಚ್ಛತ್ವ ಪ್ರಸಜ್ಗಕ್ಕೆ ಕಾರಣವಿಲ್ಲವು ಅರ್ಥಕ್ರಿಯಾಕಾರಿತ್ವವೂ ಇಲ್ಲಿಯೂ ಉಂಟು.

(೩) **ಜ್ಞಾನ ಚಿಕೀರ್ಷಾ ಪ್ರಯತ್ನಾಶ್ರಯತ್ವರೂಪಮಾನ** - ಜ್ಞಾತೃತ್ವ, ಇಚ್ಛಾರೂಪ ಸಜ್ಕಲ್ಪ, ಪ್ರಯತ್ನ ಇವುಗಳಿಗೆ ಆತ್ಮಾ ಆಶ್ರಯವಾಗಿ

**ಜ್ಞಾನ ಚಿಕೀರ್ಷಾ ಪ್ರಯತ್ನಾಶ್ರಯತ್ವ ರೂಪಮಾನ ಕರ್ತೃತ್ವಮಿಲ್ಲೈಯಾಕ್ಕಿ ಆತ್ಮಾವುಕ್ಕು ಸನ್ನಿಧಿ ಮಾತ್ರಮೇ ವ್ಯಾಪಾರಮೆನ್ನಿಲ್, ಭೋಕ್ತೃತ್ವಾದಿಗಳು ಮನ್ರಿಕ್ಕೇ ಇವನುಕ್ಕು ಸಂಸಾರಮುಮ್ ಮಿಥ್ಯಾವಾಯ್ ಮೋಕ್ಷೋಪಾಯ ನೈರಪೇಕ್ಷ್ಯಾದಿ ಪ್ರಸಙ್ಗಮ್ ವರುಗೈಯಾಲುಮ್,**

---

ರುವವರಿಂದ ಅಂತಃಪ, **ಕರ್ತೃತ್ವಮಿಲ್ಲೈಯಾಕ್ಕಿ** - ಹೀಗೆ ಆತ್ಮಾವಿಗೆ ಇರುವ ಕರ್ತೃತ್ವವು ಇಲ್ಲವೆಂದು ಹೇಳಿ, **ಆತ್ಮಾವುಕ್ಕು** - ಆತ್ಮಾವಿಗೆ, **ಸನ್ನಿಧಿ ಮಾತ್ರಮೇ** - ಪ್ರಕೃತಿಯ ಹತ್ತಿರವಿರುವದೇ, **ವ್ಯಾಪಾರಮೆನ್ನಿಲ್** - ವ್ಯಾಪಾರವು ಎಂದು ಪೂರ್ವಪಕ್ಷಿಗಳು ಭಾವಿಸಿದರೆ **ಭೋಕ್ತೃತ್ವಾದಿಗಳೂ, ಅನ್ರಿಕ್ಕೇ**- ಇಲ್ಲದವುಗಳಾಗಿ, **ಇವನುಕ್ಕು** - ಈ ಚೇತನನಿಗೆ, **ಸಂಸಾರವು ಮಿಥ್ಯೆಯಾಗಿ ಮೋಕ್ಷೋಪಾಯ ನೈರಪೇಕ್ಷ್ಯಾದಿ ಪ್ರಸಙ್ಗಮ್** - ಮೋಕ್ಷೋಪಾಯದ ಅನಾವಶ್ಯಕತೆ ಮೊದಲಾದವುಗಳ ಪ್ರಸಙ್ಗವು, **ವರುಗೈಯಾಲುಮ್** - ಉಂಟಾಗುವದರಿಂದಲೂ; ಇಲ್ಲಿ ಆದಿ ಪದದಿಂದ ನಿರರ್ಥಕವೆಂಬ ಭಾವವೂ ಸೂಚಿಸಲ್ಪಟ್ಟಿತು ಯಾವಾಗ ಸಂಸಾರವೇ ಸುಳ್ಳೋ ಆಗ ಪ್ರಯತ್ನವೂ ನಿರರ್ಥಕವೆಂಬ ಭಾವವೂ ತೋರುತ್ತದೆ. ಇದು ಮೂರನೆಯ ದೂಷಣವು ಆತ್ಮಸ್ವರೂಪದ ಗುಣಗಳು ಜ್ಞಾನ ಚಿಕೀರ್ಷಾಪ್ರಯತ್ನಗಳು, ಇವುಗಳಿಂದಲೇ ಆತ್ಮಾವಿಗೆ ಕರ್ತೃತ್ವವು ಉಪಾಧಿಯಾದ ಶರೀರ ಮೂಲಕವೂ ಅಲ್ಲದೆ, ಸ್ವರೂಪತಃ ಕೂಡ ಉಂಟು, ಈ ಕರ್ತೃತ್ವವು ಮುಕ್ತದೆಶೆಯಲ್ಲಿಯೂ ಉಂಟು. ಮುಕ್ತದೆಶೆಯಲ್ಲಿ ಈ ಆತ್ಮಾವಿಗೆ ದಿವ್ಯಮಙ್ಗಳ ವಿಗ್ರಹವು ಉಂಟಾದರೆ, ತನ್ಮೂಲಕವಾಗಿಯೂ ಕರ್ತೃತ್ವವುಂಟು. ಆದರೂ ಇವು ಇಲ್ಲವೆಂದೂ, ಪ್ರಕೃತಿಯ ಸನ್ನಿಧಿಯಲ್ಲಿ ನಿರ್ವ್ಯಾಪಾರವಾಗಿ ಸುಮ್ಮನೆ ಇದ್ದಾನೆ ಎಂದೂ, ಪ್ರಕೃತಿಯಾದ ದೇಹವೇ ಸರ್ವವ್ಯಾಪಾರಗಳನ್ನೂ ನಡೆಸುತ್ತದೆ ಎಂದೂ ಸಾಂಖ್ಯನು ಹೇಳುವಹಾಗೆ ವಾದಿಸಿದರೆ, ಆಗ ಆತ್ಮಾವಿಗೆ ಭೋಕ್ತೃತ್ವವೂ ಇಲ್ಲವೆಂದಾಗಿ, ಸಂಸಾರವೆಂಬುದು ಸುಳ್ಳಾಗಿ, ಮೋಕ್ಷಕ್ಕಾಗಿ ಯಾವ ಉಪಾಯವೂ ಬೇಕಿಲ್ಲವೆಂಬದಾಗಿ ಆಗುತ್ತದೆ ಎಂದು ಆ ವಾದವನ್ನು ಖಂಡಿಸಿರುತ್ತಾರೆ.

ಹೀಗೆ ಆತ್ಮಾವಿಗೆ **ಕರ್ತೃತ್ವವು** ಸಂಭಾವಿತವು. ಆದುದರಿಂದ ಆತ್ಮಸ್ವರೂಪಕ್ಕೆ ವಿರುದ್ಧವೆಂದು ತಂದ ಆಕ್ಷೇಪವನ್ನು ಮೂರು ದೂಷಣಗಳಿಂದ ನಿರಸನ ಮಾಡಿರುತ್ತಾರೆ **ಹೇಗೆಂದರೆ**:—

೧. **ಕರ್ತೃತ್ವವೇ ಆತ್ಮನಿಗೆ** ಇಲ್ಲವೆಂದರೆ, **ಕೈಂಕರ್ಯಾದಿಗಳಿಗೆ ಮಾತ್ರ**

**ಸಾಂಖ್ಯಾದಿಗಳ್ ಶೊಲ್ಲುಮಾಪ್ಪೋಲೆ ಸ್ವರೂಪತ್ತಿಲ್ ಕರ್ತೃತ್ವ ಮಿಲ್ಲಾಮೈಯಾಲೇ ಉಪಾಸನಾದಿಗಳ್ ಸ್ವರೂಪ ವಿರುದ್ಧಙ್ಗಳೆನ್ರು ಶೊಲ್ಲುವು ವೊಣ್ಣಾದು.**

---

ಕರ್ತೃತ್ವವು ಹೇಗೆ? ಶ್ರುತಿಯಲ್ಲಿ ಕರ್ತೃತ್ವ, ಜ್ಞಾತೃತ್ವ, ಭೋಕ್ತೃತ್ವಾದಿಗಳುಂಟೆಂದು ಹೇಳುತ್ತಿದೆಯಲ್ಲಾ? ಬ್ರಹ್ಮಸೂತ್ರಗಳು ಈಶ್ವರಾಯತ್ತ ಕರ್ತೃತ್ವ ಉಂಟೆಂದು ಹೇಳುತ್ತದೆಯಲ್ಲಾ? ೨. ಆತ್ಮಾವಿಗೆ ಕರ್ತೃತ್ವವಿಲ್ಲವೆಂದರೆ, ಅದು ಸತ್ತಾಯುಕ್ತವಾದುದಲ್ಲವೆಂದು ಹೇಳಿದಂತಾಯಿತು. ಸತ್ತಾಯುಕ್ತ ವಸ್ತುವಿನ ಲಕ್ಷಣವು ಅರ್ಥಕ್ರಿಯಾಕಾರಿತ್ವವು. ಇದೇ ಇಲ್ಲವೆಂದು ಹೇಳಿದಂತಾಗುವದರಿಂದ ಆತ್ಮಾವಿಗೆ ತುಚ್ಛತ್ವವು ಏರ್ಪಟ್ಟಿತು. ೩. ಆತ್ಮಾವಿಗೆ ಕರ್ತೃತ್ವವಿಲ್ಲವು, ಪ್ರಕೃತಿಯ ಹತ್ತಿರವಿರುತ್ತದೆ, ಪ್ರಕೃತಿಯೇ ಕೆಲಸ ಮಾಡುತ್ತದೆ ಎಂದು ಹೇಳಿದಂತಾಯಿತು; ಆಗ ಆತ್ಮಾವಿಗೆ ಭೋಕ್ತೃತ್ವವಿಲ್ಲವೆಂದು ಹೇಳಬೇಕಾಗುತ್ತದೆ. ಈ ಸಂಸಾರವೆಲ್ಲಾ ಏನು ಎಂದರೆ ಮಿಥ್ಯೆ ಎಂದು ಅದ್ವೈತಿಯು ಹೇಳಿದಂತೆ ಹೇಳಬೇಕಾಗುತ್ತದೆ. ಸಂಸಾರ ಸುಳ್ಳಾದರೆ ಮೋಕ್ಷಕ್ಕಾಗಿ ಏಕೆ ಪ್ರಯತ್ನವು? ಮೋಕ್ಷ ಶಾಸ್ತ್ರವೆಲ್ಲಾ ಆಗ ಬೇಕಾಗಿಲ್ಲವು. ಇಂತಹ ದೂಷಣಗಳುಂಟಾಗುತ್ತವೆ ಎಂಬ ತಾತ್ಪರ್ಯವು.

ಹೀಗೆ ದೂಷಣೆಗಳನ್ನು ಹೇಳಿ, ನಿಗಮನ ರೂಪದಲ್ಲಿ ವಾಕ್ಯ ಪೂರಣ ಮಾಡಿ ಹೇಳುತ್ತಾರೆ. ಹೀಗೆ ದೂಷಣೆಗಳುಂಟಾಗುವದರಿಂದ, **ಸಾಂಖ್ಯಾದಿಗಳ್ ಶೊಲ್ಲುಮಾಪ್ಪೋಲೆ** - ಸಾಂಖ್ಯಾದಿಗಳು ಹೇಳುವಹಾಗೆ, ಅವರುಗಳು ಹೇಳುವದೇನೆಂದರೆ ಆತ್ಮಾ ಪ್ರಕೃತಿಯ ಹತ್ತಿರ ಸುಮ್ಮನೆ ಕಲ್ಲಿನ ಹಾಗೆ ನಿರ್ವ್ಯಾಪಾರ ಉಳ್ಳದ್ದಾಗಿರುತ್ತದೆ, ಕಾರ್ಯ ಮಾಡುವದೆಲ್ಲಾ ಪ್ರಕೃತಿಯೋ, ದೇಹವೋ ಎಂಬದಾಗಿ, **ಸ್ವರೂಪತ್ತಿಲ್** - ಆತ್ಮನ ಸ್ವರೂಪದಲ್ಲಿ ಕರ್ತೃತ್ವವಿಲ್ಲದಿರುವದರಿಂದ, **ಉಪಾಸನಾದಿಗಳು** ಸ್ವರೂಪ ವಿರುದ್ಧಗಳೆಂದು, **ಶೊಲ್ಲುವುಮ್ ವೊಣ್ಣಾದು**- ಹೇಳಲು ಸಾಧ್ಯವಿಲ್ಲವು.

ಹೀಗೆ ಆತ್ಮನಿಗೆ ಕರ್ತೃತ್ವವಿರುವದರಿಂದ ಕರ್ತೃತ್ವವಿಲ್ಲವೆಂಬ ಪೂರ್ವಪಕ್ಷವನ್ನು ಖಂಡಿಸಿ ಉಪಾಯಾನುಷ್ಠಾನವು ಆತ್ಮಸ್ವರೂಪಕ್ಕೆ ಅಸಂಭಾವಿತವಾಗಿ ವಿರುದ್ಧವಲ್ಲವೆಂದು ಸ್ಥಾಪಿಸಿದರು. ಆದರೆ ಪೂರ್ವ ಪಕ್ಷಿಯು ಭಾರತ ಶಾಂತಿಪರ್ವ ಶ್ಲೋಕವನ್ನು ಉದಾಹರಿಸಿ, ಅಲ್ಲಿ ಆತ್ಮಾ ಏನೊಂದೂ ಪ್ರಯತ್ನ ಮಾಡದಿದ್ದರೂ ಈತನಿಗೇ ಐಶ್ವರ್ಯವು ಪ್ರಾಪ್ತವಾಗಬಹುದೆಂದು ಹೇಳಿದೆಯಲ್ಲಾ ಅದಕ್ಕೆ ಸಮಾಧಾನ ಹೇಗೆ ಎಂದರೆ ಅದನ್ನು ತಿಳಿಸುತ್ತಾರೆ.

(೧) "ಅಚೇಷ್ಟಮಾನ ಮಾಸೀನಮ್ ಶ್ರೀಃ ಕಂಚಿದುಪತಿಷ್ಠತಿ ।
ಕರ್ಮೀ ಕರ್ಮಾನು ಸೃತ್ಯಾನ್ಯೋ ನಪ್ರಾಪ್ಯಮಧಿಗಚ್ಛತಿ॥" ಎನ್ರದುವುಮ್, ಶಾಸ್ತ್ರಚೋದಿತೋಪಾಯಙ್ಗಳಿನುಡೈಯ ನೈರರ್ಥಕ್ಯಮ್ ಶೊನ್ನಪಡಿಯನ್ರು; ಪೂರ್ವಾನುಷ್ಠಿತ ಕರ್ಮವಿಶೇಷಙ್ಗಳಿನುಡೈಯ ಫಲ ವಿಶೇಷಮ್ ಶೊನ್ನಪಡಿಯತ್ತನೈ.

---

(೧) **ಅಚೇಷ್ಟಮಾನಂ** – ಏನೊಂದೂ ಪ್ರಯತ್ನ ಕ್ರಿಯೆ ಯಾವುದೂ ಇಲ್ಲದಿರುವ, **ಆಸೀನಂ** – ಸುಮ್ಮನೇ ಕುಳಿತಿರುವವನನ್ನು, **ಶ್ರೀಃ** – ಸಂಪತ್ತು, ಐಶ್ವರ್ಯವು, **ಕಂಚಿತ್** - ಜಾತಿ ಕುಲ ಗುಣ ಯಾವುದೂ ಇಲ್ಲದ ಯಾವನೋ ಒಬ್ಬನನ್ನು, **ಉಪತಿಷ್ಠತಿ** - ಬಂದು ಎದುರಿಗೆ ನಿಲ್ಲುತ್ತದೆ, ಅಭಿಮುಖವಾಗಿ ಬರುತ್ತದೆಂಬ ತಾತ್ಪರ್ಯವು; **ಕರ್ಮೀ** - ಕರ್ಮಗಳನ್ನು ಶ್ರದ್ಧೆಯಿಂದ ಶಾಸ್ತ್ರಚೋದಿತ ಮಾರ್ಗದಲ್ಲಿ ಮಾಡುತ್ತಿರುವ, **ಅನ್ಯಃ**-ಇನ್ನೊಬ್ಬ ಧಾರ್ಮಿಕನು, **ಕರ್ಮಾನುಸೃತ್ಯ** - ಆತನು ಮಾಡಿದ ಕರ್ಮಗಳಿಗೆ ಅನುಗುಣವಾಗಿ, **ಪ್ರಾಪ್ಯಂ**-ಅನುಭವಿಸುವ ಫಲವನ್ನು **ನಾಧಿಗಚ್ಛತಿ** - ಹೊಂದುವದಿಲ್ಲವು, ಹಿಂದೆ ಮಾಡಿದ ಸುಕೃತವಿಶೇಷ ಮಹಿಮೆಯಿಂದ ಒಬ್ಬನಿಗೆ ವಿಶೇಷ ಪ್ರಯತ್ನಗಳು ಯಾವುದೂ ಇಲ್ಲದೆ ಪಿತ್ರಾರ್ಜಿತ ಪಿತಾಮಹಾರ್ಜಿತ ಭ್ರಾತೃ ಸುಹೃತ್ತುಗಳು ಸಂಪಾದಿಸಿದ ಅಥವಾ ಇನ್ನು ಯಾವುದೋ ಕಾರಣಮೂಲಕ ಸರ್ವೇಶ್ವರ ಸಙ್ಕಲ್ಪರೀತ್ಯಾ ಧನವು ಲಭಿಸಬಹುದು. ಇನ್ನೊಬ್ಬನಿಗೆ ಅಂತಹ ಸುಕೃತವಿಶೇಷ ಸ್ವಾಮಿಸಙ್ಕಲ್ಪಾದಿಗಳಿಲ್ಲ ವಾದುದರಿಂದ ಎಷ್ಟು ಪ್ರಯತ್ನಪಟ್ಟರೂ ತನ್ನಿಷ್ಟವು ಲಭಿಸದೆ ಹೋಗುತ್ತದೆ ಎಂಬ ತಾತ್ಪರ್ಯವು; ಈ ಶ್ಲೋಕಕ್ಕೆ ಪೂರ್ವಪಕ್ಷಿಗಳು **ಅಚೇಷ್ಟಮಾನ ಮಾಸೀನಂ** ಎಂದಿರುವದರಿಂದ ನಿರ್ವ್ಯಾಪಾರತ್ವವು ಇಲ್ಲಿ ಹೇಳಲಟ್ಟಿತು ; ಹಾಗೆಯೇ ಭಕ್ತ್ಯಾದಿ ಉಪಾಯಾನುಷ್ಠಾನಗಳಿಲ್ಲದೇ ಇದ್ದರೂ ಸರ್ವೇಶ್ವರನು ನಮ್ಮ ಕೋರಿಕೆಯನ್ನು ಸಫಲಮಾಡುವನು ಎಂದು ಅಭಿಪ್ರಾಯಪಡಬಹುದೆಂದು ಭಾವಿಸಿ, ಇದು ನಿರ್ವ್ಯಾಪಾರವನ್ನು ಬೋಧಿಸಲು ಹೊರಟ ಶ್ಲೋಕವಲ್ಲವು, ಹಿಂದೆ ಮಾಡಿದ ಸುಕೃತ ವಿಶೇಷದ ಫಲನಿರ್ದೇಶಕ್ಕಾಗಿ ಹೇಳಿದ ಶ್ಲೋಕವೆಂದು ಸಮಾಧಾನವನ್ನು ಹೇಳುತ್ತಾರೆ. **ಎನ್ರದುವುಮ್** - ಎಂಬ ಶ್ಲೋಕಾಭಿಪ್ರಾಯವು, **ಶಾಸ್ತ್ರಚೋದಿತೋಪಾಯಙ್ಗಳಿನುಡೈಯ** - ಶಾಸ್ತ್ರದಲ್ಲಿ ವಿಧಿಸಿದ ಉಪಾಯಗಳ, **ನೈರರ್ಥಕ್ಯಮ್** - ಅನುಪಯೋಗವನ್ನು **ಶೊನ್ನಪಡಿಯನ್ರು** - ಹೇಳಿದಹಾಗಲ್ಲವು;

---

(೧) ಭಾರತ. ಶಾಂತಿ ೩೩೯-೧೩

## (೩) ಅನರ್ಥಾವಹತ್ವರೂಪೇನ ಸ್ವರೂಪ ವಿರುದ್ಧಮಿತಿವಾದ ನಿರಾಸಃ

**ಮೋಕ್ಷಪ್ರತಿಕೂಲಙ್ಗಳಾನ ರಾಗಾದ್ಯುಪಾಧಿಗಳಡಿಯಾಗ ವನ್ದ ಕಾಮ್ಯ ನಿಷಿದ್ಧಙ್ಗಳ್ ಪೋಲೆ ಬಾಧಕಙ್ಗಳಲ್ಲಾಮೈಯಾಲುಮ್, ಮೋಕ್ಷಾರ್ಥಿ ತನಕ್ಕೇ ವಿಧಿಕ್ಕೈಯಾಲುಮ್, ಉಪಾಸನಾದಿಗಳುಕ್ಕು ಶಾಸ್ತ್ರಮುಖತ್ತಾಲೆ ಅನರ್ಥಾವಹತ್ವ ರೂಪನಾನ ಸ್ವರೂಪ ವಿರೋಧಮ್ ಶೊಲ್ಲವೊಣ್ಣಾದು.**

---

ಹಾಗಾದರೆ ಅವರ ಅಭಿಪ್ರಾಯವಾದರೋ, **ಪೂರ್ವಾನುಷ್ಠಿತ** - ಹಿಂದಿನ ಜನ್ಮಗಳಲ್ಲಿ ಮಾಡಿದ, **ಕರ್ಮವಿಶೇಷಙ್ಗಳನುಡೈಯ** - ಸುಕೃತ ವಿಶೇಷಗಳು ಈಗ ಪ್ರಾರಬ್ಧ ಕರ್ಮರೂಪದಲ್ಲಿರುವುದರ, **ಫಲವಿಶೇಷಮ್** - ಫಲವಿಶೇಷವನ್ನು, **ಶೊನ್ನಪಡಿಯತ್ತನೈ** - ಹೇಳಿದುದು, ಇಷ್ಟುಮಾತ್ರವೇ ಎಂಬ ಭಾವವು. ಒಂದು ಫಲಕ್ಕಾಗಿ ಶಾಸ್ತ್ರವಿಧ್ಯನುಸಾರವಾಗಿ ಅನುಷ್ಠಿಸದೆ ನಿರ್ವ್ಯಾಪಾರತ್ವವಿದ್ದರೂ ಫಲವು ದೈವ ಸಹಾಯದಿಂದ ಸಿದ್ಧಿಸುತ್ತದೆ ಎಂಬರ್ಥವಲ್ಲವು. ಪೂರ್ವಾರ್ಜಿತ ಸುಕೃತ ದುಷ್ಕೃತ ತಾರತಮ್ಯಾನುಸಾರವಾಗಿ ಒಬ್ಬನಿಗೆ ತುಂಬಾ ಶ್ರಮವಿಲ್ಲದೇನೆ ಲಭಿಸುತ್ತದೆ; ಇನ್ನೊಬ್ಬನಿಗೆ ಎಷ್ಟು ಶ್ರಮಪಟ್ಟರೂ ಲಭಿಸುವದಿಲ್ಲವೆಂಬುದು ತಾತ್ಪರ್ಯವು

## (೨) ಅನರ್ಥಾವಹವಾಗಿ ಸ್ವರೂಪವಿರುದ್ಧವೆಂಬ ವಾದದ ನಿರಸನವು.

ಮುಂದೆ ಮೂರನೆಯ ವಿಕಲ್ಪವನ್ನು ಖಂಡಿಸುತ್ತಾರೆ. ಉಪಾಸನಾದಿಗಳು ಅನರ್ಥವನ್ನುಂಟು ಮಾಡುವುವು; ಹೇಗೆಂದರೆ ಈ ಉಪಾಯಗಳ ಮೂಲಕ ಮೋಕ್ಷಪ್ರಾಪ್ತಿಯನ್ನು ಸಾಧಿಸಿಕೊಳ್ಳುವೆನು ಎಂಬ ಅಹಂಕಾರವನ್ನುಂಟುಮಾಡಿ ಈ ಉಪಾಸನಾದಿಗಳು ಅನರ್ಥವನ್ನುಂಟುಮಾಡುವುವು; ಆದುದರಿಂದ ಸ್ವರೂಪ ವಿರುದ್ಧವೆಂದು ಅವರುಗಳಭಿಪ್ರಾಯವು. ಮೂರು ಕಾರಣಗಳನ್ನು ಹೇಳಿ ಈ ಅಭಿಪ್ರಾಯವನ್ನು ಖಂಡಿಸುತ್ತಾರೆ

(೧) **ಮೋಕ್ಷಪ್ರತಿಕೂಲಙ್ಗಳಾನ** ಮೋಕ್ಷವಿರುದ್ಧವಾದ, **ರಾಗಾದ್ಯುಪಾಧಿಗಳಾಲೇ ವನ್ದ ಕಾಮ್ಯ ನಿಷಿದ್ಧಙ್ಗಳ್ ಪೋಲೆ**-ಕಾಮನೆಯೇ ಮೊದಲಾದ ಉಪಾಧಿಗಳ ಮೂಲಕವಾಗಿ ಆಚರಿಸುವ ಕಾಮ್ಯಕರ್ಮಗಳ ಮತ್ತು ನಿಷಿದ್ಧ ಕರ್ಮಗಳಹಾಗೆ, **ಬಂಧಕಙ್ಗಳಲ್ಲಾಮೈಯಾಲುಮ್** - ಪುನಃಪುನಃ ಸಂಸಾರ ಬಂಧವನ್ನುಂಟುಮಾಡತಕ್ಕವು ಈ ಭಕ್ತ್ಯಾದಿ ಉಪಾಯಗಳಲ್ಲವಾದುದರಿಂದಲೂ,

(೨) **ಮೋಕ್ಷಾರ್ಥಿತನಕ್ಕೇ** - ಮೋಕ್ಷಾರ್ಥಿಗೇನೇ, **ವಿಧಿಕ್ಕೈಯಾಲುಮ್**- ಈ ಉಪಾಸನಾದಿ ಉಪಾಯಗಳನ್ನನುಷ್ಠಿಸಬೇಕೆಂದು ಶಾಸ್ತ್ರವು ವಿಧಿಸಿರುವದರಿಂದಲೂ, (೩) **ಉಪಾಸನಾದಿಗಳಿಗೆ, ಶಾಸ್ತ್ರಮುಖತ್ತಾಲೆ**-ಶಾಸ್ತ್ರಮೂಲಕವಾಗಿ, **ಅನರ್ಥಾವಹತ್ವರೂಪಮಾನ**-ಅನರ್ಥವನ್ನುಂಟುಮಾಡುತ್ತವೆ ಎಂದು ಕಂಠೋಕ್ತ ಪ್ರಮಾಣವಿಲ್ಲದುದರಿಂದ, ಅವು ಅನರ್ಥವನ್ನುಂಟುಮಾಡುವ ಸ್ವರೂಪ ವಿರೋಧವುಳ್ಳವು ಎಂಬ ದೋಷವನ್ನು, **ಶೊಲ್ಲವೊಣ್ಣಾದು** - ಹೇಳಲು ಸಾಧ್ಯವಿಲ್ಲವು. ಸ್ವಾಮಿಪಿಳ್ಳೈ **ಲೋಕಾಚಾರ್ಯರವರು** ಈ **ಉಪಾಸನಾದಿಗಳು ಜ್ಞಾನಿ**ಗಳಿಗೆ " ಅಪಾಯ " ವೆಂದೂ, " ಭಯಾವಹ"ವೆಂದೂ, " ಶೋಕ ಜನಕ" ವೆಂದೂ, " ಅಹಂಕಾರ ಮಿಶ್ರ " ವೆಂದೂ ಹೀಗೆ ಅನರ್ಥಗಳನ್ನುಂಟುಮಾಡುವವೆಂದು ಹೇಳಿದ್ದರು. ಅಂತಹ ಅನರ್ಥಗಳನ್ನೇನೂ ಈ ಉಪಾಯಗಳು ಉಂಟುಮಾಡಲಾರವೆಂದು ಹೇಳುತ್ತಾರೆ ಏಕೆಂದರೆ (೧) ಐಹಿಕಾಭಿಲಾಷೆಗೋಸ್ಕರ ಮಾಡುವ ಕಾಮ್ಯ ನಿಷಿದ್ಧ ಕರ್ಮಗಳ ಹಾಗೆ ಇವು ಬಂಧಕಗಳಲ್ಲವು; ಬಂಧಕಗಳಾದವರಲ್ಲವೇ ಅಪಾಯವೆಂದೂ ಭಯಾವಹವೆಂದೂ ಶೋಕ ಜನಕವೆಂದೂ ಅಹಂಕಾರ ಮಿಶ್ರವೆಂದೂ ಹೇಳಬಹುದು. ಹಾಗೆ ಬಂಧಕಗಳಲ್ಲವಲ್ಲಾ ಎಂಬ ಭಾವವು. (೨) ಇವುಗಳನ್ನು ಮೋಕ್ಷಾರ್ಥಿಯು ಉಪಾಸಿಸತಕ್ಕದ್ದೆಂದು **ತಜ್ಜಲಾನಿತಿ ಶಾಂತಮುಪಾಸೀತ** (ಛಾಂ ೩. ೧೪. ೧) **"ಬ್ರಹ್ಮವಿತ್ ಬ್ರಹ್ಮೈವ ಭವತಿ"**(      ) **"ಬ್ರಹ್ಮವಿದಾಪ್ನೋತಿ ಪರಂ"** (ತೈ ಆ ೧. ೮ ) **"ತಮೇವಂ ವಿದ್ವಾನ್ ಅಮೃತ ಇಹ ಭವತಿ"** (ಪುರುಷಸೂಕ್ತ) **"ತಂ ವಿದ್ಯಾ ಚ್ಛುಕ್ರ ಮಮೃತಂ"** (ಕಠ. ೨ ೬ ೧೭) **"ಯ ಏತಂ ವಿದು ರಮೃತಾಸ್ತೇ ಭವಂತಿ"** (ತೈ ಆರ) **"ತದಾ ವಿದ್ವಾನ್ ಪುಣ್ಯಪಾಪೇ ವಿಧೂಯನಿರಂಜನಃ ಪರಮಂ ಸಾಮ್ಯಮುಪೈತಿ"** (ಮುಂ.೩ ೧ ೩.) ಇಂತಹ ಅನೇಕ ಶ್ರುತಿಗಳಲ್ಲೆಲ್ಲಾ ಹೇಳಿರುವದರಿಂದಲೂ, ಉಪಾಸನವು ಉಪಾದೇಯವು ಹಾಗೆಯೇ ಗೀತೆಯಲ್ಲೂ **"ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ"** (ಗೀ ೯. ೧೪) **"ಅನನ್ಯಾಶ್ಚಿಂತಯಂತೋ ಮಾಂ ಯೇಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ"** (ಗೀ. ೯ ೨೨) **"ಯೇಮಾಂ ನಿತ್ಯಯುಕ್ತಾ ಉಪಾಸತೇ ತೇ ಪ್ರಾಪ್ನುವಂತಿ ಮಾಮೇವ"** (ಗೀ. ೧೨. ೨, ೪) **ಯೇಧ್ಯಾಯಂತ ಉಪಾಸತೇ ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರ ಸಾಗರಾತ್,"** (ಗೀ. ೧೨ ೬ ) ಹೀಗೆ ಅನೇಕ ಪ್ರಮಾಣಗಳಿರುವದರಿಂದ, ಉಪಾಸನಾದಿಗಳು ಅಪಾಯವೂ, ಅನರ್ಥಾವಹವೂ ಎಂದು ಹೇಳುವದು ಹೇಗೆ ಸಾಧ್ಯವೋ ತಿಳಿಯದು.

**ಆಗ್ಗೈಯಾಲ್ ಆತ್ಮಸ್ವರೂಪತ್ತೈಪ್ಪತ್ತ ಉಪಾಸನಾದಿಗಳುಕ್ಕು ನಾಶಕತ್ವಾ ಸಂಭಾವಿತತ್ವಾ ನರ್ಥಾವಹತ್ವಙ್ಗಳಿಲ್ಲಾವ್ಯೈಯಾಲೇ ಯೊರುಪಡಿಯಾಲುವುಮ್ ಸ್ವರೂಪ ವಿರೋಧ ಪ್ರಸಙ್ಗಮಿಲ್ಲೈ.**

---

(೩) ಇದು ಅನರ್ಥಾವಹವೆಂದು ಶಾಸ್ತ್ರಗಳಲ್ಲಿ ಎಲ್ಲೂ ಹೇಳಿಲ್ಲವು ಆದರೆ ಹೇಳಿರುವದು "**ನಾನ್ಯಃಪಂಥಾ ವಿದ್ಯತೇ ಅಯನಾಯ**" ಇಂತಹ ಉಪಾಯಾನುಷ್ಠಾನವಿಲ್ಲದೆ ಪ್ರಾಪ್ಯವನ್ನು ಹೊಂದಲು ಬೇರೆ ಮಾರ್ಗವೇ ಇಲ್ಲವು. ಇದನ್ನೆಲ್ಲಾ ಮನಸ್ಸಿನಲ್ಲಿಟ್ಟೇ ಹಿಂದೆ "**ಪ್ರಪನ್ನಾದನ್ಯೇಷಾಂ ನದಿಶತಿ ಮುಕುಂದೋ ನಿಜಪದಂ**" ಎಂದು ಸ್ವಾಮಿ ದೇಶಿಕರವರು ಉಪಾಯಾನುಷ್ಠಾನವಾಗದವರಿಗೆ ಮುಕ್ತಿಯೇ ಇಲ್ಲವೆಂದು ಹಿಂದೆಯೇ ಉಪದೇಶಿಸಿರುತ್ತಾರೆ.

ಮುಂದಿನ ವಾಕ್ಯದಿಂದ ಮೇಲೆ ಉಪಪಾದಿಸಿದುದನ್ನೆಲ್ಲಾ ಸಙ್ಗ್ರಹಿಸಿ ನಿಗಮನಮಾಡಿ, **ಆಗ್ಗೈಯಾಲ್ ಆತ್ಮಸ್ವರೂಪತ್ತೈ** ಎಂಬ ವಾಕ್ಯಮೂಲಕ ಹೇಳುತ್ತಾರೆ **ಆಗ್ಗೈಯಾಲ್** - ಆಕಾರಣದಿಂದ, ಯಾವಕಾರಣದಿಂದೆಂಬುದನ್ನು ತಾವೇ ಮುಂದೆ ವ್ಯಕ್ತಪಡಿಸುತ್ತಾರೆ; ಉಪಾಸನಾದಿಗಳಿಗೆ, **ಆತ್ಮಸ್ವರೂಪತ್ತೈಪತ್ತ** - ಜೀವಾತ್ಮ ಸ್ವರೂಪವನ್ನು ಕುರಿತು, ನಾಶಕತ್ವವೇನು, ಅಸಂಭಾವಿತತ್ವವೇನು, ಅನರ್ಥಾವಹತ್ವವೇನು, ಇತರರು ಹೇಳುವ ಈ ಮೂರು ದೋಷಗಳೂ, **ಇಲ್ಲಾವ್ಯೈಯಾಲೇ** - ಇಲ್ಲವಾದುದರಿಂದ, **ಒರುಪಡಿಯಾಲುವುಮ್** - ಯಾವ ಕಾರಣದಿಂದಲೂ, **ಸ್ವರೂಪ ವಿರೋಧ ಪ್ರಸಙ್ಗಮಿಲ್ಲೈ** - ಆತ್ಮಸ್ವರೂಪಕ್ಕೆ ವಿರೋಧವಾದುವು ಉಪಾಸನಾದಿಗಳು ಎಂಬ ವಾದಕ್ಕೆ ಅವಕಾಶವೇ ಇಲ್ಲವು.

**ಭಕ್ತ್ಯಾದಿಗಳು ವರ್ಣಾಶ್ರಮ ನಿಬಂಧನೆಯುಳ್ಳವಾದುದರಿಂದ ಅಹಂಕಾರ ಗರ್ಭವೆಂಬ ವಾದದ ನಿರಸನವು.**

---

ಮೊದಲು ಪೂರ್ವ ಪಕ್ಷವನ್ನುಪಪಾದಿಸಿ, ಅದನ್ನು ಖಂಡಿಸುತ್ತಾರೆ **ಆನಾಲುವುಮ್** - ಒಂದುವೇಳೆ ನಾಶಕತ್ವ, ಅಸಂಭಾವಿತತ್ವ, ಅನರ್ಥಾವಹತ್ವ ದೋಷಗಳಿಂದ ಆತ್ಮಸ್ವರೂಪಕ್ಕೆ ವಿರುದ್ಧವಲ್ಲವೆಂದು ಈಗ ಉಪಪಾದಿಸಿದುದನ್ನು ಒಪ್ಪಿದರೂ ಕೂಡ, ಇನ್ನೊಂದು ಪೂರ್ವಪಕ್ಷವು ತಪ್ಪಿದ್ದಲ್ಲವೆಂಬುದು ಪೂರ್ವಪಕ್ಷಿಯ ಅಭಿಪ್ರಾಯವಾಗಿ, **ಆನಾಲುವುಮ್** ಎಂದು ಅರ್ಧಾಂಗೀಕಾರದಿಂದ ಹೇಳುವ ಮಾತಾಗಿರುತ್ತದೆ; **ಆತ್ಮಾ** - ಈ ಜೀವಾತ್ಮನು, **ದೇಹಾದಿವಿಲಕ್ಷಣನಾಗೈಯಾಲೇ** - ದೇಹವೇ ಮೊದಲಾದವುಗಳಿಂತಲೂ ವಿಲಕ್ಷಣನಾದುದರಿಂದ, ಇಲ್ಲಿ

## (೩) ಭಕ್ತ್ಯಾದೇಃ ವರ್ಣಾಶ್ರಮ ನಿಬಂಧನತ್ವಾದಹಂಕಾರ ಮಿಶ್ರತ್ವ ಮಿತಿವಾದ ನಿರಾಸಃ

**ಆನಾಲುಮ್ ಆತ್ಮಾ ದೇಹಾದಿವಿಲಕ್ಷಣನಾಗೈಯಾಲೇ ಸ್ವರೂಪತ್ತಿಲ್ ವರ್ಣಾಶ್ರಮಾದಿಗಳಿಲ್ಲೈಯೆನ್ರು ತೆಳಿನ್ದವನುಕ್ಕು "ಬ್ರಾಹ್ಮಣೋಽಹಂ, ಕ್ಷತ್ರಿಯೋಽಹಂ" ಎನ್ರಿರುಪ್ಪೋಲೆ ವರುಮ್ ಅಭಿಮಾನಙ್ಗಳಡಿಯಾಗ ವರ್ಣಾಶ್ರಮಾದಿ ಧರ್ಮಙ್ಗಳುಮ್ ಅವತ್ತೋಡೆ ತುವಕ್ಕುಣ್ಡಾನ ಉಪಾಯಾನ್ತರಙ್ಗಳುಮ್ ಅನುಷ್ಠೇಯಙ್ಗಳಲ್ಲಾಮೈಯಾಲೇ ಇವ್ವರ್ಣಾಶ್ರಮಾದಿ ನಿಬಂಧನಙ್ಗಳಾನ ಧರ್ಮಙ್ಗಳ್ ಸ್ವರೂಪವಿರುದ್ಧಙ್ಗಳೆನ್ಗೈಕ್ಕು ಕುರೈಯೆನ್ನೆನ್ನಿಲ್. ಇದುವುಮ್ ಅನುಪಪನ್ನಮ್ ಎಙ್ಗನೇ ಎನ್ನಿಲ್,**

---

ಅನಂತರ "**ದೇಹೇನ್ದ್ರಿಯಮನಃಪ್ರಾಣಧೀಭ್ಯೋಽನ್ಯೋಽನನ್ಯಸಾಧನಃ**" ಎಂಬ ಶ್ರೀ ಯಾಮುನೇಯರ ಶ್ರೀಸೂಕ್ತಿಯನ್ನನುಸರಿಸಿ, ಇಂದ್ರಿಯ, ಮನಸ್ಸು, ಪ್ರಾಣ ಬುದ್ಧಿ, ಇವುಗಳಿಗಿಂತಲೂ ಆತ್ಮ ವಿಲಕ್ಷಣನು ಎಂಬ ಭಾವವು. **ಸ್ವರೂಪತ್ತಿಲ್** - ಆತ್ಮನ ಸ್ವರೂಪದಲ್ಲಿ ಎಂದರೆ ಆತ್ಮತ್ವಾದಿಗಳಲ್ಲಿ, **ವರ್ಣಾಶ್ರಮಾದಿಗಳಿಲ್ಲೈಯೆನ್ರು** - ವರ್ಣಾಶ್ರಮಾದಿ ಭೇದಗಳಿಲ್ಲ ಎಂದು, **ತೆಳಿನ್ದವನುಕ್ಕು** - ಜ್ಞಾನವನ್ನು ಹೊಂದಿದವನಿಗೆ, "**ಬ್ರಾಹ್ಮಣೋಽಹಂ ಕ್ಷತ್ರಿಯೋಽಹಂ**"- ನಾನು ಬ್ರಾಹ್ಮಣನು, ನಾನು ಕ್ಷತ್ರಿಯನು, **ಎನ್ರಿರುಪ್ಪೋಲೇ ವರುಮ್** – ಎಂದು ಹೇಳುವಹಾಗೆ ಉಂಟಾಗುವ, **ಅಭಿಮಾನಙ್ಗಳಡಿಯಾಗ**-ಅಹಂಭಾವದ ಮೂಲಕವಾಗಿ. **ವರ್ಣಾಶ್ರಮಾದಿ ಧರ್ಮ**ಗಳೂ, **ಅವತ್ತೋಡೆ ತುವಕ್ಕುಣ್ಡಾನ** – ಅವುಗಳೊಂದಿಗೆ ಸಂಬಂಧಿಸಿಕೊಂಡಿರುವ, **ಉಪಾಯಾಂತರಙ್ಗಳುಮ್** – ಭಕ್ತ್ಯಾದಿ ಉಪಾಸನಗಳೂ ಕೂಡ, **ಅನುಷ್ಠೇಯಙ್ಗಳಲ್ಲಾಮೈಯಾಲೇ** – ಅನುಷ್ಠಿಸತಕ್ಕವುಗಳಲ್ಲವಾದುದರಿಂದ, **ಇವ್ವರ್ಣಾಶ್ರಮಾದಿ ನಿಬಂಧನಙ್ಗಳಾನ ಧರ್ಮಙ್ಗಳ್** - ಈ ವರ್ಣಾಶ್ರಮವೇ ಮೊದಲಾದವುಗಳನ್ನು ವಿಧಿಸುವ ಧರ್ಮಗಳು, **ಸ್ವರೂಪವಿರುದ್ಧಙ್ಗಳ್** - ಆತ್ಮಸ್ವರೂಪಕ್ಕೆ ವಿರುದ್ಧವಾದವು, **ಎನ್ಗೈಕ್ಕು ಕುರೈಯೆನ್ನೆನ್ನಿಲ್** - ಎಂದು ಹೇಳಲು ಏನೂ ಕಷ್ಟ ಯಿಲ್ಲವು, ಎಂದರೆ ಧಾರಾಳವಾಗಿ ಹೇಳಬಹುದು ಎಂದು ಆಕ್ಷೇಪ ತಂದರೆ, **ಇದುವುಮ್ ಅನುಪಪನ್ನಮ್** - ಇದೂ ಕೂಡ ಸಮಂಜಸವಲ್ಲವು ಏತಕ್ಕೆಂದರೆ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ ಆಕ್ಷೇಪವೇನೆಂದರೆ ಈ ಆತ್ಮನು ದೇಹ, ಇಂದ್ರಿಯ,

**ಸ್ವರೂಪತ್ತಿಲ್ ಬ್ರಾಹ್ಮಣತ್ವಾದಿಗಳಿಲ್ಲೈ ಯೆನ್ರು ತೆಳಿನ್ದಾನೇ ಯಾಗಿಲುಮ್ ಕರ್ಮವಿಶೇಷಙ್ಗಳಡಿಯಾಗ ಬ್ರಾಹ್ಮಣತ್ವಾದಿ ವಿಶಿಷ್ಟಮಾನ ಶರೀರತ್ತೋಡೆ ಸಂಬದ್ಧನಾಯಿರುಕ್ಕೈಯಾಲೇ ಅಶ್ಶರೀರ ಸಂಬಂಧ ಮಡಿಯಾಗ ವರುಗಿರ ಕ್ಷುತ್ಪಿಪಾಸಾದಿಗಳುಕ್ಕು ಪರಿಹಾರಮ್ ಪಣ್ಣು**

---

ಮನಸ್ಸು, ಪ್ರಾಣ, ಬುದ್ಧಿಗಳಿಗಿಂತ ವಿಲಕ್ಷಣನು. ಅಣುಸ್ವರೂಪನು ಮತ್ತು ಜ್ಞಾನಸ್ವರೂಪನು. ವರ್ಣಾಶ್ರಮ ಧರ್ಮಗಳೆಲ್ಲಾ ದೇಹಕ್ಕೆ ಸೇರಿದವೇ ವಿನಾ ಆತ್ಮನಿಗಲ್ಲವು. ಈಗ ಬ್ರಾಹ್ಮಣ ಯೋನಿಯಲ್ಲಿ ಜನಿಸಿದ್ದರೆ ಬ್ರಾಹ್ಮಣ ವರ್ಣಾಶ್ರಮಕ್ಕೆ ಅಧಿಕಾರಿಯು. ಈ ದೇಹವು ನಾಶವಾಗಿಹೋಗಿ ಶೂದ್ರಜನ್ಮವು ಪ್ರಾಪ್ತವಾದರೆ, ಆಗ ಶೂದ್ರ ಧರ್ಮಗಳಿಗೆ ಈತನು ಅಧಿಕಾರಿಯಾಗುತ್ತಾನೆ ಪಶು ವೃಕ್ಷಗಳಾಗಿ ಹುಟ್ಟಿದರೆ ಆಗ ವರ್ಣಾಶ್ರಮ ಧರ್ಮಗಳಿಗೆ ಅಧಿಕಾರಿಯೇ ಆಗುವ ದಿಲ್ಲವು. ಆದುದರಿಂದ ವರ್ಣಾಶ್ರಮಧರ್ಮಗಳು ಆತ್ಮನ ಸ್ವರೂಪಕ್ಕೆ ಸಂಬಂಧಿಸಿದಲ್ಲವು. ದೇಹಕ್ಕೇ ಸಂಬಂಧಿಸಿದವು. ನಾನು ಬ್ರಾಹ್ಮಣ, ನಾನು ಕ್ಷತ್ರಿಯನೆಂದು ಹೇಳಿಕೊಳ್ಳುವದರಿಂದ ಅಹಂಕಾರವು ಉತ್ಪನ್ನವಾಗಿರುವದು ವ್ಯಕ್ತವು ಇಂತಹ ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಮಾತ್ರನೇ ಅನುಷ್ಠಿಸುವ ಉಪಾಯವಾಗಿರುವದರಿಂದ ಉಪಾಸನವೂ ಕೂಡ ಅಹಂಕಾರ ಗರ್ಭಿತವು. ಆದುದರಿಂದ ಬ್ರಾಹ್ಮಣಾದಿಗಳುಮಾತ್ರವೇ ಅನುಷ್ಠಿಸುವ ವರ್ಣಾಶ್ರಮ ಕರ್ಮಗಳು, ಉಪಾಸನಾದಿ ಉಪಾಯಗಳೂ ಸಹ ಅನುಪಾದೇಯಗಳು. ಇದೀಗ ಪೂರ್ವಪಕ್ಷವು ಈ ಪೂರ್ವಪಕ್ಷವೂ ಅನುಪಪನ್ನವು, ಅಸಮಂಜಸವಾದುದು, ಶಾಸ್ತ್ರಸಮ್ಮತವಲ್ಲದ ಪೂರ್ವ ಪಕ್ಷವೆಂಬ ತಾತ್ಪರ್ಯವು ಎಙ್ಗನೇ ಯೆನ್ನಿಲ್ - ಹೇಗೆ ಎಂದರೆ, ಸ್ವರೂಪತ್ತಿಲ್ ಬ್ರಾಹ್ಮಣತ್ವಾದಿಗಳಿಲ್ಲೈ ಯೆನ್ರು ತೆಳಿನ್ದಾನೇ ಯಾಗಿಲುಮ್ - ಆತ್ಮಸ್ವರೂಪದಲ್ಲಿ ಬ್ರಾಹ್ಮಣತ್ವಾದಿಗಳಿಲ್ಲವೆಂದು ತಿಳಿದಿದ್ದರೂ ಕೂಡ, ಕರ್ಮವಿಶೇಷಙ್ಗಳಡಿಯಾಗ - ಪ್ರಾರಬ್ಧ ಕರ್ಮದ ಮೂಲಕವಾಗಿ, ಬ್ರಾಹ್ಮಣತ್ವಾದಿ ವಿಶಿಷ್ಟಮಾನ ಶರೀರತ್ತೋಡೆ ಸಂಬದ್ಧನಾಯಿರುಕ್ಕೈಯಾಲೇ - ಬ್ರಾಹ್ಮಣತ್ವಾದಿಗಳೊಂದಿಗೆ ಸೇರಿದ ಶರೀರದಿಂದ ಬದ್ಧನಾಗಿರುವದರಿಂದ ಎಂದರೆ ಬ್ರಾಹ್ಮಣ ಕ್ಷತ್ರಿಯಾದಿ ಯೋನಿಯಲ್ಲಿ ಜನಿಸಿರುವದರಿಂದ ಎಂಬ ಭಾವವು ಅಶ್ಶರೀರ ಮಡಿಯಾಗ - ಆ ಪ್ರಾಪ್ತವಾಗಿರುವ ಶರೀರ ಮೂಲಕವಾಗಿ, ವರುಗಿರ - ಉಂಟಾಗುವ, ಕ್ಷುತ್ಪಿಪಾಸಾದಿಗಳುಕ್ಕು - ಹಸಿವು, ಬಾಯಾರಿಕೆ, ಆದಿಶಬ್ದದಿಂದ ಉಚ್ಛ್ವಾಸ, ನಿಶ್ವಾಸ, ಸ್ನಾನ, ವಸ್ತ್ರ

**ಗಿರ ಕಣಕ್ಕಿಲೇ, ಅಶರೀರರ್ ವಿಡುಮಳವುಮ್ ಅವ್ವೋ ವರ್ಣಾಶ್ರಮಾದಿಗಳುಕ್ಕುಮ್ ತತ್ ಶಕ್ತಿಕ್ಕುಮ್ ಅನುರೂಪಮಾಗ ಅನಿಷ್ಟ ನಿವೃತ್ತೀಷ್ಟಪ್ರಾಪ್ತಿಗಳೈಪ್ಪತ್ತ ಶಾಸ್ತ್ರಙ್ಗಳ್ ವಿಧಿತ್ತ ಧರ್ಮಙ್ಗಳೈ ವಿಡವೊ**

ಧಾರಣಾದಿಗಳು ಹೇಳಲ್ಪಟ್ಟವು, **ಪರಿಹಾರಮ್ ಪಣ್ಣು ಗಿರ ಕಣಕ್ಕಿಲೇ**-ಪರಿಹಾರ ಮಾಡಿಕೊಳ್ಳುವ ನ್ಯಾಯರೀತ್ಯಾ ಭೋಜನ, ಉದಕಪಾನಾದಿಗಳಿಂದ, **ಅಶರೀರರ ವಿಡಮಳವುಮ್**-ಆ ಶರೀರವನ್ನು ಬಿಡುವವರೆಗೂ, **ಅವ್ವೋ ವರ್ಣಾಶ್ರಮಾದಿಗಳುಕ್ಕುಮ್**-ಆಯಾ ವರ್ಣಾಶ್ರಮಾದಿಗಳಿಗೂ, **ತತ್ ಶಕ್ತಿಕ್ಕುಮ್**-ತನ್ನ ಶಕ್ತಿಗೂ, **ಅನುರೂಪಮಾಗ** - ಅನುರೂಪವಾಗಿ, **ಅನಿಷ್ಟನಿವೃತ್ತೀಷ್ಟಪ್ರಾಪ್ತಿಗಳೈಪ್ಪತ್ತ**-ಅಪರಾಧಗಳ ಪರಿಹಾರ ಮತ್ತು ಪುರುಷಾರ್ಥಗಳ ಪ್ರಾಪ್ತಿಗಳನ್ನು ಕುರಿತು, ಶಾಸ್ತ್ರಗಳು ವಿಧಿಸಿದ ಧರ್ಮಗಳನ್ನು, **ವಿಡವೊಣ್ಣಾದು** - ಬಿಡತಕ್ಕದ್ದಲ್ಲವು ಪೂರ್ವ ಪಕ್ಷಿಗಳು ಹೇಳಿದಹಾಗೆ ಬ್ರಾಹ್ಮಣತ್ವಾದಿಗಳು ಶರೀರಕ್ಕೆ ಸಂಬಂಧಿಸಿದವೇ ವಿನಾ ಆತ್ಮಸ್ವರೂಪಕ್ಕೆ ಅಲ್ಲವೆಂಬುದೇನೋ ಎಲ್ಲರೂ ಅಂಗೀಕರಿಸತಕ್ಕದ್ದೇ ಸರಿ. ಆದರೆ ಆತ್ಮನಿಗೆ ಈ ಶರೀರ ಸಂಬಂಧ ಬಂದಿರುವದರಿಂದ ಆ ಶರೀರವು ಕಳೆದು ಹೋಗುವವರೆಗೂ ಬ್ರಾಹ್ಮಣತ್ವಾದಿ ವರ್ಣಾಶ್ರಮಗಳನ್ನು ಶಾಸ್ತ್ರದಲ್ಲಿ ಹೇಳಿರುವಹಾಗೆ ನಡಿಸಿಯೇ ತೀರಬೇಕು, ಬಿಟ್ಟದ್ದಲ್ಲವು ಎಲ್ಲಾ ಶಾಸ್ತ್ರವಿಹಿತವಾದ ಧರ್ಮಗಳನ್ನು ನಡೆಸಲು ಶಕ್ತಿಯಿಲ್ಲದಿದ್ದರೂ, ತನ್ನ ವರ್ಣಾಶ್ರಮೋಚಿತ ಕರ್ಮಗಳನ್ನು ಯಥಾಶಕ್ತ್ಯ ನಡೆಸಬೇಕೆಂಬ ತಾತ್ಪರ್ಯವು. ಸ್ವರೂಪದಲ್ಲಿ ಬ್ರಾಹ್ಮಣತ್ವಾದಿಗಳಿಲ್ಲವು; ಆದುದರಿಂದ ಆಯಾ ವರ್ಣಾಶ್ರಮಗಳು ಬೇಕಿಲ್ಲವು ಎಂಬ ವಾದವನ್ನು ತಂದರೆ, ಕ್ಷುತ್ಪಿಪಾಸೆಗಳು ಆತ್ಮಸ್ವರೂಪಕ್ಕೆ ಸಂಬಂಧಿಸದೇ ಇರುವಾಗ, ಅವುಗಳ ಉಪಶಮನಕ್ಕಾಗಿ ಆಹಾರ ಸೇವನೆ ಜಲಪಾನಾದಿಗಳು ತಾನೇ ಏತಕ್ಕೆ ? ವಸ್ತ್ರಧಾರಣೆತಾನೇ ಏತಕ್ಕೆ ? ಇತ್ಯಾದಿ ಪ್ರತಿಬಂದಿ ತರ್ಕಗಳು ತಪ್ಪಿದಲ್ಲವು. ಆದುದರಿಂದ ಉಪಾಯಾನುಷ್ಠಾನವು ಬ್ರಾಹ್ಮಣಾದಿ ವರ್ಣಾಶ್ರಮಗಳಿಗೆ ಹೇಗೆ ಶಾಸ್ತ್ರವು ವಿಧಿಸಿರುತ್ತದೋ, ಆ ಪ್ರಕಾರವಾಗಿಯೇ ನಡೆಸಲೇ ಬೇಕೆಂಬ ತಾತ್ಪರ್ಯವು ಪ್ರಮಾಣಾನುಸಾರ ನಡೆಯಬೇಕಾದ ಸಂದರ್ಭಗಳಲ್ಲಿ ಬರೀ ವಾದಗಳನ್ನು ತಂದು ಆ ಪ್ರಮಾಣಗಳನ್ನು ನಿರಾಕರಿಸೋಣವು ಯುಕ್ತವಲ್ಲವೆಂದು ಹಿಂದೆಯೇ ತಿಳಿಸಿರುತ್ತಾರೆ. "ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂದು ಹೇಳಿರುವ ಹಾಗೆ, ಆಯಾ ವರ್ಣಾಶ್ರಮಾದಿಗಳನುಗುಣವಾಗಿ ಪುರುಷಾರ್ಥಸಾಧನಕ್ಕಾಗಿ ಶಾಸ್ತ್ರವಿಹಿತೋಪಾಯಾನುಷ್ಠಾನವನ್ನು ಉಜ್ಜೀವನೇ

**ಣ್ಣಾದು. ಅಗ್ಗೈಯಾಲ್ ಇದ್ದರ್ಮಙ್ಗಳ್ಳೈ ದೇಹಾತ್ಮ ವಿವೇಕ ಮುಡಿಯಾಗ ಸ್ವರೂಪ ವಿರುದ್ಧಙ್ಗಳಾಕ್ಕಿ ಇವತ್ತುಕ್ಕು ತ್ಯಾಜ್ಯತ್ವೈ ಶೊಲ್ಲವೊಣ್ಣಾದು,**

**ದೇಹಾತ್ಮ ವಿವೇಕ ಮುಡೈಯವನುಕ್ಕೇ ಪಾರಲೌಕಿಕ ಭೋಗ ಸಾಧನಮಾನ ಧರ್ಮತ್ತಿಲ್ ಅಧಿಕಾರಮಾಗ್ಗೈಯಾಲ್, ಇದ್ದರ್ಮಙ್ಗಳುಡೈಯ**

---

ಬೇಕೆಂಬುದು ಸ್ಥಾಪಿತವು. ಇದನ್ನೇ ಮುಂದಿನ ವಾಕ್ಯಗಳಿಂದ ನಿಗಮನಮಾಡಿ ಹೇಳುತ್ತಾರೆ. **ಅಗ್ಗೈಯಾಲ್** - ತನಗೆ ಪ್ರಾರಬ್ಧ ಕರ್ಮಾನುಗುಣವಾಗಿ ಪ್ರಾಪ್ತವಾದ ಶರೀರ ಸಂಬಂಧಕ್ಕೆ ಶಾಸ್ತ್ರದಲ್ಲಿ ವಿಹಿತವಾದ ಧರ್ಮಗಳು ಅವಶ್ಯಾನುಷ್ಠೇಯಗಳಾದುದರಿಂದ, **ಇದ್ದರ್ಮಙ್ಗಳ್ಳೈ** - ಈ ಬ್ರಾಹ್ಮಣ ಕ್ಷತ್ರಿಯಾದಿ ವರ್ಣಾಶ್ರಮಿಗಳಿಗೆ ವಿಧಿಸಿರುವ ಧರ್ಮಗಳನ್ನು. **ದೇಹಾತ್ಮವಿವೇಕ ಮುಡಿಯಾಗ** - ಇವು ದೇಹಕ್ಕೆ ಸಂಬಂಧಿಸಿದವು, ತನ್ನ ಆತ್ಮಾವಿಗಲ್ಲವು, ಎಂಬ ತಿಳುವಳಿಕೆಯು ಮೂಲಕವಾಗಿ, **ಇವತ್ತುಕ್ಕು** - ಈ ಶಾಸ್ತ್ರದಲ್ಲಿ ವಿಧಿಸಿರುವ ಕರ್ಮಗಳಾದ ನಿತ್ಯ ನೈಮಿತ್ತಿಕ ವರ್ಣಾಶ್ರಮ ಧರ್ಮಗಳಿಗೂ ಅವುಗಳಿಗೆ ಸಂಬಂಧಿಸಿದ ಉಪಾಸನೆಗಳಿಗೂ, **ತ್ಯಾಜ್ಯತ್ವೈಶೊಲ್ಲವೊಣ್ಣಾದು** - ಪರಿತ್ಯಾಗವನ್ನು ಹೇಳುವದು ಯುಕ್ತವಲ್ಲವು. ಆದರೆ ಶಾಸ್ತ್ರಗಳಲ್ಲಿ ತ್ರೈವರ್ಣಿಕರಿಗೆ ಉಪಾಸನವು ವಿಹಿತವಾಗಿದೆಯಲ್ಲಾ, ಅದಕ್ಕೆ ಹಾಗಾದರೆ ಅಧಿಕಾರಿಗಳು ಯಾರೆಂಬ ಪ್ರಶ್ನೆಗೆ ಪೂರ್ವಪಕ್ಷಿಗಳು ಹೇಳಿರುವದೇನೆಂದರೆ, ದೇಹಾತ್ಮಭ್ರಮೆಯಿಲ್ಲದೆ ದೇಹಾತ್ಮ ವಿವೇಕವನ್ನು ಚನ್ನಾಗಿ ತಿಳಿದವರಿಗೆ ಈ ಧರ್ಮಗಳು ಯಾವ್ರವೂ ಬೇಕಾಗಿಲ್ಲವು; ಆತ್ಮಸ್ವರೂಪದಲ್ಲೇ ಬ್ರಾಹ್ಮಣ್ಯಾದಿ ಭ್ರಮೆ ಇರುವವರಿಗ ಈ ಭಕ್ತಿಮಾರ್ಗವು ಎಂದು ಹೇಳಿರುತ್ತಾರೆ. "**ಪ್ರಾಪಕಾನ್ತರಮ್ ಅಜ್ಞರ್ಕ್ಕು ಉಪಾಯಮ್, ಜ್ಞಾನಿಗಳುಕ್ಕು ಅಪಾಯಮ್**" ಎಂಬುದು ಅವರಗಳ ಅಭಿಪ್ರಾಯವು ಇದು ಸರಿಯಲ್ಲವೆಂದು ಮುಂದಿನ ವಾಕ್ಯಗಳಿಂದ ತೋರಿಸುತ್ತಾರೆ ಉಪಾಸನದಲ್ಲಿಯಾರಿಗೆ ಅಧಿಕಾರವೆಂಬುದನ್ನು ಪ್ರಥಮತಃ ಚರ್ಚಿಸುತ್ತಾರೆ ದೇಹಾತ್ಮ ವಿವೇಕವುಳ್ಳ ಜ್ಞಾನಿಗೇ ಅಧಿಕಾರವೇವಿನಾ, ಭ್ರಮವುಳ್ಳ ಅಜ್ಞಾನಿಗೆ ಅಧಿಕಾರವಿಲ್ಲವೆಂದು ಹೇಳುತ್ತಾರೆ.

**ದೇಹಾತ್ಮವಿವೇಕ ಮುಡೈಯುನನುಕ್ಕೇ** - ಆತ್ಮಾದೇಹಕ್ಕಿಂತ ವಿಲಕ್ಷಣನೆಂಬ ಆತ್ಮನ ಯಥಾರ್ಥಸ್ವರೂಪವನ್ನು ಚನ್ನಾಗಿ ವಿವೇಕಿಸಿ ತಿಳಿದ ಜ್ಞಾನಿಗೇನೇ, (ಇಲ್ಲಿ ತ್ರೈವರ್ಣಿಕರೇ ಹೇಳಲ್ಪಟ್ಟರು, ಏಕೆಂದರೆ ಶೂದ್ರಾದಿಗಳಿಗೆ ಉಪಾಸನದಲ್ಲಿ ಅಧಿಕಾರವಿಲ್ಲವಾದುದರಿಂದ,) **ಪಾರಲೌಕಿಕ ಭೋಗಸಾಧನ**

**ಅನುಷ್ಠಾನತ್ತುಕ್ಕು ಸ್ವರೂಪತ್ತಿಲ್ ಬ್ರಾಹ್ಮಣ್ಯಾದಿ ಭ್ರಮುಮ್ ಅಧಿಕಾರ ಮನ್ರು; ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರ ಸಂಬಂಧಮೇ ಅಧಿಕಾರಮ್. ಆಗೈಯಾಲ್ ಸರ್ವ ಧರ್ಮಾನುಷ್ಠಾನತ್ತುಕ್ಕುಮ್ ಉಪಯುಕ್ತಮಾನ ಪ್ರಕೃತ್ಯಾತ್ಮ ವಿವೇಕ ಮುಡೆಯರಾಗ ಉಪಾಸನಾದಿಗಳುಕ್ಕು ವಿರೋಧಮ್ ಕಣ್ಡಿಲೋಮ್**

---

**ಮಾನ ಧರ್ಮತ್ತಿಲ್** - ಸ್ವರ್ಗಾದಿ ಭೋಗಗಳೇನು ದಿವ್ಯ ವೈಕುಂಠಲೋಕದ ಪರಿಪೂರ್ಣ ಬ್ರಹ್ಮಾನುಭವರೂಪಭೋಗವೇನು, ಇವುಗಳಿಗ ಸಾಧನರೂಪವಾದ ನಿತ್ಯನೈಮಿತ್ತಿಕಗಳೊಂದಿಗೆ ಸೇರಿದ ಉಪಾಸನಧರ್ಮದಲ್ಲಿ, **ಅಧಿಕಾರ ಮಾಗೈಯಾಲ್** - ಅಧಿಕಾರವಾಗವದರಿಂದ, ಇದ್ಧರ್ಮಜ್ಞಳುಡೈಯ **ಅನುಷ್ಠಾನತ್ತುಕ್ಕು** - ಈ ಧರ್ಮಗಳ ಅನುಷ್ಠಾನಕ್ಕೆ, **ಸ್ವರೂಪತ್ತಿಲ್ ಬ್ರಾಹ್ಮಣ್ಯಾದಿ ಭ್ರಮುಮ್ ಅಧಿಕಾರಮನ್ರು** - ಆತ್ಮಸ್ವರೂಪಕ್ಕೇ ಬ್ರಾಹ್ಮಣ್ಯಾದಿ ಸೇರಿದವು ಎಂಬ ಭ್ರಮವೇ ಅಧಿಕಾರವನ್ನುಂಟುಮಾಡಲು ಕಾರಣವಲ್ಲವು; ಎಂದರೆ ತಾನು ಬ್ರಾಹ್ಮಣನು, ತಾನು ಕ್ಷತ್ರಿಯನು, ಈ ಬ್ರಾಹ್ಮಣ್ಯಾದಿಗಳು ತನ್ನ ಸ್ವರೂಪಕ್ಕೆಸೇರಿದವು ಎಂದು ಯಾರಿಗೆ ಭ್ರಮೆಯುಂಟೋ ಅವನೀಗ ಅಧಿಕಾರಿಯೆಂದುಹೇಳಲು ಸಾಧ್ಯವಿಲ್ಲವು. ಅಧಿಕಾರಿಯಾರು ಎಂದರೆ ದೇಹಾತ್ಮವಿವೇಕವಿದ್ದು ತಾನು ದೇಹಕ್ಕಿಂತ ವಿಲಕ್ಷಣನೆಂಬ ಜ್ಞಾನವಿದ್ದವನು ತಾನು ಪರಲೋಕಸಂಬಂಧವಾದ ಪುರುಷಾರ್ಥವನ್ನು ಹೊಂದಲು ತನಗೆ ಪ್ರಾರಬ್ಧಾನುಗುಣವಾಗಿ ಪ್ರಾಪ್ತವಾದ ಶರೀರವುಳ್ಳ ತನಗೆ ಶಾಸ್ತ್ರದಲ್ಲಿ ಏನು ವಿಧಿಸಲ್ಪಟ್ಟಿರುತ್ತದೆಂದು ತಿಳಿದು ಅನುಷ್ಠಿಸತಕ್ಕದ್ದಾಗಿರುತ್ತದೆ. ಆದ ದರಿಂದ ದೇಹಾತ್ಮ ವಿವೇಕಜ್ಞಾನಯುಕ್ತನೇ ಅಧಿಕಾರಿಯೇ ವಿನಾ, ಭ್ರಮೆಯುಳ್ಳ ಅಜ್ಞನಲ್ಲವೆಂಬ ಭಾವವು. ಈಗ ತಾವು ಸ್ಥಾಪಿಸಿದ ಅಭಿಪ್ರಾಯವನ್ನು ನಿಗಮನಮಾಡಿ **ಆಗೈಯಾಲ್** ಎಂಬ ಮುಂದಿನ ವಾಕ್ಯದಿಂದ ಹೇಳುತ್ತಾರೆ **ಆಗೈಯಾಲ್** – ಹೀಗೆ ದೇಹಾತ್ಮ ವಿವೇಕವುಳ್ಳವನೇ ಈ ಉಪಾಸನಕ್ಕೆ ಅಧಿಕಾರಿಯಾದುದರಿಂದ, **ಸರ್ವಧರ್ಮಾನುಷ್ಠಾನತ್ತುಕ್ಕುಮ್** – ನಿತ್ಯನೈಮಿತ್ತಿಕಾದಿಗಳಿಂದ ಕೂಡಿದ ಕರ್ಮಯೋಗಾದಿ ಅಂಗಗಳಿಂದ ಸೇರಿದ ಉಪಾಸನಾದಿ ಧರ್ಮಗಳ ಅನುಷ್ಠಾನಕ್ಕೂ, **ಉಪಯುಕ್ತಮಾನ** - ಬೇಕಾದ ಅಥವಾ ಉಪಯೋಗವಾದ, **ಪ್ರಕೃತ್ಯಾತ್ಮವಿವೇಕಂ** - ದೇಹಕ್ಕೂ ಆತ್ಮಾವಿಗೂ ಇರುವ ವೈಲಕ್ಷಣ್ಯದಜ್ಞಾನವು, ತನ್ಮೂಲಕವಾಗಿ, ಉಪಾಸನಾದಿಗಳುಕ್ಕು, **ವಿರೋಧಮ್**- ವಿರೋಧವನ್ನು ಹೇಳಿರುವದು, **ಕಣ್ಡಿಲೋಮ್** - ಎಲ್ಲಿಯೂ ಕಣ್ಡಿಲ್ಲವು. ಸ್ವಾಮಿ

## (೪) ಭಕ್ತಿಯೋಗೋಽಹಂಕಾರ ಗರ್ಭತ್ವಾತ್ ಸ್ವರೂಪ ವಿರುದ್ಧ ಇತಿವಾದಸ್ಯ ನಿರಾಸಃ

**ಉಪಾಸನಾದಿಗಳ್ ಅಹಂಕಾರಾದಿ ಗರ್ಭಙ್ಗಳೆನ್ರು ಮಿಡಾ ಶಾಸ್ತ್ರ ಮಿಶ್ಶೈಯರಾದಿರುಕ್ಕಚ್ಚೆಯ್ದೇ ಆರೋಪಿತ್ತಾರ್ಗಳತ್ತನೈ-**

---

ದೇಶಿಕರವರು ನೋಡದೇ ಇರದ ಗ್ರಂಥವಿಲ್ಲವು, ೧೦೧ ವರುಷಗಳು ಜೀವಿಸಿದವರಾಗಿ, ಸದಾ ಗ್ರಂಥಾವಲೋಕನ ಮತ್ತು ಗ್ರಂಥರಚನಾ ಇವುಗಳಲ್ಲೇ ಕಾಲವನ್ನು ಕಳೆದರು. ದೇಹಾತ್ಮ ಭ್ರಾಂತಿಯಿಲ್ಲದೆ ವಿವೇಕ ಜ್ಞಾನ ಉಂಟಾದವನಿಗೆ ಉಪಾಸನವು ಮೋಕ್ಷೋಪಾಯವಾಗಿ ಕೂಡದೆಂಬದಕ್ಕೆ ಪ್ರಮಾಣವನ್ನು ತಾವು ಎಲ್ಲೂ ಕಾಣಲಿಲ್ಲವೆಂದು ಹೇಳುತ್ತಾರೆ

## ಭಕ್ತಿಯೋಗವು ಅಹಂಕಾರ ಗರ್ಭವಾದುದರಿಂದ ಸ್ವರೂಪ ವಿರುದ್ಧವೆಂಬ ವಾದದ ಖಂಡನವು

**ಉಪಾಸನಾದಿಗಳ್** - ಉಪಾಸನವೇ ಮೊದಲಾದವುಗಳು, ಇಲ್ಲಿ ಆದಿಪದದಿಂದ ಭರನ್ಯಾಸವೂ, ಕರ್ಮಯೋಗಾದಿಗಳೂ ಹೇಳಲ್ಪಟ್ಟವು **ಅಹಂಕಾರಾದಿಗರ್ಭಙ್ಗಳೆನ್ರುಮಿಡಂ**-ಅಹಂಕಾರ ಮಮಕಾರಗಳಿಂದ ಕೂಡಿದವು ಎಂದು ಪೂರ್ವಪಕ್ಷವನ್ನು ತಂದಿರುವ ಸಂದರ್ಭದಲ್ಲಿ, **ಶಾಸ್ತ್ರಮಿಶ್ಶೈಯರಾದಿರುಕ್ಕಚ್ಚೆಯ್ದೇ**-ಶಾಸ್ತ್ರವನ್ನಙ್ಗೀಕರಿಸದೇ ಇರುವವರಾಗಿ, **ಆರೋಪಿತ್ತಾರ್ಗಳತ್ತನೈ** - ಉಪಾಸನೆಗೆ ಅಹಂಕಾರ ಮಮಕಾರಗಳನ್ನು ಆರೋಪಿಸಿದರು, ಇಷ್ಟೇ ವಿನಾ ಬೇರೆ ಇಲ್ಲನೆಂಬ ಭಾವವು ನಿತ್ಯನೈಮಿತ್ತಿಕಾದಿ ಕರ್ಮಗಳಲ್ಲೂ ಉಪಾಸನಾದಿಕರ್ಮಗಳಲ್ಲೂ, ಸಙ್ಕಲ್ಪವನ್ನು ಹೇಳುವಾಗ, **ಅಹಂಕರಿಷ್ಯೇ** ಎಂದು ಹೇಳುವದರಿಂದಲೂ, ಸರ್ವೇಶ್ವರನ ಕೃಪೆಯು ತನಗೆ ಉತ್ತಾರಕವೆಂಬ ಜ್ಞಾನವಿಲ್ಲದೆ, ಮೋಕ್ಷಪ್ರಾಪ್ತಿಯನ್ನು ಈ ಉಪಾಯದ ಮೂಲಕ ಸಾಧಿಸುವನೆಂದು ಹೇಳಿಕೊಳ್ಳುವದರಿಂದಲೂ, ಮತ್ತು ಕರ್ಮಗಳ ಪ್ರಥಮ ಪ್ರಯತ್ನದಲ್ಲಿ ಸರ್ವೇಶ್ವರನು ಕೊಟ್ಟ ಸ್ವಾತಂತ್ರ್ಯವನ್ನು ದುರುಪಯೋಗ ಮಾಡುವದರಿಂದ ಅಹಂಕಾರ ಮಮಕಾರ ಗರ್ಭಿತವೆಂದು ಭಾವಿಸಿ, **"ಮದಿರಾಬಿಂದು ಮಿಶ್ರಮಾನ ಶಾತಕುಂಭಮಯಕುಂಭಗತ ಸಲಿಲಂಪೋಲೆ ಅಹಂಕಾರ ಮಿಶ್ರಂ"** ಎಂದು ಶ್ರೀ ವಚನ ಭೂಷಣದಲ್ಲಿ ಹೇಳಿರುತ್ತಾರೆ ಈ ಉಪನ್ಯಾಸದಲ್ಲಿ "ಉಪಾಸನವು ತ್ಯಾಜ್ಯವು, ಅಹಂಕಾರಗರ್ಭವಾಗಿರುವದರಿಂದ" ಎಂದು ಅನುಮಾನಮಾಡಿದರೆ, ಉಪಾಸನನೆಂಬ ಪಕ್ಷದಲ್ಲಿ ಅಹಂಕಾರ

ಗರ್ಭತ್ವವೆಂಬ ಹೇತುವೇ ಇಲ್ಲವು; ಆದುದರಿಂದ ಹೇತ್ವಸಿದ್ಧಿದೋಷವುಂಟಾಗುತ್ತದೆ ಹೇಗೆಂದರೆ:... "**ಸ್ವಶೇಷ ಭೂತೇನ ಮಯಾಸ್ವೀಯೈಸ್ಸರ್ವ ಪರಿಚ್ಛದೈಃ। ವಿಧಾತುಂ ಪ್ರೀತಮಾತ್ಮಾನಂ ಶ್ರೀಮಾನ್ ಪ್ರಕ್ರಮತೇ ಸ್ವಯಂ**" ಎಂದು ಅಹಂಕಾರ ಮಮಕಾರ ತ್ಯಾಗಪೂರ್ವಕವಾಗಿ ತನ್ನ ಸರ್ವವ್ಯಾಪಾರಗಳೂ ಭಗವದಧೀನವೆಂಬ ಅನುಸಂಧಾನ ಪೂರ್ವಕವಾಗಿಯೂ ಉಪಾಸನ ಪ್ರಾರಂಭ ಮಾಡಬೇಕೆಂಬದಾಗಿ ಶಾಸ್ತ್ರವು ವಿಧಿಸಿರುವದರಿಂದ, ಹೇತುವೇ ಪಕ್ಷದಲ್ಲಿಲ್ಲದ ವಾದವೆಂಬಭಿಪ್ರಾಯವು ಶಾಸ್ತ್ರಜ್ಞಾನವಿರುವರಿಗಾದರೋ ಶೇಷತ್ವಜ್ಞಾನವೇನು, "**ಪರಾತ್ತು ತಚ್ಛ್ರುತೇಃ**" ಎಂದು ಬ್ರಹ್ಮಸೂತ್ರದಲ್ಲಿ ತೋರುವ ಪಾರತಂತ್ರ್ಯವೇನು, ಇವುಗಳ ಜ್ಞಾನವಿರುವದರಿಂದ, ಸ್ವತಂತ್ರಕರ್ತೃತ್ವರೂಪ ಅಹಂಕಾರ ಜ್ಞಾನವು ಸುತರಾಂ ಉಂಟಾಗುವದಿಲ್ಲವೆಂಬುದು ಮುಖ್ಯಾಭಿಪ್ರಾಯವು. "**ಉಪಾಸೀತ**" ಇತ್ಯಾದಿ ವಿಧಿಗಳು ಇರುವಾಗಲೂ, ಆ ಉಪಾಸನೆಗಳು ನಾನಾವಿಧ ಬ್ರಹ್ಮವಿದ್ಯೆಗಳಲ್ಲಿ ನಾನಾವಿಧವಾಗಿ ಶಾಸ್ತ್ರದಲ್ಲಿ ವಿಧಿಸಿರುವದರಿಂದಲೂ ಈ ವಿಧಿಗಳನ್ನೆಲ್ಲಾ ನಿರಾಕರಿಸಿ ಅಹಂಕಾರಗರ್ಭವೆಂದು ದೂಷಿಸುವದು, "**ಶಾಸ್ತ್ರಮಿಥ್ಯೆಯಾದಿರುಕ್ಕ**" ವಿಷಯವಾಗಿರುತ್ತದೆ. ಅನೇಕ ಮಹರ್ಷಿಗಳೇ ಮೊದಲಾದವರು ಈ ಉಪಾಸನೆಗೆ ತುಂಬಾ ಮಹಿಮೆಯನ್ನು ಹೇಳಿ, ತಾವೂ ಅನುಷ್ಠಿಸಿ, ತಮ್ಮ ಶಿಷ್ಯರುಗಳಿಗೂ ವಿಶದವಾಗಿ ಉಪದೇಶಿಸಿ ಇದ್ದರೂ, ಅದು ಅಹಂಕಾರ ಮಿಶ್ರನಾಗಿ ಸ್ವರೂಪ ವಿರುದ್ಧವೆಂಬುದು ಶಾಸ್ತ್ರವನ್ನಙ್ಗೀಕರಿಸದೇ ಹೇಳಿದಮಾತಾಗಿದೆ. ಶ್ರೀ ನಾರದ ಭಗವಾನ್ ರವರು ಪ್ರಹ್ಲಾದ ಧ್ರುವರುಗಳಿಗೂ, ಶ್ರೀ ಕಪಿಲಭಗವಾನ್‌ರವರು ತಮ್ಮ ತಾಯಿ ದೇವಹೂತಿಗೂ ಸಹ ಅಹಂಕಾರ ಗರ್ಭವಾದ ವಿಷಯವನ್ನು, ವಿವೇಕವಿಲ್ಲದೆ ಉಪದೇಶಿಸಿದರೆಂದು ಹೇಳಲು ಸಾಧ್ಯವೇ ? ಆದುದರಿಂದ ಶಾಸ್ತ್ರಾನುಗುಣವಾದ ವಾದವು ಉಪಾದೇಯವೇ ವಿನಾ, ಶಾಸ್ತ್ರವನ್ನು ದೂರೀಕರಿಸಿದ ವಾದವು ಸರಿಯಾದುದಲ್ಲವೆಂಬುದೂ ಈ ವಾಕ್ಯದಿಂದ ಗ್ರಹಿಸಬಹುದು. ಶಾಸ್ತ್ರಸಮ್ಮತವಾದುದು ಎಂದಿಗೂ ಸ್ವರೂಪ ವಿರುದ್ಧವಾಗಲಾರದು ಸ್ವರೂಪ ವಿರುದ್ಧವಲ್ಲದೆ ತನ್ನ ಸ್ವರೂಪಕ್ಕೆ ಮಹಿಮೆಯನ್ನುಂಟುಮಾಡುವದರಲ್ಲಿ ದೋಷವುಂಟೆಂದು ಹೇಳಿದುದನ್ನು ತಿಳಿಸುವದಕ್ಕಾಗಿಯೇ ಇಲ್ಲಿ ಆರೋಪಿತ್ತಾರ್‌ಗಳಿತ್ತನ್ನೈ ಎಂಬ ಪ್ರಯೋಗವು.

**ಭಕ್ತಿಯೋಗಕ್ಕೆ ಶರೀರೋಪಾಧಿಯ ಅಪೇಕ್ಷೆ ಇರುವದರಿಂದ ಸ್ವರೂಪ ವಿರುದ್ಧವೆಂಬ ವಾದದ ಖಂಡನವು.**

---

**ಕರ್ಮೋಪಾರ್ಜಿತಙ್ಗಳಾನ** - ಪ್ರಾರಬ್ಧಕರ್ಮದಿಂದ ಸಂಪಾದಿಸಲ್ಪಟ್ಟು ಪ್ರಾರಬ್ಧಕರ್ಮಾನುಭವಕ್ಕಾಗಿ ಉಂಟಾದ, **ಕರಣ ಕಳೇಬರಙ್ಗಳಾಗಿರ**

**ಭಕ್ತಿಯೋಗಃ ಔಪಾಧಿಕತ್ವೇನ ಸ್ವರೂಪವಿರುದ್ಧ ಇತಿವಾದಸ್ಯ ನಿರಾಸಃ.**

**ಕರ್ಮೋಪಾರ್ಜಿತಙ್ಗಳಾನ ಕರಣ ಕಳೇಬರಙ್ಗಳಾಗಿರ ಉಪಾಧಿಗಳೈಕ್ಕೊಂಡು ಅನುಷ್ಠಿಕ್ಕೈಯಾಲೆ ಕರ್ಮಯೋಗಾದಿಗಳ್ ನಿರುಪಾಧಿಕಸ್ವರೂಪ ವಿರುದ್ಧಙ್ಗಳಿನ್ನಾರ್ಕ್ಕು ಸ್ವರೂಪಜ್ಞಾನ ದ್ವಯಶ್ರವಣಾದಿಗಳುಮ್ ಮನಃ ಪ್ರಭೃತಿ ಸಾಪೇಕ್ಷಙ್ಗಳಾಗೈಯಾಲೇ ತುಲ್ಯದೋಷಙ್ಗಳಾಮ್.**

---

**ಉಪಾಧಿಗಳೈಕ್ಕೊಂಡು** - ಇಂದ್ರಿಯಗಳೂ ಶರೀರವೂ ಆಗಿರುವ ಉಪಾಧಿಗಳ ಮೂಲಕವಾಗಿ, **ಅನುಷ್ಠಿಕ್ಕೈಯಾಲೇ** - ಉಪಾಸನವನ್ನು ಅನುಷ್ಠಿಸಬೇಕಾಗಿರುವದರಿಂದ, **ಕರ್ಮಯೋಗಾದಿಗಳ್** - ಕರ್ಮಯೋಗವೇ ಮೊದಲಾದವುಗಳು, ಆದಿ ಪದದಿಂದ ಜ್ಞಾನಯೋಗ ಭಕ್ತಿಯೋಗಗಳೂ ಹೇಳಲ್ಪಟ್ಟವು, ಇವುಗಳಿಗೂ ಮನಸ್ಸು ಶರೀರಗಳು ಅಪೇಕ್ಷಿತವು **ನಿರುಪಾಧಿಕ ಸ್ವರೂಪ ವಿರುದ್ಧಙ್ಗಳ್** - ಉಪಾಧಿಗಳು ಯಾವವೂ ಇಲ್ಲದ ಆತ್ಮಸ್ವರೂಪಕ್ಕೆ ವಿರುದ್ಧವಾದವುಗಳು, **ಎನ್ನಾರ್ಕ್ಕು**-ಎಂದು ಪೂರ್ವಪಕ್ಷವಾದವನ್ನು ತರುವವರಿಗೆ, **ಸ್ವರೂಪ ಜ್ಞಾನ ದ್ವಯಶ್ರವಣಾದಿಗಳುಮ್** - ಆತ್ಮ ಸ್ವರೂಪದ ಯಥಾರ್ಥ ಜ್ಞಾನವೂ, ಗುರುಗಳ ಮೂಲಕ ಮಂತ್ರೋಪದೇಶ ರೂಪದಲ್ಲಿ ದ್ವಯಮಂತ್ರದ ಶ್ರವಣವೂ ಕೂಡ, **ಮನಃಪ್ರಭೃತಿ ಸಾಪೇಕ್ಷಙ್ಗಳಾಗೈಯಾಲೇ** - ಮನಸ್ಸೇ ಮೊದಲಾದ ಇಂದ್ರಿಯಗಳ ಅಪೇಕ್ಷೆ ಇರುವದರಿಂದ, ಗುರುಗಳಿಂದ ಉಪದೇಶಕ್ಕೆ ಶ್ರೋತ್ರಾದಿಗಳೂ ಬೇಕಾಗಿರುವದರಿಂದ ಎಂಬ ಭಾವವು. **ತುಲ್ಯದೋಷಙ್ಗಳಾಮ್** - ಪೂರ್ವಪಕ್ಷಿಗಳು ಆವಶ್ಯಕವೆಂದು ಹೇಳುವ ಉಪಾಯಗಳೂ ಕೂಡ ಸಮಾನ ದೋಷಯುಕ್ತವಾದವುಗಳೇ ಎಂದರೆ ಸೋಪಾಧಿಕ ಪ್ರವೃತ್ತಿಗಳೇ ಪೂರ್ವಪಕ್ಷಿಯು ಮುಖ್ಯವಾಗಿ ಕರ್ಮಯೋಗವನ್ನು ಇಲ್ಲಿ ತಂದಿರುವುದು ಅದಕ್ಕೆ ವಿಶೇಷವಾಗಿ ಕರಣ ಕಳೇಬರ ಸಾಪೇಕ್ಷವೆಂದು ತಿಳಿದು ಸೋಪಾಧಿಕವೆಂದು ಆಕ್ಷೇಪಿಸಿದರು. ಶರೀರೇಂದ್ರಿಯಗಳ ಸಹಾಯವನ್ನು ಅಪೇಕ್ಷಿಸುವದರಿಂದ ಸ್ವರೂಪವಿರುದ್ಧವು ಏಕೆಂದರೆ ಆತ್ಮಸ್ವರೂಪವು ನಿರುಪಾಧಿಕವು ಎಂದು ಪೂರ್ವಪಕ್ಷವನ್ನು ತಂದರೆ, ನೀವು ಆವಶ್ಯಕವೆಂದು ಹೇಳುವ ಪ್ರವೃತ್ತಿರೂಪವಾದ ಶೇಷತ್ವಜ್ಞಾನಕ್ಕೆ ಅತ್ಯಾವಶ್ಯಕವಾದ ಆತ್ಮಸ್ವರೂಪದ ಯಥಾರ್ಥಜ್ಞಾನ, ಮತ್ತು ದ್ವಯಮಂತ್ರೋಪದೇಶ ಇವುಗಳಿಗೆ ಕರಣ ಕಳೇಬರದ ಸಾಪೇಕ್ಷತ್ವ ವಿಲ್ಲವೋ ? ಇವುಗಳಿಲ್ಲದೆ ಅವುಗಳೂ ನಡೆಯದ ಬಳಿಕ ನೀವು ಆರೋಪಿಸಿದ ದೋಷವೇ ನಿಮಗೆ ಅಭಿಮತವಾದ ಪ್ರವೃತ್ತಿಗಳಲ್ಲೂ ಉಂಟು! ಎಂಬ ಭಾವವು ಯಾವ ಪ್ರವೃತ್ತಿಗಳಿಗೆಯಾಗಲಿ

(೬) ಭಕ್ತಿಯೋಗ ಶ್ರೇಷತ್ವ ಪಾರತಂತ್ರ್ಯರೂಪ ಸ್ವರೂಪ
ವಿರುದ್ಧ ಇತಿವಾದಸ್ಯ ನಿರಾಸಃ

ಆನಾಲುಮ್ ಶೇಷಭೂತನಾಗೈಯಾಲೇ ತನ್ನೈ ತಾನ್ ರಕ್ಷಿತ್ತು ಕ್ಕೊಳ್ಳ ಪ್ರಾಪ್ತನು ಮನ್ರಿಕ್ಕೇ ಅತ್ಯನ್ತ ಪರತನ್ತ್ರನಾಗೈಯಾಲೇ ತನ್ನೈ ತಾನ್ ರಕ್ಷಿತ್ತುಕ್ಕೊಳ್ಳ ಶಕ್ತನು ಮನ್ರಿಕ್ಕೇ ಇರುಕ್ಕಿರ ಇವನುಕ್ಕು ಸ್ವರಕ್ಷಣಾರ್ಥವಾಗ ಕರ್ತವ್ಯಮೆನ್ರೊರು ಉಪಾಯತ್ತೈ ವಿಧಿಕ್ಕೆಯುಮ್, ಅದಿನನಕ್ಕು ಸಾಧ್ಯವಾಯ್ ಸಾಧ್ಯೋಪಾಯಮೆನ್ರು ಪೇರ್

---

ಕರಣ ಕಳೇಬರಗಳಿಲ್ಲದೆ ಸಾಧ್ಯವೇ ಇಲ್ಲವೆಂಬ ಭಾವವೂ ತೋರಿಬರುತ್ತದೆ, ಹೇಗೆಂದರೆ, ಸರ್ವೇಶ್ವರನು ನಿರ್ಹೇತುಕ ಕೃಪಾಳುವಾದುದರಿಂದ ಶೇಷತ್ವಾನುಸಂಧಾನಪೂರ್ವಕವಾದ ಸ್ವಯತ್ನ ನಿವೃತ್ತ್ಯುಪಾಯಾನುಸಂಧಾನದಿಂದಲೇ ರಕ್ಷಿಸುವನು ಎಂದು ಹೇಳುವಾಗ, ಇವುಗಳು ತಾನೇ ಕರಣ ಕಳೇಬರಗಳ ಸಹಾಯವಿಲ್ಲದೆ ನಡಿಯುತ್ತವೆಯೋ? ಆದುದರಿಂದ ಇವೆಲ್ಲಾ ತುಲ್ಯದೋಷಯುಕ್ತಗಳೆಂಬ ಭಾವವು

ಭಕ್ತಿಯೋಗವು ತನ್ನ ಶೇಷತ್ವ ಪಾರತಂತ್ರ್ಯರೂಪ ಸ್ವರೂಪಕ್ಕೆ ವಿರುದ್ಧವೆಂಬ ವಾದದ ನಿರಾಕರಣವು.

ಆನಾಲುಮ್- ಎಂಬುದು ಅರ್ಧಾಂಗೀಕಾರವನ್ನು ತೋರಿಸುತ್ತದೆ, ನೀವು ಹಿಂದೆ ಹೇಳಿದುದನ್ನು ಅಙ್ಗೀಕರಿಸಿದರೂ, ಈ ಮುಂದೆ ಹೇಳುವ ಪೂರ್ವಪಕ್ಷಕ್ಕೆ ಏನು ಸಮಾಧಾನವನ್ನು ಹೇಳುವಿರಿ ಎಂಬ ಭಾವವು ತೋರಿಬರುತ್ತದೆ. ಪೂರ್ವಪಕ್ಷಿಗಳು ಪುನಃ ದೂಷಣೆಯನ್ನು ಉಪಪಾದಿಸುತ್ತಾರೆ:—ಆನಾಲುಮ್ - ಹಾಗೆ ಒಪ್ಪಿದರೂ, ಶೇಷಭೂತ ನಾಗೈಯಾಲೇ - ಈ ಆತ್ಮನು ಸರ್ವೇಶ್ವರನಿಗೆ ಶೇಷನಾದುದರಿಂದ ಎಂದರೆ, "ದಾಸಭೂತಾಸ್ಸ್ವತಸ್ಸರ್ವೇ" ಎಂದು ಹೇಳಿರುವ ಹಾಗೆ ದಾಸನಾದುದರಿಂದ, ತನ್ನೈ ತಾನ್ ರಕ್ಷಿತ್ತುಕ್ಕೊಳ್ಳಪ್ರಾಪ್ತನು ಮನ್ರಿಕ್ಕೇ - ಮತ್ತು ತನ್ನನ್ನು ತಾನೇ ರಕ್ಷಿಸಿಕೊಳ್ಳುವದಕ್ಕೆ ಯೋಗ್ಯತೆಯೂ ಇಲ್ಲದೆಯೂ, ಮತ್ತು ಅತ್ಯನ್ತ ಪರತನ್ತ್ರ ನಾಗೈಯಾಲೇ - ಸರ್ವೇಶ್ವರನಿಗೆ ಸಂಪೂರ್ಣವಾಗಿ ಅಧೀನನಾಗಿರುವದರಿಂದ, ತನ್ನೈತಾನ್ ರಕ್ಷಿತ್ತುಕ್ಕೊಳ್ಳ ಶಕ್ತನು ಮನ್ರಿಕ್ಕೇ - ತನ್ನನ್ನು ತಾನೇ ರಕ್ಷಿಸಿಕೊಳ್ಳಲು ಶಕ್ತಿಯೂ ಇಲ್ಲದೆಯೂ, ಇರುಕ್ಕಿರ ಇವನುಕ್ಕು - ಹೀಗಿರುವ ಈ ಚೇತನನಿಗೆ, ಸ್ವರಕ್ಷಣಾರ್ಥವಾಗ-ತನ್ನ ರಕ್ಷಣೆಗಾಗಿ, ಕರ್ತವ್ಯಮೆನ್ರು - ಮಾಡತಕ್ಕದ್ದೆಂದು, ಒರು ಉಪಾಯತ್ತೈ

**ಪೆರುಗಿರದೆನ್ರು ಶೊಲ್ಲುಗೈ ಯುಪಪನ್ನವೋ? ಆನ ಪಿನ್ಬು ಭಕ್ತಿಯೋಗಾದಿಗಳ್ ಶೇಷತ್ವಾನುರೂಪಙ್ಗಳಲ್ಲಾ ನ್ಮೈಯಾಲೇ ಸ್ವರೂಪತ್ತುಕ್ಕು ಅನಿಷ್ಟಾವಹಙ್ಗಳೆನ್ನುಮ್, ಅತ್ಯನ್ತ ಪಾರತನ್ತ್ರ್ಯ ವಿರುದ್ಧಙ್ಗಳಾಗೈಯಾಲೇ ಅಸಂಭಾವಿತಙ್ಗಳೆನ್ರುಮ್ ಶೊಲ್ಲವೊಣ್ಣಾದೋ? ಎನ್ನಿಲ್:—**

---

**ವಿಧಿಕ್ಕೈಯುಮ್** - ಉಪಾಸನಾದಿ ರೂಪವಾದ ಒಂದು ಉಪಾಯವನ್ನು ವಿಧಿಸೋಣವೂ, ಮತ್ತು **ಅದು** - ಆ ಕರ್ತವ್ಯವೆಂದು ಹೇಳುವ ಉಪಾಯವು, ಸಾಧ್ಯವಾಗಿ, ಸಾಧ್ಯೋಪಾಯವೆಂದು, **ಅದು ಪೇರ್ ಪೆರುಗಿರದೆನ್ರು** - ಅದು ಹೆಸರನ್ನು ಹೊಂದುತ್ತದೆ ಎಂದೂ, **ಶೊಲ್ಲುಗೈ** - ಹೇಳೋಣವು, **ಉಪಪನ್ನವೋ** - ಸಮಂಜಸವಾದುದೋ? ಇದು **ಪೂರ್ವ** ಪಕ್ಷಿಯ ಆಕ್ಷೇಪವು; ಈ ಚೇತನನು **ಶೇಷಭೂತನು**, ಅತ್ಯಂತ ಪರತಂತ್ರನು; ಶೇಷಭೂತನನ್ನು ಸರ್ವೇಶ್ವರನು **ತನ್ನಿಷ್ಟಾನುಸಾರ** ವಿನಿಯೋಗಿಸಿಕೊಳ್ಳಬಹುದು, ಆದುದರಿಂದ ಈ ಚೇತನನಿಗೆ **ತನ್ನನ್ನು ತಾನೇ** ರಕ್ಷಿಸಿಕೊಳ್ಳುವ ಯೋಗ್ಯತೆಯಿಲ್ಲವು; ಅತ್ಯಂತ ಪರತಂತ್ರನೆಂದರೆ ಸರ್ವೇಶ್ವರನು ಈತನನ್ನು ತನ್ನಿಷ್ಟಾನುಸಾರ ಆಜ್ಞಾಪಿಸಬಹುದು; ಹೀಗೆ ಚೇತನನು ಪರಾಧೀನನಾದುದರಿಂದ ಇಂತಹ ದೀನತ್ವ ಅಶಕ್ತಿಗಳಿರುವ ತನಗೆ ರಕ್ಷಣೋಪಯುಕ್ತನಾಗಿ ಈ ಅನರ್ಥನಿಗೆ ಸಾಧ್ಯನಾಗಿ ಒಂದುಪಾಯವು **ಉಂಟೆಂದೂ**, ಯಾವುದೂ ತನಗೆ ಸಾಧ್ಯವಿಲ್ಲವೆ ದುಸ್ಥಿತಿಯಲ್ಲಿರುವವನಿಗೆ ಅದು ಸಾಧ್ಯೋಪಾಯವೆಂದು ನಾಮಕರಣಮಾಡುವುದೂ, ಹಾಸ್ಯಾಸ್ಪದವಲ್ಲವೋ ಎಂಬ **ಭಾವವು**. ಯಾವುದು ಸಮಂಜಸವಲ್ಲವೋ ಅದು ಹಾಸ್ಯಾಸ್ಪದವೇ, ಎಂಬ **ತಾತ್ಪರ್ಯವು** ಮುಂದಿನ ವಾಕ್ಯದಲ್ಲಿ ಈ **ಪೂ**ರ್ವಪಕ್ಷಿಯು ಮೇಲಿನ ಕಾರಣಗಳಿಂದ ಎರಡು ದೋಷಗಳನ್ನು ಆಪಾದಿಸುತ್ತಾರೆ; ಹೇಗೆಂದರೆ:—**ಆನಪಿನ್ಬು**- ಹೀಗೆ ಆನ ಪನನ್ನವಾದನಂತರ, **ಶೇಷತ್ವಾನುರೂಪಙ್ಗಳಲ್ಲಾನ್ಮೈಯಾಲೇ**- **ಈ** ಉಪಾಸನಾದಿ ಉಪಾಯಾನುಷ್ಠಾನಗಳು ತನ್ನ ಶೇಷತ್ವಕ್ಕೆ ಯೋಗ್ಯವಾದವುಗಳಲ್ಲದುದರಿಂದ, **ಸ್ವರೂಪಕ್ಕೆ ಅನಿಷ್ಟಾವಹಙ್ಗಳೆನ್ನುಮ್** - ತನ್ನ ಶೇಷನಾಗಿರುವ ಸ್ವರೂಪಕ್ಕೆ ವಿರುದ್ಧವಾಗಿ, ಆತನು ಹೇಗೆ ಉಪಯೋಗಿಸಿಕೊಳ್ಳಬೇಕೋ ಹಾಗಲ್ಲದೆ ಸ್ವತಂತ್ರಿಸಿ ನಡೆಯುವುದರಿಂದ ಭಗವನ್ನಿಗ್ರಹಕ್ಕೆ ಗುರಿಯಾಗಿ ಅನಿಷ್ಟವನ್ನುಂಟುಮಾಡುವುವೆಂದೂ, ಮತ್ತು **ಅತ್ಯನ್ತ ಪಾರತನ್ತ್ರ್ಯ ವಿರುದ್ಧಙ್ಗಳಾಗೈಯಾಲೇ**- ತಾನು ಅತ್ಯನ್ತ ಪರಾಧೀನವಾಗಿರುವ ಸ್ವರೂಪಕ್ಕೆ ಈ ಸಾಧ್ಯೋಪಾಯಾನುಷ್ಠಾನಗಳು ವಿರುದ್ಧಗಳಾದುದರಿಂದ, **ಅಸಂಭಾವಿತಙ್ಗಳೆನ್ರುಮ್**-

## ಇದು ಸರ್ವಮೋಕ್ಷ ಪ್ರಸಙ್ಗಾದಿಗಳಾಲೇ ಮುನ್ಬೇ ಪರಿಹೃತಮ್.

ಸರ್ವೇಶ್ವರನು ತನ್ನ ದಾಸನಿಗೆ ಹೇಗೆ ಆಜ್ಞಾಪಿಸಬೇಕೋ ಅದನ್ನು ಬಿಟ್ಟು ವಿರುದ್ಧವಾಗಿ ಸ್ವತಂತ್ರ ಪ್ರವೃತ್ತಿಯು ಅಯೋಗ್ಯವಾದ ದೆಂದೂ, **ಶೊಲ್ಲವೊಣ್ಣಾದೋ-** ಹೇಳಬೇಡವೋ?, **ಎನ್ನಿಲ್** - ಎಂದು ಆಕ್ಷೇಪಗಳನ್ನು ತಂದರೆ, ಮುಂದಿನ ವಾಕ್ಯಗಳಿಂದ ಈ ವಾದದಿಂದುಂಟಾಗುವ ದೋಷಗಳನ್ನು ಪ್ರದರ್ಶಿಸಿ, ಸ್ವಮತದಲ್ಲುಂಟಾಗುವ ಸಾಮಂಜಸ್ಯವನ್ನೂ ಹೇಳಿ, ಆ ಆಕ್ಷೇಪಗಳನ್ನು ಪರಿಹರಿಸುತ್ತಾರೆ. ಶೇಷಭೂತನಾಗಿ ಪರತಂತ್ರನಾಗಿರುವ ಈ ಚೇತನನು ತಾನೇ ಸ್ವತಂತ್ರನಾಗಿ ಹೀಗೆ ಸಾಧ್ಯೋಪಾಯಗಳನ್ನವಲಂಬಿಸುವುದರಿಂದ ತನ್ನ ಸ್ವರೂಪಕ್ಕೆ (೧) ಅನಿಷ್ಟಾವಹವೆಂಬ ಮತ್ತು (೨) ಅಸಂಭಾವಿತವೆಂಬ ಎರಡು ದೋಷಗಳಿಗೂ ಗುರಿಯಾಗುವನೆಂದು ಪೂರ್ವ ಪಕ್ಷಿಗಳು ಹೇಳುತ್ತಾರೆ ಹೇಗೆಂದರೆ ಶೇಷಭೂತನಾದವನನ್ನು ಶೇಷಿಯು ತನ್ನ ಇಷ್ಟಾನುಸಾರ ವಿನಿಯೋಗಿಸಿಕೊಳ್ಳುವನು. ಅದಕ್ಕೆ ಬದಲಾಗಿ ಈತನು ತನ್ನಿಷ್ಟಾನುಸಾರ ಸ್ವತಂತ್ರನಾಗಿ ಉಪಾಯಾನುಷ್ಠಾನಮಾಡಿದರೆ ಭಗವದನುಗ್ರಹಕ್ಕೆ ಬದಲಾಗಿ ನಿಗ್ರಹಕ್ಕೆ ಒಳಗಾಗುತ್ತಾನಾದುದರಿಂದ ಅದು ಅನಿಷ್ಟಾವಹವು. ಈತನು ಪರಾಧೀನನು, ಅಸ್ವತಂತ್ರನು ; ಅಂತವನು ಸರ್ವೇಶ್ವರಾಜ್ಞಾನುಸಾರವಾಗಿಯೇ ವರ್ತಿಸುವುದು ತನ್ನ ಸ್ವರೂಪಕ್ಕೆ ಯೋಗ್ಯವಾದುದು ; ಅದಕ್ಕೆ ಬದಲಾಗಿ ತಾನೇ ಸ್ವತಂತ್ರನಾಗಿ ಉಪಾಯಾನುಷ್ಠಾನ ಮಾಡುವುದು ತನ್ನ ಯೋಗ್ಯತೆಗೆ ವಿರುದ್ಧವಾಗಿ ಅಸಂಭಾವಿತವಾದುದು ಎಂಬ ತಾತ್ಪರ್ಯವು.

ಈ ಮೇಲಿನ ಪೂರ್ವಪಕ್ಷಗಳಿಗೆ "ಇದು ಸರ್ವಮೋಕ್ಷ" ವೆಂಬ ವಾಕ್ಯದಿಂದ ಪರಿಹಾರವನ್ನು ತಿಳಿಸುತ್ತಾರೆ ಹೀಗೆ ವಾದ ತಂದರೆ ಸರ್ವರಿಗೂ ಸರ್ವೇಶ್ವರನು ಸ್ವಯಂ ಒಂದೇಸಲ ಮೋಕ್ಷಕೊಡಬೇಕಾಗಿ ಬರುತ್ತದೆ. ಹೇಗೆಂದರೆ ತಿಳಿಸುತ್ತಾರೆ **ಇದು** ಎಂದರೆ ಈ **ಪೂರ್ವ** ಪಕ್ಷವು, **ಸರ್ವಮೋಕ್ಷ ಪ್ರಸಙ್ಗಾದಿಗಳಾಲೆ ಮುನ್ಬೇ ಪರಿಹೃತಮ್** - ಸರ್ವರಿಗೂ ಮೋಕ್ಷವು ಉಂಟಾಗಬೇಕಾಗುತ್ತದೆ ಎಂಬ ದೋಷಯುಕ್ತವಾಗಿ, **ಮುನ್ಬೇ** - ಹಿಂದೆ ಸಿದ್ಧೋಪಾಯ ಶೋಧನಾಧಿಕಾರದಲ್ಲೇ, **ಪರಿಹೃತಮ್** - ಪರಿಹರಿಸಲ್ಪಟ್ಟಿತು ಸಾಧ್ಯೋಪಾಯದ ಆವಶ್ಯಕವಿಲ್ಲದೇನೇ ಸಿದ್ಧೋಪಾಯನು ರಕ್ಷಿಸಿಬಿಡುವನು, ಆದುದರಿಂದ ಸಿದ್ಧೋಪಾಯನೇ ಸಾಕು ಎಂದು ಮಾಡಿದ ವಾದವನ್ನು ನಿರಸನಮಾಡುವ ಸಂದರ್ಭದಲ್ಲಿ ಸರ್ವಮೋಕ್ಷ ಪ್ರಸಙ್ಗ ಉಂಟಾಗುತ್ತದೆಂದು ಸಮಾಧಾನವನ್ನು ಹೇಳಿದ್ದೇವು.

**ಇವರ್ಕ ಶೆಯ್‌ದದೊರು ವ್ಯಾಜಮ್ ಕೊಳ್ಳಾದೇ ಮುಕ್ತನಾಕ್ಕಿಲ್, ಅನಾದಿಯಾಗ ಮುಕ್ತನಾಕ್ಕ ಪ್ರಸಙ್ಗಿಕ್ಕುಮ್. ಈಶ್ವರರ್ಕ ಕೇವಲ ಸ್ವಾತಂತ್ರ್ಯತ್ತಾಲೆ ನಿನೈತ್ತಪೋದು ಮುಕ್ತನಾಕ್ಕಿಲ್, ವೈಷಮ್ಯ ನೈರ್ಘೃಣ್ಯಾದಿ ದೋಷಙ್ಗಳುಮ್ ವರುಮ್. ಮೋಕ್ಷೋಪಾಯ ವಿಧಾಯಕಙ್ಗಳಾನ ಶಾಸ್ತ್ರಙ್ಗಳು ಮೆಲ್ಲಾಮ್ ನಿರರ್ಥಕಙ್ಗಳುಮಾಮ್**

( ನೆಯ ಪುಟನೋಡಿ). ಆ ದೋಷವೇ ಇಲ್ಲಿಯೂ ತಪ್ಪಿದ್ದಲ್ಲವೆಂಬ ಭಾವವು. ಸರ್ವಮೋಕ್ಷ ಪ್ರಸಙ್ಗ ಹೇಗೆ ಎಂಬುದನ್ನು ಉಪಪಾದಿಸಿ ತಿಳಿಸುತ್ತಾರೆ **ಇವರ್ಕ ಶೆಯ್ದ ದೊರು ವ್ಯಾಜಮ್ ಕ್ಕೊಳ್ಳಾದೇ** - ಈ ಮುಮುಕ್ಷುವು ಮಾಡಿದ ಒಂದು ಶಾಸ್ತ್ರಸಿದ್ಧವಾದ ವ್ಯಾಜರೂಪವಾದ ಭಕ್ತ್ಯುಪಾಯ ಅಥವಾ ಭರಸಮರ್ಪಣವನ್ನು ಅಙ್ಗೀಕರಿಸದೆ, **ಮುಕ್ತನಾಕ್ಕಿಲ್** - ಆತನಿಗೆ ಮೋಕ್ಷವನ್ನು ಕೊಟ್ಟರೆ, **ಅನಾದಿಯಾಗ ಮುಕ್ತನಾಕ್ಕ ಪ್ರಸಙ್ಗಿಕ್ಕುಮ್** - ಅನಾದಿಯಾಗಿ ಬಹುಕಾಲಕ್ಕೆ ಮೊದಲೇ ಮೋಕ್ಷವನ್ನು ಕೊಡಬೇಕಾಗಿತ್ತು ಎಂಬ ಆಕ್ಷೇಪವು ಉಂಟಾಗುತ್ತದೆಂಬ ಭಾವವು. ಹಿಂದೆಯೇ ಶೇಷತ್ವ ಪಾರತನ್ತ್ರ್ಯ ಜ್ಞಾನವಿತ್ತಲ್ಲಾ ಆಗಲೇ ಸರ್ವೇಶ್ವರನು ಏತಕ್ಕೆ ಮುಕ್ತಿಯನ್ನು ಕೊಡಲಿಲ್ಲವು? ಹೀಗೆ ಎಲ್ಲರಿಗೂ ಮೊದಲೇ ಜ್ಞಾನವಿದ್ದುದರಿಂದ ಎಲ್ಲರೂ ಮುಕ್ತರಾಗಿರಬೇಕೆಂಬ ತಾತ್ಪರ್ಯವು. ಈ ಆಕ್ಷೇಪಣೆಗೆ ಸಮಾಧಾನವಾಗಿ ಪೂರ್ವಪಕ್ಷಿಯು ಹೇಳಬಹುದು. ಏನೆಂದರೆ, ಸರ್ವೇಶ್ವರನು ಸರ್ವಸ್ವತಂತ್ರನು, ಚೇತನರು ಅವನಿಗೆ ಅಧೀನರು, ತನಗೆ ಯಾವಾಗ ಇಷ್ಟಬಂತೋ, ಆಗ ಮುಕ್ತರನ್ನಾಗಿ ಮಾಡುವನು, ಈ ಸಂದರ್ಭದಲ್ಲಿ ಆಕ್ಷೇಪಣೆ ಏನಿದೆ ಎಂದು ಹೇಳಬಹುದೆಂದು ಭಾವಿಸಿ, ಆಗಲೂ ದೋಷ ತಪ್ಪಿದ್ದಲ್ಲವೆಂದು ತಿಳಿಸುತ್ತಾರೆ. **ಈಶ್ವರನು, ಕೇವಲ ಸ್ವಾತಂತ್ರ್ಯದಿಂದ ನಿನೈತ್ತಪೋದು** - ಇಷ್ಟಬಂದಾಗ, **ಮುಕ್ತನಾಕ್ಕಿಲ್** – ಮುಕ್ತನನ್ನಾಗಿ ಮಾಡುವನು ಎಂದರೆ, **ವೈಷಮ್ಯ ನೈರ್ಘೃಣ್ಯಾದಿಗಳುಮ್ ವರುಮ್** - ಸರ್ವೇಶ್ವರನು, ಮುಮುಕ್ಷುಗಳ ತಾರತಮ್ಯವನ್ನು ಪರಿಗಣಿಸದೇ ತನ್ನಿಷ್ಟಾನುಸಾರ ಅನುಗ್ರಹಿಸುವನು, ತನ್ನ ಶಾಸ್ತ್ರಾನುಸಾರ ವಿಹಿತ ಕರ್ತವ್ಯೋಪಾಯವನ್ನನುಷ್ಠಿಸಿದವನೂ ಅನುಷ್ಠಿಸದೇ ಇರುವನೂ, ಮಹಾಭಾಗವತನೂ ಮಹಾ ತಾಮಸನೂ ಎಲ್ಲರೂ ಒಂದೇಯಾಗುವದರಿಂದ ಪಕ್ಷಪಾತಾದಿ ದೋಷಗಳಿಗೆ ಗುರಿಯಾಗುವನು ಎಂಬ ಭಾವವು ಅದೂ ಅಲ್ಲದೆ ಇನ್ನೊಂದು ದೋಷವೂ ತಪ್ಪದು ಎಂದು ಮುಂದಿನ ವಾಕ್ಯದಿಂದ ತೋರಿಸುತ್ತಾರೆ. **ಮೋಕ್ಷೋಪಾಯ ವಿಧಾಯಕಙ್ಗ**

**ಆಗೈಯಾಲಿ ಶ್ಶೇಷತ್ವಾತ್ ವಕುತ್ತ ವಿಷಯುತ್ತೈಪ್ಪತ್ತು ಗೈಯಿಲ್**

ಳಾನ - ಮೋಕ್ಷೋಪಾಯಗಳನ್ನು ವಿಧಿಸಿರುವ, **ಶಾಸ್ತ್ರಗಳೆಲ್ಲಾ, ನಿರರ್ಥಕ** ಜ್ಞಳಾಮಾಮ್ - ವ್ಯರ್ಥಗಳೂ ಆಗವುವು ಸರ್ವೇಶ್ವರನೇ ಸ್ವತಂತ್ರಿಸಿ ತನಗೆ ಮನಸ್ಸು ಬಂದಹಾಗೆ ಮೋಕ್ಷವನ್ನು ಕೊಡುವನು ಎಂದರೆ ಆಗ ಮೋಕ್ಷೋಪಾಯಗಳನ್ನು ವಿಧಿಸುವ ಶಾಸ್ತ್ರಗಳೆಲ್ಲಾ ವ್ಯರ್ಥವಾದವು ಉಪನಿಷತ್ತುಗಳೂ ಬ್ರಹ್ಮಸೂತ್ರಗಳೂ, ಗೀತೋಪನಿಷತ್ತೂ, ಮಹಾಭಾರತ ಭಾಗವತ, ರಾಮಾಯಣಾದಿಗಳೂ, ಆಳ್ವಾರಾಚಾರ್ಯರುಗಳ ದಿವ್ಯ ಪ್ರಬಂಧಗಳೂ, ಎಲ್ಲವೂ ಆಗ ನಿರರ್ಥಕಗಳಾಗುತ್ತದೆಂಬ ಭಾವವು.

ಸರ್ವೇಶ್ವರನೇ ಉಪಾಯಾನುಷ್ಠಾನದ ಅಪೇಕ್ಷೆಯಿಲ್ಲದೆ ಮುಮುಕ್ಷುವನ್ನು ರಕ್ಷಿಸಿಬಿಡುವನು ಎಂಬ ವಾದಕ್ಕೆ ಮೂರು ದೋಷಗಳು ತಪ್ಪಿದ್ದಲ್ಲವೆಂದು ಹೇಳಿದರು.

೧. **ಅನಾದಿ ಕಾಲದಲ್ಲೇ** ಸರ್ವಮುಕ್ತಿ ಪ್ರಸಜ್ಞವು ಲೀಲಾ ವಿಭೂತಿಯೇ ಇಲ್ಲವಾಗಬೇಕು. ೨ ವೈಷಮ್ಯ ನೈರ್ಘೃಣ್ಯಾದಿ ದೋಷಗಳು ಸರ್ವೇಶ್ವರನಿಗೆ ಉಂಟಾಗಬೇಕು. ೩ ಮೋಕ್ಷಶಾಸ್ತ್ರಗಳೆಲ್ಲಾ ನಿರರ್ಥಕವಾಗಬೇಕು.

ಹೀಗೆ ದೋಷಗಳು ಪ್ರಾಪ್ತವಾದರೆ, ಈ ಚೇತನನ ಸ್ವರೂಪ ಯೋಗ್ಯವಾದ ಅಮೋಘ ಗುಣಗಳಾದ ಶೇಷತ್ವ ಪಾರತಂತ್ರ್ಯಗಳು ನಿರರ್ಥಕವಾದುವು ಆಗಲಿಲ್ಲವೋ? ಅವುಗಳಿಂದೇನು ಪ್ರಯೋಜನವು? ಎಂದು ಪೂರ್ವಪಕ್ಷಿಗಳು ಕೇಳಬಹುದೆಂದಾಶಙ್ಕಿಸಿ ಸಮಾಧಾನವನ್ನು ಹೇಳುತ್ತಾರೆ ಹಾಗೆ ಹೇಳುವಾಗ (೧) ಉಪಾಯದಶೆಯಲ್ಲೂ (೨) ಫಲ ದಶೆಯಲ್ಲೂ ಆ ಶೇಷತ್ವ ಪಾರತಂತ್ರ್ಯಗಳ ಉಪಯೋಗವನ್ನು ಪ್ರದರ್ಶಿಸುತ್ತಾರೆ ಶಾಸ್ತ್ರವು ವಿಧಿಸಿರುವ ಹಾಗೆ ಸಾಧ್ಯೋಪಾಯಗಳ ಅನುಷ್ಠಾನದಿಂದಲೇ ಈ ಶೇಷತ್ವ ಪಾರತಂತ್ರ್ಯಗಳಿಗೆ ಮಹಿಮೆ ಎಂದು ಆಗೈಯಾಲ್ ಎಂದಾರಂಭಿಸಿ ಉಪದೇಶಿಸುತ್ತಾರೆ :—

**ಆಗೈಯಾಲ್** - ಸಾಧ್ಯೋಪಾಯವು ಶೇಷತ್ವ ಪಾರತಂತ್ರ್ಯಗಳ ಮೂಲಕವಾಗಿ ಅನಿಷ್ಟಾವಹವೆಂದೂ ಅಸಂಭಾವಿತವೆಂದೂ ಹೇಳುವ ವಾದಗಳು ದೋಷಯುಕ್ತಗಳಾಗಿ ಸರಿಯಲ್ಲವಾದುದರಿಂದ, **ಇಶ್ಶೇಷತ್ವತ್ತಾಲ್** - ಹೀಗೆ ತಾನು ಶೇಷನಾದುದರಿಂದಲೇ, **ವಕುತ್ತ ವಿಷಯುತ್ತೈ** - ಸರ್ವೇಶ್ವರನಿಗೆ ತುಂಬಾ ಇಷ್ಟವಾದ ವಿಷಯವನ್ನು ಎಂದರೆ ತಾನು ಶಾಸ್ತ್ರಗಳಲ್ಲಿ ಪರಮಕೃಪೆಯಿಂದ ವಿಧಿಸಿರುವ ಸಾಧ್ಯೋಪಾಯಗಳನ್ನು, **ಪತ್ತುಗೈಯಿಲ್** - ಆಶ್ರಯಿಸುವುದರಲ್ಲಿ ಎಂದರೆ ಅನುಷ್ಠಿಸು

**ಔಚಿತ್ಯಮುಮ್ ಉಡೈಯವರ್ ಉಡನ್ಮೈಯೈ ರಕ್ಷಿಕ್ಕೈಯಿಲೌಚಿತ್ಯಮು ಮುಣ್ಡಾಮ್**

ವದರಲ್ಲಿ, **ಔಚಿತ್ಯಮುಮ್**-ಯೋಗ್ಯತೆಯೂ, **ಉಡೈಯವರ್**-ಆಭರಣಕ್ಕೆ ಯಜಮಾನನು, **ಉಡುನ್ಮೈಯೈ**-ತನ್ನ ಆಭರಣವನ್ನು, **ರಕ್ಷಿಕ್ಕೈಯಿಲ್** - ರಕ್ಷಿಸುವದರಲ್ಲಿ, **ಔಚಿತ್ಯಮುಂ** - ಯೋಗ್ಯತೆಯೂ, **ಉಣ್ಡಾಮ್** - ಉಂಟಾಗುತ್ತದೆ. ಹೀಗೆ ಶೇಷ ಶೇಷಿಗಳಿಬ್ಬರಿಗೂ ಈ ಉಪಾಯಾನುಷ್ಠಾನದಿಂದ ಔಚಿತ್ಯ ಉಂಟಾಗುತ್ತದೆಂದು ಹೇಳಿರುತ್ತಾರೆ ಶೇಷತ್ವ ಎಂದರೆ ಯಥೇಷ್ಟ ವಿನಿಯೋಗಾರ್ಹತ್ವವು ಆದುದರಿಂದ ಈ ಚೇತನನಿಗೆ ಕರಣ ಕಳೇಬರಾದಿಗಳನ್ನೂ, ಶಾಸ್ತ್ರವನ್ನೂ ಶಾಸ್ತ್ರ ಬೋಧಕರಾದ ಗುರುಗಳನ್ನೂ ಕೊಟ್ಟು, ಗುರುಮುಖೇನ ತಾನು ಶಾಸ್ತ್ರಗಳಲ್ಲಿ ಬೋಧಿಸಿರುವಹಾಗೆ ಉಪಾಯಾನುಷ್ಠಾನಮಾಡಿ ತನ್ನ ಪ್ರೀತಿಯನ್ನು ಸಂಪಾದಿಸಿಕೊಳ್ಳಲೆಂದು ಈತನನ್ನು ವಿನಿಯೋಗಿಸಿರುತ್ತಾನೆ; ಹಾಗೆ ಆತನನ್ನು ಆ ಸಾಧ್ಯೋಪಾಯ ಮುಖೇನ ಆಶ್ರಯಿಸಿದರೆ, ಸುಪುತ್ರನು ಸುಚರಿತದಿಂದ ತಂದೆಯನ್ನು ಪ್ರೀತಿಗೊಳಿಸುವಹಾಗೆ ಈ ಶೇಷನಾದ ಪುತ್ರನು ಲೋಕ ಪಿತಾವನ್ನು ಆತನ ಶಾಸ್ತ್ರವಿಧಿಯ ಮೂಲಕ ಅನುಸಂಸಿ ನಡೆಸಿದ ಸಾಧ್ಯೋಪಾಯದಿಂದ ಸರ್ವಶೇಷಿಯು ಸಂತುಷ್ಟನಾಗುವನು. ಹೀಗೆ ಶೇಷನಿಗೆ ಔಚಿತ್ಯವು. ಶೇಷಿಗೆ ಹೇಗೆ ಔಚಿತ್ಯವೆಂದರೆ, ಈ ಚೇತನನು ತನ್ನ ಆಭರಣವು, ತುಂಬಾ ಹೃದ್ಯವು, ಇದು ಕಾರಣಾಂತರದಿಂದ ತನ್ನಲ್ಲಿರದೆ ಬೇರೆಕಡೆಯಿತ್ತು ವು, ಅಸಂಖ್ಯೇಯವಾದ ಆಭರಣಗಳನ್ನು ಹೊಂದಿರುವ ಒಬ್ಬ ರಾಜನು ಒಂದು ಆಭರಣವನ್ನು ಪ್ರತ್ಯೇಕಿಸಿ ತಾನು ಧರಿಸಿದರೆ ಅದರಲ್ಲೇನೋ ಒಂದು ವಿಶೇಷವು ಹೇಗೆ ಗೋಚರವಾಗುತ್ತದೋ, ಹಾಗೆಯೇ ಅನೇಕ ಬದ್ಧಚೇತನರೆಲ್ಲಾ ಶೇಷಭೂತರಾದರೂ, ತಾನು ಅನುಗ್ರಹಿಸಲು ಯೋಗ್ಯವಾಗಿ ರಕ್ಷ್ಯವಸ್ತುವಾಗಿರುವವನು ತನ್ನಿಷ್ಟಾನುಸಾರ ನಡೆಸಿದ ಸಾಧ್ಯೋಪಾಯವನ್ನು ಅನುಷ್ಠಿಸಿದವನೆಂದು ಆತನನ್ನು ಮುಖ್ಯವಾಗಿ ವರಿಸುವದರಿಂದ ಶೇಷಿಯಾದ ತನಗೆ ಔಚಿತ್ಯವುಂಟಾಯಿತೆಂಬ ಭಾವವು ಸಾಧ್ಯೋಪಾಯದಿಂದ ಔಚಿತ್ಯ ಹೊಂದಿದವನನ್ನೇ ಶೇಷಿಯಾದ ತಾನು ರಕ್ಷಿಸಿದುದರಿಂದ ತನಗೂ ಔಚಿತ್ಯವೆಂಬ ಭಾವವು

ಸಾಧ್ಯೋಪಾಯಾನುಷ್ಠಾನದಲ್ಲಿ ಪಾರತಂತ್ರ್ಯಕ್ಕೆ ಹಾನಿಯಿಲ್ಲವು, ವಸ್ತುತಃ ಅದರಿಂದ ಪ್ರಯೋಜನ ವುಂಟೆಂದು ತಿಳಿಸುತ್ತಾರೆ:—**ಅತ್ಯನ್ತ ಪಾರತನ್ತ್ರ್ಯತ್ತಾಲ್**-ಸರ್ವೇಶ್ವರನಿಗೆ ಸಂಪೂರ್ಣವಾಗಿ ಅಧೀನನಾಗಿರುವದರಿಂದ, **ಅವ್ವು ಕೊಡು**

ಆತ್ಯನ್ತ ಪಾರತನ್ತ್ರ್ಯತ್ತಾಲ್ ಅವನ್ ಕೊಡುತ್ತ ಸ್ವಾತಂತ್ರ್ಯತ್ತೈ ಚ್ಚುಮನ್ದು ಅವನುಕ್ಕು ಅಭಿಮತಙ್ಗಳಾನ ಉಪಾಯಙ್ಗಳೈ ಅನುಷ್ಠಿಕ್ಕೈಯುಮ್, ಫಲಮ್ ಪೆರುಗೈಕ್ಕವನ್ ಕೈಪಾರ್ತ್ತಿರುಕ್ಕ ವೇಣ್ಡುಗೈಯುಮ್, ಸಿದ್ಧಿಕ್ಕುಮ್. ಇಶ್ಶೇಷತ್ವಪಾರತಂತ್ರ್ಯಙ್ಗಳ್ ಇರಣ್ಡುಮ್

---

ತ್ತ ಸ್ವಾತಂತ್ರ್ಯತ್ತೈ - ಆತನು ನಮಗೆ ಸರ್ವ ಕರ್ಮಗಳಲ್ಲೂ ಕೊಟ್ಟಿರುವ ಪ್ರಥಮ ಪ್ರವೃತ್ತಿಯಲ್ಲಿನ ಸ್ವಾತಂತ್ರ್ಯವನ್ನು, ಚುಮನ್ದು - ವಹಿಸಿ ಎಂದರೆ ಶಿರಸಾವಹಿಸಿ, ಅವನುಕ್ಕು ಅಭಿಮತಙ್ಗಳಾನ - ಸರ್ವೇಶ್ವರನಿಗೆ ತಂಬಾ ಇಷ್ಟಗಳಾದ, ಉಪಾಯಙ್ಗಳೈ - ಸಾಧ್ಯೋಪಾಯಗಳಾದ ಭಕ್ತಿ ಪ್ರಪತ್ತಿಗಳನ್ನು, ಅನುಷ್ಠಿಕ್ಕೈಯುಮ್ - ಅನುಷ್ಠಿಸೋಣವೂ, ಫಲಮ್ ಪೆರುಗೈಕ್ಕು - ಅದರ ಫಲವನ್ನು ಹೊಂದುವವರೂ, ಅವನ್ ಕೈಪಾರ್ತ್ತಿರುಕ್ಕೈ ವೇಣ್ಡುಗೈಯುಮ್ - ಸರ್ವೇಶ್ವರನ ಅನುಗ್ರಹವನ್ನು ಎದುರು ನೋಡುತ್ತಿರಬೇಕಾದುದೂ, ಎರಡೂ, ಸಿದ್ಧಿಕ್ಕುಮ್ - ಸಿದ್ಧಿಸುತ್ತವೆ; ಅವನಿಗೆ ಅಭಿಮತವಾಗಿರುವದನ್ನನುಷ್ಠಿಸೋಣವು ಶೇಷತ್ವದ ಪ್ರಯೋಜನವೂ, ಮೋಕ್ಷಾದಿ ಫಲಪ್ರಾಪ್ತಿಯು ಅವನ ಅನುಗ್ರಹಾನುಸಾರವಾಗಿ ಉಂಟಾಗೋಣವೂ, ಪಾರತನ್ತ್ರ್ಯದ ಪ್ರಯೋಜನವೂ, ಎಂಬ ಭಾವವು ಸರ್ವೇಶ್ವರನು ಈ ಚೇತನನಿಗೆ ಕರಣ ಕಳೇಬರ ಯೋಗ, ಜ್ಞಾನ ವಿವೇಕ ದಾನ, ಶಾಸ್ತ್ರಪ್ರದಾನ ಮೊದಲಾದ ಸೌಕರ್ಯಗಳನ್ನುಂಟುಮಾಡಿ, ಪ್ರತಿಯೊಂದು ಕಾರ್ಯದಲ್ಲಿಯೂ "ಕೃತಪ್ರಯತ್ನಾಪೇಕ್ಷಸ್ತು" ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಹಾಗೆ, ಸ್ವಾತನ್ತ್ರ್ಯವನ್ನು ಕೊಟ್ಟು, ಸರ್ವೇಶ್ವರನು ತನಗೆ ಅಭಿಮತವಾದುದನ್ನು ಅವಲಂಬಿಸು ಎಂದರೆ ಆ ಸ್ವಾಮಿದತ್ತ ಸ್ವಾತನ್ತ್ರ್ಯವನ್ನು ಶಿರಸಾವಹಿಸಿ ಆ ಅಭಿಮತಾನುಷ್ಠಾನವು ಶೇಷತ್ವದಿಂದುಂಟಾದ ಪ್ರಯೋಜನವಲ್ಲವೇ ಎಂಬಭಿಪ್ರಾಯವು ಹಾಗೆ ಅನುಷ್ಠಿಸಿ ಬಿಟ್ಟ ಫಲ ಸಂಗದಲ್ಲಿ ಮಮತೆಯನ್ನಿಡದೆ ಇದ್ದು ಪೂರ್ಣಪರತನ್ತ್ರನಾಗಿ ಇದ್ದುಕೊಂಡು, ಆತನು ಅನುಗ್ರಹಿಸಿದ ಫಲವನ್ನು ಹೊಂದುವಿಕೆಯು ಪಾರತನ್ತ್ರ್ಯ ಪರಾಕಾಷ್ಠೆಯಲ್ಲವೇ ಎಂಬ ಭಾವವು ಈ ಸಾಧ್ಯೋಪಾಯಗಳನ್ನು ಶಾಸ್ತ್ರಚೋದಿತ ರೀತಿಯಲ್ಲಿ ಅನುಷ್ಠಿಸುವದರಿಂದ ಶೇಷತ್ವ ಪಾರತನ್ತ್ರ್ಯಗಳೆರಡೂ ಚೆನ್ನಾಗಿ ಪ್ರದರ್ಶಿಸಲ್ಪಟ್ಟವೇ ವಿನಾ, ಪೂರ್ವಪಕ್ಷಿಯು ಹೇಳುವಹಾಗೆ ಇವುಗಳು ದೂರೀಕೃತಗಳಾಗಿ, ಅಹಂಕಾರ ಮಮಕಾರಗಳು ಪ್ರದರ್ಶನವೆಂಬ ಭಾವವಲ್ಲವು. ಮುಂದೆ ಪ್ರಾಸಂಗಿಕವಾಗಿ ಫಲವಿಶೇಷದಲ್ಲೂ ಎಂದರೆ ಮೋಕ್ಷಾನುಭವದಲ್ಲೂ ಕೂಡ ಈ ಶೇಷತ್ವ ಪಾರತನ್ತ್ರ್ಯಗಳಿಗನುಗುಣವಾಗಿಯೇ ಈತನ ಪ್ರವೃತ್ತಿಯು ಎಂದು ತಿಳಿಸುತ್ತಾರೆ.

ಫಲದಶೈಯಿಲ್ ಅವನುಗನ್ದ ಕೈಙ್ಕರ್ಯತ್ತೈ ಯುವನಿಟ್ಟ ವಳಕ್ಕಾಗ ನಡತ್ತುಗೈಕ್ಕು ಉರುಪ್ಪಾಮ್. ಇವ್ವೈಯಡಿಯಾಗ ಸ್ವರಕ್ಷಣಾರ್ಥ ಸ್ವವ್ಯಾಪಾರ ಮಾಗಾದೆನ್ಬಾರ್ಕ್ಕು, ತಾಙ್ಗಳ್ ಯಥಾಶಾಸ್ತ್ರಮ್ ಭಗವತ್ಪ್ರೀತ್ಯಾದಿ ಫಲತ್ತೈ ಕ್ಕೋಲಿ ಅನುಷ್ಠಿಕ್ಕಿರ ಕೈಙ್ಕರ್ಯತ್ತಿಲುಮ್, ಸಾಧ್ಯಮಾಗ ವಿಧಿಕ್ಕ ಪಡುಗಿರ ಪ್ರಪತ್ತಿ ತನ್ನಿಲುಮ್ ಸ್ವರೂಪ ವಿರೋಧಬುದ್ಧಿಯಾಲೇ ಅಧಿಕಾರಮಿಲ್ಲೈಯಾಮ್. ವಾಕ್ಯಜನ್ಯಮಾನ ಸಂಬಂಧಜ್ಞಾನಾದಿ

---

ಈ ಶೇಷತ್ವಪಾರತನ್ತ್ರ್ಯಗಳೆರಡೂ, **ಫಲದಶೈಯಿಲ್** - ಮುಕ್ತನಾಗಿ ದಿವ್ಯ ವೈಕುಂಠದಲ್ಲಿರುವ ದೆಶೆಯಲ್ಲಿ, **ಅವನುಗನ್ದ ಕೈಙ್ಕರ್ಯತ್ತೈ** - ಶ್ರಿಯಃಪತಿಗೆ ಅಭಿಮತವಾದ ಕೈಙ್ಕರ್ಯವನ್ನು, (ಇದು ಶೇಷತ್ವದ ವೃತ್ತಿಯು) **ಅವನಿಟ್ಟವಳಕ್ಕಾಗ** - ಅವನು ಆಜ್ಞಾಪಿಸಿದರೀತಿಯಲ್ಲಿ, ಇದು ಪಾರತನ್ತ್ರ್ಯ ವೃತ್ತಿಯು, **ನಡತ್ತುಗೈಕ್ಕುಮ್** - ನಡೆಸುವದಕ್ಕೆ, **ಉರಪ್ಪಾಮ್** - ಸಾಧನವಾಗುತ್ತವೆ. ಸರ್ವೇಶ್ವರನ ಅಭಿಮತಾನುಸಾರವಾಗಿಯೂ, ಆತನು ವಿಧಿಸಿರುವ ಮರ್ಯಾದೆಗಳಿಗೆ ಅಧೀನವಾಗಿಯೂ ಕೈಙ್ಕರ್ಯಗಳನ್ನೆಸಗುವದರಿಂದ ಶೇಷತ್ವ ಪಾರತನ್ತ್ರ್ಯಗಳ ಸ್ವರೂಪಕ್ಕೆ ಅನುಗುಣವಾಗಿಯೇ ಅನುಷ್ಠಿಸಿದಂತಾಯಿತೆಂಬಭಿಪ್ರಾಯವು

ಈ ಸಂದರ್ಭದಲ್ಲಿ ಪೂರ್ವಪಕ್ಷಿಗಳು ಹೇಳಬಹುದೇನೆಂದರೆ, ಶೇಷತ್ವಪಾರತನ್ತ್ರ್ಯಗಳು ಸಾರ್ಥಕ್ಯವನ್ನು ಹೊಂದಬೇಕಾದರೆ ಸ್ವರಕ್ಷಣಾರ್ಥವಾಗಿ ಯಾವವಿಧವಾದ ವ್ಯಾಪಾರವು ಕೂಡದು ಎಂದು ಊಹಿಸಿ, ಆಸಂದರ್ಭದಲ್ಲಿ ಉಂಟಾಗುವ ದೋಷಗಳನ್ನು ತಿಳಿಸುತ್ತಾರೆ. — **ಇವ್ವೈಯಡಿಯಾಗ** - ಈ ಶೇಷತ್ವ ಪಾರತನ್ತ್ರ್ಯಗಳ ಮೂಲಕವಾಗಿ, **ಸ್ವರಕ್ಷಣಾರ್ಥ ಸ್ವವ್ಯಾಪಾರ ಮಾಗಾದೆನ್ಬಾರ್ಕ್ಕುಮ್** - ತನ್ನ ರಕ್ಷಣೆಗಾಗಿ ತಾನು ಏನೊಂದೂ ವ್ಯಾಪಾರವನ್ನು ಸ್ವತಂತ್ರಿಸಿ ಮಾಡಕೂಡದೆಂದು ಹೇಳುವವರಿಗೂ (ಹೀಗೆ ಹೇಳುವವರು ಪೂರ್ವಪಕ್ಷಿಗಳು), **ತಾಙ್ಗಳ್** - ತಾವು ಎಂದರೆ ಅಂತಹ ಪೂರ್ವ ಪಕ್ಷಿಗಳೂ **ಯಥಾಶಾಸ್ತ್ರಮ್ ಭಗವತ್ಪ್ರೀತ್ಯಾದಿ ಫಲತ್ತೈಕ್ಕೋಲಿ** - ಶಾಸ್ತ್ರವು ವಿಧಿಸಿರುವ ರೀತಿಯಲ್ಲಿ ಸಙ್ಕಲ್ಪಿಸಿ, **ಭಗವತ್ಪ್ರೀತ್ಯರ್ಥಮ್** ಭಗವತ್ಕೈಙ್ಕರ್ಯರೂಪಂ ಎಂದು ಹೇಳಿ ಫಲವನ್ನು **ಕೋಲಿ**- ಅಪೇಕ್ಷಿಸಿ, **ಅನುಷ್ಠಿಸುವ** ಕೈಙ್ಕರ್ಯವಲ್ಲೂ, **ಸಾಧ್ಯಮಾಗ ವಿಧಿಕ್ಕಪಡುಗಿರ ಪ್ರಪತ್ತಿ ತನ್ನಿಲುಮ್**—ಸಾಧ್ಯೋಪಾಯವಾಗಿ ವಿಧಿಸಲ್ಪಟ್ಟಿರುವ ಪ್ರಪತ್ತಿಯಲ್ಲೂ ಸಹ **ಸ್ವರೂಪ ವಿರೋಧಬುದ್ಧಿಯಾಲೇ** - ಈ ಕೈಙ್ಕರ್ಯವೂ, ಈ ಪ್ರಪತ್ತಿಯೂಸಹ ಪ್ರವೃತ್ತಿರೂಪವಾಗಿ ಶೇಷತ್ವ ಪಾರತನ್ತ್ರ್ಯ ಸ್ವರೂಪಕ್ಕೆ ವಿರೋಧ

ವಾದುದರಿಂದ, **ಅಧಿಕಾರಮಿಲ್ಲೈಯಾಮ್** - ಅಧಿಕಾರವಿಲ್ಲವು ಎಂದಾಗುತ್ತದೆ. ಶೇಷತ್ವಪಾರತನ್ತ್ರ್ಯಗಳಿಗೆ ಸ್ವರಕ್ಷಣಾರ್ಥವಾಗಿ ಯಾವ ವ್ಯಾಪಾರವು **ಕೂಡದು** ಎಂದು **ಪೂರ್ವಪಕ್ಷಿಗಳು** ಹೇಳಿದರು. ಅವರೇ ಭಗವತ್ಕೈಙ್ಕರ್ಯಗಳನ್ನು **ಅನುಷ್ಠಿ**ಸಬಹುದೂ ಎಂದೂ, ಸಾಧ್ಯೋಪಾಯವು ಪ್ರಪತ್ತಿಯೇವಿನಾ ಉಪಾಸನವಲ್ಲವೆಂದೂ, ಹೇಳುವರು. ಸ್ವರಕ್ಷಣಾರ್ಥವಾಗಿ ಯಾವ **ವ್ಯಾಪಾರವೂ ಕೂಡದು ಎಂದರೆ**, ಭಗವತ್ಪ್ರೀತ್ಯರ್ಥಂ ಭಗವತ್ಕೈಙ್ಕರ್ಯರೂಪಂ ಎಂದು ಸಙ್ಕಲ್ಪಿಸಿ ಕೈಙ್ಕರ್ಯಗಳನ್ನು ಮಾಡುವದೂ, **ಪ್ರಪತ್ತಿ**ಯನ್ನು ಅನುಷ್ಠಿಸುವದೂ ಸಹ **ಈ ಶೇಷತ್ವ**ಪಾರತನ್ತ್ರ್ಯ ರೂಪಸ್ವರೂಪಕ್ಕೆ ವಿರೋಧವಾದುವು; ಆದುದರಿಂದ **ಇವುಗಳಿಗೂ** ಕೂಡ ಅಧಿಕಾರವಿಲ್ಲವೆಂದು ಒಪ್ಪಿಕೊಳ್ಳಬೇಕಾಯಿತು ಎಂದು ಆಕ್ಷೇಪಗಳನ್ನು ಹೇಳಿರುತ್ತಾರೆ, ಈ ಮೇಲಿನ ಆಕ್ಷೇಪಣೆಗಳಲ್ಲಿ ಶ್ರೀನಿಗಮಾಂತ ದೇಶಿಕರವರು "**ಸಾಧ್ಯಮಾಗ ವಿಧಿಕ್ಕ ಪಡುಗಿರ ಪ್ರಪತ್ತಿ ತನ್ನಿಲುಮ್**" ಎಂದು ಹೇಳಿದರು. **ಶಾಸ್ತ್ರದಲ್ಲಿ** ಪ್ರಪತ್ತಿಯು ಸಾಧ್ಯೋಪಾಯವೆಂದು ವಿಧಿಸಲ್ಪಟ್ಟಿರುತ್ತದೆಂಬುದನ್ನು ಒಪ್ಪಿಕೊಳ್ಳುವರೆಂದು ಹಾಗೆ ಹೇಳಿದರು. ಅದಕ್ಕೆ **ಪೂರ್ವಪಕ್ಷಿಗಳು** ಪ್ರತಿಯಾಗಿ ಹೇಳುವದೇನೆಂದರೆ, (೧) **ತಾನು** ಶೇಷನು ಶ್ರಿಯಃಪತಿಯು ಶೇಷೀ **ಎಂಬ ಸಂಬಂಧ** **ಜ್ಞಾನವು** ಗುರುವಿನ ಮೂಲಕ **ಉಪದೇಶವನ್ನು** ಹೊಂದಿದ **ವೇಳೆಯಲ್ಲೇ ಸಿದ್ಧಿ**ಸಿದುದರಿಂದಲೂ, (೨) ಸ್ವರಕ್ಷಣೆಯಲ್ಲಿ ತನಗೆ ಯಾವುದೊಂದು **ವ್ಯಾಪಾರವು** ಇಲ್ಲವೆಂಬುದು ಅಶಕ್ತನಾದುದರಿಂದಲೇ ಸಿದ್ಧವಾದುದರಿಂದಲೂ, (೩) ಶಾಸ್ತ್ರಪ್ರಮಾಣದಲ್ಲಿ **ಶಕ್ತ**ರಾಗಿರುವವರಿಗೆ "**ಅಮೃತಸ್ಯೈಷ ಸೇತುಃ**" ಸಂಸಾರದಿಂದ ದಾಟಿಸಿ ಮೋಕ್ಷಕ್ಕೆ ಮಾರ್ಗ ತೋರಿಸುವವನು ಸರ್ವೇಶ್ವರನೇ, **ಇವೇ ಮೊದ**ಲಾದ ಶಾಸ್ತ್ರವಾಕ್ಯ ಶ್ರವಣ ಕಾಲದಲ್ಲೇ ಸರ್ವೇಶ್ವರನ ಉಪಾಯತ್ವದಲ್ಲಿ ಸಂಪೂರ್ಣ ನಂಬಿಕೆ ಸಿದ್ಧಿಸುವದರಿಂದಲೂ, **ಇವು** ಮೂರರಲ್ಲಿ ಯಾವುದಾದರೂ **ಒಂದು** ಭಾವನೆಯೇ ಅಧಿಕಾರಿ ವಿಶೇಷಣವಾಗಿ **ಪ್ರಪತ್ತಿ**ಯಾಗುವದರಿಂದ, **ಕೃತಿಸಾಧ್ಯ** ಭಾವನೆಯಿಂದ ವಿಧೇಯವಾದುದೂ ಯಾವುದೂ ಇಲ್ಲವಾದುದಾಗಿ ಏನೊಂದು ಅನುಷ್ಠಾನವೂ ಇಲ್ಲವಾದುದಾಗಿ, ಸ್ವರೂಪ ವಿರೋಧವೇನೂ **ಇಲ್ಲವು**. ಆದುದರಿಂದ ಸ್ವರಕ್ಷಣಕ್ಕಾಗಿ ಇಲ್ಲಿ ಯಾವ ಪ್ರವೃತ್ತಿಯೂ ಇಲ್ಲವೆಂದು **ಪೂರ್ವಪಕ್ಷಿಗಳು** ಹೇಳಬಹುದಾಗಿ ಭಾವಿಸಿ, ಹಿಂದೆಯೇ ಈ ಆಕ್ಷೇಪಕ್ಕೆ ಸಮಾಧಾನವನ್ನು **ವಿಶದ**ವಾಗಿ ಹೇಳಿರುತ್ತದೆ. **ಶರಣಂ** ವ್ರಜ ಎಂಬ ವಾಕ್ಯವು ಅನುವಾದವಲ್ಲವು, **ವಿಧಿ**ವಾಕ್ಯವೇ ಎಂದು ಸ್ಥಾಪಿಸಿರುತ್ತೇವೆ ಎಂದು "**ವಾಕ್ಯಜನ್ಯಮಾನ**" ಎಂಧಾರಂಭಿಸುವ ವಾಕ್ಯದ ಮೂಲಕ ಹೇಳುತ್ತಾರೆ **ವಾಕ್ಯಜನ್ಯಮಾನ" ಅಮೃತಸ್ಯ ಏಷಸೇತುಃ" ಓಮ್**, ಎಂದರೆ "**ಆಯ್ಯೈವ**" ಇತ್ಯಾದಿ **ವಾಕ್ಯದಿಂದುಂಟಾದ, ಸಂಬಂಧ**

ಮಾತ್ರತ್ತಿರ್ಕ್ಕಾಟ್ಟಿಲ್ ಅತಿರಿಕ್ತಮಾಗ "ಶರಣಂ ವ್ರಜ" ಎನ್ರು ವಿಧೇಯ ಮಾಗೈಯಾಲೇ ಸಾಧ್ಯಮಾಯಿರುಕ್ಕುಮ್ ಪ್ರಪತ್ತಿಸ್ವರೂಪ ಮೆನ್ನು ಮಿಡಮ್ ಮುನ್ಬೇ ಶೊನ್ನೋಮ್. ಆಗೈಯಾಲ್ ಶೇಷಭೂತನುಮಾಯ್ ಪರತಂತ್ರನುಮಾನ ಇವನುಕ್ಕು ಯಥಾಧಿಕಾರಮ್ ಸ್ವರಕ್ಷಣಾರ್ಥ ವ್ಯಾಪಾರಂ ಪಣ್ಣಕ್ಕುರೈ ಯಿಲ್ಲೈ.

## ೭. ಭಕ್ತಿಯೋಗಃ ಪಾರವಶ್ಯೈಕಾಂತ್ಯ ವಿರುದ್ಧತ್ವಾತ್ ಸ್ವರೂಪ ವಿರುದ್ಧ ಇತಿವಾದಸ್ಯ ನಿರಾಸಃ

ಅನಾಲುಮ್, ಅನನ್ಯಾರ್ಹ ಶೇಷಭೂತನಾಗತ್ತನ್ನೈತ್ತೆಳಿನ್ದು ಪರವೈಕಾಂತಿಯಾಯಿರುಕ್ಕಿರ ಇವನುಕ್ಕು ದೇವತಾಂತರದ್ವಾರಕಙ್ಗಳಾನ

---

**ಜ್ಞಾನಾದಿ ಮಾತ್ರತ್ತಿಲ್ ಕಾಟ್ಟಿಲ್** - ಶೇಷ ಶೇಷಿರೂಪಸಂಬಂಧ ಜ್ಞಾನವೇ ಮೊದಲಾದುದಕ್ಕಿಂತ, **ಅತಿರಿಕ್ತಮಾಗ** - ಬೇರೆಯಾಗಿ, **"ಶರಣಂವ್ರಜ"** ಶರಣ ಹೊಂದು, **ಎನ್ರು** - ಎಂಬುದಾಗಿ, **ವಿಧೇಯ ಮಾಗೈಯಾಲೆ** - ವಿಧಿವಾಕ್ಯಕ್ಕೆ ಸಂಬಂಧಪಟ್ಟದ್ದಾದುದರಿಂದ, ಶರಣಂವ್ರಜವೆಂಬುದು ಅನುವಾದವಲ್ಲದೆ ವಿಧಿ ವಾಕ್ಯವಾಗಿರುವದರಿಂದ, ಪ್ರಪತ್ತಿಯಸ್ವರೂಪವು, **ಸಾಧ್ಯಮಾಯಿರುಕ್ಕುಮ್** - ಸಾಧ್ಯೋಪಾಯವಾಗಿರುತ್ತದೆ, **ಎನ್ನುಮಿಡಮ್** - ಎಂಬುವ ಸಂದರ್ಭವನ್ನು, **ಮುನ್ಬೇ** - ಹಿಂದೆಯೇ. **ಶೊನ್ನೋಮ್** - ಈ ಅಧಿಕಾರದಲ್ಲೇ ಹೇಳಿದವು (೨೩೮ನೆಯ ಪುಟ ನೋಡಿ) **ಶರಣಂವ್ರಜ** ಎಂಬುದು ಯಾವಾಗ ವಿಧಿ ವಾಕ್ಯವಾಯಿತೋ, **ಪ್ರಪತ್ತಿಯೂ** ಕೃತಿಸಾಧ್ಯವಾದ ಸ್ವರಕ್ಷಣಾರ್ಥವಾದ ಪ್ರವೃತ್ತಿಯು ಪ್ರಪತ್ತಿಯು ಆಗಬಹುದಾದರೆ, ಉಪಾಸನೆಯು ಏಕೆಕೂಡದು ? ಶೇಷತ್ವ ಪಾರತಂತ್ರ್ಯಗಳಿಗೆ ಪ್ರಪತ್ತಿಯಿಂದ ಬಾಧಕವಿಲ್ಲದಿದ್ದರೆ, ಉಪಾಸನೆಯಿಂದಲೂ ಬಾಧಕವಿಲ್ಲವೆಂದೇ ಹೇಳಬೇಕಾಗುತ್ತದೆ

ಮುಂದಿನ ವಾಕ್ಯದಿಂದ ಈಗ ಸ್ಥಾಪಿಸಿದ ಅಭಿಪ್ರಾಯವನ್ನೇ ನಿಗಮನ ಮಾಡಿ ಹೇಳುತ್ತಾರೆ — **ಆಗೈಯಾಲ್** - ಆ ಕಾರಣದಿಂದ ಶೇಷಭೂತನಾಗಿಯೂ ಪರತಂತ್ರನಾಗಿಯೂ ಇರುವ, **ಇವನುಕ್ಕು** - ಈ ಮುಮುಕ್ಷುವಿಗೆ, **ಯಥಾಧಿಕಾರಮ್** - ಅಧಿಕಾರಿಗೆ ಅನುಗುಣವಾಗಿ ಎಂದರೆಶಕ್ತನಿಗೆ ಉಪಾಸನೆಯೂ, ಅಶಕ್ತನಿಗೆ ಭರನ್ಯಾಸವೂ, **ಸ್ವರಕ್ಷಣಾರ್ಥ ವ್ಯಾಪಾರಂ** - ತನ್ನ ರಕ್ಷಣಾರ್ಥವಾಗಿ ಸಾಧ್ಯೋಪಾಯಾನುಷ್ಠಾನವನ್ನು, **ಪಣ್ಣಕ್ಕುರೈ ಯಿಲ್ಲೈ** - ಮಾಡುವದರಿಂದೇನೂ ಬಾಧಕವಿಲ್ಲವು. ಸಾಧ್ಯೋಪಾಯಗಳಾದ ಭಕ್ತಿ ಪ್ರಪತ್ತಿಗಳಲ್ಲಿ ಯಾವುದಾದರೂ ಒಂದನ್ನು ಅನುಷ್ಠಿಸಬೇಕಾದುದೇ ಯುಕ್ತವು.

ವರ್ಣಾಶ್ರಮ ಧರ್ಮಜ್ಞಳೈರ್ಪಿ, ಅವತ್ತ್ಯೈ ಇತಿ ಕರ್ತ್ತವ್ಯತ್ತೈಯಾಗ ಪ್ರಡೈತ್ತಾನ ಭಕ್ತಿಯೋಗಾದಿಗಳುಮ್ ಐಕಾಂತ್ಯ ವಿರುದ್ಧಜ್ಞಳನ್ರೋ? ಶುದ್ಧಯಾಜಿಗಳಕ್ಕನ್ರೋ ಪರಮೈಕಾಂತಿತ್ವಮ್ ಕೊಡುಪದೆನ್ನಿಲ್? ಇದು ಭಾಷ್ಯಾದಿಗಳಿಲ್ ನಿಷ್ಕರ್ಷಂ ತೆಳಿಯಾಮೈಯಡಿಯಾಗ ವನ್ದ ಚೋದ್ಯಮ್.

## ೭ ಭಕ್ತಿಯೋಗವು ಪಾರಮೈಕಾಂತ್ಯಕ್ಕೆ ವಿರೋಧವಾದುದರಿಂದ ಸ್ವರೂಪ ವಿರುದ್ಧವೆಂಬ ವಾದದ ನಿರಾಸನವು.

ಆ ನಾಲೂರ್ - ಶೇಷತ್ವ ಪಾರತನ್ತ್ರ್ಯಸ್ವರೂಪಕ್ಕೆ ವಿರುದ್ಧವಲ್ಲವೆಂದು ಒಪ್ಪಿದರೂ, ಇನ್ನೊಂದು ಪ್ರಬಲ ಪೂರ್ವಪಕ್ಷ ಉಂಟೆಂದು ಹೇಳುತ್ತಾರೆ. ಏನೆಂದರೆ :—**ಅನನ್ಯಾರ್ಹ ಶೇಷಭೂತನಾಗ** - ಪರಮಾತ್ಮನಲ್ಲದೆ ಇನ್ನು ಯಾವ ದೇವತೆಗೂ ಶೇಷಭೂತನಾಗಿರಲು ಅರ್ಹನಲ್ಲವೆಂದು, **ತನ್ನೈತ್ತೆಳಿನ್ದು** - ತನ್ನನ್ನು ತಿಳಿದು, ಪರಮೈಕಾಂತಿಯಾಗಿರುವ, **ಇವನುಕ್ಕು** - ಈ ಚೇತನನಿಗೆ, **ದೇವತಾಂತರ ದ್ವಾರಜ್ಞಳಾನ** - ಬೇರೆ ದೇವತೆಗಳಾದ ಸೂರ್ಯಾಗ್ನಿಗಳೇ ಮೊದಲಾದವರುಗಳ ಮೂಲಕವಾಗಿ ಆರಾಧ್ಯದೇವತೆಗಳಾಗಿ, ವಿಧಿಸಿರುವ, **ವರ್ಣಾಶ್ರಮ ಧರ್ಮಜ್ಞಳುಮ್** - ತ್ರೈವರ್ಣಿಕರ ವಿಷಯದಲ್ಲಿ ಸ್ನಾನ ಸಂಧ್ಯಾವಂದನಾದಿ ನಿತ್ಯ ನೈಮಿತ್ತಿಕ ಕರ್ಮಗಳೂ, **ಅವತ್ತ್ಯೈ** - ಅನಿತ್ಯನೈಮಿತ್ತಿಕ ಕರ್ಮಗಳನ್ನೇ **ಇತಿ ಕರ್ತ್ತವ್ಯತ್ತೈಯಾಗ ಪ್ರಡೈತ್ತಾನ** - ಅಜ್ಞವಾಗಿ ಅವಶ್ಯಾನುಷ್ಠೇಯಗಳಾಗಿರುವ ಭಕ್ತಿಯೋಗವೇ ಮೊದಲಾದವುಗಳು, **ಐಕಾನ್ತ್ಯ ವಿರುದ್ಧಜ್ಞಳನ್ರೋ** - ಐಕಾಂತ್ಯಕ್ಕೆ ವಿರುದ್ಧವಲ್ಲವೋ? ಈ ಪೂರ್ವಪಕ್ಷದ ಅಭಿಪ್ರಾಯವೇನೆಂದರೆ ;— ನಿತ್ಯನೈಮಿತ್ತಿಕಾನುಷ್ಠಾನಗಳು ಈ ಸಾಧ್ಯೋಪಾಯವೆಂದು ಹೇಳಲ್ಪಡುವ ಭಕ್ತಿಯೋಗಕ್ಕೆ ಅಜ್ಞವು. ಪರಮಾತ್ಮಧ್ಯಾನಕ್ಕೆ ಐಕಾಂತ್ಯವು ಆವಶ್ಯಕವು ನಿತ್ಯನೈಮಿತ್ತಿಕಗಳಲ್ಲಿ ಅನ್ಯದೇವತಾರಾಧನವು ವಿಹಿತವಾಗಿರುವದರಿಂದ ಇಂತಹ ಐಕಾಂತ್ಯಕ್ಕೆ ಹಾನಿಯು ಅನ್ಯದೇವತಾ ಭಜನವೂ ಇರುವದರಿಂದ ಐಕಾಂತ್ಯಕ್ಕೆ ವಿರೋಧವು ಆದುದರಿಂದ ಸ್ವರೂಪವಿರುದ್ಧವು ಎಂಬುದು ಪೂರ್ವಪಕ್ಷವು **ಶುದ್ಧಯಾಜಿಗಳಕ್ಕನ್ರೋ** — ಅನ್ಯದೇವತಾ ಸಂಬಂಧವಿಲ್ಲದೆ ಪರತತ್ವವನ್ನು ಮಾತ್ರ ಆರಾಧಿಸಿ ಧ್ಯಾನಮಾಡುವರಿಗಲ್ಲವೋ, **ಪರಮೈಕಾಂತಿತ್ವಮ್ ಕೊಡುಪದು ಎನ್ನಿಲ್** - ಪರಮೈಕಾಂತಿತ್ವವು ಸಲ್ಲುತ್ತದೆ ಎಂದರೆ? ಇದೂ ಪೂರ್ವಪಕ್ಷಿಯ ಚೋದ್ಯವೇ. ಭಕ್ತಿಯೋಗದ ಉಪಾಸನೆಗೆ ಪರಮೈಕಾಂತಿ

**ಎಜ್ಞನೇ ಎನ್ನಿಲ್ ? ಪ್ರತರ್ದನಾದಿ ವಿದ್ಯೈಗಳಿಲ್ ಪರಮಾತ್ಮಾ ಇಂದ್ರಾದಿ ಶರೀರಕನಾಗ ಮುಮುಕ್ಷುವುಕ್ಕು ಉಪಾಸ್ಯನೆನ್ರುರುದಿಯಿಟ್ಟಾರ್.**

---

ತ್ವವು ಆವಶ್ಯಕವಾದುದರಿಂದ ನಿತ್ಯನೈಮಿತ್ತಿಕಗಳಲ್ಲಿನ ದೇವತಾಂತರ ಭಜನವನ್ನು ತ್ಯಜಿಸಿ, ಪರತತ್ತ್ವೋಪಾಸನೆ ಮಾಡಿದರಲ್ಲವೇ ಪರಮೈಕಾಂತಿತ್ವವು ಸಿದ್ಧಿಸುತ್ತದೇ? ಎಂದು ಆಕ್ಷೇಪವು ಇದನ್ನು ಖಂಡಿಸುತ್ತಾರೆ. ಇದು ಶ್ರೀ ಭಾಷ್ಯದ ತಿಳುವಳಿಕೆ ಯಿಲ್ಲದ ಅಜ್ಞಾನದ ವಿಜೃಂಭಣೆಯೆಂದು ಹೇಳುತ್ತಾರೆ **ಇದು**- ಈ ಸ್ವರೂಪ ವಿರುದ್ಧವೆಂಬ ಆಕ್ಷೇಪವು, **ಭಾಷ್ಯಾದಿಗಳಿಲ್** - ಶ್ರೀ ಭಾಷ್ಯಕಾರರು ಬರೆದಿರುವ ಶಾರೀರಕ ಸೂತ್ರಗಳ ಭಾಷ್ಯದಲ್ಲಿರುವ, **ನಿಷ್ಕರ್ಷೆ ತೆಳಿಯಾಮೈ** - ಇದು ಹೀಗೆಯೇ ಸರಿ ಎಂಬ ನಿಷ್ಕರ್ಷೆಯುಳ್ಳ ಜ್ಞಾನವಿಲ್ಲದಿರೋಣದರ, **ಅಡಿಯಾಗ**-ಮೂಲಕವಾಗಿ, **ಪನ್ನಚೋದ್ಯಮ್** - ಬಂದಾಕ್ಷೇಪವು. ಶ್ರೀ ಭಾಷ್ಯದಲ್ಲಿ ಶ್ರೀ ಭಾಷ್ಯಕಾರರ **ಉಪದೇಶವನ್ನು** ಚನ್ನಾಗಿ ತಿಳಿದಿದ್ದಪಕ್ಷದಲ್ಲಿ, ಇಂತಹ ಆಕ್ಷೇಪಕ್ಕೆ ಅವಕಾಶವಿರುತ್ತಿರಲಿಲ್ಲವೆಂಬ ಭಾವವು. **ಎಜ್ಞನೇ ಎನ್ನಿಲ್** - ಅದು ಹೇಗೆ ಎಂದರೆ, **ಪ್ರತರ್ದನಾದಿ ವಿದ್ಯೈಗಳಿಲೇ** - ಪ್ರತರ್ದನವೇ ಮೊದಲಾದ ಬ್ರಹ್ಮವಿದ್ಯೆಗಳಲ್ಲಿ, **ಪರಮಾತ್ಮನು**, **ಇಂದ್ರಾದಿ ಶರೀರಕನಾಗ**- ಇಂದ್ರನೇ ಮೊದಲಾದ ದೇವತೆಗಳ ಶರೀರವಾಗಿವುಳ್ಳವನಾಗಿ, **ಮುಮುಕ್ಷುವುಕ್ಕು** ಮೋಕ್ಷಾರ್ಥಿಗೆ. **ಉಪಾಸ್ಯನೆನ್ರು** - ಉಪಾಸ್ಯನೆಂದು, **ಅರುದಿಯಿಟ್ಟಾರ್**-ನಿರ್ಧರಿಸಿರುತ್ತಾರೆ, ಐಕಾಂತ್ಯಹಾನಿ ಎಂಬ ಪೂರ್ವಪಕ್ಷವನ್ನು ಎರಡು ವಿಧವಾಗಿ ವಿಕಲ್ಪಿಸಿ ಪರಿಹರಿಸುತ್ತಾರೆ (೧) ದೇವತಾಂತರ ದ್ವಾರವಾಗಿ ಉಪಾಸನಾದಿಗಳನ್ನು ಮಾಡುವದರಿಂದ ಪಾರಮೈಕಾಂತ್ಯಕ್ಕೆ ವಿರೋಧವೇ (೨) ಇಲ್ಲವೇ ದೇವತಾಂತರ ದ್ವಾರಾ ಅನುಷ್ಠಿಸುವ ವರ್ಣಾಶ್ರಮಗಳು ಉಪಾಸನಕ್ಕೆ ಅಙ್ಗವಾಗಿರುವದರಿಂದ ವಿರೋಧವೇ ಎಂದು ವಿಕಲ್ಪಿಸಿ, ಮೊದಲಿನ ಪಕ್ಷವನ್ನು ಪರಿಹರಿಸುತ್ತಾರೆ ಪ್ರತರ್ದನಾದಿ ವಿದ್ಯೆಗಳಲ್ಲಿ (ಆದಿ ಶಬ್ದದಿಂದ ಮಧು ವಿದ್ಯೆಯು ಹೇಳಲ್ಪಟ್ಟಿತ) ಈ ಪ್ರತರ್ದನ ವಿದ್ಯೆಯಲ್ಲಿ ಇಂದ್ರನು ನಾನು ಪ್ರಾಣ ಶಬ್ದಿತನು, ನನ್ನನ್ನು ಉಪಾಸನೆ ಮಾಡು ಎಂದು ಕೌಷೀತಕ್ಯುಪನಿಷತ್ತು ೩. ೧ ರಲ್ಲಿ "**ತ್ವಮೇವ ಮೇವರಂ ವೃಣೀಷ್ವ ಪ್ರಾಣೋಸ್ಮಿ ಪ್ರಜ್ಞಾತ್ಮಾ, ಮಾಮಾಯುರಮೃತ ಮಿತ್ಯುಪಾಸ್ವ**" ಯೆಂದು ಇಂದ್ರನು ಹೇಳುವ ವಾಕ್ಯವಾಗಿರುತ್ತದೆ, ಇಂದ್ರಪ್ರಾಣ ಶಬ್ದದಿಂದ ಹೇಳಲ್ಪಟ್ಟವನು ಯಾರು ಎಂಬ ಚರ್ಚೆಯಲ್ಲಿ ಆನಂದತ್ವ, ಅಜರತ್ವ ಅಮೃತತ್ವಾದಿಗಳು ಹೇಳಲ್ಪಟ್ಟಿರುವದರಿಂದ ಇಂದ್ರಪ್ರಾಣ ಶಬ್ದದಿಂದ ಹೇಳಲ್ಪಟ್ಟವನು ಜೀವ

ನಾದ ಇಂದ್ರನಲ್ಲವೆಂದೂ ತಚ್ಛರೀರಕನಾದ ಪರಮಾತ್ಮನೆಂದೂ ನಿರ್ಧರಿಸಲ್ಪಟ್ಟಿರುತ್ತದೆ. ಆದರೆ ಇಂದ್ರನೇ ಇವನ್ನು **ಮಾಮುಪಾಸ್ವ** ಎಂದು ಹೇಳಿರುವದರಿಂದ ಆತನ ಉಪಾಸನೆಯು ಹೇಗೆ ಮೋಕ್ಷದಾಯಕವಾದ ಪರಮಾತ್ಮೋಪಾಸನೆಯಾಗುತ್ತದೆ ಎಂಬ ಶಙ್ಕಾವಿನಲ್ಲಿ **ಜೀವ ಮುಖ್ಯಪ್ರಾಣ ಲಿಙ್ಗಾನ್ನೇತಿಚೇನ್ನ, ಉಪಾಸಾತ್ರೈವಿಧ್ಯಾತ್, ಆಶ್ರಿತತ್ವಾತ್, ಇಹತದ್ಯೋಗಾತ್"** ಎಂಬ ಸೂತ್ರದ ಮೂಲಕ ಸಮಾಧಾನವು ಹೇಳಲ್ಪಟ್ಟಿರುತ್ತದೆ. ಇಲ್ಲಿ ತ್ವಾಷ್ಟ್ರವಧೆ ಏನು, ಎಲ್ಲಿವರೆಗೂ ಪ್ರಾಣವಿರುತ್ತದೋ ಅಲ್ಲಿವರೆಗೂ ಆಯುಸ್ಸು ಎಂಬುದೇನು, ಹೀಗೆ ಜೀವನಾದ ಇಂದ್ರನೇ ಇಲ್ಲಿ ಉಪಾಸ್ಯನೆಂದು ಪೂರ್ವಪಕ್ಷತಂದರೆ ಹಾಗಲ್ಲವು. ಏಕೆಂದರೆ ಪರಮಾತ್ಮೋಪಾಸನವು ಮೂರುವಿಧವೆಂದು ಹೇಳಲ್ಪಟ್ಟಿರುತ್ತದೆಯಾದುದರಿಂದ; ಹೇಗೆಂದರೆ:—(೧) **ಸತ್ಯತ್ವ** ಜ್ಞಾನತ್ವ ಆನಂದತ್ವ **ದಿವ್ಯಮಙ್ಗಳವಿಗ್ರಹ ಇವುಗಳಿಂದ ಕೂಡಿದವನನ್ನೇ** ಜಗತ್ಕಾರಣನಾದ ಪರಮಾತ್ಮನೆಂದು ಉಪಾಸನೆಯು ಒಂದು ವಿಧವು (೨) ಭೋಕ್ತಾವಾಗಿರುವ, ಪ್ರಕೃತವಲ್ಲಿ ಇಂದ್ರಾದಿ ಶರೀರಕನಾಗಿರುವವನನ್ನೇ ಪರಮಾತ್ಮಾವೆಂದು ಉಪಾಸನೆಯು ಎರಡನೆಯ ವಿಧವು (೩) ಭೋಗ್ಯ ಭೋಗೋಪಕರಣ ಶರೀರಕನಾಗಿರುವವನ ಉಪಾಸನೆಯು ಮೂರನೆಯ ವಿಧವು ಈ ಕೌಷೀತಕೀ ಉಪನಿಷತ್ತಿನಲ್ಲೂ ಈ ಮೂರು ವಿಧ ಪರಮಾತ್ಮೋಪಾಸನೆಯೂ ಹೇಳಲ್ಪಟ್ಟಿರುತ್ತದೆ. (೧) **ಆನನ್ದೋಽಜರೋಽಮೃತಃ** ಎಂಬುದರಲ್ಲಿ ಸ್ವರೂಪಾನುಸಂಧಾನವೂ (೨) **ಮಾಮುಪಾಸ್ವ** ಎಂದು ಇಂದ್ರನು ಹೇಳುವದರಿಂದ **ಭೋಕ್ತೃ** ಶರೀರಕನಾಗಿ ಉಪಾಸನವೂ, (೩) **ಪ್ರಾಣೋಽಸ್ಮಿ** ಎಂಬುದರಿಂದ ಭೋಗ್ಯ **ಭೋಗೋಪಕರಣ** ಶರೀರಕತ್ವಾನುಸಂಧಾನವೂ **ಉಪದೇಶಿಸಲ್ಪಟ್ಟಿರುತ್ತವೆ. ಇಂತಹ ಬ್ರಹ್ಮವಿದ್ಯೆಯಾದ** ಪ್ರತರ್ದನ ವಿದ್ಯೆಯಲ್ಲಿ, ತಾನೇ ಪರಮಾತ್ಮ ಶರೀರನಾಗಿರುವದರಿಂದ ತನ್ನನ್ನೇ ಉಪಾಸನಮಾಡು ಎಂದು ಇಂದ್ರನು ಹೇಳಿರುವದು **ಶಾಸ್ತ್ರೋಕ್ತ**ವಾಗಿರುವದರಿಂದ ಇದರಲ್ಲಿ ಅನ್ಯದೇವತೋಪಾಸನರೂಪದೋಷಕ್ಕೆ ಕಾರಣವೇ ಇಲ್ಲವು ಆದುದರಿಂದ, ಇಂದ್ರಾದಿ **ಶರೀರಕನಾಗ ಮುಮುಕ್ಷುವುಕ್ಕು ಉಪಾಸ್ಯ** ಎಂದು ಹೇಳಿರುತ್ತಾರೆ. ಹಾಗೆಯೇ ಮಧುವಿದ್ಯೆಯಲ್ಲೂ ಸಹ ಆದಿತ್ಯನ ಪೂರ್ವಾದಿ ಅಂಶಗಳು ಕ್ರಮವಾಗಿ ವಸುರುದ್ರಾದಿತ್ಯ ಮರುತ್ಸಾಧ್ಯರಿಗೆ ಮಧವಾಗಿ ಬಹು **ಭೋಗ್ಯವೆಂ**ದೂ ಉಪಾಸ್ಯವೆಂದೂ ಉಪದೇಶಿಸಲ್ಪಟ್ಟಿವೆ. ವಸ್ವಾದಿಗಳಿಗೆ ಸ್ವಶರೀರಕ **ಪರಮಾತ್ಮನೇ** ಉಪಾಸ್ಯವಾದುದರಿಂದ ಅಂತಹ **ಉಪಾಸನೆಯಲ್ಲಿ ಏನೊಂದು ವಿರೋಧವಿಲ್ಲವೆಂದೂ ವಸ್ವಾದಿ** ದೇವತಾವಿಶೇಷಗಳಿಗೂ ಮಧು ವಿದ್ಯೆಯಲ್ಲಿ ಅಧಿಕಾರ ಉಂಟೆಂದು ಶ್ರೀ ಬಾದರಾಯಣರು,

**ವಿದ್ಯಾಙ್ಗಮಾನ ವರ್ಣಾಶ್ರಮಧರ್ಮಙ್ಗಳಿಲುಮ್ ಅವ್ವೋ ದೇವತೈಗಳೈ ಶರೀರಮಾಗಕ್ಕೊಂಡು ನಿರ್ಕ್ಕಿರ ಪರಮಾತ್ಮಾವೇ ಆರಾಧ್ಯನೆನ್ರು ನಿಷ್ಕರ್ಷಿತ್ತಾರ್.**

---

"**ಭಾವನ್ತು ಬಾದರಾಯಣೋಽಸ್ತಿಹಿ**" ಎಂಬ ಸೂತ್ರದಲ್ಲಿ (೧ ೩ ೩೦) ಸ್ಥಾಪಿಸಿರುತ್ತಾರೆ ಇಲ್ಲಿಯೂ ದೇವತಾಂತರೋಪಾಸನೆ ಎಂಬ ವಿರೋಧವೇನೂ ಇಲ್ಲವು; ತಚ್ಛರೀರಕ ಪರಮಾತ್ಮನೇ ಉಪಾಸ್ಯನಾದುದರಿಂದ ಎಂಬ ಭಾವವು.

ಮುಂದೆ ಪೂರ್ವಪಕ್ಷದ ಎರಡನೆಯ ವಿಕಲ್ಪವಾದ ಉಪಾಸನೆಗೆ ಅಙ್ಗವಾದ ನಿತ್ಯನೈಮಿತ್ತಿಕಾನುಷ್ಠಾನದಲ್ಲಿ ಅನ್ಯದೇವತಾ ಭಜನವಿರುವುದರಿಂದ, ಉಪಾಸನವು ಸ್ವರೂಪ ವಿರುದ್ಧವೆಂಬ ಆಕ್ಷೇಪವನ್ನು ಮುಂದಿನವಾಕ್ಯದಿಂದ ಖಂಡಿಸುತ್ತಾರೆ, **ವಿದ್ಯಾಙ್ಗಮಾನ** - ಬ್ರಹ್ಮವಿದ್ಯಾರೂಪ ಉಪಾಸನೆಗೆ ಅಙ್ಗವಾದ, **ವರ್ಣಾಶ್ರಮ ಧರ್ಮಙ್ಗಳಿಲುಮ್** - ವರ್ಣಾಶ್ರಮ ಧರ್ಮಗಳಾದ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನಗಳಲ್ಲಿ, **ಅವ್ವೋ ದೇವತೈಗಳೈ ಶರೀರ ಮಾಗಕ್ಕೊಂಡು ನಿರ್ಕ್ಕಿರ ಪರಮಾತ್ಮಾವೇ** - ಆಯಾ ಸೂರ್ಯ ಅಗ್ನಿ ಮೊದಲಾದ ದೇವತೆಗಳನ್ನೇ ಶರೀರವಾಗಿ ಹೊಂದಿರುವ, ಸರ್ವೇಶ್ವರನೇ, **ಆರಾಧ್ಯನೆನ್ರು** - ಆರಾಧಿಸಲ್ಪಡುವನೆಂದು, **ನಿಷ್ಕರ್ಷಿತ್ತಾರ್** - ಶ್ರೀ ಭಾಷ್ಯಕಾರರು ಸ್ಥಾಪಿಸಿರುತ್ತಾರೆ. ನಿತ್ಯನೈಮಿತ್ತಿಕ ಕರ್ಮಗಳು ಕರ್ಮಯೋಗಕ್ಕೇ ಅಙ್ಗವೆಂದು ಗೀ ೫ ೨೯ ನೆಯ ಶ್ಲೋಕದ ಅವತಾರಿಕೆಯಲ್ಲಿ "**ನಿತ್ಯ ನೈಮಿತ್ತಿಕ ಕರ್ಮೇತಿಕರ್ತವ್ಯತಾಕಸ್ಯ ಕರ್ಮಯೋಗಸ್ಯ ಯೋಗಶಿರಸ್ಕಸ್ಯ**" ಎಂಬದಾಗಿ ಹೇಳಿರುವದರಿಂದ ಭಕ್ತಿಯೋಗನಿಷ್ಠನು ಎಂದಿಗೂ ಬಿಡಲು ಸಾಧ್ಯವಿಲ್ಲವು. ಹಾಗೆಯೇ ಸ್ವತಂತ್ರ ಪ್ರಪತ್ತಿ ನಿಷ್ಠನಿಗೂ, ಪ್ರಪತ್ತಿಗೇನೂ ಅಙ್ಗವಲ್ಲದಿದ್ದರೂ ನಿತ್ಯನೈಮಿತ್ತಿಕಗಳು ಜನ್ಮಕ್ಕೆ ಅಂಟಿರುವುದರಿಂದ ತ್ಯಜಿಸಲು ಸಾಧ್ಯವಿಲ್ಲವು ಈ ನಿತ್ಯ ನೈಮಿತ್ತಿಕಾನುಷ್ಠಾನಗಳಲ್ಲಿ ಅನ್ಯದೇವತೆಗಳು ಆರಾಧಿಸಲ್ಪಡುವದಿಲ್ಲವು ಅವರುಗಳನ್ನೇ ಶರೀರವಾಗಿ ಹೊಂದಿರುವ "**ಭೋಕ್ತಾರಂ ಯಜ್ಞ ತಪಸಾಂ**" ಎಂದು ಹೇಳಿರುವ ಪರಮಾತ್ಮನೇ ಆರಾಧಿಸಲ್ಪಡುವದರಿಂದ ಸ್ವರೂಪ ವಿರುದ್ಧತ್ವಕ್ಕೇ ಕಾರಣವೇ ಇಲ್ಲವು ಇನ್ನೊಂದು ಕಡೆಯಲ್ಲೂ ಶ್ರೀಕೃಷ್ಣಭಗವಾನರನು "**ಅಹಂ ಕ್ರತುಃ ಅಹಂ ಯಜ್ಞಃ ಸ್ವಧಾಹಮಹ ಮೌಷಧಮ್ । ಮನ್ತ್ರೋಽಹಮಹ ಮೇವಾಜ್ಯ ಮಹ ಮಗ್ನಿ ರಹಂಹುತಮ್**"॥ (ಗೀ. ೯. ೧೬) ಸರ್ವೇಶ್ವರನು ವಿಶ್ವಶರೀರಕನಾದುದರಿಂದ ವಿಶ್ವದ ವಸ್ತುಗಳೊಡನೆ ಸಾಮಾನಾಧಿಕರಣ್ಯವು

ಇಲ್ಲಿ ಹೇಳಲ್ಪಟ್ಟಿದೆ. ನಿತ್ಯನೈಮಿತ್ತಿಕಗಳಲ್ಲೂ ಅನ್ಯದೇವತೆಗಳೇ ಶರೀರವಾಗಿವುಳ್ಳ ಪರಮಾತ್ಮನೇ ಆರಾಧಿಸಲ್ಪಡುವವನೆಂಬ ಭಾವವು ಶ್ರೀ ಭಾಷ್ಯಕಾರರು ಹಾಗೆ ಎಲ್ಲಿ ಹೇಳಿರುತ್ತಾರೆ ಎಂದರೆ **"ಚರಾಚರ ವ್ಯಪಾಶ್ರಯಸ್ತು ಸ್ಯಾತ್ತದ್ವ್ಯಪದೇಶೋಽಭಾಕ್ತಸ್ತದ್ಭಾವಭಾವಿತ್ವಾತ್"** (ಬ್ರ. ಸೂ. ೨ ೩ ೧೬) ಎಂಬುದರ ಭಾಷ್ಯದಲ್ಲಿ, ಸ್ಥಾವರ ಜಙ್ಗಮವಸ್ತುವನ್ನು ಬೋಧಿಸುವ ಸಮಸ್ತ ಶಬ್ದವೂ ಪರಬ್ರಹ್ಮವನ್ನು ಬೋಧಿಸುತ್ತದೆಂಬುದು ಮುಖ್ಯವೃತ್ತಿಯಿಂದಲೇ ಎಂದೇ ಭಾವಿಸತಕ್ಕದ್ದು; ಏಕೆಂದರೆ ತೇಜಸ್ಸೇ ಮೊದಲಾದ ಸಮಸ್ತ ವಸ್ತುಗಳಿಗೆ ಆತ್ಮಾವಾಗಿರುವದರಿಂದ ಪರಬ್ರಹ್ಮಭಾವವು ಇರುವದರಿಂದ, **"ಸರ್ವಸ್ಯ ವಸ್ತುನಃ ತಚ್ಛರೀರತಯಾ ತತ್ಪ್ರಕಾರತ್ವಾತ್ ತತ್ತದ್ವಾಚಿನಾಂ ಶಬ್ದಾನಾಂ ತತ್ರೈವಪರ್ಯವಸಾನಾತ್"** ಎಂದರೆ "ಸಮಸ್ತ ವಸ್ತುಗಳೂ (ಇದರಿಂದ ಚೇತನಾಚೇತನವೆಲ್ಲಾ ಹೇಳಲ್ಪಟ್ಟಿತು) ಪರಮಾತ್ಮನಿಗೆ ಶರೀರವಾಗಿರುವದರಿಂದ, ಇವುಗಳೆಲ್ಲವೂ ಪ್ರಕಾರವು, ಪರಮಾತ್ಮನು ಪ್ರಕಾರಿಯು, ಆದುದರಿಂದ ಅವುಗಳನ್ನೆಲ್ಲಾ ಬೋಧಿಸುವ ಶಬ್ದಗಳಿಗೆ ಪರಮಾತ್ಮನಲ್ಲೇ ಅನ್ವಯವು" ಎಂದು ಶ್ರೀ ಭಾಷ್ಯದಲ್ಲಿ ಹೇಳಿರುತ್ತಾರೆಂಬ ಭಾವವು. ಆದುದರಿಂದ ಸೂರ್ಯ, ಅಗ್ನಿ ಮೊದಲಾದ ಶಬ್ದಗಳು ತತ್ತಚ್ಛರೀರಕ ಪರಮಾತ್ಮನನ್ನೇ ಬೋಧಿಸುತ್ತವೆ. ಈ ಅಭಿಪ್ರಾಯವನ್ನೇ ಸ್ವಾಮಿ ವೇದಾಂತದೇಶಿಕರು ಶರಣಾಗತಿ ದೀಪಿಕೆಯಲ್ಲೂ ವ್ಯಕ್ತಪಡಿಸಿರುತ್ತಾರೆ.

**"ವಿಶ್ವಂ ಶುಭಾಶ್ರಯವದೀಶ ವಪುಸ್ತ್ವದೀಯಂ ।**
**ಸರ್ವಾಗಿರಸ್ತ್ವಯಿ ಪತಂತಿ ತತೋಽಪಿ ಸರ್ವಾಃ ॥**
**ಸರ್ವೇ ಚ ವೇದ ವಿಧಯಸ್ತ್ವದನುಗ್ರಹಾರ್ಥಾಃ ।**
**ಸರ್ವಾಧಿಕಸ್ತ್ವಮಿತಿ ತತ್ತ್ವವಿದಸ್ತದಾಹುಃ ॥**

ನಿನಗೆ ದಿವ್ಯ ಮಙ್ಗಳ ವಿಗ್ರಹವು ಹೇಗೆ ಶರೀರವೋ ಹಾಗೆಯೇ ಸಮಸ್ತ ವಿಶ್ವವೂ ನಿನ್ನ ಶರೀರವು. ಶರೀರವನ್ನು ಬೋಧಿಸುವ ಶಬ್ದಗಳು ಶರೀರಿಯನ್ನೂ ಸಹ ಬೋಧಿಸುವದರಿಂದ ಎಲ್ಲವನ್ನು ವ್ಯವಹರಿಸುವ ಶಬ್ದಗಳು ನಿನ್ನನ್ನೂ ಬೋಧಿಸುತ್ತವೆ, ಆದುದರಿಂದ **"ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯೋ ದಿಶಶ್ಚ । ನದ್ಯಸ್ಸಮುದ್ರಾಶ್ಚ ಸಏವ ಸರ್ವಂ ಯದಸ್ತಿ ಯನ್ನಾಸ್ತಿ ಚ ವಿಪ್ರವರ್ಯ"** (ವಿ ಪು ೨.೧೨.೩೮) ಎಂದು ಹೇಳಿರುವಹಾಗೆ ಸಮಸ್ತ ಚಿದಚಿತ್ತುಗಳೂ ವಿಷ್ಣುವಿಗೆ ಶರೀರವಾದುದರಿಂದ ಎಲ್ಲಾ ಶಬ್ದಗಳೂ ತತ್ತಚ್ಛರೀರಕ ಪರಮಾತ್ಮನನ್ನೇ ಬೋಧಿಸುವದರಿಂದ ಎಲ್ಲವೂ ವಿಷ್ಣುವೇ ಎಂಬ ಸಾಮಾನಾಧಿಕರಣ್ಯವು. ನಿತ್ಯನೈಮಿತ್ತಿಕಾದಿ ವೇದವಿಧಿಗಳಿಗೆ ಅನುಸಾರವಾದ ಅನುಷ್ಠಾನಗಳೆಲ್ಲಾ ವಿಷ್ಣುವಿನ ಅನುಗ್ರಹ ಸಾಧಕಗಳೆಂದು ಹೇಳಲ್ಪಟ್ಟಿರುತ್ತವೆ. ಆದು

**ಆಗೈಯಾಲ್ ಸ್ವತಂತ್ರನಾಗ ಶಿಲದೇವತೈಗಳೈಪ್ಪತ್ತಿನಾಲುಮ್, ಫಲಾಂತರ ಕಾಮನೈಯಾಲೇ ತನ್ನುಡೈಯ ನಿತ್ಯನೈಮಿತ್ತಿಕಙ್ಗಳುಕ್ಕು ಪುರಮ್ಬಾನ ದೇವತಾಂತರಾನ್ವಯಮ್ ವರಿಲುಮ್ ಪರಮೈಕಾಂತಿತ್ವಕ್ಕು ವಿರುದ್ಧಮಾಮ್.**

---

ದರಿಂದ ನಿತ್ಯ ನೈಮಿತ್ತಿಕಗಳಲ್ಲಿ ಸೂರ್ಯ, ಅಗ್ನಿ, ಇಂದ್ರ ಮೊದಲಾದ ದೇವತೆಗಳು ಆರಾಧಿಸಲ್ಪಟ್ಟರೂ, ತತ್ತಚ್ಛರೀರಕ ಪರಮಾತ್ಮನೇ ಆರಾಧಿಸಲ್ಪಡುವದರಿಂದ ಪ್ರಪನ್ನನಿಗೇನೂ ಬಾಧಕವೇನೂ ಇಲ್ಲವೆಂಬ ಭಾವವು; ಇದೂ ಅಲ್ಲದೆ ಸಾತ್ವಿಕ ತ್ಯಾಗವೂ ನಡೆಯುವದರಿಂದ ಈಷದಪಿ ವಿರೋಧವಿಲ್ಲವೆಂಬುದು ಏರ್ಪಟ್ಟಿತು. ಆದರೆ ಅನ್ಯದೇವತೆಯ ಹೆಸರಿನಲ್ಲಿ ನಡೆಸಿದ ಆರಾಧನೆಯು ಪರಮಾತ್ಮನಿಗೆ ಹೇಗೆ ಸಲ್ಲುತ್ತದೆ ಎಂಬ ಶಙ್ಕೆಯಿನಲ್ಲಿ ಹಿಂದೆ ಸ್ವಾಮಿ ದೇಶಿಕರವರು ಕೊಟ್ಟಿರುವ ದೃಷ್ಟಾಂತವನ್ನು ಇಲ್ಲಿ ಜ್ಞಾಪಕಕ್ಕೆ ತರಬಹುದು. ಒಬ್ಬ ರಾಜನು ಪೀತಾಂಬರ ಕವಚವನ್ನು ಧರಿಸಿದ್ದರೆ, ಅದರಮೇಲೆ ಒಂದು ಪುಷ್ಪಮಾಲೆಯನ್ನು ಹಾಕಿದರೆ, ಕವಚಕ್ಕೆ ಅನ್ವಯಿಸದೆ ಅದು ರಾಜನಿಗೆ ಹೇಗೆ ಅನ್ವಯಿಸುತ್ತದೋ ಹಾಗೆಯೇ ಸೂರ್ಯಾಗ್ನಿ ರುದ್ರೇಂದ್ರಾದಿ ವಿಶಿಷ್ಟ ಪರಮಾತ್ಮನನ್ನು ಆರಾಧಿಸಿದರೂ, ಪರಮಾತ್ಮನೇ ಆರಾಧಿಸಲ್ಪಡುವನು ಎಂಬ ತಾತ್ಪರ್ಯವು ಹೀಗೆ ನಿತ್ಯನೈಮಿತ್ತಿಕಙ್ಗಳ ಮೂಲಕ ಅನ್ಯದೇವತಾ ಹೆಸರಿನಲ್ಲಿ ನಡೆಸುವ ಪಂಚಮಹಾಯಜ್ಞಾದಿಗಳು ಪ್ರಪನ್ನನ ಪರಮೈಕಾಂತಿತ್ವಕ್ಕೆ ವಿರೋಧವಲ್ಲವೆಂದು ಹೇಳಲ್ಪಟ್ಟಿತು

ನಿತ್ಯನೈಮಿತ್ತಿಕಾದಿಗಳೇ ಆಗಲಿ, ಅಥವ ಇತರ ಕಾಮ್ಯಕರ್ಮಗಳ ರೂಪದಲ್ಲಿ ಅನ್ಯದೇವತಾಭಜನವಾಗಲಿ ಪ್ರಪನ್ನನ ಪರಮೈಕಾಂತಿತ್ವಕ್ಕೆ ಯಾವಾಗ ವಿರೋಧವಾಗಬಹುದೆಂಬುದನ್ನು, **ಆಗೈಯಾಲ್** ಎಂಬ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. ಎರಡು ಸಂದರ್ಭಗಳಲ್ಲಿ ಮಾತ್ರ ವಿರೋಧವಾಗಬಹುದು ಎಂದು ಹೇಳುತ್ತಾರೆ ಹೇಗೆಂದರೆ—**ಆಗೈಯಾಲ್** - ಹೀಗೆ ನಿತ್ಯನೈಮಿತ್ತಿಕಾನುಷ್ಠಾನಗಳಲ್ಲಿ ತತ್ತದ್ದೇವತಾಶರೀರಕನಾದ ಪರಮಾತ್ಮನೇ ಆರಾಧಿಸಲ್ಪಡುವದರಿಂದ, (೧) **ಸ್ವತಂತ್ರನಾಗ ಶಿಲದೇವತೆಗಳೈಪ್ಪತ್ತಿನಾಲುಮ್** - **ತತ್ತತ್ತಚ್ಛರೀರಕ**ನೆಂಬ ಭಾವನೆಯಲ್ಲದೆ ಆ ಕೆಲವು ದೇವತೆಗಳನ್ನೇ ನಿತ್ಯ ನೈಮಿತ್ತಿಕಗಳಲ್ಲೇ ಆರಾಧಿಸಿದರೂ, (೨) ಅಥವಾ **ಫಲಾಂತರ ಕಾಮನೈಯಾಲೇ** - **ಮೋಕ್ಷೇತರ** ಫಲಕಾಮನೆಯಿಂದ **ತನ್ನುಡೈಯ ನಿತ್ಯನೈಮಿತ್ತಙ್ಗಳುಕ್ಕು ಪುರಮ್ಬಾನ** - ತನ್ನ ನಿತ್ಯ ನೈಮಿತ್ತಿಕಗಳಿಗೆ ಹೊರಗಾದ ಎಂದರೆ ಸೇರದ, **ದೇವತಾನ್ತರಾನ್ವ**

**ಯುವ್ ವರಿಲುವ್** – ದೇವತಾಂತರ ಸಂಬಂಧ ಬಂದರೂ ಸಹ ಈ ಎರಡು ಸಂದರ್ಭದಲ್ಲೂ, **ಪರಮೈಕಾಂತಿತ್ವಕ್ಕು ವಿರುದ್ಧವೂವ್ ಪ್ರಪನ್ನ**ನ ಪರಮೈಕಾಂತಿತ್ವಕ್ಕೆ ವಿರುದ್ಧವಾದುದಾಗುತ್ತದೆ. ನಿತ್ಯನೈಮಿತ್ತಿಕಗಳಲ್ಲೂ, ಅವುಗಳಲ್ಲಿ ಹೇಳಿರುವ ದೇವತೆಗಳನ್ನು ಕುರಿತು ಬೇರೆ ಫಲಗಳಿಗಾಗಿ ಸ್ವತಂತ್ರಿಸಿ ಆ ದೇವತೆಗಳನ್ನು ಆರಾಧಿಸಿದರೀಗ ಐಕಾಂತ್ಯಕ್ಕೆ ವಿರೋಧವು ಇತರ ಕಾಮ್ಯ ಕರ್ಮಗಳನ್ನು ಆಯಾ ಫಲಗಳಿಗಾಗಿ ಆ ಕಾಮ್ಯ ಕರ್ಮಗಳಲ್ಲಿ ಹೇಳಿರುವ ದೇವತೆಗಳನ್ನು ಸ್ವತಂತ್ರಿಸಿಯೇ ಆಗಲಿ, ಅಥವಾ ಪರಮಾತ್ಮ ಶರೀರಕವೆಂಬ ಭಾವನೆಯಿಂದಾಗಲಿ ಆರಾಧಿಸಿದರೂ, ಮೋಕ್ಷೇತರ ಕಾಮ್ಯಫಲಕ್ಕಾಗಿ ಆರಾಧಿಸುವದರಿಂದ ಐಕಾಂತ್ಯಕ್ಕೆ ವಿರುದ್ಧವೂ ಆಗುತ್ತದೆ. ಹಾಗೆ ಅನುಷ್ಠಿಸದೆ ನಿತ್ಯನೈಮಿತ್ತಿಕಗಳು ತನಗೆ ಆಜ್ಞಾ ಕೈಙ್ಕರ್ಯಗಳಾದುದರಿಂದ ಮಾಡಿಯೇ ತೀರಬೇಕು, ಇಲ್ಲದಿದ್ದರೆ ಪ್ರತ್ಯವಾಯವು ಎಂಬ ಜ್ಞಾನದಿಂದ ಫಲಾಭಿಸಂಧಿಯಿಲ್ಲದೆ, ಈ ಅನುಷ್ಠಾನಗಳಿಂದ ಆಯಾದೇವತಾ ಶರೀರಕನಾದ ಪರಮಾತ್ಮನೇ ಆರಾಧಿಸಲ್ಪಡುವನೆಂಬ ದೃಢ ನಂಬಿಕೆಯಿಂದ ಸಾತ್ವಿಕ ತ್ಯಾಗಪೂರ್ವಕವಾಗಿ ಪರಮಾತ್ಮನಲ್ಲಿ ಸಮರ್ಪಿಸಿಬಿಟ್ಟರೆ, ಪರಮೈಕಾಂತಿತ್ವಕ್ಕೂ ವಿರೋಧವಿಲ್ಲವು, ಸ್ವರೂಪ ವಿರೋಧವೂ ಇಲ್ಲವು.

ಆದರೆ ಪ್ರಪನ್ನನಿಗೆ ಅನ್ಯದೇವತಾ ಸಂಬಂಧವೇ ಕೂಡದೆಂದು ಸ್ಥಾಪಿಸಿ, **ನಾನ್ಯಂದೇವಂ ನಮಸ್ಕುರ್ಯಾತ್** ಎಂದೂ "**ನಯಷ್ಟವ್ಯಾಮಯಾ ಯೂಯುವ್ ಕದಾಚಿದಪಿ ದೇವತಾಃ**" ಎಂದೂ ವಿಧಿಸಿಬಿಟ್ಟು, **ಯಾವಜ್ಜೀವಮ್ ಅಗ್ನಿಹೋತ್ರಂ ಜುಹೋತಿ**", **ಅಹರಹಸ್ಸಂಧ್ಯಾಮುಪಾಸೀತ** ಇತ್ಯಾದಿ ವಿಧಿಗಳ ಮೂಲಕ ಅನ್ಯದೇವತಾ ಸಂಬಂಧವನ್ನೂ ವಿಧಿಸುವದು, ಪರಸ್ಪರ ವಿರೋಧವಲ್ಲವೇ? ಎಂಬ ಆಕ್ಷೇಪ ತಂದರೆ, ಶ್ರೀ ವ್ಯಾಸ ಮಹರ್ಷಿಯು ತಮ್ಮ ಪ್ರಿಯಶಿಷ್ಯರಾದ ಜೈಮಿನ್ಯಾಚಾರ್ಯರು ಹೇಳಿದ ಸಮಾಧಾನವನ್ನು ಮುಂದೆ ಉದಾಹರಿಸುತ್ತಾರೆ. ಈ ನಿತ್ಯ ನೈಮಿತ್ತಿಕಾನುಷ್ಠಾನಗಳಲ್ಲೂ ಸೂರ್ಯ, ಅಗ್ನಿ, ರುದ್ರ, ಇಂದ್ರಾದಿ ಶಬ್ದಗಳೆಲ್ಲಾ ವ್ಯುತ್ಪತ್ತಿಮೂಲಕವಾಗಿ ಪರಮಾತ್ಮನನ್ನೇ ಬೋಧಿಸುವದರಿಂದ ದೇವತಾಂತರ ಸಂಬಂಧ ಪ್ರಸಙ್ಗವೇ ಇಲ್ಲವಾದುದಾಗುತ್ತದೆ. ಈ ಭಾವನೆಯಿಂದಲಾದರೂ ನಿತ್ಯನೈಮಿತ್ತಿಕ ಕರ್ಮಾನುಷ್ಠಾನವನ್ನು ನಡೆಸಿ, ಭಗವನ್ನಿಗ್ರಹಕ್ಕೆ ಪಾತ್ರರಾಗದೇ ಇರಿ ಎಂದು ಪರಮ ಸುಹೃತ್ತ್ವೇನ ಉಪದೇಶಿಸುತ್ತಾರೆ.

**ಫಲಾಂತರ ಸಙ್ಗಮನ್ನಿಕ್ಕೇ** – ಮೋಕ್ಷೇತರಗಳಾದ ಐಹಿಕ ಫಲಗಳ ಸಙ್ಗವನ್ನು ತ್ಯಜಿಸಿ, ಪರಮಾತ್ಮನಿಗೆ, ದೇವತೆಗಳನ್ನು ವಿಶೇಷಣವಾಗಿ, **ವೈತ್ತು**–**ಇಟ್ಟು** ಎಂದರೆ ಭಾವಿಸಿ, **ಅಗ್ನ್ಯಾದಿ ದೇವ ವಿಶೇಷಣಙ್ಗಳೈ** - ಅಗ್ನಿ, ಆದಿ ಶಬ್ದ

ಫಲಾಂತರ ಸಙ್ಗಮು ಮನ್ರಿಕ್ಕೇ ಪರಮಾತ್ಮಾವುಕ್ಕು ವಿಶೇಷಙ್ಗಳ್ಕೈ ದೇವತೆಗಳ್ಕೈ ವೈತ್ತು ಅಗ್ನ್ಯಾದಿ ದೇವ ವಿಶೇಷಙ್ಗಳಿಲೇ ವಿಶೇಷ್ಯ ಪರ್ಯಂತ ಮಾಗ ಅನುಸಂಧಿತ್ತುಮ್, (೧) "ಸಾಕ್ಷಾದಪ್ಯವಿರೋಧಮ್ ಜೈಮಿನಿ." ಎಙ್ಗಿರ ನ್ಯಾಯತ್ತಾಲೆ ಅಗ್ನೀಂದ್ರಾದಿ ಶಬ್ದಙ್ಗಳ್ಕೈ ಸಾಕ್ಷಾದ್ಭಗವದ್ವಾಚಕಙ್ಗಳಾಗ ಅನುಸಂಧಿತ್ತುಮ್, ಸ್ವಧರ್ಮಾನುಷ್ಠಾನ ಪಣ್ಣು ಮಿಡತ್ತಿಲ್, ವಿಧಿ ಬಲತ್ತಾಲೇ ಪರಮೈಕಾಂತಿತ್ವ ವಿರೋಧಮಿಲ್ಲೈ,

ದಿಂದ ಸೂರ್ಯ, ಇಂದ್ರಾದಿಗಳು ಹೇಳಲ್ಪಟ್ಟರು, ಅಗ್ನಿಯೇ ಮೊದಲಾದ ದೇವತಾ ವಿಶೇಷಗಳನ್ನು, **ವಿಶೇಷ್ಯ ಪರ್ಯಂತಮಾಗ ಅನುಸಂಧಿತ್ತು** - ವಿಶೇಷ್ಯನಾದ ಪರಮಾತ್ಮಪರ್ಯಂತವೆಂದು ಅನುಸಂಧಾನಮಾಡಿ, **"ಸಾಕ್ಷಾದಪ್ಯವಿರೋಧಂ ಜೈಮಿನಿಃ"** ಎಂದರೆ "ಈ ಸೂರ್ಯ, ಅಗ್ನಿ, ಬ್ರಹ್ಮರುದ್ರೇಂದ್ರಾದಿ ಶಬ್ದಗಳೆಲ್ಲಾ ವ್ಯುತ್ಪತ್ತಿಮೂಲಕ ಸಾಕ್ಷಾತ್ತಾಗಿ ಪರಮಾತ್ಮನನ್ನೇ ಬೋಧಿಸುತ್ತವೆ ಎಂದು ಭಾವಿಸಿದರೂ, ಜೈಮಿನ್ಯಾಚಾರ್ಯರು ಏನೊಂದೂ ವಿರೋಧವಿಲ್ಲವೆಂದು ತಿಳಿದರು" **ಎಙ್ಗಿರನ್ಯಾಯತ್ತಾಲೆ** - ಎಂಬುವ ನ್ಯಾಯದ ಪ್ರಕಾರ ಅಗ್ನಿ, ಇಂದ್ರ, ಸೂರ್ಯ, ರುದ್ರ ಶಬ್ದಗಳನ್ನು, **ಸಾಕ್ಷಾದ್ಭಗವದ್ವಾಚಕಙ್ಗಳಾಕ** - ಸಾಕ್ಷಾತ್ತಾಗಿ ಭಗವನ್ತನನ್ನೇ ಬೋಧಿಸುವುದಾಗಿ, **ಅನುಸನ್ಧಿತ್ತು** - ಅನುಸಂಧಾನಮಾಡಿ, **ಸ್ವಧರ್ಮಾನುಷ್ಠಾನಮ್** - ತನಗೆ ವಿಹಿತವಾದ ವರ್ಣಾಶ್ರಮ ಧರ್ಮವನ್ನು, ಎಂದರೆ ನಿತ್ಯನೈಮಿತ್ತಿಕಗಳನ್ನು, **ಪಣ್ಣುಮಿಡತ್ತಿಲ್**-ಅನುಷ್ಠಿಸುವ ಸಂದರ್ಭದಲ್ಲಿ, **ವಿಧಿಬಲತ್ತಾಲೆ** - ಶಾಸ್ತ್ರಪ್ರಮಾಣದ ಬಲದಿಂದ, ಪರಮೈಕಾಂತಿತ್ವಕ್ಕೆ, **ವಿರೋಧಮಿಲ್ಲೈ** - ವಿರೋಧವಿಲ್ಲವು. ಸಂಧ್ಯಾವಂದನಾದಿ ಭಾಷ್ಯಗಳಲ್ಲಿ ಈ ಜೈಮಿನ್ಯಾಚಾರ್ಯರ ಅಭಿಪ್ರಾಯವನ್ನೇ ಮನಸ್ಸಿನಲ್ಲಿಟ್ಟು, ಮಂತ್ರಗಳನ್ನೆಲ್ಲಾ ಆದಿತ್ಯಾಗ್ನಿ ದೇವತೆಗಳ ಪರವಾಗಿ ಅನ್ವಯಿಸದೆ ಸರ್ವೇಶ್ವರನ ಪರವಾಗಿಯೇ ಅನ್ವಯಿಸಿರುತ್ತಾರೆ, **ಸಾಕ್ಷಾದಪ್ಯವಿರೋಧಂ ಜೈಮಿನಿಃ** - ಎಂಬ ಸೂತ್ರಾಭಿಪ್ರಾಯವೇನೆಂದರೆ **"ಸ ಏಷೋಗ್ನಿರ್ವೈಶ್ವಾನರಃ"** ಎಂಬ ಪ್ರಮಾಣದಲ್ಲಿ ಅಗ್ನಿ ಶಬ್ದವು ಜಾಠರಾಗ್ನಿ ಶರೀರಕನಾದ ಪರಮಾತ್ಮನನ್ನು ವೈಶ್ವಾನರ ಶಬ್ದವು ಹೇಗೆ ಬೋಧಿಸುತ್ತದೆಯೊ, ಹಾಗೆಯೇ ಅಗ್ನಿ ಶಬ್ದವು ಉಪಾಸ್ಯವಾಗಿ ಹೇಳಿರುವದರಿಂದ ಅಗ್ನಿದೇವತೆಯಲ್ಲವು ಅಗ್ನಿಶರೀರಕನಾದ ಪರಮಾತ್ಮನೆಂದು ಶ್ರೀಬಾದರಾಯಣರು ಅಭಿಪ್ರಾಯಪಟ್ಟರು, ಅವರ ಶಿಷ್ಯ

(೧) ಬ್ರ. ಸೂ. ೧ ೨ ೩೯

ರಾದ ಜೈಮಿನ್ಯಾಚಾರ್ಯರಾದರೋ, ಸಾಕ್ಷಾತ್ - ವ್ಯುತ್ಪತ್ತಿಮೂಲಕ ಸಾಕ್ಷಿತ್ತಾಗಿ ಪರಮಾತ್ಮನನ್ನೇ ಈ ವೈಶ್ವಾನರ ಶಬ್ದಕ್ಕೆ ಸಾಮಾನಾಧಿಕರಣ್ಯದಿಂದ ಹೇಳಲ್ಪಟ್ಟ ಅಗ್ನಿಶಬ್ದವೂ ಬೋಧಿಸುತ್ತದೆಂದೂ ಹೇಳಿದರೂ, ಅವಿರೋಧಂ- ವಿರೋಧವೇನೂ ಇಲ್ಲವು, ವ್ಯುತ್ಪತ್ತಿಯು ಹೇಗೆಂದರೆ, ವಿಶ್ವೇಚ ನರಾಶ್ಚ-ವಿಶ್ವನರಾಃ, ವಿಶ್ವನರಾಣಾಂ ನೇತಾ ವೈಶ್ವಾನರಃ, ಸಮಸ್ತ ಚೇತನಾಚೇತನರಿಗೂ ಯಾರು ನಿಯಂತೃವೋ, ಆತನು ವೈಶ್ವಾನರನು, ಈ ದೃಷ್ಟಾಂತಾನುಸಾರವಾಗಿ, ಇದು ಹೇಗೆ ಭಗವದ್ವಾಚಕವೋ ಹಾಗೆಯೇ ಅಗ್ರಂ ನಯತೀತ್ಯಗ್ನಿಃ ಎಂದು ನಿರುಪಾಧಿಕನಾಗಿ ಮುಂದೆ ನಿಂತು ಉಪಾಯನಾಗಿ ಕರೆದುಕೊಂಡು ಹೋಗುವವನು ಅಗ್ನಿಯು", ಎಂಬುದು ಸೂತ್ರಾರ್ಥವು. ಹೀಗೆ ಭಾವಿಸಿದುದಾದರೆ ಅನ್ಯದೇವತಾ ಸಂಬಂಧವೇ ನಿತ್ಯನೈಮಿತ್ತಿಕಾನುಷ್ಠಾನಗಳಲ್ಲಿಲ್ಲದಿರುವದರಿಂದ ಆಜ್ಞಾಕೈಂಕರ್ಯಗಳಾಗಿ ಅವಶ್ಯಾನುಷ್ಠೇಯಗಳೇ ಎಂಬ ತಾತ್ಪರ್ಯವು. ಹಾಗೆಯೇ ಸೂರ್ಯ, ಆದಿತ್ಯ ಶಬ್ದಗಳಿಗೂ ಪರಮಾತ್ಮಪರವಾಗಿಯೇ ಜ್ಞಾನಿಗಳು ವ್ಯಾಖ್ಯಾನ ಮಾಡಿರುತ್ತಾರೆ. ಹಾಗೆಯೇ ಸಂಧ್ಯಾವಂದನೆಯಲ್ಲೂ "ಅಹಸ್ತದವಲುಂಪತು, ರಾತ್ರಿಸ್ತದವಲುಂಪತು" ಅಹಸ್ಸು ರಾತ್ರ್ಯಭಿಮಾನದೇವತೆಗಳು ಪಾಪವನ್ನು ನಾಶಮಾಡಲಿ ಎಂದರ್ಥಹೇಳದೆ, ಅವುಗಳಲ್ಲಿ ತೋರಿಬರುವ ಧಾತ್ವರ್ಥಗಳಿಗನುಸಾರವಾಗಿ ಪರಮಾತ್ಮನೆಂದೇ ವ್ಯಾಖ್ಯಾನಮಾಡಿರುತ್ತಾರೆ, ಆದುದರಿಂದ ಪರಮೈಕಾಂತಿತ್ವಕ್ಕೆ ವಿರೋಧವೇ ಮೊದಲಾದ ಯಾವ ವಿಧ ದೋಷಗಳನ್ನಾಗಲಿ ಆರೋಪಿಸಿ ಅವುಗಳನ್ನು ಪರಿತ್ಯಾಗಮಾಡುವದು ಪ್ರಬಲ ಭಗವನ್ನಿಗ್ರಹಕ್ಕೆ ಸಿಕ್ಕಿದಹಾಗೆ ಆಗುತ್ತದೆಂಬುದು ಮುಖ್ಯತಾತ್ಪರ್ಯವು.

ಈ ಸಂದರ್ಭದಲ್ಲಿ ಇನ್ನೊಂದ ಪೂರ್ವಪಕ್ಷವನ್ನು ತರಬಹುದು; ಸೂರ್ಯ, ಅಗ್ನಿ ಮೊದಲಾದ ಶಬ್ದಗಳು ಮುಖ್ಯ ವೃತ್ತಿಯಿಂದ ರೂಢಿಯಲ್ಲಿ ಸೂರ್ಯದೇವತೆ ಅಗ್ನಿದೇವತೆಯನ್ನು ಬೋಧಿಸುವಾಗ ಅದನ್ನು ಬಿಟ್ಟು ಅವುಗಳನ್ನು ಪರಮಾತ್ಮನಲ್ಲಿ ಅನ್ವಯಿಸಿದರೆ, ಶಾಸ್ತ್ರಗಳಲ್ಲಿ, ಅವು ಒಂದುಕಡೆ ಪರಮಾತ್ಮನನ್ನೂ, ಇನ್ನೊಂದುಕಡೆ ತತ್ತದ್ದೇವತೆಗಳನ್ನೂ ಬೋಧಿಸಿದರೆ ಅವ್ಯವಸ್ಥೆಯುಂಟಾಗುವದಿಲ್ಲವೇ ? ಹಾಗೇನೂ ಇಲ್ಲವು, ಏಕೆಂದರೆ, ಪರಮಾತ್ಮನಲ್ಲಿ ಅನ್ವಯಿಸವೆ ತತ್ತದ್ದೇವತೆಗಳೆಂದು ಅರ್ಥಹೇಳಿದರೂ ಚಾರ್ವಾಕನು ದೇಹವೇ ಆತ್ಮ ಎಂದು ತಿಳಿದು ಚಂದನ ಹಾರಾದಿಗಳನ್ನು ಧರಿಸಿದರೆ, ಅದರ ಭೋಗವು ಆತ್ಮನಿಗೇನೆ ಹೇಗೆ ಸಲ್ಲುತ್ತದೋ, ಹಾಗೆಯೇ ತತ್ತಚ್ಛರೀರಕ ದೇವತೆ ಎಂದು ಹೇಳಿದರೂ ಅದೂ ಪರಮಾತ್ಮನಲ್ಲೇ ಅನ್ವಯಿಸುವದರಿಂದ ಎರಡುವಿಧವಾದ ಅರ್ಥಗಳಿಂದಲೂ ಅವ್ಯವಸ್ಥೆಏನೂಇಲ್ಲವು.

**ಅ ಭಕ್ತಿ ವಿಧಿಃ ಅಭಿಚಾರಾದಿ ವಿಧಿವತ್ ಪ್ರಪತ್ತಿ ಪ್ರರೋಚನಾರ್ಥ ಇತಿ ಪಕ್ಷಂ ದೂಷಯತಿ**

**ಅನಾಲುಮ್ ಅಭಿಚಾರಾದಿಗಳ್ಳೈ ವಿಧಿತ್ತ ಕಟ್ಟಳೈಯಿಲೆ ಶಾಸ್ತ್ರ ಪ್ರರೋಚನಾದಿಗಳಿಲ್ ಅಭಿಸಂಧಿಯಾಲೆ ಅಧಿಕಾರಿ ವಿಶೇಷಣತ್ತಿಲೆ**

---

ಅನ್ಯದೇವತೆಯಲ್ಲಿ ಮಾಡಿದ ಆರಾಧನೆ ಎಲ್ಲವೂ ಪರಮಾತ್ಮನನ್ನೇ ಹೋಗಿ ಸೇರುತ್ತವೆ ಎಂಬುದಕ್ಕೆ ಅನೇಕ ಶಾಸ್ತ್ರಪ್ರಮಾಣಗಳುಂಟು ಭಗವದ್ಗೀತೆಯಲ್ಲಿ

**"ಯೇಽಪ್ಯನ್ಯ ದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ।**
**ತೇಽಪಿ ಮಾಮೇವ ಕೌಂತೇಯ ಯಜನ್ತ್ಯವಿಧಿಪೂರ್ವಕಂ॥**(ಗೀ ೯.೨೩
**ಯೋ ಯೋ ಯಾಂ ಯಾಂ ತನುಂ ಭಕ್ತ ಶ್ಶ್ರದ್ಧಯಾರ್ಚಿತು ಮಿಚ್ಛತಿ।**
**ತಸ್ಯತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ॥** (ಗೀ ೭.೨೧)
**ಲಭತೇಚ ತತಃ ಕಾಮಾ ನ್ಮಯೈವ ವಿಹಿತಾ ನ್ಹಿ ತಾನ್"**

**"ಅನ್ಯದೇವತೆಗಳಲ್ಲಿ** ಭಕ್ತಿಯನ್ನು ತೋರಿ ಆರಾಧಿಸುವವರೂ ಕೂಡ ನನ್ನನ್ನೇ ಆರಾಧಿಸುವರು, ಆದರೆ ಕ್ರಮತಪ್ಪಿ ಆರಾಧಿಸುವರು."ಎಂಬುದೂ "ಯಾರು ಶ್ರದ್ಧೆಯಿಂದ ನನ್ನ ಶರೀರಗಳಾದ ಅನ್ಯದೇವತೆಗಳನ್ನು ಭಕ್ತಿಯಿಂದ ಆರಾಧಿಸಲು ಅಪೇಕ್ಷಿಸುವರೋ, ಅವರಿಗೆ ನಿಶ್ಚಲವಾದ ಶ್ರದ್ಧೆಯನ್ನುಂಟುಮಾಡುವನೂ ನಾನೇ, ಆ ಭಕ್ತರು ಕೋರಿದ ಅಭೀಷ್ಟಗಳನ್ನು ಆ ದೇವತೆಗಳ ಮೂಲಕವಾಗಿ ಕೊಡುವವನೂ ನಾನೇ" ಎಂಬುದೂ, ಈ ಶ್ಲೋಕಗಳ ತಾತ್ಪರ್ಯವು. ಆದುದರಿಂದ ಶಾಸ್ತ್ರಾರ್ಥದ ಅವ್ಯವಸ್ಥೆಯೇನೂ ಇದರಿಂದ ಪ್ರಾಪ್ತವಾಗುವದಿಲ್ಲವು.

**ಭಕ್ತಿಯನ್ನು ವಿಧಿಸಿರುವದ, ಅಭಿಚಾರಾದಿಗಳು ಶಾಸ್ತ್ರ ಪ್ರರೋಚನಾರ್ಥಕ್ಕಾಗಿ ಹೇಗೋ ಹಾಗೆ ಪ್ರಪತ್ತಿ ಪ್ರರೋಚನಾರ್ಥಕ್ಕಾಗಿ ಎಂಬ ವಾದದ ನಿರಾಸವು.**

---

ಮೊದಲು ಪೂರ್ವಪಕ್ಷವನ್ನು **"ಅನಾಲುಮ್"** ಎಂದಾರಂಭಿಸಿ **"ನಿನ್ನೈಶ್ಶು ನಿಂದಿತ್ತದು"** ಎನ್ನುವವರೆಗೂ ಅನುವಾದಮಾಡಿ **"ಇದುವುಮ್ ಅತ್ಯಂತಾನುಪಪನ್ನಂ"** ಎಂದಾರಂಭಿಸಿ ಖಂಡಿಸುತ್ತಾರೆ. **ಅನಾಲುಮ್**– ಹಿಂದಿನ ಏಕಾಂತ್ಯಪಕ್ಷರೂಪ ಸ್ವರೂಪ ವಿರುದ್ಧತ್ವವಿಲ್ಲವೆಂದು ಒಪ್ಪಿಕೊಂಡರೂ, **ಅಭಿಚಾರಾದಿಗಳ್ಳೈ ವಿಧಿತ್ತ ಕಟ್ಟಳೈಯಿಲೇ** – ತನಗೆ ಶತ್ರುವಾಗಿರುವವರನ್ನು ವಧಿಸುವದಕ್ಕಾಗಿ, ವೇದದಲ್ಲಿ ವಿಧಿಸಿರುವ ಯೋಗಾದಿಗಳ ಮೂಲಕವಾಗಿ, **ಶಾಸ್ತ್ರ ಪ್ರರೋಚನಾದಿಗಳಿಲ್** - ಶಾಸ್ತ್ರಗಳಲ್ಲಿ ವಿಶ್ವಾಸ ಮೊದಲಾದವುಗಳನ್ನು ಹುಟ್ಟಿಸುವ, ಅಭಿ

**ಉಪಾಸನಾದಿಗಳೈ ವಿಧಿತ್ತದತ್ತನ್ಯೈಯನ್ರೋ? ಮುಮುಕ್ಷು ವುಕ್ಕು ಪ್ರಾಪ್ಯ ಪ್ರಾಪಕಙ್ಗಳ್ ಏಕನಾಗೈಯಾಲೇ ಪ್ರಾಪ್ಯಾನುರೂಪಮಾಗ ಉಪಾಯುಮ್ ಸರ್ವೇಶ್ವರರ್ ಒರುವನುಮೇ; ಆಗೈಯಾಲನ್ರೋ, (೧) "ಅಥ ಪಾತಕ ಭೀತಸ್ತ್ವಂ ಸರ್ವಭಾವೇನ ಭಾರತ। ವಿಮುಕ್ತಾನ್ಯ ಸಮಾರಂಭೋ ನಾರಾಯಣ ಪರೋಭವ" ॥ ಎನ್ರು ಧರ್ಮದೇವತೈತನ್ ಪುತ್ರನುಕ್ಕು ಉಪಾಸನಾದಿಗಳೈ ಪ್ರಾಪ್ಯ ವಿರೋಧಿಗಳೆನ್ರು ನಿನೈತ್ತು ನಿನ್ದಿತ್ತದೆನ್ನಿಲ್, ಅದುವುಮ್ ಅತ್ಯನ್ತಾನುಪಪನ್ನಮ್;**

---

**ಸಂಧಿಯಾಲೇ** - ನಿಶ್ಚಯ ಸಙ್ಕಲ್ಪಮೂಲಕ, **ಅಧಿಕಾರಿ ವಿಶೇಷತ್ತಿಲೇ**- ಪ್ರಪನ್ನಾಧಿಕಾರಿಯಾಗುವ ವಿಶೇಷದಲ್ಲಿ, **ಉಪಾಸನಾದಿಗಳನ್ನು, ವಿಧಿತ್ತ ದತ್ತನ್ಯೆಯನ್ರೋ** – ವಿಧಿಸಿರುತ್ತದೆ ಇಷ್ಟುಮಾತ್ರವಲ್ಲವೋ? **ಮುಮುಕ್ಷುವುಕ್ಕು**- ಮೋಕ್ಷಾರ್ಥಿಗೆ, **ಪ್ರಾಪ್ಯಪ್ರಾಪಕಙ್ಗಳ್** - ಉಪೇಯೋಪಾಯಗಳೆರಡೂ, **ಏಕಮಾಗೈಯಾಲೇ** – ಸರ್ವೇಶ್ವರನೊಬ್ಬನೇಯಾಗಿರುವದರಿಂದ, **ಪ್ರಾಪ್ಯನಾದ** ಸರ್ವೇಶ್ವರನಿಗೆ, **ಅನುರೂಪಮಾಗ** - ಯೋಗ್ಯವಾದ, **ಉಪಾಯುವು, ಸರ್ವೇಶ್ವರರ್ ಒರುವನನೇ** - ಸರ್ವೇಶ್ವರನೊಬ್ಬನೇ; **ಆಗೈಯಾಲನ್ರೋ** – ಆದುದರಿಂದಲ್ಲವೋ, "**ಅಥ** - ಹಾಗೆ ಅಲ್ಲದಿದ್ದರೆ, **ತ್ವಂ** - ನೀನು, **ಪಾತಕಭೀತಃ** - ಪಾಪಭೀತನಾಗಿ, ಉಪಾಸನಾದಿಗಳಿಂದ ಪಾತಕವು ತೊಲಗದೆ ಅದರಿಂದ ಪಾಪ ಭೀತನಾಗಿ ಎಂಬ ತಾತ್ಪರ್ಯವು, **ಹೇ ಭಾರತ** - ಓ ಧರ್ಮರಾಜನೇ, **ವಿಮುಕ್ತಾನ್ಯಸಮಾರಂಭಃ** – ಬಿಡಲ್ಪಟ್ಟ ಮಿಕ್ಕ ಎಲ್ಲಾ ಕಾರ್ಯಕಲಾಪವುಳ್ಳವನಾಗಿ, **ಸರ್ವಭಾವೇನ** - ಸಮಸ್ತ ಭಾವನೆಯಿಂದಲೂ ಎಂದರೆ ಪ್ರಾಪ್ಯ ಪಾಪಕ, ತಂದೆ ತಾಯಿ ಬಂಧು ಬಳಗ ಮುಂತಾದ ಭಾವನೆಗಳಿಂದಲೂ, "**ಪಿತಾ ತ್ವಂ ಮಾತಾತ್ವಂ ದಯಿತ ತನಯಸ್ತ್ವಂ**" ಎಂಬ ಶ್ಲೋಕದಲ್ಲಿ ಹೇಳಿರುವ ಸರ್ವ ಭಾವನೆಗಳಿಂದಲೂ, **ನಾರಾಯಣ ಪರೋಭವ** - ಶ್ರೀಮನ್ನಾರಾಯಣನನ್ನು ಆಶ್ರಯಿಸುವನಾಗು" ಎನ್ರು - ಎಂಬದಾಗಿ, ಧರ್ಮದೇವತೆಯು, **ತನ್ ಪುತ್ರನುಕ್ಕು** - ತನ್ನ ಮಗನಾದ ಧರ್ಮರಾಯನಿಗೆ, **ಉಪಾಸನಾದಿಗಳೈ** – ಉಪಾಸನೆ ಮೊದಲಾದವುಗಳನ್ನು, **ಪ್ರಾಪ್ಯ ವಿರೋಧಿಗಳೆನ್ರು ನಿನೈತ್ತು** - ಪರಮಾತ್ಮ ಪ್ರಾಪ್ತಿಗೆ ವಿರೋಧವಾದವುಗಳೆಂದು ಭಾವಿಸಿ, **ನಿಂದಿತ್ತದು** - ಉಪಾಸನವನ್ನು ದೂಷಿಸಿದುದು ಎಂದರೆ ಉಪಾಸನವು ಎಂದಿಗೂ ಪರಮಾತ್ಮಪ್ರಾಪ್ತಿಗೆ ಹೇತುವಾಗಲಾರದೆಂದು ದೂಷಿಸಿರುತ್ತದೆ, **ಎನ್ನಿಲ್** - ಎಂದು **ಪೂರ್ವಪಕ್ಷವನ್ನು**

---

(೧) ವಿ. ಧ. ೬೬-೭೨

ತುವರೆ, **ಇದುವುದು ಅತ್ಯಂತಾನುಪಪನ್ನಮ್** - ಈ ಅಭಿಪ್ರಾಯವೂ ಕೂಡ ತುಂಬಾ ಅಸಮಂಜಸವಾದುದು, **ಪೂರ್ವಪಕ್ಷಾಭಿಪ್ರಾಯವೇನೆಂದರೆ** ವೇದಗಳಲ್ಲಿ ಶತ್ರುಪಕ್ಷನಾಶನಕ್ಕಾಗಿ ಯಾಗಗಳು ವಿಹಿತಗಳಾಗಿವೆ ಇಂತಹ ಯಾಗಗಳನ್ನು ಮಾಡಿದರೆ ಶತ್ರುವು ಆ ಯಾಗದ ಫಲದಿಂದ ಸಾಯುವನು ಇದು ಪ್ರತ್ಯಕ್ಷಸಿದ್ಧವು ಇಂತಹ ಯಾಗಗಳಲ್ಲಿ ಒಂದಾದ ನಿಕುಂಭಿಳಾ ಯಾಗವನ್ನು ಇಂದ್ರಜಿತ್ತು ಮಾಡಲಾರಂಭಿಸಿದನು ಈ ಮಾರಣ ಹೋಮವನ್ನು ವಿಭೀಷಣನು ತಿಳಿದು, ಈ ಯಾಗಕ್ಕೆ ವಿಘ್ನವನ್ನುಂಟುಮಾಡಿಸಿ, ಲಕ್ಷ್ಮಣನಿಂದ ಹತನಾಗುವಹಾಗೆ ಮಾಡಿದನು. ಯಾವನಾದರೂ ಒಂದು ವ್ಯಾಧಿಗೆ ಔಷಧ ಕೊಡುವದರಿಂದ ವ್ಯಾಧಿಯು ಗುಣವಾದರೆ ಆಯುರ್ವೇದದಲ್ಲಿ ಹೇಗೆ ನಂಬಿಕೆಯನ್ನು ಹುಟ್ಟಿಸುತ್ತದೋ, ಹಾಗೆಯೇ ಈ ಅಭಿಚಾರಾದಿಗಳೂ ಶಾಸ್ತ್ರಗಳಲ್ಲಿ ನಂಬಿಕೆಯನ್ನು ಹುಟ್ಟಿಸುತ್ತವೆ ಆದರೆ ಹೀಗೆ ಯಾಗಗಳ ಮೂಲಕ ಶತ್ರುವನ್ನು ಕೊಲ್ಲುವದು ಕ್ಷತ್ರಿಯನ ಸ್ವರೂಪಕ್ಕೂ ಪರಾಕ್ರಮಕ್ಕೂ ಕುಂದಕವಾಗಿ ನಿಂದಿತವು. ಹಾಗೆಯೇ ಅಸಮರ್ಥನಾಗಿ ಪರಾಧೀನನಾಗಿ ಅಕಿಂಚನನಾಗಿರುವ ಈ ಪ್ರಪನ್ನನು ತನ್ನನ್ನು ಸಮರ್ಥನನ್ನಾಗಿಯೂ ಸ್ವತಂತ್ರನಾಗಿಯೂ ಸಕಿಂಚನನಾಗಿಯೂ ಭಾವಿಸಿಕೊಂಡು ಉಪಾಸನದ ಮೂಲಕ ಪ್ರಾಪ್ಯವನ್ನು ಬಲಾತ್ಕರಿಸಿ ಸೇರುವನೆಂಬುದು ಸ್ವರೂಪ ವಿರುದ್ಧವೆಂಬ ತಾತ್ಪರ್ಯವು; ಹಾಗಾದರೆ ಉಪಾಸನವನ್ನು ಶಾಸ್ತ್ರದಲ್ಲಿ ವಿಧಿಸಿರುವನು ಏತಕ್ಕೆಂದರೆ, ಪ್ರಪತ್ತಿಯಲ್ಲಿ ವಿಶ್ವಾಸವನ್ನುಂಟುಮಾಡುವದಕ್ಕಾಗಿ ಎಂದು ಭಾವಿಸತಕ್ಕದ್ದು ವಸ್ತುತಃ ಅದು ಸ್ವರೂಪ ವಿರುದ್ಧವಾದುದಾಗಿ ಗುರೂಪಾಯವಾಗಿರುವದರಿಂದ ಅದಕ್ಕೆ ಬದಲಾಗಿ ಪ್ರಪತ್ತಿಯು ಲಘುವಾಗಿರುವದರಿಂದ, ಇದರಲ್ಲಿ ವಿಶ್ವಾಸವು ಹೆಚ್ಚುತ್ತದೆ ಎಂಬ ಭಾವವು. **ಪೂರ್ವ**ಪಕ್ಷಿಯು ತನ್ನ ಅಭಿಪ್ರಾಯವನ್ನು ಸಮರ್ಥನೆ ಮಾಡುವದಕ್ಕಾಗಿ ವಿಷ್ಣುಧರ್ಮ ಪ್ರಮಾಣವನ್ನು ಉದಾಹರಿಸಿರುತ್ತಾರೆ. ಆ ಶ್ಲೋಕಾಭಿಪ್ರಾಯವು ಪೂರ್ವಪಕ್ಷಿಯ ಅಭಿಪ್ರಾಯಾನುಗುಣವಾಗಿ ಹೇಗೆಂದರೆ. **ಪಾತಕಭೀತಃ** ಎಂದಿರುವದರಿಂದ ಉಪಾಸನಾದಿಗಳನುಷ್ಠಾನದಿಂದ ಪಾತಕವು ಪ್ರಾಪ್ತವಾಗುತ್ತದೆಂಬ ಭೀತನಾಗಿರುವವನಾಗಿ, ಆದರಿಂದಲೇ **ವಿಮುಕ್ತಾನ್ಯ ಸಮಾರಂಭಃ** - ಈ ಉಪಾಸನಾದಿ ಸಕಲ ಕಾರ್ಯ ಕಲಾಪಗಳಿಂದಲೂ ಬಿಡಲ್ಪಟ್ಟವನಾಗಿ, **ನಾರಾಯಣ ಪರೋ ಭವ** - ಶ್ರೀಮನ್ನಾರಾಯಣನನ್ನೇ ಪ್ರಾಪಕನನ್ನಾಗಿಯೂ ಪ್ರಾಪ್ಯನನ್ನಾಗಿಯೂ ಆಶ್ರಯಿಸು; ಎಂಬುದು ಆದುದರಿಂದ ಉಪಾಸನೆಯೂ ಅಭಿಚಾರಾದಿಗಳಹಾಗೆ ಸ್ವರೂಪ ವಿರುದ್ಧವು ಎಂಬ ತಾತ್ಪರ್ಯವು. ಇದನ್ನು ನಾಲ್ಕು ವಿಧವಾಗಿ ವಿಕಲ್ಪಿಸಿ ಖಂಡಿಸುತ್ತಾರೆ:—

**ಎಙ್ಗನೇ ಎನ್ನಿಲ್ :—(೧) ಅಭಿಚಾರಾದಿಗಳ್ ಫಲವಿಶೇಷ ಮಡಿಯಾಗವಿರೆ ಅನರ್ಥ ಹೇತುಕ್ಕಳಾಯಿರುಕ್ಕು; ಇಙ್ಗು ಫಲಂ ಮೋಕ್ಷಮಾನ ಪಡಿಯಾಲೇ ಅಮುಕ್ಕುಖತ್ತಾಲ್ ಅನರ್ಥ ಪ್ರಸಙ್ಗ ಮಿಲ್ಲೈ. (೨) ಏಕಾಧಿಕಾರಿ ವಿಷಯತ್ತಿಲೇ ಏಕಫಲತ್ತುಕ್ಕು ಗುರು ವಾಯಿರುಪ್ಪದೊನ್ರೈ ಉಪಾಯಮಾಗ ಕ್ಕಾಟ್ಟಿಲಘುವಾಯಿರುಪ್ಪದೊನ್ರಿಲೇ ರುಚಿಯೈ**

---

ಅಭಿಚಾರಾದಿಗಳ ಹಾಗೆ ಸ್ವರೂಪ ವಿರುದ್ಧವೆಂಬ ದು, ಅಭಿಚಾರವು ಅನರ್ಥ ಫಲ ಸಾಧಕವಾಗಿರುವಹಾಗೆ ಈ ಉಪಾಸನವೂ ಅನರ್ಥಫಲವನ್ನು ಸಾಧಿಸುವದರಿಂದ ಸ್ವರೂಪವಿರುದ್ಧವೇ ? ೨ ಭಕ್ತಿ ವಿಧಿಯು ಪ್ರಪತ್ತಿಯಲ್ಲಿ ವಿಶ್ವಾಸ ಹುಟ್ಟಿಸುವದಕ್ಕಾಗಿ ಎಂದರೆ, ಭಕ್ತಿಮಾರ್ಗವು ಸಾಧನವೇ ಅಲ್ಲದೆ ವೃಥಾಯಾಸ ಜನಕವಾಗಿ ಸ್ವರೂಪವಿರುದ್ಧವೇ ? ೩ ಪ್ರಾಪ್ಯನಿಗೆ ಅನುರೂಪವಾದ ಉಪಾಯವಲ್ಲದಿರುವದರಿಂದ ಸ್ವರೂಪ ವಿರುದ್ಧವೇ ? ೪. ಶಾಸ್ತ್ರದಲ್ಲಿ ನಿಂದಿತವಾಗಿ ಸ್ವರೂಪ ವಿರುದ್ಧವೇ ? ಪ್ರಥಮತಃ ಮೊದಲನೆಯ ವಿಕಲ್ಪವನ್ನು ಖಂಡಿಸುತ್ತಾರೆ

**ಎಙ್ಗನೇ ಎನ್ನಿಲ್** - ಹೇಗೆಂದರೆ, **ಅಭಿಚಾರಾದಿಗಳ್** - ಶತ್ರುಕೊಲೆ ಮೊದಲಾದವುಗಳ, **ಅಡಿಯಾಗವಿರೆ** - ಮೂಲಕವಾಗಿ ತಾನೇ, **ಅನರ್ಥಹೇತುಕ್ಕಳಾಯಿರುಕ್ಕು** - ಅನರ್ಥಕ್ಕೆ ಕಾರಣವಾದುದಾಯಿತು, **ಇಙ್ಗು** - ಈ ಸಂದರ್ಭದಲ್ಲಾದರೋ, **ಮೋಕ್ಷಮಾನಪಡಿಯಾಲೆ**-ಮೋಕ್ಷವಾದುದರಿಂದ, **ಅಮುಕ್ಕುಖತ್ತಾಲ್** - ಆ ಮೂಲಕವಾಗಿ, ಅನರ್ಥ ಪ್ರಸಙ್ಗಕ್ಕೆ ಕಾರಣವಿಲ್ಲವು ಅಭಿಚಾರಾದಿಗಳು ಕೊಲೆಯಾದ ದುಷ್ಟಫಲಗಳಿಗೆ ಹೇತುಗಳು, ಆದುದರಿಂದ ಸ್ವರೂಪ ವಿರುದ್ಧಗಳೆಂದು ಹೇಳಿಕೊಂಡರೂ ಹೇಳಬಹುದು. ಉಪಾಸನವು ಅನರ್ಥವನ್ನುಂಟುಮಾಡವ ಫಲವನ್ನು ಕೊಡುವದಿಲ್ಲವು. ಮೋಕ್ಷಫಲದಾಯಕವೆಂದು ಪ್ರಮಾಣಪ್ರಸಿದ್ಧವು ಹೀಗೆ ಅನರ್ಥಫಲವನ್ನು ಭಕ್ತ್ಯುಪಾಯವು ಕೊಡದೇ ಇರುವದರಿಂದ ಸ್ವರೂಪ ವಿರುದ್ಧವು ಹೇಗಾದೀತು ಎಂಬ ತಾತ್ಪರ್ಯವು.

೨. ಮುಂದೆ ಎರಡನೆಯ ವಿಕಲ್ಪವನ್ನು ದೂಷಿಸುತ್ತಾರೆ :—**ಪ್ರಪತ್ತಿ**ಯಲ್ಲಿ ಅಭಿರುಚಿಯನ್ನು ಹುಟ್ಟಿಸುವದಕ್ಕಾಗಿ ಏರ್ಪಟ್ಟ ಮಾರ್ಗವು ಅದು ಉಪಾಯವೇ ಅಲ್ಲವು, ವೃಥಾಯಾಸರೂಪವಾದದು, ಆದುದರಿಂದ ಸ್ವರೂಪ ವಿರುದ್ಧವೆಂಬ ವಾದವನ್ನು ಖಂಡಿಸುತ್ತಾರೆ :—**ಏಕಾಧಿಕಾರಿ ವಿಷಯತ್ತಿಲೆ** - ಒಬ್ಬ ಅಧಿಕಾರಿಯ ವಿಷಯದಲ್ಲಿ, **ಏಕಫಲತ್ತುಕ್ಕು** - ಒಂದೇ ಫಲವಾದ **ಮೋಕ್ಷಪ್ರಾಪ್ತಿಗೆ, ಗುರುವಾಯಿರುಪ್ಪದೊನ್ರೈ ಉಪಾಯಮಾಗಕ್ಕಾಟ್ಟಿ** - **ಕಷ್ಟ**

**ಪ್ಪಿರಪ್ಪಿಕ್ಕಿರದೆನ್ಗೈ ವಿವಕ್ಷಿತ ವಿಪರೀತಮ್. ಅಙ್ಗತ್ತಿಲೇ ಆಙ್ಗಫಲ ನಿರ್ದೇಶಮಾಯ್ ಸ್ತುತಿಮಾತ್ರ ಮಾಯಿರೇ ಅಪ್ಪೋದು ಫಲಿಪ್ಪದು ?**

---

ತರವಾಗಿರುವದೊಂದನ್ನು ಉಪಾಯವೆಂದು ತೋರಿಸಿ, **ಲಘುವಾಯಿರುಪ್ಪದೊನ್ರಿಲೇ** - ಸುಲಭವಾಗಿರುವ ಇನ್ನೊಂದು ಉಪಾಯದಲ್ಲಿ, **ರುಚಿಯೈ** - ವಿಶ್ವಾಸವನ್ನು, **ಪಿರಪ್ಪಿಕ್ಕಿರದು ಎನ್ಗೈ**-ಹುಟ್ಟಿಸುತ್ತದೆಂಬುದು, **ವಿವಕ್ಷಿತ ವಿಪರೀತಮ್** - ಪೂರ್ವಪಕ್ಷಿಯ ಅಭಿಪ್ರಾಯಕ್ಕೇನೆ ಪ್ರತ್ಯುತ ವಿರುದ್ಧವಾದುದನ್ನೇ ಉಪಪಾದಿಸುವಂತಾದ್ದಾಗುತ್ತದೆಂಬ ಭಾವವು. ಅದು ಹೇಗೆಂದರೆ:—ಪ್ರಪತ್ತಿ, ಭಕ್ತಿ ಉಪಾಯಗಳು ಪರಸ್ಪರ ಪ್ರತ್ಯೇಕವಾದನಂತರ, ಪ್ರಪತ್ತಿಯು ಲಘೂಪಾಯವಾಗಿ ಭಕ್ತಿಯು ಗುರೂಪಾಯವಾದರೆ ಲಘೂಪಾಯವನ್ನೇ ಮೋಕ್ಷಾಧಿಕಾರಿಯು ಸ್ವತಃ ಅವಲಂಬಿಸುವನು ಗುರೂಪಾಯವನ್ನು ತೋರಿಸಿ ಲಘೂಪಾಯವನ್ನು ಅವಲಂಬಿಸುವದಕ್ಕಾಗಿ ಪ್ರರೋಚನೆ ಏತಕ್ಕೆ ? ಲಘೂಪಾಯಕ್ಕೂ ಗುರೂಪಾಯಕ್ಕೂ ಒಂದೇ ಫಲವಾದರೆ ಗುರೂಪಾಯದ ಮೂಲಕ ಪ್ರರೋಚನೆಯು ಲಘೂಪಾಯಕ್ಕೆ ಬೇಕಾಗಿರುವದಿಲ್ಲವು. ಇನ್ನೂ ಹಾಗೆ ನೋಡಿದರೆ ಲಘೂಪಾಯವೂ ನಿಷ್ಕರ್ಷೆಯಿಲ್ಲದ ಉಪಾಯವಾಗಿದ್ದರೂ ಅದನ್ನು ಪ್ರದರ್ಶಿಸಿ, ತನ್ಮೂಲಕ ಪ್ರರೋಚನದಿಂದ ಇನ್ನೂ ಗುರೂಪಾಯದಲ್ಲಿ ಪ್ರವೃತ್ತಿಯನ್ನುಂಟುಮಾಡಬಹುದೇ ವಿನಾ ಗುರೂಪಾಯಕ್ಕೆ ಎಂದಿಗೂ ಪ್ರರೋಚನ ಭಾವವೂ ಕೂಡುವದೇ ಇಲ್ಲವೆಂಬ ಭಾವವು ಆದುದರಿಂದ ಲಘೂಪಾಯವು ಗುರೂಪಾಯ ಪ್ರರೋಚನಾರ್ಥವಾಗಿ ಪರಿಣಮಿಸಬಹುದೇ ವಿನಾ, ಪೂರ್ವಪಕ್ಷಿಗಳು ಹೇಳುವ ಹಾಗೆ ಗುರೂಪಾಯವು ಲಘೂಪಾಯ ಪ್ರರೋಚನಾರ್ಥವಾಗಿ ಎಂದಿಗೂ ಆಗಲಾರದು. ಆ ಕಾರಣದಿಂದ **ವಿವಕ್ಷಿತವಿಪರೀತಂ** ಎಂದು ಪ್ರಯೋಗಿಸಿರುತ್ತಾರೆ. ಅದೂ ಅಲ್ಲದೆ ಅಭಿಚಾರಾದಿಗಳಲ್ಲಿ ದೃಷ್ಟಫಲವಿರುವದರಿಂದ ಶಾಸ್ತ್ರಪ್ರರೋಚನವೆಂದರೆ ಶಾಸ್ತ್ರದಲ್ಲಿ ವಿಶ್ವಾಸವು ಉಂಟಾಗಬಹುದು ಇಲ್ಲಿ ಪ್ರಪತ್ತಿಯಲ್ಲಿ ವಿಶ್ವಾಸ ಹುಟ್ಟುವದಕ್ಕೆ ಭಕ್ತಿಯಿಂದ ದೃಷ್ಟ ಫಲವೇನೂ ಇಲ್ಲವಲ್ಲಾ ಎಂಬುದೂ ತೋರಿಬರುತ್ತದೆ. ಇನ್ನೂ ವಿವಕ್ಷಿತ ವಿಪರೀತವು ಹೇಗೆ ಎಂಬುವನ್ನು ಇನ್ನೊಂದು ವಿಧವಾಗಿಯೂ **ಅಙ್ಗತ್ತಿಲೇ** ಎಂಬ ಮುಂದಿನ ವಾಕ್ಯದಿಂದಲೂ ಉಪಪಾದಿಸುತ್ತಾರೆ. **ಅಙ್ಗತ್ತಿಲೇ** - ಬ್ರಹ್ಮವಿದ್ಯೆಯ ಒಂದು ಅಙ್ಗದಲ್ಲಿ, **ಅಙ್ಗಫಲ ನಿರ್ದೇಶಮಾಯ್** - ಅಙ್ಗಯ ಫಲ ಹೇಳಲ್ಪಟ್ಟು ಆಗ **ಸ್ತುತಿಮಾತ್ರಮಾಯಿರೇ** - ಅಙ್ಗದ ಮಾಹಾತ್ಮ್ಯಯನ್ನು ಹೇಳುವದಕ್ಕಾಗಿ ಮಾತ್ರವೇ ವಿನಾ

**(೩) ಪ್ರಾಪ್ಯತ್ತುಕ್ಕಿನ್ನದು ಅನುರೂಪಮೆನ್ನುಮಿಡಮ್ ಶಾಸ್ತ್ರೈಕವೇದ್ಯ ಮಾರ್ಗ್ಗೈಯಾಲೇ ಯುಕ್ತಿಮಾತ್ರತ್ತಾಲೇ ಪ್ರಾಪ್ಯವಿರೋಧಮ್ ಶೊಲ್ಲವೊಣ್ಣಾದು. ಆಗಮ ಸಿದ್ಧಙ್ಗಳಿಲೊನ್ರೈ ವಿರುದ್ಧ ತರ್ಕಙ್ಗಳಾಲೇ ಬಾಧಿಕ್ಕಿಲ್ ತುಲ್ಯ ನ್ಯಾಯತ್ತಾಲೇ ಸರ್ವಶಾಸ್ತ್ರಙ್ಗಳುಮ್ ಪ್ರಪತ್ತಿ ಶಾಸ್ತ್ರಮ್ ಪ್ರಮಾಣಮನ್ರಿಕ್ಕೇ ಯೊಳಿಯುಮ್.**

---

ನಿಶ್ಚಯವಾಗಿಯೂ ಫಲದಾಯಕವಲ್ಲವೆಂಬವಾಗಿ ಅಲ್ಲವೇ, **ಅಪ್ಪೋದು ಫಲಿಪ್ಪದು** - ಆಗಲೂ ಸಂಭವಿಸುವದು? ಇದರರ್ಥವೇನೆಂದರೆ ಭಕ್ತಿಮಾರ್ಗದಲ್ಲಿ ಪ್ರಪತ್ತಿಯು ಅಙ್ಗವು, ಉಪಾಸನವು ಅಙ್ಗಿಯು; ಸಾಧಾರಣವಾಗಿ ಬ್ರಹ್ಮವಿದ್ಯೆಗಳಲ್ಲಿ ಅಙ್ಗದ ಪ್ರಾಧಾನ್ಯವನ್ನು ಸೂಚಿಸುವದಕ್ಕಾಗಿ ಅಙ್ಗಿಗೆ ಯಾವ ಫಲವೋ, ಆ ಫಲವೇ ಅಙ್ಗಕ್ಕೂ ಹೇಳಿರುವದುಂಟು. ಇದರಿಂದ ಅಙ್ಗಿಯು ಫಲವನ್ನೇ ಅಙ್ಗವೂ ಸಾಧಿಸಿಕೊಡುತ್ತದೆಂಬಭಿಪ್ರಾಯವಲ್ಲವು. ಆ ಅಙ್ಗದ ಪ್ರಾಧಾನ್ಯರೂಪ ಸ್ತುತಿಯೆಂದು ಭಾವಿಸತಕ್ಕದ್ದು. ಹಾಗಲ್ಲದೆ ಆ ಅಙ್ಗವೂ ಅಙ್ಗಿ ಫಲವನ್ನೇ ಕೊಡುವದಾದರೆ ಅಙ್ಗಿಯನ್ನು ಯಾರೂ ಅವಲಂಬಿಸದೆ ಆ ಶಾಸ್ತ್ರದ ನೈರರ್ಥಕ್ಯವು ಪ್ರಾಪ್ತವಾಗುತ್ತದೆ. ಹಾಗೆಯೇ ಪ್ರಪತ್ತಿಯು ಅಙ್ಗವಾಗಿ, ಉಪಾಸನೆಯು ಅಙ್ಗಿಯಾಗಿ ಇರುವದರಿಂದ ಎರಡಕ್ಕೂ ಮೋಕ್ಷಸಾಧಕತ್ವವೆಂದು ಹೇಳಿದರೆ, ಮೇಲಿನ ನ್ಯಾಯದಪ್ರಕಾರ ಅಙ್ಗವಾದ ಪ್ರಪತ್ತಿಗೆ ಸ್ತುತಿರೂಪವಾದ ಪ್ರರೋಚನವೂ, ಭಕ್ತಿಯೇ ಮೋಕ್ಷದಾಯಕವೆಂದೂ ಏರ್ಪಡುವದರಿಂದ ಪ್ರತಿಪಕ್ಷಿಯ ವಿವಕ್ಷಿತಕ್ಕೆ ವಿಪರೀತವೆಂಬ ಭಾವವು ಆಗ **ಮುಮುಕ್ಷುರ್ವೈ ಶರಣ ಮಹಂ ಪ್ರಪದ್ಯೇ** ಇತ್ಯಾದಿಗಳು ಅಙ್ಗಸ್ತುತಿಯಾಗಿ ಅರ್ಥವಾದವಾಗಿ ಏರ್ಪಡುವದರಿಂದ ಪ್ರಪತ್ತಿಗೆ ಅನುಪಾಯತ್ವವು ಏರ್ಪಡುತ್ತದೆಂಬ ತಾತ್ಪರ್ಯವು

೩. ಮುಂದೆ ಮೂರನೆಯ ವಿಕಲ್ಪವಾದ ಪ್ರಾಪ್ಯಕ್ಕೆ ಅನುರೂಪವಾದುದು ಭಕ್ತ್ಯುಪಾಯವು ಅಲ್ಲವು, ಆದುದರಿಂದ ಅದು ಸ್ವರೂಪ ವಿರುದ್ಧವೆಂಬ ಪಕ್ಷವನ್ನು ಖಂಡಿಸುತ್ತಾರೆ, **ಪ್ರಾಪ್ಯತ್ತುಕ್ಕು**-ಸರ್ವೇಶ್ವರನನ್ನು ಹೊಂದುವದಕ್ಕೆ, **ಇನ್ನದು ಅನುರೂಪಮೆನ್ನುಮಿಡಮ್** - ಇದೀಗ ಅನುರೂಪವಾದ ಉಪಾಯವು ಎಂದು ತಿಳಿಯುವ ಸಂದರ್ಭವು, **ಶಾಸ್ತ್ರವೇದ್ಯಮಾರ್ಗ್ಗೈಯಾಲೇ** - ಶಾಸ್ತ್ರದಿಂದಲೇ ತಿಳಿಯತಕ್ಕದಾದುದರಿಂದ, **ಯುಕ್ತಿಮಾತ್ರತ್ತಾಲೇ** - ಬರೀ ಯುಕ್ತಿ ನ್ಯಾಯದಿಂದ, **ಪ್ರಾಪ್ಯವಿರೋಧವೆಂದು, ಶೊಲ್ಲವೊಣ್ಣಾದು** - ಹೇಳಲಾಗುವದಿಲ್ಲವು, **ಆಗಮ ಸಿದ್ಧಙ್ಗಳಿಲ್** - ಶ್ರುತಿಯಲ್ಲಿ ವಿಧಿಸಿರುವದರಲ್ಲಿ, **ಒನ್ರೈ** - ಒಂದನ್ನು,

ವಿರುದ್ಧವಾದ ತರ್ಕಗಳಿಂದ ಬಾಧಿಸಿದರೆ, ತುಲ್ಯನ್ಯಾಯತ್ವಾತ್ - ಅದಕ್ಕೆ ಸಮಾನವಾದ ವಾದಗಳಿಂದಲೇ, ಸರ್ವ ಶಾಸ್ತ್ರಗಳೂ ಹಾಗೆಯೇ ಪ್ರಪತ್ತಿಶಾಸ್ತ್ರವೂ ಕೂಡ, ಪ್ರಮಾಣಮನ್ನಿಕ್ಕೇ - ಪ್ರಮಾಣವಲ್ಲದೇನೇ ಒಳಿಯುಮ್-ಹೋಗ ಬಹುದು ಒಂದು ಉಪಾಯವು ಅನುರೂಪವೇ ಅಲ್ಲವೇ ಎಂದು ನಿರ್ಧರಿಸುವ ಸಂದರ್ಭದಲ್ಲಿ ಶಾಸ್ತ್ರವೇ ಪ್ರಮಾಣವು. ಬರೀ ವಾದದಿಂದ, "ತರ್ಕಾಽಪ್ರತಿಷ್ಠಾನಾದಪಿ ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಹಾಗೆ, ಉಪಯೋಗವಿಲ್ಲವು, ಶಾಸ್ತ್ರವೇ ಪ್ರಮಾಣವು. ಹೀಗಿರುವಾಗ ಭಕ್ತ್ಯುಪಾಯವು ಪ್ರಾಪ್ಯಕ್ಕೆ ಅನುರೂಪವಾದುದಲ್ಲವು ಎಂಬ ವಾದವು ಸರಿಯಾದುದಲ್ಲವು, ಶಾಸ್ತ್ರವು ಭಕ್ತ್ಯುಪಾಯವನ್ನು "ತಮೇವಂ ವಿದ್ವಾನಮೃತ ಇಹ ಭವತಿ, ನಾನ್ಯಃಪಂಥಾ ವಿದ್ಯತೇ ಅಯನಾಯ" ಎಂಬುದರಿಂದ ಅನುರೂಪವಾದ ಉಪಾಯವೆಂದೇ ಹೇಳುತ್ತಿರುವಾಗ, ವಾದದಿಂದ ಪ್ರಮಾಣವನ್ನು ದೂರೀಕೃತ ಮಾಡಿದರೆ ಹಾಗೆಯೇ ಎಲ್ಲಾ ಸಂದರ್ಭಗಳಲ್ಲೂ ಶಾಸ್ತ್ರ ಪ್ರಮಾಣಗಳನ್ನು ಯುಕ್ತಿಯಿಂದ ಬಾಧಿಸಿ ಬಿಡಬಹುದು. ಪ್ರಾಪ್ಯನೂ ಪ್ರಾಪಕನೂ ಸರ್ವೇಶ್ವರನೇ ಆಗಿರುವಾಗ ಅನುರೂಪವಲ್ಲದ ಭಕ್ತ್ಯುಪಾಯವೆಂಬ ಸಾಧ್ಯೋಪಾಯ ಬೇರೆ ಏತಕ್ಕೆ? ಅನಾವಶ್ಯಕವಲ್ಲವೋ? ಇತ್ಯಾದಿ ವಾದಗಳ ಮೂಲಕ ಶಾಸ್ತ್ರಪ್ರಮಾಣದಿಂದ ವಿಹಿತವಾದ ಈ ಸಾಧ್ಯೋಪಾಯವನ್ನು ಬಾಧಿಸಿದರೆ, ಪ್ರಪತ್ತಿಯ ವಿಷಯದಲ್ಲೂ ಕೂಡ ಆ ವಾದವನ್ನೇ ತಂದು ಅದನ್ನೂ ಕೂಡ ಬಾಧಿಸಿ ಬಿಡಬಹುದು ಎಂಬ ಭಾವವು ಪ್ರಪತ್ತಿಯು ಮಾತ್ರ ಅನುರೂಪವು ಭಕ್ತ್ಯುಪಾಯವಲ್ಲವು ಎಂಬುವಕ್ಕೆ ತಾನೇ ಪ್ರಮಾಣವೆಲ್ಲಿರುತ್ತದೆ? ಹಾಗೆ ಲಘೂಪಾಯವಾದ ಪ್ರಪತ್ತಿಯೇ ಅನನುರೂಪವಾದರೆ, ಭಕ್ತ್ಯುಪಾಯವೂ ಗುರೂಪಾಯವಾಗಿ ಕೈಮುತಿಕ ನ್ಯಾಯದಿಂದ ಅನನುರೂಪವಾದುದೇ ಎಂದು ಹೇಳಬಹುದು. ಆದುದರಿಂದ ಈ ಕಾರಣದಿಂದಲೂ ಸ್ವರೂಪ ವಿರೋಧವೆಂದು ವಾದಿಸಲು ಸಾಧ್ಯವಲ್ಲವೆಂಬ ತಾತ್ಪರ್ಯವು.

೪ ನಾಲ್ಕನೆಯ ವಿಕಲ್ಪವಾದ ಶಾಸ್ತ್ರನಿಂದಿತವೆಂಬುದನ್ನು ಖಂಡಿಸುತ್ತಾರೆ ಶಾಸ್ತ್ರಗಳಲ್ಲಿ ಭಕ್ತಿಮಾರ್ಗವು ವಿಧೇಯವಾಗಿದೆಯೇ ವಿನಾ, ನಿಂದಿತವಾಗಿಲ್ಲವು. ಬ್ರಹ್ಮವಿದ್ಯೆಗಳಲ್ಲೆಲ್ಲಾ ಉಪಾಸನವೇ ಸರ್ವೇಶ್ವರನನ್ನು ಹೊಂದುವ ನಿಶ್ಚಯ ಉಪಾಯವೆಂದು ಉಪನಿಷತ್ತುಗಳು ಉದ್ಘೋಷಿಸುತ್ತವೆ. ಸ್ವರೂಪ ವಿರುದ್ಧವಾದವುಗಳನ್ನು ಉಪನಿಷತ್ತುಗಳು ಪ್ರತಿಪಾದಿಸುತ್ತವೆಯೆ? ಅವುಗಳಹಾಗೆ ಸ್ವರೂಪ ವಿರುದ್ಧಗಳಾದರೆ ಅವುಗಳ ಸರಿಯಾದ ಅರ್ಥಗ್ರಹಣಕ್ಕಾಗಿ, ಶ್ರೀ ಬಾದರಾಯಣರು ಸೂತ್ರಗಳನ್ನು ಅನುಗ್ರಹಿಸುತ್ತಿದ್ದರೇ? ಹಾಗೆ ನಿರರ್ಥಕ ವಿಷಯಗಳಾದರೆ, ನಮ್ಮ ಸಿದ್ಧಾಂತಸ್ಥಾಪಕರು ಆ ಸೂತ್ರಾರ್ಥಗಳ ನಿರ್ಣಯಕ್ಕಾಗಿ ಶ್ರೀ

೪. "ಅಥ ಪಾತಕ ಭೀತಸ್ತ್ವಮ್" ಎಞ್ಗಿರ ವಿಡತ್ತಿಲುಮ್, "ಪಾತಕ" ಶಬ್ಧತ್ತಾಲೆ ಉಪಾಸನಾದಿಗಳ್ಳೈ ನಿಂದಿಕ್ಕಿರದೆನ್ಗೈಕ್ಕುಮ್

ಭಾಷ್ಯವನ್ನನುಗ್ರಹಿಸುವರೇ ? ಸ್ವರೂಪವಿರುದ್ಧವಾದಪಕ್ಷದಲ್ಲಿ ಕಪಿಲಮೂರ್ತಿಯು ತನ್ನ ತಾಯಿ ಯಾದ ದೇವಹೂತಿಗೆ ಉಪದೇಶಿಸುತ್ತಿದ್ದರೇ ? ಶ್ರೀಕೃಷ್ಣಭಗವಾನ್ ರವರು ಅರ್ಜುನನಿಗೆ ಅದನ್ನೇ ಬೋಧಿಸುತ್ತಿದ್ದರೇ ? ಶ್ರೀ ಭೀಷ್ಮರು ಯುಧಿಷ್ಠಿರ ನಿಗೆ ಅದನ್ನೇ ಉಪದೇಶಿಸುತ್ತಿದ್ದರೇ? ಆದುದರಿಂದ ಶಾಸ್ತ್ರವು ಭಕ್ತಿಮಾರ್ಗವನ್ನು ಉಪಾಯವೆಂದು ವಿಧಿಸಿದಿಯೇವಿನಾ ನಿಂದಿಸಲಿಲ್ಲವು. ಅಥಪಾತಕ ಭೀತ ಸ್ತ್ವಮ್ ಎಂಬ ಶ್ಲೋಕದಲ್ಲಿ ನಿಂದಿಸಿದೆಯಲ್ಲಾ ಎಂದರೆ ಅಲ್ಲಿ ಉಪಾಸನೆಯು ನಿಂದಿತವಲ್ಲವು ; ಅದರ ಸರಿಯಾದರ್ಥವನ್ನು ನೀವುಗಳು ಗ್ರಹಿಸಿಲ್ಲವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ ಅಥ ಪಾತಕ ಭೀತಸ್ತ್ವಮ್, ಎಞ್ಗಿರ ವಿಡತ್ತಿಲುಮ್ ಎಂದು ಹೇಳಿರುವ ಸಂದರ್ಭದಲ್ಲೂ, ಪಾತಕ ಶಬ್ದದಿಂದು ಉಪಾಸನಾದಿಗಳನ್ನು ಶಾಸ್ತ್ರವು, ನಿಂದಿಕ್ಕಿರದೆನ್ಗೈಕ್ಕುಮ್ - ನಿಂದಿಸುತ್ತ ದೆಂಬುದಕ್ಕೂ, ಪ್ರಮಾಣಮಿಲ್ಲೈ - ಪ್ರಮಾಣವಿಲ್ಲವು ಹಾಗಾದರೆ ಈ ವಿಷ್ಣು ಧರ್ಮಶ್ಲೋಕಾಭಿಪ್ರಾಯವೇನೆಂದರೆ :—"ಧ್ಯಾಯೀತ" "ನಿದಿಧ್ಯಾಸಿತವ್ಯಃ", "ತಜ್ಜಲಾನ್ ಇತಿ ಶಾಂತ ಉಪಾಸೀತ" "ಧ್ಯೇಯೋ ನಾರಾಯಣ ಸ್ಸದಾ" "ಹರಿರೇಕ ಸ್ಸದಾಧ್ಯೇಯಃ" "ಸ್ಮರ್ತವ್ಯ ಸ್ಸತತಂ ವಿಷ್ಣುಃ" "ಮನ್ಮನಾಭವ ಮದ್ಭಕ್ತೋ" "ವಿನಿಷ್ಪನ್ನ ಸಮಾಧಿಸ್ತು ಮುಕ್ತಿಂ ತತ್ರೈವ ಜನ್ಮನಿ। ಪ್ರಾಪ್ನೋತಿ ಯೋಗೀ ಯೋಗಾಗ್ನಿ ದಗ್ಧಕರ್ಮಚಯೋಚಿರಾತ್", ॥ (ವಿ ಪು ೬ ೭. ೩೫), ಇವೇ ಮೊದಲಾದ ಪ್ರಮಾಣಗಳಿಂದ ಭಕ್ತ್ಯುಪಾಯವು ಭಗವಂತನಿಗೆ ಪರಮಪ್ರಿಯವಾದ ಉಪಾಯವೆಂದು ಶ್ರುತಿ ಸ್ಮೃತಿ ಪುರಾಣೇತಿ ಹಾಸಗಳೆಲ್ಲಾ ಉದ್ಘೋಷಿಸುತ್ತವೆ. ಇಂತಹ ಉಪಾಯವನ್ನು ಧರ್ಮದೇವ ತೆಯು ತನ್ನ ಪುತ್ರನಾದ ಯುಧಿಷ್ಠಿರನಿಗೆ ನಿಂದಿಸಿ ಪಾತಕಕ್ಕೆ ಸಮಾನವೆಂದು ಹೇಳುವ ವಾದವು ಶುದ್ಧ ಅವೈದಿಕವಾದುವೆಂದು ಭಾವಿಸತಕ್ಕದ್ದು. ಹಾಗಾದರೆ ಆಶ್ಲೋಕಾರ್ಥವೇನು ಎಂದರೆ, "ಹಾಗಾದರೆ, ತ್ವಂ - ನೀನು, ಪಾತಕ ಭೀತ ಶ್ಚೇತ್ - ಅನಾದಿ ಕಾಲದಿಂದ ಸಂಚಿತ ಪಾಪಗಳ ಆನಂತ್ಯದಿಂದ ಭಕ್ತ್ಯುಪಾ ಯವು ಕೊನೆಗಾಣಿಸುತ್ತದೋ ಇಲ್ಲವೋ ಎಂದು ಭಯಪಟ್ಟವನಾದರೆ, ನಿಮು ಕ್ತಾನ್ಯ ಸಮಾರಂಭಃ - ಅಂತಹ ಪಾತಕಗಳನ್ನು ಹೋಗಲಾಡಿಸುವ ಶಕ್ತಿಯುಳ್ಳ ಆದರೆ ಬಹು ಕಷ್ಟಸಾಧ್ಯವಾದ ಕೃಛ್ರ, ಚಾಂದ್ರಾಯಣ, ಕೂಶ್ಮಾಂಡ, ವೈಶ್ವಾ

**ಪ್ರಮಾಣಮಿಲ್ಲೈ. ಆಗೈಯಾಲ್ ಮುಮುಕ್ಷುವುಕ್ಕು ವಿಹಿತಙ್ಗಳಾಗೈ ಯಾಲೇ ಭಕ್ತಿಪ್ರಪತ್ತಿಗಳಿರಣ್ಡುಮ್ ಯಥಾಧಿಕಾರಂ ಪರಿಗ್ರಾಹ್ಯಙ್ಗಳ್.**

---

ನರ, ವ್ರಾತಪತಿ, ಪವಿತ್ರೇಷ್ಟಿ, ತ್ರಿವೃದಗ್ನಿಷ್ಟೋಮ ಮೊದಲಾದ ಇತರ ಕರ್ಮ ಸಮಾರಂಭಗಳನ್ನೆಲ್ಲಾ ತ್ಯಜಿಸುವವನಾಗಿ, **ಸರ್ವಭಾವೇನ "ಪಿತಾತ್ವಂ" ಇತ್ಯಾ** ದಿಗಳಲ್ಲಿ ಹೇಳಿರುವ ಸಮಸ್ತ ಭಾವನೆಯಿಂದಲೂ, **ನಾರಾಯಣ ಪರೋಭವ- ಶ್ರೀ ಮನ್ನಾರಾಯಣ**ನಲ್ಲಿ ಶರಣಾಗತಿಯನ್ನು ಮಾಡು" ಎಂಬುದೀಗ ಸಮಂಜಸ ವಾಗ ಶ್ಲೋಕಾರ್ಥವು. ಆದಪರಿಂದ ಭಕ್ತ್ಯುಪಾಯವು **ನಿಂದಿತವು ಎಂಬು** ದಕ್ಕೆ ಪೂರ್ವ ಪಕ್ಷಿಗಳಿಂದ ನಿಗೆ ಪ್ರಮಾಣವೇ ಇಲ್ಲವೆಂದು ಹೇಳಿರುತ್ತಾರೆ

ಹೀಗೆ ಸರ್ವಾಕ್ಷೇಪಗಳಿಗೂ ಸಮಂಜಸಗಳಾದ ಪ್ರಮಾಣ ಪೂರ್ವಕ ಸಮಾ ಧಾನಗಳನ್ನು ಹೇಳಿ, ತಾವು ನಿರೂಪಿಸಿದುದನ್ನು ನಿಗಮನಮಾಡಿ ಹೇಳುತ್ತಾರೆ. **ಆಗೈಯಾಲ್** - ಇಷ್ಟರವರೆಗೆ ನಾವು ಆಕ್ಷೇಪಗಳಿಗೆಲ್ಲಾ ಸಮಾಧಾನ ಹೇಳಿರುವ ದರಿಂದ, **ಮುಮುಕ್ಷುವುಕ್ಕು** - ಮೋಕ್ಷಾರ್ಥಿಗೆ, **ವಿಹಿತಙ್ಗಳಾಗೈಯಾಲೇ**- ಶಾಸ್ತ್ರಗಳಲ್ಲಿ ವಿಧಿಸಿರುವುದರಿಂದ ಇದು ಉಪಾಯ ವಿಭಾಗಾಧಿಕಾರದಲ್ಲಿ ವಿಸ್ತರ ವಾಗಿ ಉಪಪಾದಿಸಲ್ಪಟ್ಟಿರುತ್ತದೆ. **ಭಕ್ತಿ ಪ್ರಪತ್ತಿಗಳಿರಡು ಯಥಾಧಿಕಾರಂ**- ಶಕ್ತನಿಗೆ ಭಕ್ತ್ಯುಪಾಯವೂ ಅಶಕ್ತನಿಗೆ ಪ್ರಪತ್ತಿಯೂ ಎಂದು ಅಧಿಕಾರಿ ವಿಭಾ ಗಾಧಿಕಾರದಲ್ಲಿ ಹೇಳಿರುವಹಾಗೆ **ಪರಿಗ್ರಾಹ್ಯಙ್ಗಳ್** - ಉಪಾದೇಯಗಳು, ಎರ ಡರಡರಲ್ಲಿ ಯಾವುದಾದರೂ ಒಂದನ್ನು ತನ್ನ ಶಕ್ತ್ಯನುಸಾರ ಅವಲಂಬಿಸಬಹು ದೆಂಬ ಭಾವವು "ವಿಕಲ್ಪೋವಿಶಿಷ್ಟಫಲತ್ವಾತ್" ಎಂಬ ಸೂತ್ರಾನುಸಾರ ಶಾಸ್ತ್ರಗಳಲ್ಲಿ ಎರಡರಲ್ಲಿ ಯಾವುದಾದರೂ ಒಂದು ಆಗಬಹುದೆಂದು ವಿಧಿಸಿರುವುದ ರಿಂದ ಎರಡಕ್ಕೂ ಫಲ ಒಂದೇ ಎಂಬುದೂ ಕೂಡ ಈ ವಾಕ್ಯದಲ್ಲಿ **ಮುಮುಕ್ಷು ವುಕ್ಕು** - ಮೋಕ್ಷಾರ್ಥಿಗೆ ಎಂಬ ಪ್ರಯೋಗದಿಂದ ಸೂಚಿತವು.

ಮುಂದೆ ಪೂರ್ವಪಕ್ಷಿಯು ಇನ್ನೊಂದಾಕ್ಷೇಪವನ್ನು ತರಬಹುದೆಂದು ಅನುವ ದಿಸಿ ಅದಕ್ಕೆ ಸಮಾಧಾನ ಹೇಳುತ್ತಾರೆ

**ಭಕ್ತಿಯೋಗವು ಶಿಷ್ಟಪರಿಗ್ರಹವಲ್ಲದುದರಿಂದ ಸ್ವರೂಪ ವಿರುದ್ಧವೆಂಬ ವಾದದ ನಿರಸನವು.**

---

೯. ಹಿಂದೆ ಭಕ್ತಿ ಪ್ರಪತ್ತಿಗಳೆರಡೂ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಸಾಧ್ಯೋ ಪಾಯಗಳೆಂದ ಸ್ಥಾಪಿಸಿದುದನ್ನು ಅಙ್ಗೀಕರಿಸಿ, **ಪೂರ್ವಪಕ್ಷಿಯು ಪುನಃ ಬೇರೆ**

## ೯. ಭಕ್ತೇಃ ಶಿಷ್ಟಪರಿಗ್ರಹಾಭಾವಾತ್ ಸ್ವರೂಪ ವಿರೋಧ ಇತಿವಾದಸ್ಯ ನಿರಾಸಃ

**ವಿಹಿತಙ್ಗಳೇ ಯಾಗಿಲುಮ್ ಆಚಾರ್ಯರುಚಿ ಪರಿಗೃಹೀತಙ್ಗಳೇ ಆಚಾರ್ಯರುಚಿ ಪರಿಗೃಹೀತಙ್ಗಳಲ್ಲಾದಪಡಿಯಾಲೇ ಅತಿಥಿ ಸತ್ಕಾರಙ್ಗಳಿಲ್ ವಿಹಿತಙ್ಗಳಾನ ಗವಾಲಂಭನಾದಿಗಳ್ ಪೋಲೆ, ಉಪಾಸನಾದಿಗಳ್ ಶಿಷ್ಟ ಪರಿಗ್ರಹ ವಿರುದ್ಧಙ್ಗಳಾಗೈಯಾಲೇ ಅನಾದರಣೀಯಙ್ಗಳನ್ರೋ? ಎಙ್ಗಿರ ಯುಮ್ ನಿರೂಪಕ ವಾಕ್ಯಮುನ್ರು. ಸರ್ವಾಚಾರ್ಯ ಪರಿಗ್ರಹ ವಿಲ್ಲಾದ ಪೋದನ್ರೋ. (೧) "ಅಸ್ವರ್ಗ್ಯಂಲೋಕವಿದ್ವಿಷ್ಟಂ ಧರ್ಮಮಪ್ಯಾಚರೇನ್ನತು"**

ಆಕ್ಷೇಪವನ್ನು ಉಪಪಾದಿಸಿ ಹೇಳುತ್ತಾರೇನೆಂದರೆ—**ವಿಹಿತಙ್ಗಳೇಯಾಗಿಲುಮ್** - ಶಾಸ್ತ್ರದಲ್ಲಿ ಭಕ್ತ್ಯುಪಾಯವು ಮೋಕ್ಷದಾಯಕವೆಂದು ವಿಧಿಸಿದ್ದರೂ **ಆಚಾರ್ಯರುಚಿ ಪರಿಗೃಹೀತಙ್ಗಳಲ್ಲಾದಪಡಿಯಾಲೆ** - ಪೂರ್ವಾಚಾರ್ಯರುಗಳ ಅಭಿಮತಾನುಸಾರವಾಗಿ ಉಪಾದೇಯಗಳಲ್ಲವಾದ್ದರಿಂದ, ಅತಿಥಿ ಸತ್ಕಾರಗಳಲ್ಲಿ, **ವಿಹಿತಙ್ಗಳಾನ** ಶಾಸ್ತ್ರಗಳಲ್ಲಿ ಹೇಳಲ್ಪಟ್ಟ, **ಗವಾಲಂಭನಾದಿಗಳ್ ಪೋಲೇ** - ಆಡಿನ ಮಾಂಸವನ್ನು ಸಮರ್ಪಿಸುವದಕ್ಕಾಗಿ ಪಶುವಾದ ಆಡನ್ನು ಛೇದಿಸುವದೇ ಮೊದಲಾದವುಗಳಹಾಗೆ, ಉಪಾಸನವೇ ಮೊದಲಾದವುಗಳು, ಶಿಷ್ಟ ಪರಿಗ್ರಹಕ್ಕೆ ವಿರುದ್ಧಗಳಾದುದರಿಂದ, **ಅನಾದರಣೀಯಙ್ಗಳನ್ರೋ** - ಅನುಪಾದೇಯಗಳಲ್ಲವೋ ? **ಎಙ್ಗಿರಯುಮ್** - ಎಂದು ಹೇಳುವ ಆಕ್ಷೇಪವೂ ಕೂಡ, **ನಿರೂಪಕ ವಾಕ್ಯವನ್ರು** - ಜ್ಞಾನಿಗಳಾದ ಪಂಡಿತರು ಹೇಳತಕ್ಕ ಮಾತಲ್ಲವು, ಪ್ರಮಾಣವೆಂದು ಅಙ್ಗೀಕರಿಸತಕ್ಕ ಮಾತಲ್ಲವು. ಉಪಾಸನವು ನಾಥಮುನಿ ಮೊದಲಾದವರುಗಳ ಕಾಲಕ್ಕೆ ಮುಂಚೆ ಬಹಳವಾಗಿ ಆಚರಣೆಯಲ್ಲಿತ್ತು; ಹೀಗೆ ಹೇಳಿದುದರಿಂದ ಪ್ರಪದನವು ಆಗ ಇರಲಿಲ್ಲವೆಂಬ ಭಾವವಲ್ಲವು ವಾಲ್ಮೀಕಿಮಹರ್ಷಿಯೇ ನಾನಾ ವಿಧವಾದ ಪ್ರಪದನಗಳನ್ನುಪಪಾದಿಸಿ ಗ್ರಂಥವನ್ನು ಬರೆದಿರುತ್ತಾರೆ. ಉಪಾಸನಾರೂಪ ಉಪಾಯಾನುಷ್ಠಾನವೂ ಹೆಚ್ಚಾಗಿಯೇ ಇತ್ತೆಂಬ ಭಾವವು. ಈಚಿಗೆ ಉಪಾಸನೆಯು ನಮ್ಮ ಆಚಾರ್ಯವರ್ಗದಲ್ಲಿ ಇಲ್ಲದುದರಿಂದ ಈ ಆಕ್ಷೇಪವನ್ನು ತಂದು ಸ್ವರೂಪ ವಿರುದ್ಧವೆಂದು ಪೂರ್ವಪಕ್ಷಿಗಳು ಹೇಳಿರುತ್ತಾರೆ. ಅದಕ್ಕೆ ಒಂದು ನಿದರ್ಶನವನ್ನು ಹೇಳಿ ಪೂರ್ವಪಕ್ಷಿಗಳು ದೂಷಿಸುತ್ತಾರೆ. ಅತಿಥಿ ಸತ್ಕಾರದಲ್ಲಿ ಆಡನ್ನು ಛೇದಿಸಿ ಆಡಿನಮಾಂಸವನ್ನು ಬಡಿಸತಕ್ಕದ್ದೆಂದು

(೧) ಯಾಜ್ಞ. ಸ್ಮೃ. ೧. ೧೫೬.

**ಎನ್ರು ಕಳಿಕ್ಕಲಾವದು ಇಱ್ಱ (೨) "ತಸ್ಮೈ ನಮೋ ಮುನಿವರಾಯ ಪರಾಶರಾಯ" ಎನ್ನುಮ್ಪಡಿ ಶ್ಲಾಘ್ಯರಾನ ಶ್ರೀ ಪರಾಶರಾದಿ ಪೂರ್ವಾಚಾರ್ಯರ್ಗಳ್ ಅನುಷ್ಠಿಕ್ಕೈಯಾಲ್ ಸರ್ವಶಿಷ್ಟ ಬಹಿಷ್ಕಾರಮ್ ಶೊಲ್ಲವೊಣ್ಣಾದು.**

---

ಶಾಸ್ತ್ರದಲ್ಲಿ ಹೇಳಿರುತ್ತದೆ ಅದನ್ನು ಭೇದಿಸುವದು ಶಾಸ್ತ್ರವಿಹಿತವಾಗಿದ್ದರೂ ಹೇಗೆ ಸ್ವರೂಪವಿರುದ್ಧವೋ ಹಾಗೆಯೇ ಉಪಾಸನ ಎಂಬುದು ಅವರ ತಾತ್ಪರ್ಯವು ಈ ಗವಾಲಂಬನವು ಸರಿಯಲ್ಲವೆಂದು ಯಾಜ್ಞವಲ್ಕ್ಯಸ್ಮೃತಿಯಲ್ಲಿ "ಅಸ್ವರ್ಗ್ಯಂ ಲೋಕ ವಿದ್ವಿಷ್ಟಂ" ಎಂಬ ಶ್ಲೋಕದಲ್ಲಿ ದೂಷಿಸಲ್ಪಟ್ಟಿರುತ್ತದೆ ಏಕೆಂದರೆ ಈ ಪಶ್ವಾಲಂಬನವು ಯುಗಾಂತರಗಳಲ್ಲಿ ಅನುಷ್ಠೇಯವು ಕಲಿಯುಗದಲ್ಲಿ ಬ್ರಾಹ್ಮಣಾತಿಥಿ ಸತ್ಕಾರದಲ್ಲಿ ನಿಂದಿತವು. ಈ ನಿದರ್ಶನವನ್ನು ಮನಸ್ಸಿನಲ್ಲಿಟ್ಟು ಭಕ್ತಿಮಾರ್ಗವನ್ನು ನಿಂದಿಸುವದು ಉಚಿತವಲ್ಲವೆಂದು ತೋರಿಸುತ್ತಾರೆ ಸರ್ವಾಚಾರ್ಯರೂ ಈ ಭಕ್ತಿಮಾರ್ಗವನ್ನವಲಂಬಿಸದಿದ್ದರೀಗ ಅದು ತ್ಯಾಜ್ಯವೇ ಸರಿ; ಹಾಗಿಲ್ಲವಲ್ಲಾ, ಅನೇಕ ಮಹನೀಯರು ಆ ಮಾರ್ಗವನ್ನು ಅವಲಂಬಿಸಿರುತ್ತಾರಲ್ಲಾ ಎಂದು ಹೇಳುತ್ತಾರೆ, **ಸರ್ವಾಚಾರ್ಯ ಪರಿಗ್ರಹ ಮಿಲ್ಲಾದ ಪೋದನ್ರೋ** - ಸಮಸ್ತ ಆಚಾರ್ಯರೂ ಅವಲಂಬಿಸದೇ ಹೋದದಲ್ಲವೋ, **"ಅಸ್ವರ್ಗ್ಯಂ** - ಸ್ವರ್ಗಭೋಗವನ್ನು ಕೊಡದೇ ಇರುವಂಥಾದ್ದಾಗಿಯೂ, **ಲೋಕವಿದ್ವಿಷ್ಟಂ** - **ಲೋ**ಕದ ಜನರಿಂದ ನಿಂದಿಸಲ್ಪಟ್ಟಂತಾದ್ದಾಗಿಯೂ, **ಧರ್ಮಮಪಿತು** - ಇರುವ **ಶಾಸ್ತ್ರ**ವಿಹಿತವಾದ ಕರ್ಮವಾಗಿದ್ದರೂಕೂಡ, **ನಾಚರೇತ್** - ಆಚರಿಸತಕ್ಕದ್ದಲ್ಲವು," **ಎನ್ರು** - ಎಂದು ಹೇಳಿ, **ಕಳಿಕ್ಕಲಾವದು** - ತ್ಯಜಿಸಬಹುದು, **ಇಱ್ಱ** - ಈ ಉಪಾಸನಗಳ ವಿಷಯದಲ್ಲಾದರೋ, **"ತಸ್ಮೈ**-ಶಾಸ್ತ್ರವಿಷಯಗಳನ್ನೆಲ್ಲಾ ಬಹು ವಿಶದವಾಗಿ, **ತ**ಮ್ಮ ಶಿಷ್ಯರಾದ ಮೈತ್ರೇಯರಿಗೆ **ಉಪದೇಶಿಸು**ವ ವ್ಯಾಜದಿಂದ, **ಲೋ**ಕಕ್ಕೆಲ್ಲಾ ತಿಳಿಯಪಡಿಸಿ ಮಹಾ ಪ್ರಸಿದ್ಧಿಯನ್ನು ಪಡೆದಿರುವ, **ಮುನಿವರಾಯ ಪರಾಶರಾಯ** - ಭಗವದುಪಾಸಕರಲ್ಲಿ ಶ್ರೇಷ್ಠರಾದ ಪರಾಶರ ಮಹರ್ಷಿಗೆ ನಮಸ್ಕಾರವು,"**ಎನ್ನುಮ್ಪಡಿ** - ಎಂದು **ಶ್ರೀ ಯಾ**ಮುನೇಯರು **ತ**ಮ್ಮ ಸ್ತೋತ್ರ ರತ್ನದಲ್ಲಿ ಸ್ತುತಿಸುವಹಾಗೆ, **ಶ್ಲಾಘ್ಯರಾದ** ಶ್ರೀ ಪರಾಶರರೇ ಮೊದಲಾದ **ಪೂರ್ವಾ**ಚಾರ್ಯರುಗಳು, **ಅನುಷ್ಠಿಕ್ಕೈಯಾಲ್**-ಅನುಷ್ಠಿಸಿದುದರಿಂದ, - **ಸರ್ವಶಿಷ್ಟ ಬಹಿಷ್ಕಾರಮ್** - ಸಮಸ್ತ ಶಿಷ್ಟರೂ ಈ

---

**(೨) ಅ೪. ಸ್ತೋ. ೪.**

ಭಕ್ತಿಯೋಗಕ್ಕೆ ಬಹಿಷ್ಕಾರವನ್ನು ಹಾಕಿದರು ಎಂದರೆ ಸಮಸ್ತ ಶಿಷ್ಟರೂ ತ್ಯಜಿಸಿದರು ಎಂದು, **ಶೊಲ್ಲವೊಣ್ಣಾದು** ಹೇಳಲು ಸಾಧ್ಯವಲ್ಲವು ಶಿಷ್ಟ ಪರಿಗ್ರಹವಿಲ್ಲ, ಆದುದರಿಂದಲೇ ಸ್ವರೂಪ ವಿರುದ್ಧವೆಂದು ಪೂರ್ವಪಕ್ಷ ತಂದಿರುವದಕ್ಕೆ, ಕೆಲವು ಮಹನೀಯರೂ ಈ ಉಪಾಯವನ್ನು ಅವಲಂಬಿಸಿರುತ್ತಾರೆಂದು ಶ್ರೀ ಪರಾಶರಾದಿಗಳನ್ನು ಉದಾಹರಿಸಿದರು. ಈ ಪರಾಶರರನ್ನೇ ಪರಮಾಚಾರ್ಯರನ್ನಾಗಿ ಭಾವಿಸಿ, ಆಚಾರ್ಯವರ್ಗಪ್ರಧಾನರಾದ ನಾಥಮುನಿ ನಮ್ಮಾಳ್ವಾರ್ರವರ ಮಧ್ಯೆ **"ತಸ್ಮೈ ನಮೋ ಮುನಿವರಾಯ"** ಎಂದು ಯಾಮುನೇಯರು ಕೊಂಡಾಡಿ ನಮಸ್ಕರಿಸಿರುತ್ತಾರೆ **ಪರಾಶರಾದಿ** ಎಂಬಲ್ಲಿರುವ ಆದಿಪದದಿಂದ ವ್ಯಾಸ ವಾಲ್ಮೀಕಿಯೇ ಮೊದಲಾದ ಮಹರ್ಷಿಗಳೂ ಹೇಳಲ್ಪಟ್ಟರು. ಹಾಗೆಯೇ ಈ ಯುಗದಲ್ಲೂ ಭಕ್ತಿಸಾರ, ಪರಾಂಕುಶನಾಥಾದಿಗಳೂ ಭಕ್ತಿಮಾರ್ಗವನ್ನೇ ಉಪಾಯವಾಗಿ ಎಣಿಸಿದರು. ಹೀಗೆ ಕೆಲವರು ಭಕ್ತ್ಯುಪಾಯವನ್ನು ಅವಲಂಬಿಸಿರುತ್ತಾರೆ. ಪಾಂಡವರು ಸರ್ವೇಶ್ವರನ ಆಜ್ಞಾನುಸಾರ ಇಹಲೋಕ ವ್ಯಾಪಾರಗಳನ್ನೆಲ್ಲಾ ನೆರವೇರಿಸಿದ ನಂತರ ನರನಾರಾಯಣಾಶ್ರಮಕ್ಕೆ ಉಪಾಸನಕ್ಕಾಗಿ ತೆರಳಿದರೆಂದು ತಿಳಿಯಬರುತ್ತದೆ, ಹಾಗೆಯೇ ಕೇಶಿಧ್ವಜರು ಯೋಗವೇ ಪರಮೋಪಾಯವೆಂದು ತಾವು ಅನುಷ್ಠಿಸಿದವರಾಗಿ ಖಾಂಡಿಕ್ಯರಿಗೂ ಭಗವಂತನ ಶುಭಾಶ್ರಯೋಪಾಸನೆಯೇ ಉಪಾಯವೆಂಬದಾಗಿ ಉಪದೇಶಿಸಿರುತ್ತಾರೆ. ಎಲ್ಲೋ ಅಲ್ಪಸ್ವಲ್ಪ ಜನವು ಇದನ್ನು ಅಭಿಮಾನಿಸಿರುವದರಿಂದ ಅದು ಉಪಾದೇಯವೆಂದು ಹೇಳಲು ಹೇಗಾಗುತ್ತದೆಂದರೆ, ಅಂತಹ ಆಕ್ಷೇಪವು ಪ್ರಪತ್ತಿಯ ವಿಷಯದಲ್ಲೂ ಸಮಾನವಾದುದಾಗುತ್ತದೆ, ಎಂಬ ತಾತ್ಪರ್ಯವೂ ಸೂಚಿತವು **"ತಸ್ಮೈ ನಮೋ ಮುನಿವರಾಯ"** ಎಂಬ ಶ್ಲೋಕಾಭಿಪ್ರಾಯಕ್ಕೆ ಪರದೇವತಾ ಪಾರಮಾರ್ಥ್ಯಾಧಿಕಾರದಲ್ಲಿ ೭೪೦ ನೆಯ ಪುಟವನ್ನು ನೋಡಿ.

**ಕಲಿಯುಗದಲ್ಲಿ ಭಕ್ತ್ಯಧಿಕಾರಿಗಳೇ ಇಲ್ಲವಾದುದರಿಂದ ಸ್ವರೂಪ ವಿರುದ್ಧವೆಂದಾಕ್ಷೇಪಿಸಿ, ಪರಿಹರಿಸುತ್ತಾರೆ.**

---

ಮೊದಲು ಪೂರ್ವಪಕ್ಷವನ್ನು ಅನುವದಿಸುತ್ತಾರೆ.— **ಇಪ್ಪಡಿ** - ಮೇಲೆ ಸಿದ್ಧಾಂತಿಸಿ ಹೇಳಿದ ರೀತಿಯಲ್ಲಿ, **ಯುಗಾನ್ತರಙ್ಗಳಿಲ್** - ಇತರ ಯುಗಗಳಲ್ಲಿ, ಎಂದರೆ ಕೃತ, ತ್ರೇತಾ, ದ್ವಾಪರಗಳಲ್ಲಿ, **ಇವೈ** - ಈ ಉಪಾಸನಾದಿಗಳು, **ಧರ್ಮಙ್ಗಳಾನಾಲುಮ್** – ಶಾಸ್ತ್ರದಲ್ಲಿ ಮೋಕ್ಷೋಪಾಯಗಳಾಗಿ ವಿಧಿಸಿದವುಗಳಾದರೂ, ಕಲಿಯುಗದಲ್ಲಾದರೋ, **ಯಥೋಕ್ತಮಾನ ಪರಮಾತ್ಮೋಪಾಸನಾದಿಗಳುಕ್ಕು** – ಶಾಸ್ತ್ರದಲ್ಲಿ ಹೇಳಿರುವಮೇರಿಗೆ ಪರ

## ೧೦ ಕಲೌ ಯುಗೇ ಭಕ್ತ್ಯಧಿಕಾರ್ಯಭಾವಾತ್ ಸ್ವರೂಪ ವಿರುದ್ಧತ್ವ ಮಾಕ್ಷಿಪ್ಯ ಪರಿಹರತಿ.

ಇಪ್ಪಡಿ ಯುಗಾಂತರಙ್ಗಳಿಲ್ ಇವ್ವೈ ಧರ್ಮಙ್ಗಳಾನಾಲುಮ್ ಕಲಿಯುಗತ್ತಿಲ್ ಯಥೋಕ್ತಮಾನ ಪರಮಾತ್ಮೋಪಾಸನಾದಿಗಳುಕ್ಕು ಅಧಿಕಾರಿಗಳ್ ದುರ್ಲಭರಾಗೈಯಾಲೇ ಇವ್ವೈಯಿಕ್ಕಾಲುತ್ತುಕ್ಕು ಪೊರನ್ದುಮವೈ ಯನ್ರು, ಆಗೈಯಾಲೇ ಯನ್ರೋ, (೧) "ಕಲೌ ಸಂಕೀರ್ತ್ಯ ಕೇಶವಮ್" ಎನ್ನುಮ್ (೨) "ಕಲೇ ರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ । ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂವ್ರಜೇತ್ ॥" ಎನ್ರುಮ್ ಶೊಲ್ಲುಗಿರದು ಎನ್ನುವುಮೊಣ್ಣಾದು.

---

ಮಾತ್ಮೋಪಾಸನಾದಿಗಳಿಗೆ, ಅಧಿಕಾರಿಗಳು, **ದುರ್ಲಭರಾಗೈಯಾಲೇ** - ಸಿಕ್ಕದಿರುವದರಿಂದ, **ಇವ್ವೈ** - ಈ ಉಪಸನಾದಿಗಳು, **ಇಕ್ಕಾಲುತ್ತುಕ್ಕು** - ಈ ಕಲಿಯುಗಕ್ಕೆ. **ಪೊರನ್ದುಮವೈಯನ್ರು** - ಉಚಿತವಾದವುಗಳಲ್ಲವು, **ಆಗೈಯಾಲನ್ರೋ** - ಆದುದರಿಂದಲ್ಲವೋ, "**ಕಲೌಸಂಕೀರ್ತ್ಯ ಕೇಶವಂ**" ಕಲಿಯುಗದಲ್ಲಿ ಕೇಶವನನ್ನು ಸ್ತೋತ್ರಮಾಡಿ ಎಂದೂ, ಎಂದರೆ ಕಲಿಯುಗದಲ್ಲಿ ಸರ್ವೇಶ್ವರನ ನಾಮ ಸಂಕೀರ್ತನವನ್ನೇ ಉಪಾಯವನ್ನಾಗಿ ಎಂಬ ಭಾವವು, "**ಹೇ ರಾಜನ್** - ಓ ರಾಜನೇ, **ದೋಷನಿಧೇಃ** - ಅನೇಕ ದೋಷಗಳಿಗೆಲ್ಲಾ ಆಕರವಾಗಿರುವ, **ಕಲೇಃ** – ಕಲಿಯುಗಕ್ಕೆ, **ಏಕಃ** – ಒಂದಾದ, **ಮಹಾನ್ ಗುಣಃ** - ದೊಡ್ಡ ಗುಣವು, **ಅಸ್ತಿ** - ಉಂಟು, **ಹಿ** - ಯಾವಕಾರಣದಿಂದೆಂದರೆ, **ಕೃಷ್ಣಸ್ಯ** - ಕೃಷ್ಣ ಭಗವಾನನ, **ಕೀರ್ತನಾದೇವ** - ನಾಮಸಂಕೀರ್ತನಮಾತ್ರದಿಂದಲೇ, **ಮುಕ್ತಬಂಧಃ** - ಬಿಡಲ್ಪಟ್ಟ ಸಂಸಾರಬಂಧವುಳ್ಳವನಾಗಿ, **ಪರಂ ವ್ರಜೇತ್** - ಪರತತ್ವವನ್ನು ಕುರಿತು ಹೋಗುವನು," ಎಂದರೆ ಕಲಿಯುಗವು ಅನೇಕ ದೋಷಗಳಿಗೆಲ್ಲಾ ಆಕರವೇನೋ ನಿಶ್ಚಯವು, ಆದರೂ ಕಲಿಯುಗಕ್ಕೆ ಒಂದು ದೊಡ್ಡ ಮಹಿಮೆಯುಂಟು; ಏನೆಂದರೆ ಹರಿಸಂಕೀರ್ತನದಿಂದಲೇ ಮನುಷ್ಯನು ಮೋಕ್ಷವನ್ನು ಈ ಕಲಿಯುಗದಲ್ಲಿ ಹೊಂದಬಹುದೆಂಬ ತಾತ್ಪರ್ಯವು. ಇಲ್ಲಿ ಕೀರ್ತನಾದೇವ ಎಂದು ಏವಕಾರವಿರುವದರಿಂದ ಕಲಿಯುಗದಲ್ಲಿ ಸಂಕೀರ್ತನವೇ ಉಪಾಯವೇ ವಿನಾ ಉಪಾಸನಾದಿಗಳಲ್ಲವೆಂಬುದು

---

(೧) ವಿ. ಪು. ೬ ೨ ೧೭ (೨) ಭಾಗ. ೧೨. ೩. ೫೧.

ಪೂರ್ವಪಕ್ಷಿಯ ತಾತ್ಪರ್ಯವು. **ಎನ್ನುವು ಶೊಲ್ಲುಗಿರದು** - ಎಂದು ಹೇಳುತ್ತದೆ, **ಎನ್ನುವು ಮೊಹಣ್ಣಾದು** - ಎಂದು ಹೇಳಲೂ ಸಾಧ್ಯವಿಲ್ಲವು. ಸರ್ವೇಶ್ವರನ ನಾಮ ಸಂಕೀರ್ತನವೇ ಈ ಕಾಲದಲ್ಲಿ ಮೋಕ್ಷೋಪಾಯವು; ಆದುದರಿಂದ ಪರಮಾತ್ಮೋಪಾಸನವು ಉಪಾಯವಾಗುವದಿಲ್ಲವೆಂಬುದು ಪೂರ್ವಪಕ್ಷವು ತಮ್ಮ ಪೂರ್ವಪಕ್ಷಕ್ಕನುಕೂಲವಾಗಿ ಎರಡು ಪ್ರಮಾಣಗಳನ್ನು ಉದಾಹರಿಸಿರುತ್ತಾರೆ. ವಿಷ್ಣುಪುರಾಣದ ಶ್ಲೋಕವು ಯಾವುದೆಂದರೆ:–

**"ಧ್ಯಾಯನ್ ಕೃತೇ ಯಜನ್ ಯಜ್ಞೈ ಸ್ತ್ರೇತಾಯಾಂ ದ್ವಾಪರೇಽರ್ಚಯನ್।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್"॥**

ಕೃತಯುಗದಲ್ಲಿ ಉಪಾಸನ ಮಾಡುವನಾಗಿ ಯಾವ ಪ್ರಾಪ್ಯವನ್ನು ಹೊಂದುವನೋ, ಹಾಗೆಯೇ ತ್ರೇತಾಯುಗದಲ್ಲಿ ಯಜ್ಞಗಳನ್ನನುಷ್ಠಿಸಿ ಯಾವುದನ್ನು ಹೊಂದುವನೋ ಮತ್ತು ದ್ವಾಪರ ಯುಗದಲ್ಲಿ ಪರಮಾತ್ಮನನ್ನು ಅರ್ಚಿಸಿ ಯಾವುದನ್ನು ಹೊಂದುವನೋ, ಕಲಿಯುಗದಲ್ಲಿ ಅದನ್ನೇ ಕೇಶವನನ್ನು ಸ್ತೋತ್ರ ಮಾಡಿ ಹೊಂದುವನು ಎಂಬರ್ಥವು ಎರಡನೆಯ ಪ್ರಮಾಣವೂ ಹಾಗೆಯೇ ಹೇಳುತ್ತದೆ. ಕಲಿಯುಗದಲ್ಲಿ ಅಧರ್ಮವೇ ಧರ್ಮವಾದುದರಿಂದ ಅದು ಅನೇಕ ದೋಷಯುಕ್ತವಾಗಿರುತ್ತದೆ ಆದರೆ ಅದರಲ್ಲಿ ಒಂದು ದೊಡ್ಡ ಗುಣವುಂಟು. ಅದೇನೆಂದರೆ, ಉಪಾಸನ ಯಜ್ಞಾದಿಗಳಾದ ಕಷ್ಟತರವಾದ ಉಪಾಯಗಳೊಂದೂ ಬೇಕಾಗದೆ ಬರೀನಾಮ ಸಂಕೀರ್ತನದಿಂದಲೇ ಪರಮ ಪದವನ್ನು ಹೊಂದಬಹುದು ಎಂಬುದು ಆ ಶ್ಲೋಕಾಭಿಪ್ರಾಯವು ಶ್ರೀ ವಿಷ್ಣು ಪುರಾಣದಲ್ಲೂ ಹಾಗೆಯೇ ಹೇಳಿರುತ್ತದೆ. **"ಅತ್ಯಂತ ದುಷ್ಟಸ್ಯ ಕಲೇ ರಯಮೇಕೋ ಮಹಾನ್ ಗುಣಃ"** (ವಿ. ಪು. ೬.೨.೩೯) **"ಸ್ವಲ್ಪೇ ನಹಿ ಪ್ರಯತ್ನೇನ ಧರ್ಮ ಸ್ಸಿಧ್ಯತಿ ವೈ ಕಲೌ"** (ವಿ ಪು. ೬. ೨. ೩೪) ತುಂಬಾ ದುಷ್ಟವಾದ ಕಲಿಯುಗಕ್ಕೆ ಇದೊಂದು ದೊಡ್ಡಗುಣವುಂಟು, ನಾಮಸಂಕೀರ್ತನರೂಪ ಸ್ವಲ್ಪ ಪ್ರಯತ್ನದಿಂದ ಕಲಿಯುಗದಲ್ಲಿ ಧರ್ಮಸಿದ್ಧಿಯುಂಟು ಎಂದು ಹೇಳಲ್ಪಟ್ಟಿರುತ್ತದೆ.

ಪೂರ್ವಪಕ್ಷಿಯು ಕಲಿಯುಗದಲ್ಲಿ ನಾಮ ಸಂಕೀರ್ತನವೇ ಉಚಿತವಾದ ಉಪಾಯವೆಂದೂ ಪರಮಾತ್ಮೋಪಾಸನಕ್ಕೆ ಅಧಿಕಾರಿಗಳಿಲ್ಲವೆಂದೂ ಹೇಳಿದನು. ಈ ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳುವವರಾಗಿ ಅಂತಹ ಅಧಿಕಾರಿಗಳು ಈಗಲೂ ಉಂಟೆಂದು ಹೇಳುತ್ತಾರೆ. **"ಯಸ್ಯ** - ಯಾವ ಅಧಿಕಾರಿಗೆ, **ಚೇತಸಿ ಗೋವಿಂದಃ** - ಮನಸ್ಸಿನಲ್ಲಿ ಸದಾ ಗೋವಿಂದನಿರುವನೋ, **ತಸ್ಯ** - ಅವನಿಗೆ; **ಕಲೌ** - ಪಾಪ ಭೂಯಿಷ್ಠವಾದ ಕಲಿಯುಗದಲ್ಲೂ, **ಕೃತಯುಗಂ** - ಧರ್ಮವು [illegible] ಕೃತಯುಗವಾಗುತ್ತದೆ; ಯಸ್ಯ ಹೃದಯೇ -

(೧) ಕಲೌ ಕೃತಯುಗಂ ತಸ್ಯ ಕಲಿಸ್ತಸ್ಯ ಕೃತೇ ಯುಗೇ ।
ಯಸ್ಯ ಚೇತಸಿ ಗೋವಿಂದೋ ಹೃದಯೇ ಯಸ್ಯ ನಾಚ್ಯುತಃ ॥
ಎಙ್ಗರಪಡಿಯೇ ಇಕ್ಕಾಲತ್ತಿಲುಮ್ ಉಪಾಸನಾದಿಗಳುಕ್ಕಧಿಕಾರಿಗಳ್ ಸ್ವಯಂ ಪ್ರಯೋಜನ ಯೋಗನಿಷ್ಠರಾನ ಪೂರ್ವಾಚಾರ್ಯರ್ಗಳ್ ಪೋಲೆ ಸಂಭಾವಿತರಿರೇ.

---

ಯಾವನ ಹೃದಯದಲ್ಲಿ, **ನಾಚ್ಯುತಃ** - ಅಚ್ಯುತನಿರುವದಿಲ್ಲವೋ ಎಂದರೆ ಯಾವನು ಪರಮಾತ್ಮನನ್ನು ಧ್ಯಾನಿಸುವದಿಲ್ಲವೋ, **ತಸ್ಯ** - ಅಂತವನಿಗೆ, **ಕೃತಯುಗೇ** - ಕೃತಯುಗದಲ್ಲೂ ಕೂಡ, **ಕಲಿಃ**-ಕಲಿಯುಗವೇ ಆಗುತ್ತದೆ," ಎಙ್ಗರಪಡಿಯೇ ಎಂದು ಹೇಳಿರುವ ಹಾಗೆ, **ಇಕ್ಕಾಲತ್ತಿಲುಮ್**-ಈ ಕಲಿಯುಗದ ಈಗಿನ ಕಾಲದಲ್ಲೂ, **ಉಪಾಸನಾದಿಗಳುಕ್ಕು ಅಧಿಕಾರಿಗಳ್**-ಉಪಾಸನ ಮೊದಲಾದವುಗಳಿಗೆ ಅಧಿಕಾರಿಗಳು, **ಸ್ವಯಂ ಪ್ರಯೋಜನ ಯೋಗನಿಷ್ಠರಾನ ಪೂರ್ವಾಚಾರ್ಯರ್ಗಳ್ ಪೋಲೇ**-ಫಲಕಾಮನೆ ಇಲ್ಲದೇ ಭಗವತ್ಪ್ರೀತ್ಯರ್ಥವಾಗಿ ನಡೆಸಿದ ಅನುಷ್ಠಾನವೇ ಪ್ರಯೋಜನವಾಗಿವುಳ್ಳ, ಮತ್ತು ಭಗವಂತನ ಶುಭಾಶ್ರಯದ ಉಪಾಸನೆಯಲ್ಲಿ ನಿಷ್ಠರಾದ ಪೂರ್ವಾಚಾರ್ಯರುಗಳ ಹಾಗೆ ಎಂದರೆ ಶ್ರೀಮನ್ನಾಥಮುನಿ ಪುಂಡರೀಕಾಕ್ಷರ್ ಮೊದಲಾದವರುಗಳ ಹಾಗೆ, **ಸಂಭಾವಿತರಿರೇ** - ಸನ್ಮಾನಿಸಲು ಯೋಗ್ಯರೇ ಸರಿ. ಪೂರ್ವ ಪಕ್ಷಿಯನ್ನು ವಿಕಲ್ಪಿಸಿ ಕೇಳುತ್ತಾರೆ. ನೀವು ಕಲಿಯುಗದಲ್ಲಿ ಸಂಕೀರ್ತನವೇ ಉಪಾಯವು, ಅಧಿಕಾರಿ ದೌರ್ಲಭ್ಯದಿಂದ ಉಪಾಸನವಲ್ಲವೆಂದು ಹೇಳಿದಿರಲ್ಲಾ, (೧) ಈಗ ಭಕ್ತಿಯೋಗಾಧಿಕಾರಿಗಳಿಲ್ಲವೆಂಬುದರಿಂದಲೇ? (೨) ಇಲ್ಲವೇ ನೀವು ಉದಾಹರಿಸಿದ ಪ್ರಮಾಣ ಬಲದಿಂದಲೇ? (೩) ಅಥವಾ ಎರಡು ಕಾರಣಗಳಿಂದಲೋ ಎಂದು ಕೇಳಬೇಕಾಗುತ್ತದೆ ಅಧಿಕಾರಿಗಳು ಕಲಿಯುಗದಲ್ಲಿಲ್ಲವೆಂದು ಹೇಳಿದರೆ, ನಿಮ್ಮ ಅಭಿಪ್ರಾಯವೇ ತಪ್ಪು ಏಕೆಂದರೆ ಅಧಿಕಾರಿಗಳು ಸ್ವಲ್ಪ ವಿರಳವೆಂದು ಹೇಳಬಹುದೇವಿನಾ, ಇಲ್ಲವೇ ಇಲ್ಲವೆಂದು ಹೇಳಲಾಗುವದಿಲ್ಲವು. ಏಕೆಂದರೆ ಪೂರ್ವಾಚಾರ್ಯರುಗಳಲ್ಲಿ ಕೆಲವರೇ ಆ ಉಪಾಯವನ್ನು ಅನುಷ್ಠಿಸಿರುತ್ತಾರೆ. ಎರಡನೆಯ ವಿಕಲ್ಪವಾದ ಪ್ರಮಾಣ ಬಲದಿಂದ, **ಸಂಕೀರ್ತನಾದೇವ** ಎಂಬಲ್ಲಿ ಅವಧಾರಣವೂ ಇರುವದರಿಂದ ಕಲಿಯುಗಕ್ಕೆ ಸಂಕೀರ್ತನವೇ ಉಪಾಯವೂ ಉಪಾಸನವಲ್ಲವೆಂದರೆ ಪ್ರಪದನವನ್ನೂ ಕೂಡ ಉಪಾಯವಲ್ಲವೆಂದೂ ಹೇಳಬೇಕಾಗುತ್ತದೆಂದು "ಇಙ್ಗನಲ್ಲಾದ

---

(೧) ವಿ ಧ. ೧೦೯. ೫೭.

ಇ (ಅ) ಜ್ಞನಲ್ಲಾದ ಪೋದು ಸಂಕೀರ್ತನ ವ್ಯತಿರಿಕ್ತ್ಯೈಯಾನ ಪ್ರಪತ್ತಿಕ್ಕುಮ್, (೧) "ಕಿಂನು ತಸ್ಯಚ ಮಂತ್ರಸ್ಯ ಕರ್ಮಣಃ ಕಮಲಾಸನ। ನಲಭ್ಯತೇಽಧಿಕಾರೀವಾ" ಶ್ರೋತುಕಾಮೋಪಿ ಮಾನರಃ" ಇತ್ಯಾದಿಗಳಿರ್‌ಪಡಿಯೇ ಮಹಾವಿಶ್ವಾಸಾದಿಯುಕ್ತರಾನ ವಧಿಕಾರಿಗಳ್ ತೇಟ್ಟಿಮಾಗೆಯಾಲೇ ಅನ್ವಿಡತ್ತಿಲುಮ್ ಇಪ್ಪ್ರಸಜ್ಗಮ್ ವರುಮ್.

---

ಪೋದು" ಎಂದಾರಂಭಿಸಿದ ವಾಕ್ಯದಮೂಲಕ ತಿಳಿಸುತ್ತಾರೆ. ಇಜ್ಞನಲ್ಲಾದ ಪೋದು - ಉಪಾಸನಾಧಿಕಾರಿಗಳೂ ಸಂಭಾವಿತರೆಂದು ಒಪ್ಪಿಕೊಳ್ಳದೇ ಹೋದರೆ, **ಸಂಕೀರ್ತ್ತನ ವ್ಯತಿರಿಕ್ತ್ಯೈಯಾನ** - ಸಂಕೀರ್ತನಕ್ಕೆ ಬೇರೇ ಉಪಾಯವಾದ, ಪ್ರಪದನಕ್ಕೂ ಸಹ, "**ಕಮಲಾಸನ**-ಓ ಚತುರ್ಮುಖ ಬ್ರಹ್ಮನೇ,**ತಸ್ಯಚ ಮಂತ್ರಸ್ಯ** - ಅಂತಹ ಮಹಿಮೆಯುಳ್ಳ ದ್ವಯ ಮಂತ್ರದ ವಿಷಯದಲ್ಲೂ, **ಕರ್ಮಣಃ** - ಅದರ ಅನುಷ್ಠಾನದ ವಿಷಯದಲ್ಲೂ, **ಕಿಂ ನು** ಏನು ಹೇಳಲಪ್ಪಾ, **ಅಧಿಕಾರೀವಾ** - ಅದನ್ನು ಅನುಷ್ಠಿಸುವ ಅಧಿಕಾರಿಯಾಗಲಿ, **ಶ್ರೋತುಕಾಮೋಪಿವಾನರಃ** – ಅದರ ಮಾಹಾತ್ಮ್ಯೆಯನ್ನು ಕೇಳಿ ತಿಳಿಯಬೇಕೆಂಬ ಅಪೇಕ್ಷೆಯುಳ್ಳ ಮನುಷ್ಯನೂ ಕೂಡ, **ನಲಭ್ಯತೇ** - ಸಿಕ್ಕುವದು ಕಷ್ಟವೈಯ್ಯಾ," **ಇತ್ಯಾದಿಗಳಿರ್ಪಡಿಯೇ** – ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವಹಾಗೆ, ಮಹಾ ವಿಶ್ವಾಸ ಮೊದಲಾದವುಗಳಿಂದ ಯುಕ್ತರಾದ, ಅಧಿಕಾರಿಗಳು, **ತೇಟ್ಟಿಮಾಗೈಯಾಲೇ** – ದುರ್ಲಭವಾದದರಿಂದ, **ಅನ್ವಿಡತ್ತಿಲುಮ್** – ಆ ಪ್ರಪದನದ ವಿಷಯದಲ್ಲೂ, **ಇಪ್ಪ್ರಸಜ್ಗಮ್ ವರುಮ್** - ನೀವು ಹೇಳಿದಾಕ್ಷೇಪವೂ ಬರುತ್ತದೆ ಪೂರ್ವಪಕ್ಷಿಗಳು ಹೇಳಿದ ಎರಡಾಕ್ಷೇಪಗಳೂ ದೋಷಯುಕ್ತವಾದವೆಂದು ಈ ವಾಕ್ಯದಿಂದ ತೋರಿಸಿರುತ್ತಾರೆ. ಹೇಗೆಂದರೆ, ಪ್ರಮಾಣದಲ್ಲಿ **ಕೀರ್ತ್ತನಾದೇವ** - ಎಂದಿರುವದರಿಂದ ಇತರೋಪಾಯಗಳನ್ನು ಇದು ವ್ಯಾವರ್ತ್ತಿಸಿ ಹೇಳುತ್ತದೆ, ಕೀರ್ತನ ಮಾತ್ರವೇ ಉಪಾಯವೆಂದರೆ ಪ್ರಪದನವೂ ಉಪಾಯವಲ್ಲವೆಂದು ಹೇಳಬೇಕಾಗುತ್ತದೆ. ಅಧಿಕಾರಿ ದೌರ್ಲಭ್ಯದಿಂದ ಎಂಬಾಕ್ಷೇಪ ತಂದರೆ, ಅಂತಹ ದೌರ್ಲಭ್ಯವೂ, ಪ್ರಪದನಾನುಷ್ಠಾನಕ್ಕೂ ಹೇಳಿರುತ್ತದೆಂದು ಪೌಷ್ಕರ ಸಂಹಿತಾ ಪ್ರಮಾಣವನ್ನು ಉದಾಹರಿಸಿರುತ್ತಾರೆ ಆ ಶ್ಲೋಕ ತಾತ್ಪರ್ಯವೇನೆಂದರೆ ದ್ವಯ ಮಂತ್ರವು ಅತಿಶಯವಾದ ಮಹಿಮೆಯುಳ್ಳದ್ದು ಹೀಗಿದ್ದರೂ ಆ ದ್ವಯಮಂತ್ರವನ್ನು ಅನುಷ್ಠಿಸುವ ಎಂದರೆ ಶರಣಾಗತಿಯನ್ನನುಷ್ಠಿಸುವ ಮೋಕ್ಷಾರ್ಥಿಯೂ

---

(೧) ಪೌ. ಸಂ.

**ಅನಹಿನ್ಪ್ಪು ಉಪಾಸನಾದಿಗಳುಕ್ಕು ವೇರೊರು ವಿರೋಧಮಿಲ್ಲಾಮೈ ಯಾಲ್ ಯಥಾಶಾಸ್ತ್ರಂ ಆತುರಾದಿಗಳುಕ್ಕು ಅವಗಾಹನಾದಿಗಳಿಲ್ ಪೋಲೇ ಇವೈ, "ಅಕಿಞ್ಚನೋಽನನ್ಯಗತಿ ಎನ್ರಿರುಕ್ಕುಮಧಿಕಾರಿಕ್ಕು ಸ್ವಾಧಿಕಾರ ವಿರುದ್ಧಙ್ಗಳಿನ್ನು ಪ್ರಾಪ್ತಮ್.**

---

ದುರ್ಲಭವು, ಅವರ ಮಾಹಾತ್ಮ್ಯವನ್ನು ಕೇಳಿ ತಿಳಿಯಬೇಕೆಂಬಪೇಕ್ಷೆ ಇರುವವನೂ ದುರ್ಲಭವು ಎಂಬುದು. ಆದುದರಿಂದ ಆಕ್ಷೇಪವು ಸರಿಯಾದುದಲ್ಲವೆಂಬ ಭಾವವು. ಹಾಗಾದರೆ ಕೀರ್ತನಾದೇಃ ಎಂಬುದರ ತಾತ್ಪರ್ಯವೇನೆಂದು ಕೇಳಬಹುದು. ಕೀರ್ತನವು ಬಹಳ ಸುಲಭೋಪಾಯವೆಂದು ತೋರಿಸುವದಕ್ಕಾಗಿ ಏನಕಾರವು. ಮತ್ತು ಆ ಪ್ರಮಾಣದಲ್ಲಿ ಸಂಕೀರ್ತನವನ್ನೇನೂ ಸಾಕ್ಷಾತ್ತಾದ ಉಪಾಯವಾಗಿ ವಿಧಿಸಲಿಲ್ಲವು ಅದು ಮುಕ್ತಬಂಧನಾಗುವದಕ್ಕೆ ಉಪಾಯಕ್ಕೆ ಸಹಕಾರಿಯಾಗುವದರಲ್ಲಿ ಸಂದೇಹವಿಲ್ಲವೆಂಬ ತಾತ್ಪರ್ಯವು.

ಹಾಗಾದರೆ ಕೆಲವು ಆಪ್ತರು ಭಕ್ತಿಯೋಗವು ಸ್ವರೂಪವಿರುದ್ಧವೆಂದು ಹೇಳಿದುದರ ತಾತ್ಪರ್ಯವೇನು ? ಮತ್ತು ಈ ಕಲಿಯುಗದಲ್ಲಿ ಈಗ ಅನೇಕ ಪ್ರಪನ್ನರು ಉಪಾಸನವನ್ನು ಅವಲಂಬಿಸದೆ ಪ್ರಪದನವನ್ನು ಅಙ್ಗೀಕರಿಸಿರುವದರ ತಾತ್ಪರ್ಯವೇನು ? ಎಂದು ಕೇಳಬಹದಾಗಿ ಅವಕ್ಕೆ ಉತ್ತರವನ್ನು "ಅನಹಿನ್ಪ್ಪು" ಎಂದಾರಂಭಿಸಿ ದಯಪಾಲಿಸಿರುತ್ತಾರೆ. **ಅನಹಿನ್ಪ್ಪು** - ಹಾಗಾದನಂತರ, ಹೇಗಾದನಂತರವೆಂದರೆ ಉಪಾಸನಾದಿಗಳು ಉಪಾಯವಾಗಲು ಏನೂ ವಿರೋಧವಿಲ್ಲದುದರಿಂದ, ಮುಂದೆ ಇದರರ್ಥವನ್ನು "**ಉಪಾಸನಾದಿಗಳುಕ್ಕು ವೇರೊರು ವಿರೋಧಮಿಲ್ಲಾಮೈಯಾಲೇ**" ಎಂದು ಅನುವಾದ ಮಾಡಿರುತ್ತಾರೆ. ಉಪಾಸನಾದಿಗಳಿಗೆ ಬೇರೆ ಏನೊಂದೂ ವಿರೋಧವಿಲ್ಲದುದರಿಂದ, **ಯಥಾಶಾಸ್ತ್ರಂ** - ಶಾಸ್ತ್ರದಲ್ಲಿ ಹೇಳಿರುವ ಮೇರೆಗೆ, **ಆತುರಾದಿಗಳುಕ್ಕು ಅವಗಾಹನಾದಿಗಳಿಲ್ ಪೋಲೇ** - ರೋಗಿಷ್ಠರೇ ಮೊದಲಾದವರುಗಳಿಗೆ ಒಂದು ಜಲಾಶಯಕ್ಕೆ ಹೋಗಿ ಮುಳುಗಿ ಸ್ನಾನಮಾಡುವದು ಹೇಗೆ ಸ್ವಾಧಿಕಾರ ವಿರುದ್ಧವೋ, ಹಾಗೆಯೇ, **ಇವೈ** - ಈ ಉಪಾಸನಾದಿಗಳು, "**ಅಕಿಂಚನೋಽನನ್ಯಗತಿಃ" ಎನ್ರಿರುಕ್ಕುಮ್** - ಯಾವಸಾಧನೆಯೂ ಇಲ್ಲದೆ ಯಾರೂ ರಕ್ಷಕರೂ ಇಲ್ಲದೆ ಹೀಗೆ ಅಸಮರ್ಥನಾಗಿರುವ, **ಅಧಿಕಾರಿಕ್ಕು** - ಅಧಿಕಾರಿಗೆ, **ಸ್ವಾಧಿಕಾರ ವಿರುದ್ಧಙ್ಗಳಿನ್ನು ಪ್ರಾಪ್ತಮ್** - ತನ್ನ ಅಧಿಕಾರವಾದ ಅಸಮರ್ಥತೆಗೆ ವಿರುದ್ಧವಾದವುಗಳು ಎಂಬ ಅಭಿಪ್ರಾಯವೆಂದು ಹೇಳುವದ ಉಚಿತವು. ಅನೇಕ ಪ್ರಪನ್ನರು ಅಸಮರ್ಥರಾದುದರಿಂದ ಉಪಾಸನೋಪಾಯ

**ಅತಃ ಭಕ್ತಿಯೋಗಃ ಸ್ವರೂಪಾನುರೂಪ ಏವ.**

**ಇವ್ವಧಿಕಾರ ವಿರೋಧ ಮರಿಯಾದೆ ಉಪಾಸನಾದಿಗಳಿಲೇ ಪ್ರವ**

ವನ್ನು ಅಙ್ಗೀಕರಿಸಲು ಸಾಧ್ಯವಲ್ಲವುದರಿಂದ ಅಂತವರು ಇಂತಹ ಉಪಾಸನೆಗಳನ್ನವಲಂಬಿಸುವದು ಅವರ ಅಧಿಕಾರಕ್ಕೆ ಉಚಿತವಲ್ಲವೆಂಬುದೀಗ ಅವರ ಅಭಿಪ್ರಾಯವೆಂದು ಹೇಳಿರುತ್ತಾರೆ. ಅಂತಹ ಅಸಮರ್ಥರು ಪ್ರಪದನೋಪಾಯವನ್ನು ಅಙ್ಗೀಕರಿಸುವದೇ ಯುಕ್ತವೆಂಬ ತಾತ್ಪರ್ಯವು. ಇದಕ್ಕೆ ಒಂದು ದೃಷ್ಟಾಂತವನ್ನು ಕೊಟ್ಟಿರುತ್ತಾರೆ ಸಾಧಾರಣವಾಗಿ ಸಮರ್ಥನು ನಿತ್ಯವೂ ಅವಗಾಹನ ಸ್ನಾನವನ್ನು ಮಾಡಬೇಕೆಂಬ ವಿಧಿ ಇರುತ್ತದೆ. ಹಾಗೆ ಸಮರ್ಥನಲ್ಲದವನಿಗೆ ಅವಗಾಹನ ಸ್ನಾನವನ್ನು ನಿಷೇಧಿಸಿ ಉಷ್ಣೋದಕ ಸ್ನಾನವು ವಿಧಿಸಲ್ಪಟ್ಟಿರುತ್ತದೆ. **"ಶೀತೋದಕಸ್ನಾನಾ ಸಮರ್ಥಸ್ಯ ಉಷ್ಣೋದಕ ಸ್ನಾನಂ"** ಎಂದರೆ ಶೀತೋದಕದಲ್ಲಿ ಅವಗಾಹನ ಸ್ನಾನಕ್ಕೆ ಸಾಮರ್ಥ್ಯವಿಲ್ಲದ ರೋಗಿಗೆ ಉಷ್ಣೋದಕ ಸ್ನಾನಮಾಡಬಹುದೆಂದು ಪಾಂಚರಾತ್ರ ರಕ್ಷೆಯಲ್ಲಿ ಶ್ರೀ ನಿಗಮಾಂತ ದೇಶಿಕರವರೇ ಹೇಳಿರುತ್ತಾರೆ. ರೋಗಿಗೆ ಹೇಗೆ ಅಸಮರ್ಥತೆಯಿಂದ ಅವಗಾಹನ ಸ್ನಾನಕ್ಕೆ ಅಧಿಕಾರವಿಲ್ಲವೋ, ಹಾಗೆಯೇ ಅಸಮರ್ಥನಾದ ಪ್ರಪನ್ನನಿಗೆ ಉಪಾಸನಕ್ಕೆ ಅಧಿಕಾರವಿಲ್ಲವು. ಇದೀಗ ಉಪಾಸನೋಪಾಯವನ್ನು ನಿಷೇಧಿಸಿದ ಮಹನೀಯರ ತಾತ್ಪರ್ಯವೆಂದುಪದೇಶಿಸಿರುತ್ತಾರೆ.

ಹೀಗೆ ಮಹನೀಯರ ಅಭಿಪ್ರಾಯವೆಂದು ಹೇಳಿದರೆ, ವಿಷ್ಣುಧರ್ಮ ಪ್ರಮಾಣದಲ್ಲಿ ಬುದ್ಧಿ ದೌರ್ಬಲ್ಯದಿಂದೀಗ ಉಪಾಯಾಂತರವಾದ ಉಪಾಸನೆಯನ್ನು ಅಪೇಕ್ಷಿಸುತ್ತಾನೆಂದು ಹೇಳಿದುದರ ಅಭಿಪ್ರಾಯವೇನೆಂದು ಪ್ರಶ್ನಿಸಬಹುದು. ಬುದ್ಧಿ ದೌರ್ಬಲ್ಯಶಬ್ದದಿಂದ ವಿವಕ್ಷಿತವಾದುದು ಅಜ್ಞಾನವೇ ವಿನಾ ಸ್ವರೂಪ ವಿರುದ್ಧವೆಂಬ ಭಾವವಲ್ಲವೆಂದು ಹೇಳುತ್ತಾರೆ. ಆದುದರಿಂದ ಸಾಮರ್ಥ್ಯವಿರುವ ಅಧಿಕಾರಾನುಗುಣವಾಗಿ ಭಕ್ತಿಮಾರ್ಗವೂ ಉಪಾದೇಯವೇ ಎಂದು ಸ್ಥಾಪಿಸುತ್ತಾರೆ.

**ಭಕ್ತಿಯೋಗವು ಸ್ವರೂಪ ವಿರುದ್ಧವಲ್ಲವು ಸ್ವರೂಪಕ್ಕೆ ಅನುರೂಪ ವಾದುದೇ**

**ಇವ್ವಧಿಕಾರ ವಿರೋಧಮರಿಯಾದೆ** - ಅಶಕ್ತನಾದವನು ತನ್ನ ಅಧಿಕಾರಕ್ಕೆ ಈ ಭಕ್ತಿಯೋಗವು ವಿರೋಧವೆಂಬುದನ್ನು ತಿಳಿಯದೆ ಉಪಾಸನಾದಿಗಳಲ್ಲಿ, **ಪ್ರವರ್ತಿಕ್ಕು ಮವನೈಪ್ಪತ್ತಿ** - ಪ್ರವರ್ತಿಸುವವನನ್ನು ಕುರಿತು, **"ನರಸ್ಯ ಬುದ್ಧಿ**

**ತಿರ್ಕ್ಕು ಮವನ್ನೈಪ್ಪತ್ತು (೧) "ನರಸ್ಯ ಬುದ್ಧಿ ದೌರ್ಬಲ್ಯಾದುಪಾಯಾಂತರ ಮಿಷ್ಯತೇ" ಎನ್ರದು. ಆಗೈಯಾಲ್ ಇವ್ವುಪಾಸನಾದಿಗಳುಮ್ ಅಧಿಕಾರ್ಯಂತರತ್ತುಕ್ಕು ಯಥಾಧಿಕಾರಮನುಗುಣಙ್ಗಳ್.**

---

**ದೌರ್ಬಲ್ಯಾದುಪಾಯಾಂತರಮಿಷ್ಯತೇ"** ಮನುಷ್ಯನ ಬುದ್ಧಿ ದೌರ್ಬಲ್ಯದಿಂದ ಎಂದರೆ ತಾನು ಅಧಿಕಾರಿಯಾಗಲು ಸಾಧ್ಯವಿಲ್ಲವೆಂಬ ಜ್ಞಾನವಿಲ್ಲದೆ ಉಪಾಯಾಂತರವಾದ ಭಕ್ತಿಯೋಗವನ್ನಪೇಕ್ಷಿಸುವನು." **ಎನ್ನದು** - ಎಂದು ಹೇಳಿರುವದು. ಇಲ್ಲಿ ಬುದ್ಧಿ ದೌರ್ಬಲ್ಯವನ್ನು ಹೇಳಿರುವದು ಪೂರ್ವಪಕ್ಷಿಯ ಪ್ರಕಾರ ಸ್ವರೂಪ ವಿರುದ್ಧಮೂಲಕವಲ್ಲವು. ತಾನು ಅಧಿಕಾರಿಯಲ್ಲ ಎಂಬ ಜ್ಞಾನಶೂನ್ಯತೆಯು ಎಂಬ ಭಾವವು. ವಿಷ್ಣುಧರ್ಮ ಶ್ಲೋಕಗಳು ಯಾವುವೆಂದರೆ:—

**"ಸಕೃದೇವಂ ಪ್ರಪನ್ನಸ್ಯ ಕೃತ್ಯಂ ನೈವಾನ್ಯದಿಷ್ಯತೇ ।**
**ಉಪಾಯಾಪಾಯ ಮುಕ್ತಸ್ಯ ವರ್ತಮಾನಸ್ಯ ಮಧ್ಯತಃ ।**
**ನರಸ್ಯ ಬುದ್ಧಿ ದೌರ್ಬಲ್ಯಾದುಪಾಯಾಂತರ ಮಿಷ್ಯತೇ" ॥**

ಹೀಗೆ ದ್ವಯೋಚ್ಚಾರಣೆ ಪೂರ್ವಕವಾಗಿ ಒಂದು ಸಲ ಮಾಡಿದ ಶರಣಾಗತಿಯು ಇನ್ನು ಯಾವುದನ್ನೂ ಅಪೇಕ್ಷಿಸುವದಿಲ್ಲವು ಈ ಭರನ್ಯಾಸಾನುಷ್ಠಾತೃವು ಅನುಷ್ಠಿಸಿದ ಉಪಾಯದಲ್ಲಿ ಅಪಾಯವೇನೂ ಇಲ್ಲದವನಾಗಿ **ಮಧ್ಯತಃ ವರ್ತಮಾನಸ್ಯ** - ಉಪಾಯಾನುಷ್ಠಾನಕ್ಕೂ ಫಲಪ್ರಾಪ್ತಿಗೂ ಮಧ್ಯದಲ್ಲಿರುವ ಮನುಷ್ಯನಿಗೆ ಪ್ರಪನ್ನನ ಅಜ್ಞಾನದಿಂದುಂಟಾದ ಬುದ್ಧಿ ದೌರ್ಬಲ್ಯದಿಂದ ಭಕ್ತಿಯೋಗವನ್ನು ಅಪೇಕ್ಷಿಸುತ್ತಾನೆಂಬುದು ಈ ಶ್ಲೋಕ ತಾತ್ಪರ್ಯವು. ಇಷ್ಟರವರ ಉಪಪಾದಿಸಿದ ಅಭಿಪ್ರಾಯವನ್ನು ಸಿದ್ಧಾಂತಿಸಿ ನಿಗಮನರೂಪದಲ್ಲಿ ಹೇಳುತ್ತಾರೆ **ಆಗೈಯಾಲ್** - ಹೀಗೆ ಇತರರು ಹೇಳುವ ಕಾರಣಗಳು ಯಾವುದರಿಂದಲೂ ಭಕ್ತ್ಯುಪಾಯವು ಪ್ರಪನ್ನನ ಸ್ವರೂಪಕ್ಕೆ ವಿರುದ್ಧವಲ್ಲವಾದುದರಿಂದ, **ಇವ್ವುಪಾಸನಾದಿಗಳುಮ್** - ಭಕ್ತ್ಯುಪಾಯದ ವಿದ್ಯೆಗಳಲ್ಲಿ ಹೇಳಿರುವ ಉಪಾಸನಾದಿಗಳೆಲ್ಲ, **ಅಧಿಕಾರ್ಯಂತರತ್ತುಕ್ಕು** - ಅಕಿಂಚನನಲ್ಲದೆ ಬೇರೆ ಅಧಿಕಾರಿಗೆ **ಯಥಾಧಿಕಾರಂ** - ಅಧಿಕಾರಾನುಗುಣಂ ಎಂದರೆ ಸಮರ್ಥನಾದ ಅಧಿಕಾರಿಗೆ, **ಅನುಗುಣಙ್ಗಳ್**-ಸ್ವರೂಪಕ್ಕೆ ಹಿತವಾದವುಗಳೇ ಅವರು ಹೇಳಿದ ಹಾಗೆ ಸ್ವರೂಪವಿರುದ್ಧವಲ್ಲವು ಸ್ವರೂಪಕ್ಕೆ ಅನುಗುಣವಾದುದೇ ಎಂದು ಉಪಪಾದಿಸಿದರು.

---

(೧) ವಿಷ್ಣುಧರ್ಮ. ೨೮. ೧೩.

## ಸ್ವರೂಪಾವಿರುದ್ಧತ್ವೇ ಭಕ್ತಿಪ್ರಪತ್ತ್ಯೋಃ ತುಲ್ಯತ್ವೇಽಪಿ ಭಕ್ತ್ಯಪೇಕ್ಷಯಾ ಪ್ರಪತ್ತಿಶ್ಶ್ರೇಯಸೀ.

ಅವರ್ಗಳುಕ್ಕು ಸಾಮರ್ಥ್ಯಮಿಲ್ಲಾಮೈಯಾಲಾದಲ್, ವಿಳಂಬಕ್ಷಮನಲ್ಲಾಮೈಯಾಲಾದಲ್, ಇಪ್ಪ್ರಪತ್ತಿಯೈ ಸ್ವತಂತ್ರೋಪಾಯಮಾಗ ಪಱ್ಱಿನವನ್ನೈ (೧) "ಶೆಯ್ದ ವೇಳ್ವಿಯರ್" ಎನ್ರುಮ್, (೨) "ಕೃತಕೃತ್ಯಃ" ಎನ್ರುಮ್, (೩) "ಅನುಷ್ಠಿತಕ್ರತು ಶರ್ಮ" ಎನ್ರುಮ್, ಇವನುಕ್ಕು ಮರ

---

ಮೇಲೆ ಅವಗಾಹನ ಸ್ನಾನಕ್ಕೆ ಅನರ್ಹನಾಗಿ ರೋಗಪೀಡಿತನಾಗಿದ್ದರೆ ಮಂತ್ರಸ್ನಾನವು ಹೇಗೋ, ಹಾಗೆ ಭಕ್ತಿಮಾರ್ಗದ ಉಪಾಸನೆಗೆ ಅನರ್ಹನಾದವನಿಗೆ ಪ್ರಪತ್ತಿಯು ಎಂದು ಹೇಳಿದರೆ, ಸಮರ್ಥನಾದವನಿಗೆ ಭಕ್ತಿಮಾರ್ಗವೇ ಸರಿಯಾದ ಉಪಾಯವು, ಅದಕ್ಕೆ ಶಕ್ತಿಯಿಲ್ಲದ ಪ್ರಯುಕ್ತ ಪ್ರಪತ್ತಿ ಎಂದರೆ ಭಕ್ತಿಮಾರ್ಗಕ್ಕೇನೇ ಪ್ರಾಧಾನ್ಯವೂ, ಪ್ರಪತ್ತಿಗೆ ಗೌಣೋಪಾಯತ್ವವೂ ಹೇಳಿದಂತಾಗುತ್ತದೆ. ಈ ಎರಡು ಉಪಾಯಗಳೂ ಸ್ವರೂಪಕ್ಕೆ ವಿರುದ್ಧವಲ್ಲವುಗಳಾಗಿ ವಿಕಲ್ಪಿಸಿ ಹೇಳಿರುವದರಿಂದ ಫಲ ಒಂದೇಯಾದರೂ, ಪ್ರಪತ್ತಿಗೆ ಗೌಣಭಾವವು ತಪ್ಪಿದ್ದಲ್ಲವೆಂದು ಪೂರ್ವಪಕ್ಷವುಂಟಾಗಬಹುದು ಇದಕ್ಕೆ ಸಮಾಧಾನವನ್ನು ಹೇಳುವವರಾಗಿ, ಪ್ರಪತ್ತಿಗೇನೇ ಉತ್ಕರ್ಷವೂ ಪ್ರಾಶಸ್ತ್ಯವೂ ಉಂಟೆಂಬುದಕ್ಕೆ ಪ್ರಮಾಣಗಳನ್ನು ತೋರಿಸುತ್ತಾರೆ.

## ಭಕ್ತಿಪ್ರಪತ್ತಿಗಳೆರಡೂ ಸ್ವರೂಪವಿರುದ್ಧವಲ್ಲದೆ ಸಮಾನವಾದರೂ ಭಕ್ತಿಗಿಂತಲೂ ಪ್ರಪತ್ತಿಯು ಶ್ರೇಷ್ಠವಾದುದು.

**ಅವರ್ಗಳುಕ್ಕು** - ಆ ಭಕ್ತಿಮಾರ್ಗದ ಉಪಾಸನೆಗಳಿಗೆ, **ಸಾಮರ್ಥ್ಯಮಿಲ್ಲಾಮೈಯಾಲಾದಲ್**-ಸಾಮರ್ಥ್ಯವಿಲ್ಲದೆ ಇರುವದರಿಂದಲಾಗಲಿ, (ಇವರು ಯಾರು ಎಂಬುದು ಅಧಿಕಾರಿ ವಿಭಾಗಾಧಿಕಾರದ ಕೊನೆಯ ಶ್ಲೋಕದಲ್ಲಿ ಉಪಪಾದಿತವು) ಅಥವಾ, **ವಿಳಂಬಾಕ್ಷಮನಲ್ಲಾಮೈಯಾಲಾದಲ್** - ಇನ್ನೊಂದು ಜನ್ಮಮುಂತಾದ ವಿಳಂಬವನ್ನು ಸಹಿಸದೆ ಇರುವವನಾದುದರಿಂದಲೇ ಯಾಗಲಿ, ಸ್ವತಂತ್ರೋಪಾಯವೆಂದು, **ಪಱ್ಱಿನವನ್ನೈ** - ಆಶ್ರಯಿಸಿದವನನ್ನು, (೧) "**ಶೆಯ್ದ ವೇಳ್ವಿಯರ್** - ಮಾಡಿದ ಯಜ್ಞವುಳ್ಳವರು" ಎಂದರೆ ಉಪಾಯಾನುಷ್ಠಾನ ಮಾಡಿ ಕೃತಕೃತ್ಯರಾದ ಪ್ರಪನ್ನರು, (೨) "**ಕೃತಕೃತ್ಯನೆನ್ರುಮ್** - ಉಪಾ

---

(೧) ತಿರು. ೫. ೭. ೫. (೨) ಸಾತ್ವ. ತಂ. (೩) ಅಹಿ. ೩೩.

**ಹಾನ್ತಮಾಗ ನಡಕ್ಕಿರ ವ್ಯಾಪಾರಙ್ಗಳ್ಳೈ ಅವಭೃಥ ಪರ್ಯನ್ತ ಕರ್ತ್ತವ್ಯ ಕಲಾಪಙ್ಗಳಾಗ ಸ್ತುತಿತ್ತುಮ್, ಕ್ರತ್ವಂತರಾನುಷ್ಠಾನಮ್ ಪಣ್ಣಿ ನವನುಕ್ಕು ಮೇಲುಳ್ಳ ನಿತ್ಯ ನೈಮಿತ್ತಿಕಙ್ಗಳ್ಪೋಲೆ ಇವನುಕ್ಕು ಸ್ವ ತಂತ್ರ ವಿಧಿಯಾಲೇ ವರ್ಣಾಶ್ರಮಾದಿ ಧರ್ಮಙ್ಗಳ್ ನಡವಾನಿರ್ಕಚ್ಚೆಯ್‌ದೇ**

---

ಯಾನುಷ್ಠಾನಮಾಡಿದ ಕೃತಕೃತ್ಯನೆಂದೂ, (೩) **ಅನುಷ್ಠಿತಕ್ರತುಶರ್ತ** ಅನುಷ್ಠಿಸಿದ ನೂರು ಯಜ್ಞಗಳಿಗೆ ಸಮಾನನೆಂದೂ, **ಇವನುಕ್ಕು** - ಈ ಭರನ್ಯಾಸವನ್ನ ನುಷ್ಠಿಸಿದ ಪ್ರಪನ್ನನಿಗೆ, **ಮರಣಾಂತಮಾಗ ನಡಕ್ಕಿರ ವ್ಯಾಪಾರಙ್ಗಳ್ಳೈ** - ಮರಣವೇ ಕೊನೆಯಾಗಿ ನಡೆಯುವ ವ್ಯಾಪಾರಗಳನ್ನೆಲ್ಲಾ, **ಅವಭೃಥ ಪರ್ಯನ್ತ ಕರ್ತವ್ಯ ಕಲಾಪಙ್ಗಳಾಗ** - ತೈತ್ತಿರೀಯದಲ್ಲಿ, "**ಯನ್ಮರಣಂ ತದವ ಭೃಥಃ**" ಪ್ರಪದನಾನ ಷ್ಠಾನವಾದನಂತರ ಮರಣದವರೆಗೂ ಎಂದು ನಡೆಯುವ ಪ್ರಪನ್ನನ ಸರ್ವ ಪ್ರವೃತ್ತಿ ನಿವೃತ್ತಿಗಳನ್ನೆಲ್ಲಾ ಒಂದು ಅಗ್ನಿಹೋತ್ರವಾಗಿ ರೂಪಕ ಮಾಡಿ "**ತಸ್ಯೈವಂ ವಿದುಷೋ**" ಎಂಬ ಶ್ರುತಿಯಲ್ಲಿ ಹೇಳಿರುವ ಪ್ರಕಾರ, ಒಂದು ಯಜ್ಞವಾದನಂತರ ಕೊನೆಯಲ್ಲಿ ತದಙ್ಗವಾಗಿ ಅವಭೃಥ ಸ್ನಾನದವರೆಗೂ, ನಡೆಯಬೇಕಾದ ಕಾರ್ಯಕಲಾಪಗಳಾಗಿ, **ಸ್ತುತಿತ್ತುಮ್**– ಪ್ರಶಂಸಿಸಿ, ಹೊಗಳಿ, **ಕ್ರತ್ವಂತರಾನುಷ್ಠಾನಮ್** - ಈ ಆತ್ಮಹವಿಸ್ಸನ್ನು ಸಮರ್ಪಿಸುವ ಕ್ರತುವಿಗಿಂತಲೂ ಬೇರೆ ಯಾಗದ ಅನುಷ್ಠಾನವನ್ನು, **ಪಣ್ಣಿನವನಕ್ಕು** - ಮಾಡಿದ ಅಧಿಕಾರಿಗೆ, **ನಿತ್ಯನೈಮಿತ್ತಿಕಙ್ಗಳ್ಪೋಲೇ** - ನಿತ್ಯ ನೈಮಿತ್ತಿಕ ಕರ್ಮಗಳು ಹೇಗೆ ಅಙ್ಗಗಳಾಗಿಯೂ, ಆಜ್ಞಾ ಕೈಙ್ಕರ್ಯಗಳಾಗಿ ಆವಶ್ಯಕವೋ?, ಹಾಗೆಯೇ **ಇವನುಕ್ಕು** - ಈ ಭರನ್ಯಾಸವನ್ನನುಷ್ಠಿಸಿದ ಪ್ರಪನ್ನನಿಗೂ, **ಸ್ವತಂತ್ರ ವಿಧಿಯಾಲೇ** - ಬೇರೇ ವಿಧಿಯಿಂದ ಎಂದರೆ ಕರ್ಮಕ್ಕೆ ಅಙ್ಗಗಳಾಗಿಯಲ್ಲದೆ, ಪ್ರಪದನಕ್ಕೆ ಸಂಬಂಧವಿಲ್ಲದೆ ಸ್ವತಂತ್ರವಾದ ಆಜ್ಞಾ ಕೈಙ್ಕರ್ಯಗಳನ್ನು ಆವಶ್ಯಕವಾಗಿ ಮಾಡಬೇಕೆಂಬ ವಿಧಿಯಿಂದ, ವರ್ಣಾಶ್ರಮಾದಿ ಧರ್ಮಗಳು, **ನಡವಾನಿರ್ಕಚ್ಚೆಯ್‌ದೇಯುಮ್**, ಅನುಷ್ಠಿತಗಳಾಗಿರುವಾಗ, ಎಂದರೆ ಇತರಯಜ್ಞಾಧಿಕಾರಿಗೆ ನಿತ್ಯ ನೈಮಿತ್ತಿಕಗಳು ಆಜ್ಞಾ ಕೈಙ್ಕರ್ಯಗಳು ಮಾತ್ರವೇ ಅಲ್ಲದೆ ಕರ್ಮಾಙ್ಗಗಳು ; ಈ ಭರನ್ಯಾಸವನ್ನನುಷ್ಠಿಸಿದ ಕೃತಕೃತ್ಯನಿಗಾದರೋ ಈ ನಿತ್ಯ ನೈಮಿತ್ತಿಕಗಳು ಈತನ ಭರನ್ಯಾಸರೂಪ ಯಾಗಕ್ಕೆ ಸಂಬಂಧಿಸಿದವೇ ಅಲ್ಲವು ಆದರೆ ಈತನನುಷ್ಠಿಸಬೇಕೋ ಎಂದರೆ ಆವಶ್ಯಕವಾಗಿ ಅನುಷ್ಠಿಸಬೇಕು. ಆಜ್ಞಾ ಕೈಙ್ಕರ್ಯವಿಧಿಗನುಗುಣವಾಗಿ ಭಗವತ್ಪ್ರೀತ್ಯರ್ಥವಾಗಿ ಅನುಷ್ಠಿಸತಕ್ಕದ್ದು ;

**ಯುಮ್, ಅನುಷ್ಠಿತಾತ್ಮಯಾಗ ಫಲತ್ರೈಪ್ಪತ್ತ ಕರ್ತವ್ಯಾಂತರ ನಿರಪೇಕ್ಷ ನಾಗವುಮ್, ಆಳ್ವಾರ್‌ಗಳುಮ್, ಮಹರ್ಷಿಗಳುಮ್, ಭಗವಚ್ಛಾಸ್ತ್ರಙ್ಗಳುಮ್, ವೇದಙ್ಗಳುಮ್, ಘೋಷಿಯಾನಿನ್ರನ.**

ಆದುದರಿಂದ ನಿತ್ಯ ನೈಮಿತ್ತಿಕ ಕರ್ಮಗಳು ಆಜ್ಞಾ ಕೈಂಕರ್ಯಗಳೆಂದು ಭಾವಿಸಿ ಅವುಗಳನ್ನನುಷ್ಠಿಸುತ್ತಾ, **ಅನುಷ್ಠಿತಾತ್ಮ ಯಾಗ ಫಲತ್ರೈಪ್ಪತ್ತ** - ಅನುಷ್ಠಿಸಲ್ಪಟ್ಟ, ಈ ತನ್ನ ಆತ್ಮಾವನ್ನು, "ಓಮಿತ್ಯಾತ್ಮಾನಂ ಯುಂಜೀತ" ಎಂದೂ, "**ಪ್ರತ್ಯಗ್ರೂಪೇ ಹವಿಷಿ**" ಎಂದೂ ಹೇಳಿರುವಹಾಗೆ ಲಕ್ಷ್ಮೀನಾರಾಯಣರಿಬ್ಬರಲ್ಲೂ ಸಮರ್ಪಿಸಿದ ಆತ್ಮಯಾಗದ ಫಲವಾದ ಪರಿಪೂರ್ಣ ಬ್ರಹ್ಮಾನುಭವವನ್ನು ಕುರಿತ ವಿಷಯದಲ್ಲಿ, **ಕರ್ತವ್ಯಾಂತರ ನಿರಪೇಕ್ಷನಾಗವುಮ್** - ಬೇರೇ ಇನ್ನು ಯಾವ ಕರ್ತವ್ಯದ ಎಂದರೆ ಇನ್ನು ಯಾವ ಉಪಾಯಾನುಷ್ಠಾನದ ಅಪೇಕ್ಷೆಯಿಲ್ಲನೆಂದು, ಆಳ್ವಾರ್‌ಗಳೂ, ಮಹರ್ಷಿಗಳೂ, ಭಗವಚ್ಛಾಸ್ತ್ರಙ್ಗಳೂ, ವೇದಙ್ಗಳೂ, **ಘೋಷಿಯಾನಿನ್ರನ** - ಉದ್ಘೋಷಿಸುತ್ತಾ ಇವೆ, ವಿಳಂಬವನ್ನು ಸಹಿಸತಕ್ಕವನೂ ಮತ್ತು ಸಾಮರ್ಥ್ಯವಿರುವವನೂ ಉಪಾಸನವನ್ನು ಅನುಷ್ಠಿಸತಕ್ಕದ್ದು. ಇವರಲ್ಲೇನೂ ಸ್ವರೂಪವಿರುದ್ಧವಿಲ್ಲವು. ಸ್ವರೂಪಾನುಗುಣವಾದ ಉಪಾಯವೇ, ಆದರೆ ಅಸಮರ್ಥನಾಗಿಯೂ ಈ ಜನ್ಮಕ್ಕಿಂತ ಹೆಚ್ಚುಕಾಲ ವಿಳಂಬನನ್ನು ಸಹಿಸದವನಾಗಿಯೂ ಇದ್ದರೆ, ಅಂತವನಿಗೆ ಭರನ್ಯಾಸವೇ ಉಪಾಯವು ಸಕೃದನುಷ್ಠಾನಮಾತ್ರದಿಂದಲೇ ಈತನು ಕೃತಕೃತ್ಯನ, ಈತನು ಮೋಕ್ಷಪ್ರಾಪ್ತಿಗಾಗಿ ಇನ್ನೇನನ್ನೂ ಮಾಡತಕ್ಕದ್ದಿಲ್ಲವು ಆದರೆ ನಿತ್ಯನೈಮಿತ್ತಿಕಗಳಾದ ಆಜ್ಞಾ ಕೈಂಕರ್ಯಗಳನ್ನು ಮಾತ್ರ ಅನುಷ್ಠಿಸತಕ್ಕದ್ದು. ಈ ಭರನ್ಯಾಸ ಸಾಧನಕ್ಕಾಗಿ ಹಾಗೆ ಮಾಡತಕ್ಕದ್ದೇನೂ ಅಲ್ಲವು. ಭಗವತ್ಪ್ರೀತ್ಯರ್ಥವಾಗಿ ವರ್ಣಾಶ್ರಮ ಧರ್ಮಗಳನ್ನ ನಡೆಸುವದು ಆವಶ್ಯಕವೆಂದು ಬೇರೆ ವಿಧಿಯಿರುವದರಿಂದ ಅವುಗಳನ್ನು ಮಾತ್ರ ನಡೆಸಿಕೊಂಡು ಬರತಕ್ಕದ್ದು ಎಂಬುದು ತಾತ್ಪರ್ಯವು ಈ ಭರನ್ಯಾಸವು ಹೀಗೆ ಸಕೃದನುಷ್ಠೇಯವಾಗಿ ಸುಕರವಾಗಿ, ಪ್ರಮಾದ ರಹಿತವಾಗಿ, ಕರ್ತವ್ಯಾಂತರ ನಿರಪೇಕ್ಷವಾದ ಉಪಾಯವೆಂದು ಆಳ್ವಾರ್‌ಗಳೂ, ಮಹರ್ಷಿಗಳೂ, ಭಗವಚ್ಛಾಸ್ತ್ರವೂ, ವೇದಗಳೂ, ಕೊಂಡಾಡಿರುತ್ತವೆಂದು ಒಂದೊಂದು ದಿವ್ಯಸೂಕ್ತಿಯನ್ನು ಉದಾಹರಿಸಿರುತ್ತಾರೆ

• ಆಳ್ವಾರ್ ಸೂಕ್ತಿಗೆ **ಶೆಯ್‌ದ ವೇಳ್ವಿಯರ್** ಎಂಬ ಪಾಶುರವನ್ನು ಉದಾಹರಿಸುತ್ತಾರೆ. ಆ ಪೂರಾ ಪಾಶುರವು ಯಾವುದೆಂದರೆ :—

ಎಯ್‌ದ ಕ್ಕೊವಿದ ಲಾವದೇ ಯೆನಕ್ಕೆವ್ವ ತೆವ್ವತ್ತುಳಾಯ ಎವರಾಯ್ ನಿನ್ರು । ಕೈತವಙ್ಗಳ್ ಶೆಯ್ಯುಙ್ಗರುವರ್ಣನಿಯವನ್ಮಾನೇ ॥ ಶೆಯ್‌ದ ವೇಳ್ ವಿಯರ್ ವೈಯತ್ತೇವರ ರಾಚ್ಚಿ ರೀವರ ಮಙ್ಗಳ ನಗರ್ । ಕೈ ತೊಳ ವಿರುನ್ದಾಯುದು ನಾನುಙ್ಗಣ್ಡೇನೆ ॥

ಆಶ್ರಿತರಿಗೆ, ಪ್ರತಿಕೂಲರಾದ ದುರ್ಯೋಧನ, ರಾವಣ, ಕಂಸಾದಿಗಳಿಗಲ್ಲವೋ ಅವರುಗಳ ಮಧ್ಯೆಯೇ ಇದ್ದುಕೊಂಡು ಕೃತ್ರಿಮಗಳನ್ನು ಮಾಡತಕ್ಕದ್ದು. ನಿನ್ನನ್ನಾಶ್ರಯಿಸಿಕೊಂಡು ನೀನಲ್ಲದೆ ಬೇರೆ ರಕ್ಷಕರಿಲ್ಲವೆಂದಿರುವ ನಮ್ಮಗಳಿಗೆ ಪುರುಷಾರ್ಥಪ್ರಾಪ್ತಿಗೆ ಸಾಧನವಾಗಿ ಅನುರೂಪವಾದುದು ಯಾವದೂ ಇಲ್ಲದಿದ್ದರೂ ನೀನೇ ನನ್ನ ಅನುಗ್ರಹಕ್ಕಾಗಿ ಬೇಕಾದ ಉಪಾಯವನ್ನು ಸಾಧಿಸಿಕೊಡತಕ್ಕದ್ದು. ಪ್ರತಿಪಕ್ಷದ ಸಂಬಂಧ ಸ್ವಲ್ಪವೂ ಇಲ್ಲದೆ ಸಾಧನಾನುಷ್ಠಾನಮಾಡಿ ಕೃತಕೃತ್ಯರಾಗಿ, ಈ ಲೋಕದಲ್ಲಿ ಜ್ಞಾನ ಸಂಪತ್ತಿನಿಂದ ನಿತ್ಯಸೂರಿಗಳಿಗೆ ಸಮಾನರಾದ ಶ್ರೀವೈಷ್ಣವರು ನಿರಂತರ ವಾಸಮಾಡುವ ಶ್ರೀವರಮಙ್ಗಲನಗರೆಂಬ ಹೆಸರನ್ನು ಧರಿಸಿರುವ ವಾನಮಾಮಲೆಯಲ್ಲಿ ಅವರುಗಳು ಆಶ್ರಯಿಸುವದಕ್ಕಾಗಿ ಬಿಜಮಾಡಿಸಿರುತ್ತೀಯೇ ಅದನ್ನು ನಾನು ಕಂಡಿರುತ್ತೇನೆ. ಇಲ್ಲಿ ಶೆಯ್‌ದವೇಳ್ವಿಯರ್ ಎಂಬಲ್ಲಿ "ಸರ್ವೇವೇದಾ ಸ್ಸರ್ವವಿದ್ಯಾ ಸ್ಸಶಾಸ್ತ್ರಾಸ್ಸರ್ವೇ ಯಜ್ಞಾ ಸ್ಸರ್ವ ಇಜ್ಯಶ್ಚ ಕೃಷ್ಣಃ । ವಿದುಃ ಕೃಷ್ಣಂ ಬ್ರಾಹ್ಮಣಾಸ್ತತ್ತ್ವತೋ ಯೇ ತೇಷಾಂ ರಾಜನ್ ಸರ್ವಯಜ್ಞಾ ಸ್ಸಮಾಪ್ತಾಃ" ॥ (ಭಾರ) ಎಂಬ ಶ್ಲೋಕವು ಅನುಸಂಧೇಯವು. ಸಮಸ್ತ ವೇದಗಳೂ ವಿದ್ಯೆಗಳೂ ಶಾಸ್ತ್ರಗಳೂ ಯಜ್ಞಯಾಗಾದಿಗಳೂ ಹೀಗೆ ಸಮಸ್ತವಾದ ಉಪಾಯವೂ ಉಪಾಯ ಫಲಕರಣೆಗಳೂ ಎಲ್ಲವೂ ಶ್ರೀಕೃಷ್ಣನೇ. ಹೀಗೆ ಯಥಾರ್ಥವಾಗಿ ತಿಳಿದ ಬ್ರಹ್ಮವಿತ್ತುಗಳು ಯಾರೋ ಅವರಿಗೆ ಸಮಸ್ತಸಾಧನರೂಪಯಜ್ಞಗಳೂ ಸಮಾಪ್ತವಾದವೆಂದು ಭಾವಿಸತಕ್ಕದ್ದು. ಅವರು ಕೃತಕೃತ್ಯರು ಎಂಬ ಭಾವವು ಮಹರ್ಷಿ ಸೂಕ್ತಿಗೆ:—

"ಅನೇನೈವತು ಮನ್ತ್ರೇಣ ಸ್ವಾತ್ಮಾನಂ ಮಯಿನಿಕ್ಷಿಪೇತ್ ।
ಮಯಿನಿಕ್ಷಿಪ್ತ ಕರ್ತವ್ಯಃ ಕೃತಕೃತ್ಯೋ ಭವಿಷ್ಯತಿ" ॥

ಈ ದ್ವಯ ಮಂತ್ರೋಚ್ಚಾರಣೆ ಪೂರ್ವಕವಾಗಿ ಆತ್ಮವನ್ನು ನನ್ನಲ್ಲಿ (ನನ್ನ ಪಾದದಲ್ಲಿ) ಇಡತಕ್ಕದ್ದು. ಹೀಗೆ ಆತ್ಮ ನಿಕ್ಷೇಪರೂಪವಾದ ಉಪಾಯಾನುಷ್ಠಾನವನ್ನು ಮಾಡಿದರೆ ಕೃತಕೃತ್ಯನಾಗುತ್ತೀಯೆ. ಎಂಬುದು ಈ ಶ್ಲೋಕಾರ್ಥವು. ಇದು ಹಿಂದೆ ಸಾಙ್ಗಪ್ರಪದನಾಧಿಕಾರದಲ್ಲಿ ಉಪಪಾದಿತವು ಭಗವಚ್ಛಾಸ್ತ್ರ ಪ್ರಮಾಣಕ್ಕೆ "ಅನುಷ್ಠಿತ ಕ್ರತುಶತೋ ಭವತ್ಯೇವ ನಸಂಶಯಃ" ಅಂತಹ ಕೃತಕೃತ್ಯನು ನೂರು ಕ್ರತುಗಳನ್ನು ಅನುಷ್ಠಿಸಿದವನಿಗೆ ಸಮಾನನು ಎಂದು

ಹೇಳಿರುತ್ತದೆ. ಹಾಗೆ ನೋಡಿದರೆ ಅವನಿಗಿಂತ ಅಧಿಕನು ಎಂದೇ ಅಭಿಪ್ರಾಯವು. ಮಹರ್ಷಿ ವಾಕ್ಯಕ್ಕೆ :—"ಸರ್ವೇವೇದಾ ಸ್ಸರ್ವವಿದ್ಯಾ ಸ್ಸಶಾಸ್ತ್ರಾಃ ಎಂಬುದು ಅನುಸಂಧೇಯವು, ವೇದಪ್ರಮಾಣಕ್ಕೆ —"ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನ ಶ್ರದ್ಧಾ ಪತ್ನೀ, ಶರೀರ ಮಿಧ್ಮ, ಮುರೋ ವೇದಿ, ಲೋರ್ಮಾನಿ ಬರ್ಹಿ, ರ್ವೇದಶ್ಶಿಖಾ, ಹೃದಯಂ ಯೂಪಃ, ಕಾಮ ಮಾಜ್ಯಂ, ಮನುಃ ಪಶು, ಸ್ತಪೋಗ್ನಿ, ಶ್ಶಮಯಿತಾ ದಕ್ಷಿಣಾ, ವಾಗ್ಘೋತಾ, ಪ್ರಾಣ ಉದ್ಗಾತಾ, ಚಕ್ಷುರಧ್ವರ್ಯು, ಮನೋ ಬ್ರಹ್ಮಾ, ಶ್ರೋತ್ರಮಗ್ನೀ ದ್ಯಾವದ್ಧ್ರಿಯತೇ ಸಾದೀಕ್ಷಾ, ಯದಶ್ನಾತಿ ಯತ್ಪಿಬತಿ ತದಸ್ಯ ಸೋಮಪಾನಂ, ಯದ್ರಮತೇ ತದುಪಸದೋ, ಯತ್ಸಂಚರಿತ್ಯುಪವಿಶತ್ಯುತ್ತಿಷ್ಠತೇಚ ಸಪ್ರವರ್ಗ್ಯೋ, ಯನ್ಮುಖಂ ತದಾಹವನೀಯೋ, ಯದಸ್ಯ ವಿಜ್ಞಾನಂ ಯಜ್ಜುಹೋತಿ ಯತ್ಸಾಯಂ ಪ್ರಾತರತ್ತಿ ತತ್ಸಮಿಧೋ, ಯತ್ಸಾಯಂ ಪ್ರಾತರ್ಮಧ್ಯಂದಿನಂ ಚ ತಾನಿ ಸವನಾನಿ, ಯೇ ಅಹೋರಾತ್ರೇ ತೇ ದರ್ಶಪೂರ್ಣಮಾಸೌ, ಯೇರ್ಧಮಾಸಾಶ್ಚ ಮಾಸಾಶ್ಚ ತೇ ಚಾತುರ್ಮಾಸ್ಯಾನಿ, ಯ ಋತವಸ್ತೇ ಪಶುಬಂಧಾಃ, ಯೇ ಸಂವತ್ಸರಾಶ್ಚ ಪರಿವತ್ಸರಾಶ್ಚ ತೇ ಹರ್ಗಣಾಃ, ಸರ್ವವೇದಸಂವಾ ವಿತತ್ಸತ್ರಂ ಯನ್ಮರಣಂ ತದವಭೃಥ ಏತದ್ವೈ ಜರಾಮರ್ಯಮಗ್ನಿಹೋತ್ರಂ ಸತ್ರಂ ಯಏವಂ ವಿದ್ವಾ ನುದಗಯನೇ ಪ್ರಮೀಯತೇ ದೇವಾನಾಮೇವ ಮಹಿಮಾನಂ ಗತ್ವಾ ದಿತ್ಯಸ್ಯ ಸಾಯುಜ್ಯಂ ಗಚ್ಛತ್ಯಥ ಯೋ ದಕ್ಷಿಣೇ ಪ್ರಮೀಯತೇ, ಪಿತೃಣಾ ಮೇವ ಮಹಿಮಾನಂ ಗತ್ವಾ ಚಂದ್ರಮಸಸ್ಸಾಯುಜ್ಯಂ ಗಚ್ಛತ್ಯೇತೌವೈ ಸೂರ್ಯಾಚಂದ್ರಮಸೋರ್ಮಹಿಮಾನೌ ಬ್ರಾಹ್ಮಣೋ ವಿದ್ವಾ ನಭಿಜಯತಿ ತಸ್ಮಾದ್ಬ್ರಹ್ಮಣೋ ಮಹಿಮಾನ ಮಾಪ್ನೋತಿ ತಸ್ಮಾದ್ಬ್ರಹ್ಮಣೋಮಹಿಮಾನ ಮಿತ್ಯುಪನಿಷತ್"

ಇಲ್ಲಿ ನ್ಯಾಸವಿದ್ಯೆಯು ಪರಮಾತ್ಮನನ್ನು ಕುರಿತು ಮಾಡುವ ಒಂದು ಯಜ್ಞದ ಹಾಗೆ ರೂಪಕದಿಂದ ಹೇಳಲ್ಪಟ್ಟು ಅದನ್ನನುಷ್ಠಿಸಿರುವ ಒಬ್ಬ ಮಹಾನುಭಾವನ ಸ್ವರೂಪಸ್ಥಿತಿ ಪ್ರವೃತ್ತಿಗಳೆಲ್ಲಾ ಆ ಯಜ್ಞದ ಅಂಗಗಳೆಂದೂ ಆ ಮಹಾನುಭಾವನೂ ತತ್ಸಂಬಂಧಿಗಳೂ ಸಹ ಕೃತಕೃತ್ಯರೆಂದೂ ಉಪದೇಶಿಸಲ್ಪಟ್ಟಿರುತ್ತದೆ. ಈ ಯಜ್ಞದಲ್ಲಿ ಜೀವಾತ್ಮನೇ ಯಜಮಾನನು ಶ್ರದ್ಧೆಯೇ ಈ ಯಜಮಾನನ ಪತ್ನಿಯು, ಅಪತ್ನೀಕನು ಯಜ್ಞಮಾಡಲು ಸಾಧ್ಯವಿಲ್ಲವು ; ಪತ್ನಿಯು ಬೇಕು, ಶ್ರದ್ಧೆಯೇ - ಪ್ರಾಪ್ತಿಯಲ್ಲಿ ತ್ವರೆಯೇ ಪತ್ನಿಯು, ಶರೀರ ಮಿಧ್ಮಂ - ಶರೀರವೇ ಕಟ್ಟಿಗೆಯು, ಉರೋವೇದಿಃ-ವಕ್ಷಸ್ಥಳವೇ ವೇದಿಕೆಯು,

**ಲೋಮಾನಿ ಬರ್ಹಿಃ** - ಕೂದಲುಗಳೇ ಆಸ್ತರಣ ದರ್ಭೆಗಳು, **ವೇದಶ್ಶಿಖಾ** - ಶಿಖೆಯೇ ವೇದವು, **ಹೃದಯಂ ಯೂಪಃ** - ಹೃದಯವೇ ಪಶುವನ್ನು ಕಟ್ಟುವ ಯೂಪಸ್ತಂಭವು, **ಕಾಮ ಆಜ್ಯಂ** - ಪರಮಪದದಲ್ಲಿ ಪರಿಪೂರ್ಣ ಬ್ರಹ್ಮಾನುಭವವೂ ತತ್ಕೈಂಕರ್ಯವೂ ಬೇಕೆಂಬ ಕಾಮನೆಯೇ ಆಜ್ಯಾಹುತಿಗೆ ಬೇಕಾದ ತುಪ್ಪವು, **ಮನ್ಯುಃ ಪಶುಃ** - ಪ್ರಪನ್ನನಿಗೆ ಸ್ವರೂಪ ವಿರುದ್ಧವಾಗಿ ಛೇದಿಸಲು ಅರ್ಹವಾದ ಕೋಪವೇ ಪಶುವು, **ಶಮಯಿತಾ ದಕ್ಷಿಣಾ** - ಪ್ರಪನ್ನನಿಗೆ ಸರ್ವಭೂತಗಳೂ ಅನುಕೂಲರಾದುದರಿಂದ ಶತ್ರು ಮಿತ್ರವರ್ಗಗಳ ಭಾವನೆಯೇ ಇಲ್ಲವೆ ಶಾಂತತೆಯಿಂದಿರೋಣವೇ ಯಜ್ಞಕ್ಕೆ ಬೇಕಾದ ದ್ರವ್ಯಸಹಾಯವು, **ವಾಕ್ ಹೋತಾ** - ಆ ಪ್ರಪನ್ನನ ವಾಕ್ಕೇ, ಸರ್ವೇಶ್ವರನ ಗುಣಚೇಷ್ಟಿತಗಳ ವಿಷಯವಾದ ವಾಕ್ಕೇ, ಋಗ್ವೇದ ಪಠನ ಮಾಡುವ ಹೋತೃವು. **ಪ್ರಾಣ ಉದ್ಗಾತಾ**-ಅವನ ನಿಶ್ವಾಸೋಚ್ಛ್ವಾಸ ಪ್ರಾಣವಾಯುವು ಸಾಮಗಾನ ಮಾಡುವ ಉದ್ಗಾತೃವು, **ಚಕ್ಷುರಧ್ವರ್ಯುಃ** - ಆತನ ಜ್ಞಾನವೇ ಯಜುರ್ವೇದವನ್ನು ಪಠಿಸುವ ಅಧ್ವರ್ಯುವು, **ಮನೋ ಬ್ರಹ್ಮಾ** - ಆತನ ಮನಸ್ಸೇ ಈ ನ್ಯಾಸಯಜ್ಞನಿರ್ವಾಹಕನಾದ ಬ್ರಹ್ಮನು, **ಶ್ರೋತ್ರಮಗ್ನೀತ್** - ಭಗವತ್ಸ್ವರೂಪ ರೂಪ ಗುಣ ವಿಭವಾದಿಗಳನ್ನು ಶ್ರವಣಮಾಡುವ ಕಿವಿಯೇ ಅಗ್ನೀಧ್ರವು, **ಯಾವದ್ಧ್ರಿಯತೇ ಸಾದೀಕ್ಷಾ** - ಆತನು ಜೀವಿಸಿರುವವರೆಗೂ ಯಜ್ಞದೀಕ್ಷೆಯು, **ಯದಶ್ನಾತಿ ಯತ್ಪಿಬತಿ ತದಸ್ಯಸೋಮಪಾನಂ** - ಆತನು ಏನನ್ನು ಊಟಮಾಡುತ್ತಾನೋ ಏನನ್ನು ಕುಡಿಯುತ್ತಾನೋ ಅದೇ ಯಜ್ಞದಲ್ಲಿ ಮಾಡುವ ಸೋಮಪಾನವು, **ಯದ್ರಮತೇ ತದುಪಸದಃ** - ಆತನು ಭಗವಧ್ಯಾನರೂಪದಲ್ಲಿ ಆಸಕ್ತನಾಗಿ ರಮಿಸುವದೆಲ್ಲಾ ಆ ಯಜ್ಞದ ಉಪಸತ್ತುಗಳು, **ಯತ್ಸಂಚರತ್ಯುಪವಿಶತ್ಯುತ್ತಿಷ್ಠತೇಚ ಸಪ್ರವರ್ಗ್ಯಃ** - ತುಲಸೀ ಪುಷ್ಪಾದಿ ಹರಣಕ್ಕಾಗಿ ಮಾಡುವ ಸಂಚಾರವೂ ಮತ್ತು ಭಗವದಾರಾಧನರೂಪವಾಗಿ ಕೂಡುವದು ಏಳುವದು ಪ್ರದಕ್ಷಿಣ ನಮಸ್ಕಾರಾದಿಗಳೆಲ್ಲಾ ಈ ಯಜ್ಞದ ಪ್ರವರ್ಗ್ಯವು, **ಯನ್ಮುಖಂ ತದಾಹವನೀಯಃ** - ಆತನ ಮುಖವೇ ಆಹವನೀಯಾಗ್ನಿಯು, **ಯದಸ್ಯ ವಿಜ್ಞಾನಂ ತಜ್ಜುಹೋತಿ** - ಪರಮಾತ್ಮನು ಸಿದ್ಧೋಪಾಯನೆಂಬ ಜ್ಞಾನ ಯಾವುದೋ ಅದೇ ಹೋಮವು, **ಯತ್ಸಾಯಂ ಪ್ರಾತರತ್ತಿ ತತ್ಸಮಿಧಃ** - ಸಾಯಂಕಾಲ ಪ್ರಾತಃಕಾಲಗಳ ಊಟವೇ ಸಮಿತ್ತುಗಳು, **ಯತ್ಸಾಯಂ ಪ್ರಾತರ್ಮಧ್ಯಂದಿನಂ ಚ ತಾನಿ ಸವನಾನಿ** - ಸಾಯಂಕಾಲ ಪ್ರಾತಃಕಾಲ ಮಧ್ಯಾಹ್ನ ಹೀಗೆ ತ್ರಿಕಾಲದಲ್ಲೂ ಅನುಷ್ಠಿಸುವದೆಲ್ಲಾ ತ್ರಿಕಾಲ ಸವನಗಳು, **ಯೇ ಅಹೋರಾತ್ರೇ ತೇ ದರ್ಶಪೂರ್ಣಮಾಸೌ** - ಅಹಸ್ಸು ರಾತ್ರಿಗಳೇ ದರ್ಶ

**ಪೂರ್ಣಮಾಸೆಗಳು,ಯೋ ಅರ್ಧಮಾಸಾಶ್ಚ ಮಾಸಾಶ್ಚ ತೇ ಚಾತುರ್ಮಾಸ್ಯಾನಿ**- ಪಕ್ಷಪಕ್ಷಗಳಲ್ಲೂ ಅನುಷ್ಠಿಸುವದೆಲ್ಲಾ ಚಾತುರ್ಮಾಸ್ಯಗಳು, **ಯ ಋತವಸ್ತೇ ಪಶುಬಂಧಾಃ** - ಋತುಗಳಲ್ಲಿ ಅನುಷ್ಠಿಸುವದೆಲ್ಲಾ ಪಶುಬಂಧಗಳು, **ಯೇ ಸಂವತ್ಸರಾಶ್ಚ ಪರಿವತ್ಸರಾಶ್ಚ ತೇ ಹರ್ಗಣಾಃ** - ಸಂವತ್ಸರ ಪರಿವತ್ಸರಗಳೇ ಅಹರ್ಗಣಗಳು, **ಸರ್ವವೇದ ಸಂವಾ ಏತತ್ಸತ್ರಂ** - ಈ ಪ್ರಪನ್ನನ ಸಮಸ್ತವೂ ಸತ್ರಪರಿಕರಗಳು, **ಯನ್ಮರಣಂ ತದವಭೃಥಃ** - ಈ ಪ್ರಪನ್ನನ ದೇಹವಿಯೋಗವೇ ಯಜ್ಞಪೂರ್ತಿಯಾದನಂತರ ನಡೆಸುವ ಅವಭೃಥವು, ಆದುದರಿಂದ **ಏತದ್ವೈ ಜರಾಮರ್ಯಮಗ್ನಿಹೋತ್ರಂ**- ಈ ಪ್ರಪನ್ನನ ವಾರ್ಧಕಕ್ಕೆ ಅನಂತರ ಮರಣಾಂತದವರೆಗೂ ಒಂದು ಅಗ್ನಿಹೋತ್ರವು, **ಯ ಏವಂ ವಿದ್ವಾನ್** - ಯಾವ ಪ್ರಪನ್ನನು ಈ ನ್ಯಾಸವನ್ನು ಒಂದು ಯಜ್ಞವೆಂದು ತಿಳಿಯುವನೋ, ಅವನು **ಉದಗಯನೇ ಪ್ರಮಿಯತೇ**-ಉತ್ತರಾಯಣದಲ್ಲಿ ಮೃತಿ ಹೊಂದಿದರೆ, **ದೇವಾನಾ ..ಸಾಯುಜ್ಯಂಗಚ್ಛತಿ**- ದೇವಲೋಕದ್ವಾರ ಪರಬ್ರಹ್ಮಪ್ರಾಪ್ತಿಯನ್ನು ಹೊಂದುವನು ; **ಯೋ ದಕ್ಷಿಣೇ ...ಚಂದ್ರಮಸ ಸ್ಸಾಯುಜ್ಯಂ ಗಚ್ಛತಿ**-ದಕ್ಷಿಣಾಯನದಲ್ಲಿ ಮೃತನಾದ ಪ್ರಪನ್ನನು ಪಿತೃಲೋಕ ಚಂದ್ರದ್ವಾರಾ ಗಮನವುಳ್ಳವನಾಗಿ ಪರಬ್ರಹ್ಮ ಪ್ರಾಪ್ತಿಯನ್ನು ಹೊಂದುವನು. **ಏತಾವೈ......ಮಹಿಮಾನಾ** ಹೀಗೆ ಭರನ್ಯಾಸವನ್ನು ಅನುಷ್ಠಿಸಿದವನು **ಕರ್ತವ್ಯಾಂತರ ನಿರಪೇಕ್ಷನು** ; ಇದಕ್ಕೆ **ಸಕೃದೇವಂ ಪ್ರಪನ್ನಸ್ಯ ಕೃತ್ಯಂನೈವಾನ್ಯ ದಿಷ್ಯತೇ**” ಎಂಬುದು ಅನುಸಂಧೇಯವು. ಈ ಪ್ರಕಾರವಾಗಿ ಸಕೃತ್ಪ್ರಪದನಾನುಷ್ಠಾನವನ್ನು ಮಾಡಿದ ಪ್ರಪನ್ನನ ಅನುಷ್ಠಾನವು, ಬೇರೆಬೇರೆ ಇನ್ನು ಯಾವ ಸಾಧನರೂಪ ಕೃತ್ಯವನ್ನೂ ಅಪೇಕ್ಷಿಸುವದಿಲ್ಲವು ಮತ್ತು **ಅನೇನೈವತು ಮನ್ತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್ । ಮಯಿನಿಕ್ಷಿಪ್ತ ಕರ್ತವ್ಯಃ ಕೃತಕೃತ್ಯೋ ಭವಿಷ್ಯಸಿ॥** ಎಂಬ ಸಾತ್ವತ ಪ್ರಮಾಣವಾಕ್ಯವು ಕೃತಕೃತ್ಯನೆಂದು ಹೇಳುವದರಿಂದ ಅನುಸಂಧೇಯವು. ಹಿಂದಿನ ಪ್ರಮಾಣವು ಭಕ್ತಿಯೋಗ ನಿಷ್ಠನು ಕೃತಕೃತ್ಯನೆಂಬುದಕ್ಕೂ ಈ ಶ್ಲೋಕವು ಪ್ರಪತ್ತಿನಿಷ್ಠನು ಕೃತಕೃತ್ಯನೆಂಬುದಕ್ಕೂ ನಿದರ್ಶನಂಗಳಾಗಿ ಇಟ್ಟುಕೊಳ್ಳಬಹುದು. ಹೀಗೆ ಅನೇಕ ಶಾಸ್ತ್ರಪ್ರಮಾಣಗಳು ಉದ್ಘೋಷಿಸುತ್ತವೆ ಎಂಬ ಭಾವವು.

**ಉಪಾಸನಕ್ಕಿಂತಲೂ ನ್ಯಾಸವು ಶ್ರೇಷ್ಠವಾದುದು.**

---

**ಅಗ್ನೈಯಾಲ್** - ಹೀಗೆ ಮಹರ್ಷಿಗಳೂ ಭಗವಚ್ಛಾಸ್ತ್ರಗಳೂ ವೇದಗಳೂ **ಕೂಡ ಪ್ರಪತ್ತಿಯನ್ನನುಷ್ಠಿಸಿದವನು ಕೃತಕೃತ್ಯನೆಂದು ಉದ್ಘೋಷಿಸುವಹಿಂಥ**

## ಉಪಾಸನಾತ್ ನ್ಯಾಸಸ್ಯ ಮಾಹಾತ್ಮ್ಯಮ್.

ಆಗೈಯಾಲ್, (೧)"ತಪಸ್ವಿಭ್ಯೋಽಧಿಕೋಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ । ಕರ್ಮಿಭ್ಯಶ್ಚಾಧಿಕೋಯೋಗೀ ತಸ್ಮಾದ್ಯೋಗೀ ಭವ

---

(೧) "ತಪಸ್ವಿಭ್ಯಃ" ಇತ್ಯಾದಿಗಳಾಲೇ - ಇವೇ ಮೊದಲಾದವುಗಳಿಂದ, ಪ್ರವೃತ್ತಿಧರ್ಮಙ್ಗಳಿಲ್ ಕಾಟ್ಟಿಲ್, ನಿವೃತ್ತಿ ಧರ್ಮಙ್ಗಳ್ ಶ್ರೇಷ್ಠಙ್ಗಳಾ ನಾರ್ರ್ಪೋಲುವುದು - ಪ್ರವೃತ್ತಿ ಧರ್ಮಗಳಿಗಿಂತಲೂ ನಿವೃತ್ತಿ ಧರ್ಮಗಳು ಶ್ರೇಷ್ಠಗಳಾದಹಾಗೆ, ಈ ಶ್ಲೋಕಾರ್ಥವೇನೆಂದರೆ "ತಪಸ್ವಿಭ್ಯಃ"-ಫಲಕಾಮನೆಯಿಂದ ಮಾಡುವ ಕೇವಲ ಕೃಚ್ಛ್ರಚಾಂದ್ರಾಯಣ, ಉಪವಾಸಾದಿಗಳನ್ನನುಷ್ಠಿಸುವವರಿಗಿಂತಲೂ, ಯೋಗೀ - ತನ್ನ ಆತ್ಮೋಪಾಸನೆಯನ್ನು ಮಾಡುವನು, ಅಧಿಕಃ - ಶ್ರೇಷ್ಠನು, ಜ್ಞಾನಿಭ್ಯೋಽಪಿ - ಶಾಸ್ತ್ರಜ್ಞಾನನಿಷ್ಠನಿಗಿಂತಲೂ, ಯೋಗಿಯು ಶ್ರೇಷ್ಠನೆಂಬುದು, ಮತಃ - ನನ್ನ ಅಭಿಪ್ರಾಯವು, ಕರ್ಮಿಭ್ಯಃ - ಫಲಕಾಮನೆಯಿಂದ ಮಾಡುವ ಕರ್ಮನಿಷ್ಠರುಗಳಿಗಿಂತಲೂ ಕೂಡ, ಯೋಗಿಯೇ ಶ್ರೇಷ್ಠನು, ಎಂದರೆ ಈ ತಪಸ್ವೀ ಜ್ಞಾನೀ ಕರ್ಮಿ ಎಲ್ಲರೂ ಫಲಕಾಮನೆಯುಳ್ಳವರಾದುದರಿಂದ ಪ್ರವೃತ್ತಿಧರ್ಮನಿಷ್ಠರು, ಯೋಗಿಯಾದರೋ ನಿವೃತ್ತಿಧರ್ಮನಿಷ್ಠನು, ಆದುದರಿಂದ ಪ್ರವೃತ್ತಿಧರ್ಮವೂ ತನ್ನಿಷ್ಠರೂ ಇವರುಗಳಿಗಿಂತ ನಿವೃತ್ತಿಧರ್ಮವೂ ತನ್ನಿಷ್ಠರೂ ಶ್ರೇಷ್ಠರೆಂಬ ಭಾವವು. ತಸ್ಮಾತ್ - ಆ ಕಾರಣದಿಂದ, ಹೇ ಅರ್ಜುನ - ಓ ಅರ್ಜುನನೇ, ಯೋಗೀಭವ - ಶ್ರುತಿಯಲ್ಲಿ ಪ್ರಜಾಪತಿವಾಕ್ಯದಿಂದ ಹೇಳಲ್ಪಟ್ಟ ಪ್ರತ್ಯಗಾತ್ಮೋಪಾಸಕನಾಗು'' ಎಂಬುದು ಈ ಶ್ಲೋಕಾರ್ಥವು; ಈ ಉಪಾಸನಕ್ಕೆ ಅಙ್ಗವಾದ ಕರ್ಮಯೋಗದ ಪ್ರಭೇದಗಳಲ್ಲೂ

"ದ್ರವ್ಯಯಜ್ಞಾ ಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯ ಜ್ಞಾನಯಜ್ಞಾಶ್ಚ ಯತಯಸ್ಸಂಶಿತವ್ರತಾಃ"॥ (೧೪.೪.೨೮),

ರಲ್ಲಿ ಹೇಳಿರುವಹಾಗೆ ತಪಸ್ವಿಗಳೂ, ಜ್ಞಾನಿಗಳೂ, ಕರ್ಮಿಗಳೂ ಉಂಟು. ಇವರುಗಳು "ತಪಸ್ವಿಭ್ಯೋಽಧಿಕೋಯೋಗೀ" ಎಂಬಲ್ಲಿ ಹೇಳಿರುವ ತಪಸ್ವಿ ಮೊದಲಾದವರುಗಳು ಸೇರಲಿಲ್ಲವು. ಗೀ. ೪. ೨೮. ರಲ್ಲಿ ತಪಸ್ವಿ ಮೊದಲಾದವರು ಫಲಾಪೇಕ್ಷೆಯಿಲ್ಲದೆ, ಭಗವತ್ಪ್ರೀತ್ಯರ್ಥವಾಗಿ ಮಾಡುವದರಿಂದ ನಿವೃತ್ತಿಧರ್ಮಪರರು; ತಪಸ್ವಿಭ್ಯೋಽಧಿಕೋಯೋಗೀ ಎಂಬ ಯೋಗಿಗಿಂತ ನಿಕೃಷ್ಟರಾಗಿ ಭಾವಿಸಲ್ಪಟ್ಟವರು ಪ್ರವೃತ್ತಿಧರ್ಮನಿಷ್ಠರು ಆದುದರಿಂದ ಈ ತಪಸ್ವಿಗಳ

---

(೧) ಗೀ. ೬. ೪೬.

**ರ್ಜುನ ॥ ಇತ್ಯಾದಿಗಳಾಲೇ ಪ್ರವೃತ್ತಿ ಧರ್ಮಙ್ಗಳಿಲ್ಕಾಟ್ಟಿಲ್ ನಿವೃತ್ತಿಧರ್ಮ ಙ್ಗಳ್ ಶ್ರೇಷ್ಠಙ್ಗಳಾನಾರ್ಪ್ಪೋಲುವುಮ್, ಅವೈ ತನ್ನಿಲ್ ಆತ್ಮವಿಷಯ ಮಾನ ಯೋಗಮ್ ಶ್ರೇಷ್ಠಮಾನಾರ್ಪ್ಪೋಲವುಮ್, ಆತ್ಮವಿಷಯ ಯೋಗಙ್ಗಳಿಲ್ಕಾಟ್ಟಿಲ್ (೨) "ಯೋಗಿನಾಮಪಿ ಸರ್ವೇಷಾಂ" ಎಙ್ಗಿ**

ಗಿಂತ, ಕರ್ಮಯೋಗದ ಆ ತಪಸ್ವಿಗಳು ಶ್ರೇಷ್ಠರು ಪ್ರವೃತ್ತಿ ಧರ್ಮಾನು ಷ್ಠಾನದಲ್ಲಿ ಫಲಾಕಾಂಕ್ಷೆಯಿಂದ ಅಧಿಕಾರಿಯು ಕರ್ಮಾನುಷ್ಠಾನಮಾಡುತ್ತಾನೆ. ಫಲಾಕಾಮನೆಯಿಲ್ಲದೆ ಭಗವನ್ಮುಖೋಲ್ಲಾಸಕ್ಕಾಗಿ ಅನುಷ್ಠಿಸುವವನು ನಿವೃತ್ತಿ ಧರ್ಮಪರನು. "**ನಿವೃತ್ತಿ ಲಕ್ಷಣಂ ಧರ್ಮ ಮೃಷಿರ್ನಾರಾಯಣೋಬ್ರ ವೀತ್ । ಪ್ರವೃತ್ತಿ ಲಕ್ಷಣಂ ಧರ್ಮಂ ಪ್ರಜಾಪತಿ ರಥಾಬ್ರವೀತ । ಪ್ರವೃತ್ತಿಃ ಪುನರಾವೃತ್ತಿ ರ್ನಿವೃತ್ತಿಃ ಪರಮಾಗತಿಃ**" ಎಂದು ಮೋಕ್ಷಧರ್ಮದಲ್ಲಿ ಹೇಳಿ ರುವಹಾಗೆ (೨೧. ೩ ೪) ಪ್ರವೃತ್ತಿಧರ್ಮಗಳು ಸಂಸಾರಕ್ಕೆ ಹೇತುವು, ನಿವೃತ್ತಿಧರ್ಮಗಳು ಮೋಕ್ಷಕ್ಕೆ ಹೇತುವು. ಆದುದರಿಂದಲೇ ಪ್ರವೃತ್ತಿ ಧರ್ಮಗ ಳಿಗಿಂತಲೂ ನಿವೃತ್ತಿ ಧರ್ಮಗಳುಶ್ರೇಷ್ಠವೆಂದು ಹೇಳಲ್ಪಟ್ಟಿತು, ಇದು ಹೇಗೋ ಹಾಗೆಯೇ ಪ್ರಪತ್ತಿಯು ಉಪಾಸನಕ್ಕಿಂತ ಶ್ರೇಷ್ಠವೆಂದು ಮುಂದೆ ಹೇಳುತ್ತಾರೆ. **ಅವೈತನ್ನಿಲ್**-ಆ ನಿವೃತ್ತಿ ಧರ್ಮಗಳಿಗಿಂತಲೂ, **ಆತ್ಮವಿಷಯಮಾನ ಯೋಗ ಮ್ ಶ್ರೇಷ್ಠಮಾನಾರ್ಪ್ಪೋಲವುಮ್** - ತನ್ನ ಜೀವಾತ್ಮವಿಷಯವಾದ ಉಪಾಸ ನೆಯು ಹೇಗೆ ಶ್ರೇಷ್ಠವೋ ಹಾಗೆ, ಈ ಶ್ರೇಷ್ಠತೆಯೇ, "**ತಪಸ್ವಿಭ್ಯೋಧಿಕೋ ಯೋಗೀ**" ಎಂಬ ಗೀತಾ ಶ್ಲೋಕದಲ್ಲಿ ಉಪಪಾದಿತವು, ನಿವೃತ್ತಿ ಧರ್ಮರೂಪ ದಲ್ಲಿ ಕೇವಲ ತಪಸ್ಸು ಮೊದಲಾದವುಗಳನ್ನು ಮಾತ್ರ ಅನುಷ್ಠಿಸಿಕೊಂಡಿರುವವನಿ ಗಿಂತಲೂ ಪ್ರತ್ಯಗಾತ್ಮವಿಷಯವಾದ ಉಪಾಸನಾ ನಿರತನು ಹೇಗೆ ಶ್ರೇಷ್ಠನೋ **ಹಾಗೆ ಎಂಬ ಭಾವವು;** ಈ ಅಙ್ಗವಾದ ಜೀವಾತ್ಮವಿಷಯವಾದ ಉಪಾಸನೆಗಿಂ ತಲೂ, ಅಙ್ಗಿಯಾದ ಮತ್ತು ಭಕ್ತಿಯೋಗದಲ್ಲಿ ವಿಧಿಸಲ್ಪಟ್ಟ ಪರಮಾತ್ಮವಿಷ ಯವಾದ ಉಪಾಸನೆಯು ಹೇಗೆ ಶ್ರೇಷ್ಠವೋ ಹಾಗೆ ಎಂದು ಮುಂದಿನ ವಾಕ್ಯಖಂಡ ದಿಂದ ಉಪದೇಶಿಸುತ್ತಾರೆ:—**ಆತ್ಮವಿಷಯ ಯೋಗಙ್ಗಳಿಲ್ಕಾಟಿಲ್** - ಈ ಜೀವಾತ್ಮ ವಿಷಯವಾದ ಯೋಗಾಭ್ಯಾಸಗಳಿಗಿಂತಲೂ, ಇಲ್ಲಿ ಬಹುವಚನವೇ ಕೆಂದರೆ, ಜ್ಞಾನಪರಿಪಕ್ವಕ್ಕೆ ಅನುಗುಣವಾಗಿ ಈ ಯೋಗಿಗಳು ಉತ್ತರೋತ್ತ ರಾಧಿಕ್ಯದಿಂದ ನಾಲ್ಕುವಿಧವೆಂದು ಹೇಳಿರುತ್ತದೆ. (ಗೀ. ೬. ೨೯ರಿಂದ ನಾಲ್ಕು ಶ್ಲೋಕಗಳನ್ನು ಪರಾಂಬರಿಸಿ) "**ಯೋಗಿನಾಮಪಿ ಸರ್ವೇಷಾಂ**"(ಗೀ. ೬. ೪೭)

**ಪಡಿಯೇ ವಸುದೇವನಂದನ ವಿಷಯಮಾನ ಯೋಗಮ್ ಶ್ರೇಷ್ಠಮಾನಾ ರ್ಪ್ಪೋಲುಮ್ ಪರಮಾತ್ಮವಿದ್ಯಾ ವಿಶೇಷಙ್ಗಳಿಲ್ಲಾತ್ತಿಲುಮ್, ನ್ಯಾಸ ನಿಕ್ಷೇಪಾದಿ ಶಬ್ದಙ್ಗಳಾಲೇ ಶೊಲ್ಲಪ್ಪಟ್ಟ ವಿದ್ಯಾವಿಶೇಷಮೇ ಸುಕರತ್ವ, ಸಕೃತ್ಕರ್ತವ್ಯತ್ವ, ಶೀಘ್ರಫಲ ಪ್ರದತ್ವಾದಿಗಳಾಲೇ ಶ್ರೇಷ್ಠತಮಮ್.**

---

ಎಙ್ಗರ ಶ್ಲೋಕತ್ತಿಲ್ **ಪಡಿಯೇ** - ಎಂದು ಹೇಳಿರುವ ಶ್ಲೋಕದಲ್ಲಿನ ಹಾಗೆ, **ವಸುದೇವನಂದನ ವಿಷಯಮಾನ ಯೋಗಮ್** - ಪರಮಾತ್ಮನಾದ ಶ್ರೀ ಕೃಷ್ಣ ಭಗವಾನ್ ಆಗಿ ವಸುದೇವನ ಕುಮಾರನಾಗಿ ಅವತರಿಸಿದವನನ್ನು ಕುರಿತ ಯೋಗಾ ಭ್ಯಾಸವು ಶ್ರೇಷ್ಠವಾದುದು ಹೇಗೋ ಹಾಗೆಯೇ; ಇದಕ್ಕಿಂತಲೂ ಸರ್ವೋತ್ಕೃಷ್ಟ ವಾಗಿ ಶ್ರೇಷ್ಠತಮವಾದುದುಂಟೆಂದು ಮುಂದೆ ಹೇಳುತ್ತಾರೆ. **ಪರಮಾತ್ಮ ವಿದ್ಯಾ ವಿಶೇಷಙ್ಗಳಿಲ್ಲಾತ್ತಿಲುಮ್** - ಪರಮಾತ್ಮನನ್ನು ಹೊಂದುವ ಮಾರ್ಗವನ್ನುಪ ದೇಶಿಸುವ ಎಲ್ಲಾ ಬ್ರಹ್ಮವಿದ್ಯೆಗಳಿಗಿಂತಲೂ, **ನ್ಯಾಸ** ಮತ್ತು **ನಿಕ್ಷೇಪವೇ** ಮೊದ ಲಾದ ಶಬ್ದಗಳಿಂದ **ಶೊಲ್ಲಪ್ಪಟ್ಟ** - ಹೇಳಲ್ಪಟ್ಟ, ಇಲ್ಲಿನ ಆದಿಪದದಿಂದ, ಭರ ನ್ಯಾಸ, ಪ್ರಪದನ, ಶರಣಾಗತಿ ಮೊದಲಾದ ಶಬ್ದಗಳು ಸೂಚಿಸಲ್ಪಟ್ಟವು. **ವಿದ್ಯಾ ವಿಶೇಷಮೇ** - ನ್ಯಾಸ ವಿದ್ಯೆಯೇ **ಶ್ರೇಷ್ಠತಮ್** - ಉಪಾಸನರೂಪ ಬ್ರಹ್ಮ ವಿದ್ಯೆಗಳಿಗಿಂತಲೂ ಶ್ರೇಷ್ಠವಾದುದೂ, ಅಲ್ಲದೆ ಎಲ್ಲಾ ಉಪಾಯಗಳಿಗಿಂತಲೂ **ಶ್ರೇಷ್ಠತಮ** ವಾದುದು ತೈತ್ತಿರೀಯದಲ್ಲಿ "**ವಸುರಣ್ಯೋ**" ಮತ್ತು "**ತಸ್ಯೈವಂ ವಿದುಷೋ**" ಎಂಬ ಮಂತ್ರಗಳಲ್ಲಿ ಉಪಪಾದಿಸಲ್ಪಟ್ಟ ನ್ಯಾಸವಿದ್ಯೆಯೇ ಪರ ಬ್ರಹ್ಮಪ್ರಾಪ್ತಿಗೆ ಸಾಧನವಾದ ಬ್ರಹ್ಮ ವಿದ್ಯೆಗಳಲ್ಲೆಲ್ಲಾ ಶ್ರೇಷ್ಠತಮವಾದುದು. ಎಲ್ಲಾ ಬ್ರಹ್ಮವಿದ್ಯೆಗಳೂ "**ವಿಕಲ್ಪೋಽವಿಶಿಷ್ಟಫಲತ್ವಾತ್**" ಎಂಬ ಬ್ರಹ್ಮ ಸೂತ್ರದಲ್ಲಿ ಉಪಪಾದಿಸಿರುವಹಾಗೆ ಒಂದೇ ಫಲವಾದ ಮೋಕ್ಷವನ್ನು ಕೊಡುವಾಗ ತರತಮ ಭೇದಗಳು ಹೇಗೆ ಎಂದರೆ ಅದಕ್ಕೆ ಮೂರು ಕಾರಣಗಳನ್ನು ಹೇಳಿರು ತ್ತಾರೆ :—**ಸುಕರತ್ವ, ಸಕೃತ್ಕರ್ತವ್ಯತ್ವ, ಶೀಘ್ರಫಲತ್ವಾದಿಗಳಾಲೇ ಶ್ರೇಷ್ಠ ತಮಮ್, ಸುಕರತ್ವ**- ಪ್ರಪತ್ತಿಯು ತುಂಬಾ ಸುಲಭೋಪಾಯವು, ಇದಕ್ಕೆ ಅಙ್ಗ ಗಳೂ ಸುಲಭವಾದುವು ; ಪರಮಾತ್ಮೋಪಾಸನೆಯಾದರೋ ದುಷ್ಕರವು, ಅಙ್ಗಗ ಳನ್ನು ಸಾಧಿಸುವದೇ ಕಷ್ಟತರವಾದುದು ; **ಸಕೃತ್ಕರ್ತವ್ಯತ್ವ** - ಪ್ರಪತ್ತಿಯು ಒಂದೇಸಲ ಅನುಷ್ಠಿಸತಕ್ಕದ್ದು, ಉಪಾಸನವಾದರೋ ಯಾವಜ್ಜೀವವೂ ಆವೃತ್ತಿ ಯಿಂದ ನಡೆಸತಕ್ಕದ್ದಾಗಿರುತ್ತದೆ, **ಶೀಘ್ರಫಲಪ್ರದತ್ವ** - ದೇಹಾವಸಾನದಲ್ಲಿ ಮೋಕ್ಷವನ್ನು ಕೊಡುವಂಥಾದ್ದು. ಆರ್ತನಿಗೆ ತಕ್ಷಣದಲ್ಲೇ ಫಲಪ್ರದವು; ಉಪಾ

**ನ್ಯಾಸವಿದ್ಯೆಯಿಲೇ ಕಂಠೋಕ್ತ್ಯನೂನ ಇವ್ವರ್ಥಶ್ರ್ಯೈ** (೧) "**ತೇಷಾಂತು**

**ಸನೆಯಾದರೋ** ಉತ್ತರಜನ್ಮಉಂಟಾದರೂ ಉಂಟಾಗಬಹುದು, ಜಡಭರತಾದಿಗಳಿಗೆ ಪ್ರಾಪ್ತವಾದಹಾಗೆ ಶೀಘ್ರ ಫಲತ್ವಾದಿ ಎಂಬಲ್ಲಿರುವ ಆದಿ ಪದದಿಂದ ಅಧಿಕಾರಿ ವಿಭಾಗಾಧಿಕಾರದಲ್ಲಿ ಹೇಳಲ್ಪಟ್ಟ ಇತರ ಕಾರಣಗಳು (೮೩೪ ನೆಯ ಪುಟವನ್ನು ನೋಡಿ) ಅನಭ್ಯುಗತ ಪ್ರಾರಬ್ಧವನ್ನು ಹೋಗಲಾಡಿಸುವ ಶಕ್ತಿಯೂ, ಆರ್ತನಾದರೆ ಅಭ್ಯುಪಗತ ಪ್ರಾರಬ್ಧ ಶೇಷವನ್ನು ಹೋಗಲಾಡಿಸುವಶಕ್ತಿಯೂ, ಸರ್ವಾಧಿಕಾರತ್ವವೂ, ಅನುಷ್ಠಾನಾನಂತರ ಪ್ರತಿಬಂಧಕಗಳಿಲ್ಲದಿರುವಿಕೆಯೂ ಹೇಳಲ್ಪಟ್ಟವು; ಇವು ಉಪಾಸನಕ್ಕೆ ಇಲ್ಲವು. ೧. ಪ್ರವೃತ್ತಿ ರೂಪ ಧರ್ಮಗಳಾದ ತಪೋನಿಷ್ಠೆ ಜ್ಞಾನನಿಷ್ಠೆ ಕರ್ಮನಿಷ್ಠೆಗಳಿಗಿಂತ ನಿವೃತ್ತಿರೂಪಧರ್ಮಗಳಾದ ತಪೋಜ್ಞಾನ ಕರ್ಮನಿಷ್ಠೆಗಳು ಶ್ರೇಷ್ಠಗಳು ೨. ಈ ನಿವೃತ್ತಿರೂಪ ಧರ್ಮಗಳಾದ ಇವುಗಳಿಗಿಂತ ಆತ್ಮೋಪಾಸನವು ಶ್ರೇಷ್ಠವು ೩. ಆತ್ಮೋಪಾಸನೆಗಳಿಗಿಂತ ಪರಮಾತ್ಮೋಪಾಸನವು ಶ್ರೇಷ್ಠವು. ೪. ಪರಮಾತ್ಮೋಪಾಸನೆಗಳಿಗಿಂತ ಭರನ್ಯಾಸವು ಶ್ರೇಷ್ಠವು ಆದುದರಿಂದ ಇದು ಶ್ರೇಷ್ಠತಮವೆಂಬ ಭಾವವು. "ಚತುರ್ವಿಧಾ ಭಜಂತೇಮಾಂ ಜನಾಸ್ಸುಕೃತಿ ನೋಽರ್ಜುನ । ಆರ್ತೋಜಿಜ್ಞಾಸು ರರ್ಥಾರ್ಥೀ ಜ್ಞಾನೀಚ ಭರತರ್ಷಭ" ಎಂಬ ಶ್ಲೋಕದಲ್ಲೂ ಪ್ರವೃತ್ತಿ ಧರ್ಮನಿಷ್ಠರಿಗಿಂತ ನಿವೃತ್ತಿಧರ್ಮನಿಷ್ಠರು ಶ್ರೇಷ್ಠರೆಂಬುದು ದ್ಯೋತಿತವು ಆರ್ತನೂ ಅರ್ಥಾರ್ಥಿಯೂ ಇಬ್ಬರೂ ಪ್ರವೃತ್ತಿ ಧರ್ಮನಿಷ್ಠರು, ಇವರಿಗಿಂತ ಜಿಜ್ಞಾಸುಃ, ಪ್ರತ್ಯಗಾತ್ಮೋಪಾಸಕನು ಶ್ರೇಷ್ಠನು, ಇವನಿಗಿಂತ ಜ್ಞಾನಿಯು ಪರಮಾತ್ಮೋಪಾಸಕನು ಶ್ರೇಷ್ಠನು. ಪ್ರಕರಣವು ಪರಮಾತ್ಮೋಪಾಸನೆಯಾದುದರಿಂದ ನ್ಯಾಸವಿದ್ಯಾನಿಷ್ಠನು ಹೇಳಲ್ಪಡಲಿಲ್ಲವು. ನ್ಯಾಸವಿದ್ಯಾನಿಷ್ಠನು ಉಪಾಸಕನಾದ ಬ್ರಹ್ಮವಿದ್ಯಾನಿಷ್ಠನಿಗಿಂತಲೂ ಶ್ರೇಷ್ಠನಾಗಿ ಶ್ರೇಷ್ಠತಮನು.

ಹೀಗೆ ಭರನ್ಯಾಸಕ್ಕೆ ಶ್ರೇಷ್ಠತಮತ್ವವನ್ನು ಹೇಳಲು ಪ್ರಮಾಣಗಳುಂಟೋ ಎಂದರೆ ಪ್ರಮಾಣಗಳನ್ನು ಉದಾಹರಿಸುತ್ತಾರೆ. ಶ್ರುತಿ ಸ್ಮೃತಿ ಭಗವಚ್ಛಾಸ್ತ್ರ ಪ್ರಮಾಣಗಳನ್ನು ಸೂಚಿಸುತ್ತಾರೆ. **ನ್ಯಾಸವಿದ್ಯೆಯಿಲೆ** – ನ್ಯಾಸ ವಿದ್ಯೆಯಲ್ಲಿ, **ಕಂಠೋಕ್ತ್ಯಮಾನ** - ಊಹೆ ಮೊದಲಾದವುಗಳ ಆವಶ್ಯಕತೆ ಯಿಲ್ಲದೆ ಕಂಠೋಕ್ತವಾಗಿ ಹೇಳಿರುವ, **ಇವ್ವರ್ಥಶ್ರ್ಯೈ** - ಭರನ್ಯಾಸವು ಬ್ರಹ್ಮವಿದ್ಯೆಗಳಲ್ಲೆಲ್ಲಾ ಶ್ರೇಷ್ಠತಮವೆಂಬ ಈ ಅಭಿಪ್ರಾಯವನ್ನು, "**ತೇಷಾಂತು ತಪಸಾಂ**" ಎಂದು

(೧) ಅಹಿ. ೩೭. ೩೭.

**ತಪಸಾಂ ನ್ಯಾಸಮತಿರಿಕ್ತಂ ತಪಶ್ಶ್ರುತಮ್," (೨)"ಸತ್ಕರ್ಮನಿರತಾಶ್ಶುದ್ಧಾ ಸ್ಸಾಂಖ್ಯಯೋಗವಿದಸ್ತಥಾ । ನಾರ್ಹಂತಿ ಶರಣಸ್ಥಸ್ಯ ಕಲಾಮ್ ಕೋಟಿತಮೀಮಪಿ" ಎನ್ರು ಭಗವಚ್ಛಾಸ್ತ್ರಮ್ ಉಪಬೃಂಹಿತ್ತದು.**

---

ಅಹಿರ್ಬುಧ್ನ್ಯಸಂಹಿತೆಯೂ, "**ಸತ್ಕರ್ಮನಿರತಾಶ್ಶುದ್ಧಾಃ**" ಎಂದು ಭಗವಚ್ಛಾಸ್ತ್ರವೂ, **ಉಪಬೃಂಹಿತ್ತದು** - ಉಪಬೃಂಹಣಮಾಡಿ ಹೇಳಿತು ಶ್ರುತಿಯಲ್ಲಿ ಎಲ್ಲಿ ಕಂಠೋಕ್ತವಾಗಿ ಹೇಳಿದೆ ಎಂದರೆ "**ತಸ್ಮಾನ್ನ್ಯಾಸ ಮೇಷಾಂ ತಪಸಾಮತಿರಿಕ್ತ ಮಾಹುಃ**" ಎಂದೂ "**ಏತದ್ವೈ ಮಹೋಪನಿಷದಂ**" ಎಂದೂ ತೈತ್ತಿರೀಯ ನಾರಾಯಣೀಯದಲ್ಲಿ ಹೇಳಿರುವದರಿಂದ ಕಂಠೋಕ್ತವು ಇದರ ರ್ಥವು, ತಸ್ಮಾತ್ - "**ಜ್ಞಾತ್ವಾ ತಮೇವಂ ಮನಸಾ ಹೃದಾ ಚ ಭೂಯೋನಮೃತ್ಯು ಮುಪಯಾಹಿ ವಿದ್ವಾನ್**" ಎಂದು ಹಿಂದಿನ ವಾಕ್ಯದಲ್ಲಿ ಹೇಳಿರುವಮೇರೆಗೆ, ಈ ನ್ಯಾಸ ವಿದ್ಯೆಯ ಮೂಲಕ ಪಂಡಿತನಾದವನು ಪುನಸ್ಸಂಸಾರವನ್ನು ಹೊಂದುವದಿಲ್ಲವಾದುದರಿಂದ, **ಏಷಾಂತಪಸಾಂ** - ಈ ಮೇಲೆ ಹೇಳಿದ ಸತ್ಯ, ತಪಸ್ಸು, ದಮ, ಶಮ, ದಾನ, ಧರ್ಮ, ಪ್ರಜನನ, ಅಗ್ನಿಹೋತ್ರ, ಮಾನಸ, ಇವೆಲ್ಲಾ ತಪಸ್ಸುಗಳಿಗಿಂತಲೂ **ನ್ಯಾಸಂ**-ಭರನ್ಯಾಸವನ್ನು, **ಅತಿರಿಕ್ತಂ**-ಶ್ರೇಷ್ಠವಾದ ವಿದ್ಯೆ ಎಂಬುದನ್ನು, **ಆಹುಃ** - ಹೇಳುತ್ತಾನೆ, ಇದು ಪರಮ ರಹಸ್ಯವಾದ ಮಂತ್ರವು. ಈ ಶ್ರುತ್ಯರ್ಥವನ್ನೇ ಅಹಿರ್ಬುಧ್ನ್ಯ ಸಂಹಿತೆಯು ಉಪಬೃಂಹಣ ಮಾಡಿ ಹೇಳುತ್ತದೆ ಏನೆಂದರೆ, (೧) **ತೇಷಾಂ ತಪಸಾಂ** - ಪೂರ್ವಾನುವಾಕಗಳಲ್ಲಿ ಹೇಳಲ್ಪಟ್ಟ, **ಸತ್ಯಂ** - ತಪಸ್ಸು ದಮ ಮೊದಲಾದ ತಪಸ್ಸುಗಳಿಗಿಂತಲೂ, **ನ್ಯಾಸಂ** - ದ್ವಿತೀಯೆಯಾದರೂ ಪ್ರಥಮಾರ್ಥವನ್ನು ಹೇಳತಕ್ಕದ್ದು ನ್ಯಾಸವಿದ್ಯೆಯು, ಅಥವಾ ನ್ಯಾಸ ಶಬ್ದವು ಪುಲ್ಲಿಂಗವು ಅದಕ್ಕೆ ಬದಲಾಗಿ ನಪುಂಸಕಲಿಂಗವು ಆರ್ಷಪ್ರಯೋಗವೆಂದೂ ಭಾವಿಸಬಹುದು, ನಪುಂಸಕವಾದರೆ ಪ್ರಥಮಾಂತವಾಗಬಹುದು, **ಅತಿರಿಕ್ತಂ ತಪಃ** - ಸರ್ವೋತ್ಕೃಷ್ಟವಾದ ತಪಸ್ಸೆಂದು, **ಶ್ರುತಂ** - ತೈತ್ತಿರೀಯ ನಾರಾಯಣೀಯ ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. (೨) **ಸತ್ಕರ್ಮನಿರತಾಃ** - ತಮ್ಮ ಆಶ್ರಮಕ್ಕೆ ಉಚಿತವಾದ ಕರ್ಮವಿದಃ ಎಂದು ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಲ್ಲಿ ನಿರತರಾದ, **ಶುದ್ಧಾಃ** - ಎಂದರೆ ನಿವೃತ್ತಿರೂಪ ಧರ್ಮಾಚರಣೆಯನ್ನು ಮಾಡಿ, **ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ** ಎಂದೂ, **ಅವಿದ್ಯಯಾ ಮೃತ್ಯುಂ ತೀರ್ತ್ವಾ** ಎಂದೂ, ಹೇಳಿರುವ

---

(೨) ಲಕ್ಷ್ಮೀತಂತ್ರ ೧೭, ೬೨

**ಭರನ್ಯಾಸಸ್ಯ ಅಧಿಕ ಪ್ರಭಾವಂ ದೃಷ್ಟಾಂತೇನದೃಢ ಯತಿ.**

**ಅವಗಾಹನಾದಿಗಳಿಲ್ ಸಮರ್ಥನಲ್ಲಾದವನುಕ್ಕು (೧) "ಮಾನಸಂ**

ಹಾಗೂ ಪರಿಶುದ್ಧರಾದ, **ಸಾಂಖ್ಯಯೋಗವಿದಃ** - ಹಾಗೆಯೇ, **ಸಂಖ್ಯಾ** ಎಂದರೆ ಬುದ್ಧಿಯು, **ಸಾಂಖ್ಯವಿದಃ**-ಎಂದರೆ ಜ್ಞಾನಯೋಗ ನಿಷ್ಠರೂ, **ಯೋಗ** ವೆಂದರೆ ಕರ್ಮಯೋಗವು, **ಯೋಗವಿದಃ**-ಕರ್ಮಯೋಗ ನಿಷ್ಠರೂ **ತಥಾ** ಎಂಬುದರಿಂದ ಭಕ್ತಿಯೋಗ ನಿಷ್ಠರೂ ಅಥವಾ **ಸತ್ಕರ್ಮನಿರತಾಃ** ಎಂಬುದರಿಂದ ಕರ್ಮಯೋಗ ನಿಷ್ಠರೂ, **ಸಾಂಖ್ಯವಿದಃ** ಎಂಬುದರಿಂದ ಜ್ಞಾನಯೋಗ ನಿಷ್ಠರೂ, **ಯೋಗ ವಿದಸ್ತಥಾ** - ಎಂಬುದರಿಂದ ಭಕ್ತಿಯೋಗ ನಿಷ್ಠರೂ ಹೇಳಲ್ಪಟ್ಟರೆಂದು ಭಾವಿಸ ಬಹುದು, ಅಥವಾ **ಯೋಗವಿದಃ** ಎಂಬುದರಿಂದ ಕರ್ಮಯೋಗ ಭಕ್ತಿಯೋಗ ಗಳೆರಡೂ ಹೇಳಲ್ಪಟ್ಟವೆಂದು ಭಾವಿಸಬಹುದೆಂಬ ಸಾರಸಂಗ್ರಹ ವ್ಯಾಖ್ಯಾತೃವಿನ ಅಭಿಪ್ರಾಯವು; ಈ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ನಿಷ್ಠರಾದ ಉಪಾಸಕರು, **ಶರಣಸ್ಥಸ್ಯ** - ನ್ಯಾಸವಿದ್ಯೆಯಲ್ಲಿರುವ ಎಂದರೆ ಭರನ್ಯಾಸವನ್ನನು ಷ್ಠಿಸಿದವನಿಗೆ, **ಕಲಾಂಕೋಟಿತಮಾಮಪಿ** – ಕೋಟಿ ಅಂಶದಲ್ಲಿ ಒಂದಂಶ ವನ್ನೂ ಕೂಡ, **ನಾರ್ಹಂತಿ** - ಹೋಲಲಾರರು," **ಎನ್ರು** - ಎಂದು ಭಗವಚ್ಛಾ ಸ್ತ್ರವು, **ಉಪಬೃಹ್ಮಿತ್ತದು** - ಉಪ ಬೃಹ್ಮಣವಾಡಿ ಹೇಳಿತು, ಹೀಗೆ ಉಪಾ ಸನಕ್ಕಿಂತ ಭರನ್ಯಾಸವೇ ಉತ್ಕೃಷ್ಟವಿದ್ಯೆ ಎಂಬುದಕ್ಕೆ ಪ್ರಮಾಣಗಳನ್ನು ಉದಾಹರಿಸಿದರು.

ಆದರೆ ಇಲ್ಲಿ ಪ್ರಧಾನವಾದ ಉಪಾಯವು ಭಕ್ತಿಮಾರ್ಗವು, ಉಪಾಸನೆಯು ; ಭರನ್ಯಾಸದಲ್ಲಿ ಉಪಾಸನೆಗೆ ತಾನು ಅನರ್ಹನಾದ ಪ್ರಯುಕ್ತ ಉಪಾಸನೆಯ ಸ್ಥಾನ ದಲ್ಲಿ ಸರ್ವೇಶ್ವರನನ್ನು ಇಟ್ಟು ಪ್ರಾರ್ಥಿಸುವ ವಿಷಯವು, ಆದುದರಿಂದ ಅದಕ್ಕೆ ಪ್ರತ್ಯಾಮ್ನಾಯವಾಗಿ ಅಪ್ರಧಾನವಿಷಯವು ಹೀಗಿರುವಾಗ ಅಪ್ರಧಾನಕ್ಕೆ ಹೀಗೆ ಪ್ರಾಶಸ್ತ್ಯವನ್ನು ಹೇಳಬಹುದೋ ? ಇದಕ್ಕೆ ಅಧಿಕ ಪ್ರಭಾವ ಹೇಗೆ ? ಎಂಬ ಶಙ್ಕಾ ನಿವಾರಣಾರ್ಥವಾಗಿ ಸದೃಷ್ಟಾಂತವಾಗಿ ಸಮಾಧಾನವನ್ನು ದಯ ಪಾಲಿಸುತ್ತಾರೆ.

**ಭರನ್ಯಾಸದ ಅಧಿಕ ಪ್ರಭಾವವನ್ನು ದೃಷ್ಟಾಂತಮೂಲಕ ದೃಢಪಡಿಸುತ್ತಾರೆ.**

**ಅವಗಾಹನಾದಿಗಳಿಲ್ ಸಮರ್ಥನಲ್ಲಾದವನುಕ್ಕು** - ಜಲಾಶಯಗಳಲ್ಲಿ

(೧) ಗಾರ್ಗ್ಯ ಸ್ಮೃತಿ.

ವಿಷ್ಣುಚಿಂತನಂ” ಎನ್ರು ಭಗವಚ್ಚಿನ್ತನತ್ತೈ ಸ್ನಾನಮಾಗ ವಿಧಿತ್ತಾಲದು ಸ್ನಾನಾಂತರಙ್ಗಳ್ ಪಣ್ಣುಗಿರ ಶುದ್ಧಿಯೈಯುಮ್ ಪಣ್ಣಿ, ಪಾಪಾಂತರಂಗಳೈಯುಮ್ ಶಮಿಪ್ಪಿತ್ತು, ಅಪ್ಪೋದೇ ಭಗವದನುಭವ ರಸತ್ತೈಯುಮುಣ್ಡಾಕ್ಕುಮಾಪೋಲೆ, ಉಪಾಸನಾದಿಗಳಿಲ್ ಸಮರ್ಥನಲ್ಲಾದವನುಕ್ಕು ಪ್ರಪತ್ತಿಯೈ ವಿಧಿತ್ತಾಲುಮ್, ಇಪ್ಪ್ರಪತ್ತಿತಾನೇ ಅವೈ ಕೊಡುಕ್ಕುಮ್ ಫಲತ್ತೈಯುಮ್, ಅವೈ ತನ್ನೈಯುಮ್ ಕೊಡಕ್ಕುವತ್ತಾಯ್

---

ಮುಳುಗಿ, ರೋಗ ವಾರ್ಧಕ ಮೊದಲಾದವುಗಳಿಂದ ಸಮರ್ಥನಲ್ಲದಿರುವವನಿಗೆ “ಮಾನಸಂ ವಿಷ್ಣುಚಿಂತನಂ” “ವಿಷ್ಣುವಿನ ಧ್ಯಾನರೂಪವಾದ ಏಳುವಿಧ ಸ್ನಾನಗಳಲ್ಲೊಂದಾದ ಮಾನಸ ಸ್ನಾನವು” ಎಂದು ಹೇಳಿರುವಹಾಗೆ, ಭಗವಚ್ಚಿಂತನತ್ತೈ - ಭಗವದ್ಧ್ಯಾನವನ್ನು ಸ್ನಾನಮಾಗ ವಿಧಿತ್ತಾಲ್-ಅವಗಾಹನಸ್ನಾನಕ್ಕೆ ಸಮಾನವೆಂದು ವಿಧಿಸಿದರೆ, ಅದು ಸ್ನಾನಾಂತರಙ್ಗಳ್ - ಅವಗಾಹನವೇ ಮೊದಲಾದ ಇತರ ಸ್ನಾನಗಳು, ಪಣ್ಣುಗಿರ ಶುದ್ಧಿಯೈಯುಮ್ ಪಣ್ಣಿ - ಮಾಡುವ ದೇಹಶುದ್ಧಿಯನ್ನೂ ಉಂಟುಮಾಡಿ, ಪಾಪಾಂತರಙ್ಗಳೈಯುಮ್, ಶಮಿಪ್ಪಿತ್ತು - ವಿರೋಧಿ ಪಾಪಗಳನ್ನೂ ನಾಶಮಾಡಿ, ಅಪ್ಪೋದೇ - ಕೂಡಲೇ, ಭಗವದನುಭವ ರಸತ್ತೈಯುಮ್ - ಭಗವದ್ಧ್ಯಾನಮಾಡಿದುದರಿಂದ ಭಗವದನುಭವರೂಪ ಆನಂದವನ್ನೂ, ಉಣ್ಡಾಕ್ಕುಮಾಪೋಲೇ - ಹೇಗೆ ಉಂಟುಮಾಡುತ್ತದೋ ಹಾಗೆಯೇ, ಉಪಾಸನಾದಿಗಳಿಲ್ ಸಮರ್ಥನಲ್ಲಾದವನುಕ್ಕು - ಉಪಾಸನೆ ಮೊದಲಾದವುಗಳಲ್ಲಿ ಸಮರ್ಥನಲ್ಲದೇ ಇರುವವನಿಗೆ, ಇಲ್ಲಿ ಆದಿ ಪದದಿಂದ ಉಪಾಯ ವಿರೋಧಿಪಾಪನಿವರ್ತನವು ಹೇಳಲ್ಪಟ್ಟಿತು ಪ್ರಪತ್ತಿಯೈ ವಿಧಿತ್ತಾಲುಮ್ - ಭರನ್ಯಾಸವನ್ನು ವಿಧಿಸಿದರೂ, ಇಪ್ರಪತ್ತಿತಾನೇ- ಈ ಭರನ್ಯಾಸವೇ, ಅವೈಕೊಡುಕ್ಕುಮ್ ಫಲೈತ್ತೈಯುಮ್-ಆ ಉಪಾಸನಾದಿಗಳು ಕೊಡುವ ಫಲವನ್ನು, ಅವೈತನ್ನೈಯುಮ್ ಕೊಡುಕ್ಕವತ್ತಾಯ್-ಅವೆಲ್ಲವನ್ನೂ ಕೊಡುವಂತಹದ್ದಾಗಿ, ಮುಂದಕ್ಕೆ ಈ ಭರನ್ಯಾಸದಲ್ಲಿರುವ ವೈಲಕ್ಷಣ್ಯವನ್ನು ತೋರಿಸುತ್ತಾರೆ, ಅದು ಕೊಡುವವನ್ನೂ ಕೊಟ್ಟು ಇನ್ನೂ ಹೆಚ್ಚುಪ್ರಭಾವವುಳ್ಳದ್ದೆಂದು ಪ್ರದರ್ಶಿಸುತ್ತಾರೆ; ಅಕಿಂಚನನುಕ್ಕುತ್ತಾರಕಮಾಯ್-ಇದು ಭಕ್ತಿಮಾರ್ಗದಹಾಗೆ ತ್ರೈವರ್ಣಿಕರಾದ ಸಕಿಂಚನರಿಗೆ ಮಾತ್ರವೇ ಅಲ್ಲದೆ ಅಕಿಂಚನರಾದ ಎಲ್ಲರಿಗೂ ರಕ್ಷಕವಾಗಿ, ಅರ್ವ ಅಪೇಕ್ಷಿತ್ತಕಾಲತ್ತಿಲೇ ಫಲಾವಿನಾಭಾವತ್ತೈ ಯುಡೈತ್ತಾಯ್-ಭಕ್ತಿಮಾರ್ಗದಲ್ಲಿ ಉಪಾಸನೆಯ ವಿಪಾಕವೆಂಬುದು ಈ ಜನ್ಮದಲ್ಲುಂಟಾದರೂ ಆಗಬಹುದು ಅಥವಾ ಮುಂದಿನ ಜನ್ಮದಲ್ಲಾದರೂ ಆಗ

**ಅಕಿಂಚನನುಕ್ಕು ಉತ್ತಾರಕಮಾಯ್ ಅರ್ವ ಅಪೇಕ್ಷಿತ್ತ ಕಾಲತ್ತಿಲೆ ಫಲಾ ವಿನಾ ಭಾವತ್ತೈಯುಮ್ ಉಡೈತ್ತಾಯ್, ಇರುಕ್ಕೈಯಾಲೆ ಅಧಿಕ ಪ್ರಭಾವ ಮಾಯಿರುಕ್ಕುಮ್.**

---

ಬಹುದು, ಹಾಗೆ ವಿಳಂಬವಿಲ್ಲದೆ, **ಅರ್ವ** - ಆ ಭರನ್ಯಾಸ ನಿಷ್ಠನು, **ಅಪೇಕ್ಷಿತ್ತ ಕಾಲತ್ತಿಲೇ** - ಆರ್ತನಾಗಿ ಒಡನೆಯೇ ಬೇಕೆಂದಪೇಕ್ಷಿಸಿದರೆ ಹಾಗೂ, ಅಥವಾ ದೃಪ್ತನಾಗಿ ದೇಹಾವಸಾನವಾದ ಒಡನೆಯೇ ಎಂದರೆ ಆವಾಗಲೇ, **ಫಲಾವಿನಾ ಭಾವತ್ತೈಯುಡತ್ತಾಯ್** - ಫಲದೊಂದಿಗೇನೇ ಸೇರಿರುವದಾಗಿ, **ಇರುಕ್ಕೈಯಾಲೇ** - ಇರುವದರಿಂದ, **ಅಧಿಕಪ್ರಭಾವ ಮಾಯ್ ಇರುಕ್ಕುಮ್**-ಉಪಾಸನೆಗಿಂತ ಹೆಚ್ಚು ಪ್ರಭಾವವನ್ನು ಹೊಂದಿರುವದಾಗಿರುತ್ತದೆ. ಭಕ್ತ್ಯುಪಾಯವೂ ಒಂದು ಸಾಧನವೇ ಎಂದು ಹಿಂದೆ ಸ್ಥಾಪಿಸಿದರು ಈಗ ಅದಕ್ಕಿಂತ ಭರನ್ಯಾಸಕ್ಕೆ ಶ್ರೈಷ್ಠ್ಯವು ಉಪಪನ್ನವು ಯದ್ಯಪಿ ಭಕ್ತ್ಯುಪಾಯವೇ ಪ್ರಧಾನವಾಗಿದ್ದರೂ, ಅಸಮರ್ಥನಿಗೆ ಇದು ವಿಧಿಸಲ್ಪಟ್ಟು ಅಪ್ರಧಾನವಾದರೂ ಇದಕ್ಕೆ ಹೆಚ್ಚು ಮಹಿಮೆಯುಂಟು ಸ್ನಾನವು ಪ್ರಧಾನವಾಗಿ ಅವಗಾಹನರೂಪವಾಗಿಯೇ ಇರತಕ್ಕದ್ದು ; ಇದಕ್ಕೆ ವ್ಯಾಧಿ ನೊದಲಾದವುಗಳಿಂದ ಅಸಮರ್ಥನಾದರೆ ಆಗ ಗೌಣವಾಗಿ ವಿಷ್ಣು ಚಿಂತನವನ್ನು ಅವಗಾಹನ ಸ್ನಾನಕ್ಕೆ ಬದಲಾಗಿ ಸ್ಮೃತಿಯು ವಿಧಿಸಿರುತ್ತದೆ. ಹಾಗೆಯೇ **ಅಪವಿತ್ರಃ ಪವಿತ್ರೋವಾ** ಎಂಬ ಶ್ಲೋಕದಲ್ಲೂ ಪುಂಡರೀಕಾಕ್ಷನ ಸ್ಮರಣೆಯು ಬಾಹ್ಯಾಂತರ ಪವಿತ್ರತೆಯನ್ನುಂಟುಮಾಡುತ್ತದೆಂದು ಹೇಳಲ್ಪಟ್ಟಿರುತ್ತದೆ. ಮತ್ತು **"ಮಾನಸಂ ಪ್ರವರಂ ಸ್ನಾನಂ ಸರ್ವೇ ಶಂಸಂತಿ ಸೂರಯಃ"** ಎಲ್ಲಾ ಜ್ಞಾನಿಗಳೂ ಮಾನಸವಾದ ಈ ವಿಷ್ಣುಚಿಂತನ ರೂಪಸ್ನಾನವು **ಪ್ರವರಂ** ತುಂಬಾ ಉತ್ಕೃಷ್ಟವಾದುದೆಂದು ಹೇಳುವರು. ಈ ಗೌಣಸ್ನಾನವು ಪ್ರಧಾನ ಸ್ನಾನಕ್ಕಿಂತ ಉತ್ಕೃಷ್ಟವಾದುದು ಹೇಗೆ ಎಂದರೆ, ಇದು ಅವಗಾಹನಸ್ನಾನ ಮಾಡುವಬಾಹ್ಯಪವಿತ್ರತೆಯನ್ನುಂಟುಮಾಡುವದೂ ಅಲ್ಲದೆ, ಈತನು ಮಾಡುವ ಕರ್ಮಾನುಷ್ಠಾನಗಳಿಗೆ ಪ್ರತಿಬಂಧಕಗಳಾದ ಪಾಪಗಳನ್ನೂ ಹೋಗಲಾಡಿಸಿ, ಭಗವದನುಭವ ಜನಿತಾನಂದವನ್ನೂ ಕೂಡ ಉಂಟುಮಾಡುತ್ತದೆ. ಆದುದರಿಂದ ಅವಗಾಹನ ಸ್ನಾನಕ್ಕಿಂತ ವಿಷ್ಣುಚಿಂತನವು ಹೇಗೆ ಹೆಚ್ಚು ಪ್ರಭಾವ ಉಳ್ಳದೋ ಹಾಗೆಯೇ ಈ ಗೌಣವಾದ ಭರನ್ಯಾಸವೂ ಕೂಡ ತ್ರೈವರ್ಣಿಕನಿಗೂ ಸಮರ್ಥನಿಗೂ ಮಾತ್ರ ಯೋಗ್ಯವಾದ ಪ್ರಧಾನವಾದ ಭಕ್ತಿಮಾರ್ಗಕ್ಕಿಂತ ವರ್ಣಾಶ್ರಮ ಆಭಿಜಾತ್ಯಾದಿ ವೈಲಕ್ಷಣ್ಯಗಳೊಂದೂ ಬೇಕಿಲ್ಲದೆ ಸರ್ವಾಧಿಕಾರತ್ವವುಳ್ಳದಾದಾ

**ಇಪ್ಪಡಿ ಇವ್ವುಪಾಯತ್ತಿನ್ ಅಧಿಕಾರತ್ತಿಲುಮ್ ಸ್ವರೂಪತ್ತಿಲು ವರುಮ್ ಕಲಕ್ಕಙ್ಗಳ್ ಶಮಿಪ್ಪಿತ್ತೋಮ್, ಇನಿಮೇಲ್ ಪರಿಕರಙ್ಗಳಿಲ್ ಮ್ ವರುಮ್ ವ್ಯಾಮೋಹಂ ಶಮಿಪ್ಪಿಕ್ಕಿರೋಮ್—**

**ಅಥ ಪರಿಕರ ವಿಷಯ ಶಙ್ಕಾಃ ಪರಿಹರತಿ.**

**(೧) ಪ್ರಪತ್ತೇಃ ಆನುಕೂಲ್ಯಾದಿ ಪರಿಕರಾಣಾ ಮಾವಶ್ಯಕತ್ವಂ ನಾಸ್ತೀತಿ ವಾದ ನಿರಾಸಃ.**

---

**ಇವ್ವುಪಾಯತ್ತುಕ್ಕು ಆನುಕೂಲ್ಯ ಸಙ್ಕಲ್ಪಾದಿಗಳ್ ವೇಣುಮೋ ?**

---

ಗಿಯೂ, ಭಕ್ತಿಮಾರ್ಗದಹಾಗೆ ವಿಳಂಬಕ್ಕೆ ಆಸ್ಪದವಿಲ್ಲದೆ ಅವಿಳಂಬಿತಫಲಪ್ರದ ವಾಗಿರುವದರಿಂದಲೂ ಪ್ರಾರಬ್ಧ ನಾಶಕತ್ವಾದಿಗಳಿರುವದರಿಂದಲೂ, ಅಧಿಕ ಪ್ರಭಾವ ಉಳ್ಳದ್ದೆಂಬ ತಾತ್ಪರ್ಯವು. ಭರನ್ಯಾಸಕ್ಕೆ ಇಂತಹ ಮಹಿಮೆ ಉಂಟೆಂಬುದನ್ನು "**ಸುದುಷ್ಕರೇಣ ಶೋಚೇದ್ಯೋ ಯೇನ ಯೇನೇಷ್ಟಹೇತುನಾ । ಸಸತಸ್ಯಾಹ ಮೇವೇತಿ ಚರಮಶ್ಲೋಕ ಸಙ್ಗ್ರಹಃ॥**" ಭರನ್ಯಾಸವನ್ನು ವಿಧಿಸುವ ಚರಮಶ್ಲೋಕದ ತಾತ್ಪರ್ಯವೇನೆಂದರೆ ಯಾವನು, ಆವನೆಂತವನೇಯಾಗಿರಲಿ, ಹೊಂದಲು ಕಷ್ಟತರವಾದ ಯಾವಯಾವ ಮನೋರಥಗಳನ್ನು ಮನಸ್ಸಿನಲ್ಲಿಟ್ಟು ಶೋಕಿಸಿ ದೈನ್ಯದಿಂದ ನನ್ನನ್ನು ಆಶ್ರಯಿಸುತ್ತಾನೋ ಅವನಿಗೆಲ್ಲಾ ಆಯಾಮನೋರಥ ಪ್ರಾಪ್ತಿಗೆ ನಾನೇ ಸಾಧನವೆಂಬುದು ಚರಮಶ್ಲೋಕಾರ್ಥವೆಂದು ಹೇಳಿರುವದರಿಂದ ಇದಕ್ಕೆ ಪ್ರಾಶಸ್ತ್ಯವು ಅಧಿಕವೆಂಬ ಭಾವವು

ಮುಂದಿನ ವಾಕ್ಯದಿಂದ ಇಷ್ಟುದೂರ ಉಪದೇಶಿಸಿದುದು ಯಾವವಿಷಯವು ? ಮುಂದೆ ಉಪದೇಶಿಸಲ್ಪಡುವದು ಯಾವದು ? ಎಂದು ತಿಳಿಸುತ್ತಾರೆ **ಇಪ್ಪಡಿ** - ಹೀಗೆ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಇವ್ವುಪಾಯತ್ತಿ**ನ - ಈ ಭರನ್ಯಾಸ ರೂಪವಾದ ಉಪಾಯದ, ಅಧಿಕಾರದಲ್ಲೂ ಸ್ವರೂಪದಲ್ಲೂ, **ವರುಮ್ ಕಲಕ್ಕಙ್ಗಳ್** - ಬರುವ ಶಙ್ಕೆಗಳನ್ನು, **ಶಮಿಪ್ಪಿತ್ತೋಮ್** - ಪರಿಹಾರ ಮಾಡಿದೆವು ; **ಇನಿಮೇಲ್** - ಇನ್ನು ಮುಂದೆ, **ಪರಿಕರಙ್ಗಳಿಲ್** - ಭರನ್ಯಾಸದ ಅಙ್ಗಗಳ ವಿಷಯದಲ್ಲಿ, **ವರುಮ್ ವ್ಯಾಮೋಹಮ್** - ಉಂಟಾಗುವ ಭ್ರಮೆಗಳನ್ನು, **ಶಮಿಪ್ಪಿಕ್ಕಿರೋಮ್** - ಪರಿಹಾರಮಾಡುತ್ತೇವೆ. ಹೀಗೆ ಪ್ರತಿಜ್ಞಾವಾಕ್ಯವನ್ನು ದಯಪಾಲಿಸಿರುತ್ತಾರೆ

(೧) "ಆರ್ತೋವಾ ಯದಿವಾ ದೃಪ್ತಃ" ಎನ್ನುವ, (೨) "ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ । ದೋಷೋ ಯದ್ಯಪಿ ತಸ್ಯ

---

ಪರಕರ ವಿಷಯಗಳಲ್ಲುಂಟಾಗುವ ಶಙ್ಕೆಗಳನ್ನು ಪರಿಹರಿಸುತ್ತಾರೆ.
(೧) ಮೊದಲು ಆನುಕೂಲ್ಯಾದಿ ಪರಿಕರಗಳ ಆವಶ್ಯಕತೆಯು
ಬೇಕಿಲ್ಲವೆಂಬ ವಾದವನ್ನು ನಿರಸನ ಮಾಡುತ್ತಾರೆ.

---

**ಇವ್ಯುಪಾಯತ್ಕುಕ್ಕು** - ಈ ಭರನ್ಯಾಸಕ್ಕೆ, **ಆನುಕೂಲ್ಯ ಸಙ್ಕಲ್ಪಾದಿಗಳ್** – ಹಿಂದೆ ಪರಿಕರ ವಿಭಾಗಾಧಿಕಾರದಲ್ಲಿ ಹೇಳಲ್ಪಟ್ಟ ಆನುಕೂಲ್ಯ ಸಙ್ಕಲ್ಪವೇ ಮೊದಲಾದ ಐದು ಅಙ್ಗಗಳೂ **ವೇಣುಮೋ ?**—ಆವಶ್ಯಕವೋ? ಈ ಪೂರ್ವ ಪಕ್ಷರೀತ್ಯಾ ಆವಶ್ಯಕವಿಲ್ಲವೆಂಬುದನ್ನು ಅನುವಾದ ಮಾಡುವದಕ್ಕೋಸ್ಕರ ಮೂರು ಪ್ರಮಾಣಗಳನ್ನು ಉದಾಹರಿಸುತ್ತಾರೆ. (೧) **ಆರ್ತೋವಾ ಯದಿವಾ ದೃಪ್ತಃ ಪರೇಷಾಂ ಶರಣಾಗತಃ । ಅರಿಃ ಪ್ರಾಣಾನ್ ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ** ॥ ಎಂಬುದು ಪೂರಾ ಶ್ಲೋಕವು; **ಪರೇಷಾಂ** - ಇತರ ಶತ್ರುಗಳ ಮಧ್ಯೇ, **ಅರಿಃ** - ಶತ್ರುವು, **ಶರಣಾಗತಃ** - ರಕ್ಷಿಸ್ಬೇಕು ಎಂದು ಪ್ರಾರ್ಥಿಸಿ ಶರಣಾಗತನಾದವನು, **ಆರ್ತೋವಾ ಯದಿವಾದೃಪ್ತಃ** - ಬಹು ದೈನ್ಯವುಳ್ಳವನಾಗಿಯೇ ಆಗಲಿ ಅಥವಾ ಆ ಶರಣಾಗತಿ ಕಾಲದಲ್ಲೂ ಕೂಡ ಅಹಂಕಾರಯುಕ್ತನಾಗಿಯೇ ಆಗಲಿ ಇದ್ದರೂ ಸರಿಯೇ, ಅಥವಾ ಸಂಸಾರದಲ್ಲಿ ಜುಗುಪ್ಸೆಯಿಂದ ಶರಣಾಗತಿಯು ಉತ್ತರಕ್ಷಣದಲ್ಲಿಯೇ ಫಲಕಾಮನೆಯುಳ್ಳವನೇಯಾಗಲಿ ಅಥವಾ ವಿಳಂಬಾವಿಳಂಬಗಳಿಗೆ ಮನಗೊಡದೆ ದೇಹಾವಸಾನದಲ್ಲಿ ಫಲಾಪೇಕ್ಷೆಯುಳ್ಳ ಮೋಕ್ಷಾರ್ಥಿಯೇ ಆಗಲಿ, **ಪ್ರಾಣಾನ್ ಪರಿತ್ಯಜ್ಯ** - ತನ್ನ ಶಕ್ತಿಯನ್ನೆಲ್ಲಾ ವಿಾರಿ, **ಕೃತಾತ್ಮನಾ** - ಶಾಸ್ತ್ರಮರ್ಯಾದೆಯಲ್ಲಿ ಮಾಡಲ್ಪಟ್ಟ ಮನಸ್ಸುಳ್ಳವನಿಂದ ಶಾಸ್ತ್ರಧರ್ಮಸೂಕ್ಷ್ಮವನ್ನು ಗ್ರಹಿಸಿರುವವನಿಂದ, **ರಕ್ಷಿತವ್ಯಃ** - ರಕ್ಷಿಸಲ್ಪಡತಕ್ಕವನೆಂದು ಶ್ರೀರಾಮನು ಹೇಳಿರುವದರಿಂದ, **ಪ್ರತಿಕೂಲನಾದ ಶತ್ರುವೂ ಕೂಡ** ಶರಣಾಗತನಾದರೆ, ಆಗ ಆನುಕೂಲ್ಯಸಙ್ಕಲ್ಪ ಪ್ರಾತಿಕೂಲ್ಯದ ವರ್ಜನವೇ ಮೊದಲಾದ ಅಙ್ಗಗಳ ಆವಶ್ಯಕತೆ ಏನು ? ಎಂಬ ಭಾವವು, (೨) **ಮಿತ್ರಭಾವೇನ ಸಂಪ್ರಾಪ್ತಂ** - "**ಪ್ರಿಯೋಹಿ ಜ್ಞಾನಿನೋಽತ್ಯರ್ಥಂ ಅಹಂ**" (ಗೀ. ೭ ೧೭.)ನಾನು ಜ್ಞಾನಿಗೆ ಅತ್ಯಂತ ಪ್ರಿಯಸಖನೆಂದು ತಿಳಿದು ಪರಮ

---

(೧) ರಾಮಾ ಯುದ್ಧ. ೧೮.೨೮. (೨) ರಾ. ಯು. ೧೮, ೩.

ಪುರುಷಾರ್ಥವನ್ನು ಹೊಂದಬೇಕೆಂದು ಬಂದವನನ್ನು, ಅಥವಾ ಮಿತ್ರಶಬ್ದವು ಸರ್ವಲೋಕ ರಕ್ಷಕನನ್ನು "**ಮಿತ್ರಸ್ಯ ಚರ್ಷಣೀಧೃತಃ**" ಎಂಬ ಮಂತ್ರದಲ್ಲಿನ ಹಾಗೆ ಸೂಚಿಸುತ್ತದೆ, ಆದುದರಿಂದ ಸರ್ವಲೋಕ ರಕ್ಷಕನಾದ ಸರ್ವೇಶ್ವರನೆಂದು ಭಾವಿಸಿ, ಅಥವಾ, "**ಸುಹೃದಂ ಸರ್ವಭೂತಾನಾಂ**" ಎಂದು ಹೇಳಿರುವ ಮೇರೆಗೆ ಸಮಸ್ತ ಪ್ರಾಣಿವರ್ಗಕ್ಕೂ ಪರಮ ಸುಹೃತ್ತೆಂದು ಭಾವಿಸಿ, ಅಥವಾ **ಮಿತ್ರಭಾವೇನ** - ಆನುಕೂಲ್ಯ ಸಙ್ಕಲ್ಪಾದಿಗಳೊಂದಿಗೆ, "**ತನ್ಮಿತ್ರಂ ಯತ್ರ ವಿಶ್ವಾಸಃ**" ಎಂದು ಹೇಳಿರುವಹಾಗೆ ವಿಶ್ವಾಸಕ್ಕೆ ಯೋಗ್ಯವಾದ ಸ್ಥಳವೆಂಬ ಭಾವನೆಯಿಂದ ಅಥವಾ "**ತೇನ ಮೈತ್ರೀ ಭವತು ತೇ ಯದಿ ಜೀವಿತುಮಿಚ್ಛಸಿ**" ನೀನು ಬದುಕಬೇಕೆಂಬ ಆಶೆಯಿದ್ದರೆ ಅವನೊಂದಿಗೆ ಶರಣಾಗತಿರೂಪ ಸಂಬಂಧವನ್ನು ಬೆಳೆಸು ಎಂದು ಸೀತೆಯು ರಾವಣನಿಗೆ ಉಪದೇಶಮಾಡಿದ ಹಾಗೆ ಮಿತ್ರಭಾವೇನವೆಂದರೆ ಶರಣಾಗತ ಭಾವದಿಂದ, **ಸಂಪ್ರಾಪ್ತಂ** – ಚನ್ನಾಗಿ ಶರಣಾಗತಿಯ ಮೂಲಕ ಆಶ್ರಯಿಸುವವನಾಗಿ ಬಂದವನನ್ನು, ಅಥವಾ **ಸಂಪ್ರಾಪ್ತಮ್** - ಚೆನ್ನಾಗಿ ಬಂದವನನ್ನು ಎಂದರೆ ಇಲ್ಲಿಗೇನೇ ಬಂದವನನ್ನು ಅಥವಾ **ಸಂಪ್ರಾಪ್ತಂ**-ವಿರುದ್ಧವಾದ ಪಾದುಕೆಗಳನ್ನು ಬಾಗಿಲಲ್ಲಿ ಬಿಟ್ಟು ಕಾಲನ್ನು ತೊಳೆದುಕೊಂಡು ದೇವಾಲಯವನ್ನು ಪ್ರವೇಶಿಸುವಹಾಗೆ,"**ಪರಿತ್ಯಕ್ತಾ ಮಯಾ ಲಂಕಾ ಮಿತ್ರಾಣಿ ಚ ಧನಾನಿ ಚ**" ಎಂದು ಹೇಳಿಕೊಂಡು ವಿರೋಧಿರೂಪ ಪ್ರಾತಿಕೂಲ್ಯ ವರ್ಜನವೊಂದಿಗೆ ಬಂದಿರುವವನನ್ನು, ಅಥವಾ **ಸಂಪ್ರಾಪ್ತಂ** - "**ಮಾತಾ ಪಿತಾ ಭ್ರಾತಾ ನಿವಾಸಶ್ಶರಣಂ ಸುಹೃತ್**" ಎಂದು ಹೇಳಿರುವ ಹಾಗೆ ಸರ್ವವಿಧಬಂಧವೂ ನಾನೇ ಎಂದು ತಿಳಿದು ಚನ್ನಾಗಿ ಬಂದವನನ್ನು ಅಥವಾ ಲಂಕೆಯಲ್ಲೇ ಇದ್ದುಕೊಂಡು "**ರಾಘವಂ ಶರಣಾಗತಃ**" ಎಂದು ಕೂಗಿಕೊಂಡಿದ್ದರೆ ಅಲ್ಲಿಗೇನೇ ನಾನೇ ಹೋಗಬೇಕಾಗಿತ್ತು, ಅವನ್ನು ತಪ್ಪಿಸಿ ನನಗೆ ಉಪಕಾರಮಾಡಿ ಇಲ್ಲಿಗೆ ಬಂದು ಶರಣಾಗತಿಮಾಡಿರುವದರಿಂದ "**ಸಂಪ್ರಾಪ್ತಂ**" ಸರಿಯಾಗಿ ಬಂದವನನ್ನು, ಅಥವಾ **ಸಂಪ್ರಾಪ್ತಂ** - ನನಗೆ ಸ್ತೋತ್ರ, ಅರ್ಚನ, ಪ್ರಣಾಮಾದಿಗಳು ಅಷ್ಟು ಮುಖ್ಯವಲ್ಲವು, ನನ್ನ ಪ್ರಾಪ್ತಿಗೆ ಶರಣಾಗತಿರೂಪ ಉಪಾಯಾನುಷ್ಠಾನವೇ ಮುಖ್ಯವಾದುದರಿಂದ ಅದನ್ನು ಈತನು ಸರಿಯಾಗಿ ಸಪರಿಕರವಾಗಿ ನಡೆಸಿರುವದರಿಂದ "**ಸಂಪ್ರಾಪ್ತಂ**" ಅಥವಾ, ಯಾರಾದರೂ ರಕ್ಷಿಸು ಎಂದು ಹೇಗೆ ಪ್ರಾರ್ಥಿಸಬೇಕೋ ಹಾಗೆ ಪ್ರಾರ್ಥಿಸಿದರೆ ಸಾಕು ಎಂದು ರಕ್ಷಾಪೇಕ್ಷೆಯುಳ್ಳವನಾಗಿ ಅವಸರ ಪ್ರತೀಕ್ಷೆಮಾಡುವ ನನಗೆ "**ಸಂಪ್ರಾಪ್ತಂ**", ಹೀಗೆ ನನ್ನಿಷ್ಟಾನುಸಾರವಾಗಿ ಸರಿಯಾಗಿ ಬಂದವನನ್ನು, **ನ ತ್ಯಜೇಯಂ ಕಥಂಚನ**-ನಾನು ಎಂದಿಗೂ ಯಾವಕಾರಣದಿಂದಲೂ ಬಿಡಲಾರೆನು ; **ನ ತ್ಯಜೇಯಂ** ಬಂದರೆ ಸಾಕು

ಎಂದಿರುವ ನಾನು ಎಂದಿಗಾದರೂ ಪರಿತ್ಯಾಗ ಮಾಡುವೆನೋ ಎಂಬ ಭಾವವು; ಆತನ ಮಾತು ಹಾಗಿರಲಿ, ಅವನು ತನ್ನ ಕಡೆಯುವರನ್ನೂ ರಕ್ಷಿಸು ಎಂದು ಕೇಳಿದ್ದರೆ, ಈಗ ಆತನೊಂದಿಗೆ ಬಂದಿರುವ ನಾಲ್ವರನ್ನೂ ಹೇಗೆ ಬಿಡಲು ಸಾಧ್ಯವಿಲ್ಲವೋ, ಹಾಗೆಯೇ ಅವರನ್ನೂ ಬಿಡಲು ಸಾಧ್ಯವಿಲ್ಲವು, ಹೀಗಿರುವಾಗ ಈತನನ್ನು ಬಿಡಲು ಸಾಧ್ಯವೋ ಎಂಬ ಭಾವವು; **ಕಥಂಚನ**-ಆತನನ್ನು ಬಿಡುವದು ತನಗೆ ಎಂದಿಗೂ ಸಾಧ್ಯವೇ ಇಲ್ಲವು, **ಯದ್ಯಪಿ** ನಾನು ಸರ್ವಶಕ್ತನೇ ಸರಿ, ಈ ವಿಷಯದಲ್ಲಿ ಮಾತ್ರ ತಾನು ಅಶಕ್ತನು ಎಂಬ ಭಾವವು ಆತನು ಪರಮನೀಚನಾಗಿದ್ದರೂ ಬಿಡುವದಿಲ್ಲವೋ? ಎಂದರೆ ಹೇಗಿದ್ದರೂ ಶರಣಾಗತನಾದ ನಂತರ ಬಿಡುವದಿಲ್ಲವು **ದೋಷೋಯದ್ಯಪಿ ತಸ್ಯಸ್ಯಾತ್**-ಆ ಶರಣಾಗತನಲ್ಲಿ ದೋಷವಿದ್ದರೂ, ಅದೂ ಇರಲಿ ವಿಶೇಗ:ಅಂಥವನನ್ನೂ ಕೂಡರಕ್ಷಿಸುವದುಮುಂದೆ "**ಸತಾಮೇತದಗರ್ಹಿತಂ**" ಎಂದು ನಾಲ್ಕನೆಯು ಪಾದವಿರುತ್ತದೆ. ಸತ್ಪುರುಷರಿಗೆ ಇದೂಕೂಡ ಎಂದರೆ, ಹೀಗೆ ಶರಣಾಗತನಾದವನು ಒಂದುವೇಳೆ ದೋಷಯುಕ್ತನಾಗಿದ್ದರೂ ಅದನ್ನು ಪರಿಗಣಿಸದೆ, ರಕ್ಷಿಸುವದು ನಿಂದ್ಯವಾದುದಲ್ಲವು, ಅಥವಾ **ದೋಷೋಯದ್ಯಪಿ ತಸ್ಯಸ್ಯಾತ್**-ಹಿಂದೆ ಮಾಡಿದ ದೋಷಗಳನ್ನು ಮನಸ್ಸಿನಲ್ಲಿಟ್ಟಿಲ್ಲವೇ ನೀವು ಅವನಲ್ಲಿ ದೋಷವಿದೆ ಎಂದು ಹೇಳುವಿರಿ, ನಮ್ಮ ಅಭಿಪ್ರಾಯಾನುಸಾರ ಶರಣಾಗತನಲ್ಲಿ ದೋಷವೆಲ್ಲಿಯದು? ಯಾವಾಗ ಶರಣಾಗತನಾದನೋ ಆಗ "**ಪ್ರಾರಬ್ಧೇತರ ಪೂರ್ವಪಾಪಮಖಿಲಂ**" ಎಂಬ ರೀತ್ಯಾ ಎಲ್ಲವೂ ನಾಶವಾಗುವದರಿಂದ ಅವನೂ ದೋಷಿಯೂ ಅಲ್ಲವು; ಅಂತವನು ಮಹಾ ಪರಿಶುದ್ಧನು; ಅಂತವನು ಎಂದಿಗೂ ಪಾಪಕೂಪದಲ್ಲಿ ಬಿದ್ದು ಪಾಪಲಿಪ್ತನಾಗನು; ಹಿಂದೆ ದೋಷಿಯಾಗಿದ್ದನೆಂದು ಬಿಟ್ಟರೇನೇ ಗರ್ಹಿತವೆಂಬುದು, **ಅಗರ್ಹಿತಂ** ಎಂಬ ಪ್ರಯೋಗದಿಂದ ಸೂಚಿತವು ಅಥವಾ **ದೋಷೋ ಯದ್ಯಪಿ ತಸ್ಯಸ್ಯಾತ್**-ಒಂದುವೇಳೆ ಹಿಂದೆ ತುಂಬಾ ದೋಷಿಯಾಗಿದ್ದನು, ಅಪರಾಧ ಸಾರ್ವಭೌಮನಾಗಿದ್ದನು; ಅಂತವನನ್ನು ರಕ್ಷಿಸಬಹುದೋ, ಹಾಗೆ ಅಂತವನನ್ನೇ ರಕ್ಷಿಸುವದೇ ಸತ್ ಆದ ತನಗೆ ಯಶಸ್ಕರವಾದುದು, ಪುಣ್ಯವಾಡಿದವನನ್ನು ರಕ್ಷಿಸುವದೇನೂ ಅಷ್ಟು ಶ್ಲಾಘ್ಯವಲ್ಲವು, ಮಹಾಪಾಪಿಯನ್ನು ರಕ್ಷಿಸಿದರೇನೇ ಶ್ಲಾಘ್ಯತಮವು. ಅಥವಾ, "**ದೋಷೋ ಯದ್ಯಪಿ ತಸ್ಯಸ್ಯಾತ್**" ಹಿತೈಷಿಗಳಾದ ನೀವು ಅವನಿಂದ ನನಗೆಲ್ಲಿ ತೊಂದರೆಯಾಗುತ್ತದೋ ಎಂದು ಶಙ್ಕಿಸುತ್ತೀರಲ್ಲವೇ, ಹಾಗೆ ಒಂದುವೇಳೆ ನನಗೆ ತೊಂದರೆಯೇ ಆಗಲೇನು **ಸತಾಂ**-ಕಪೋತಾದಿ ಶರಣಾಗತಶಾಸ್ತ್ರಮರ್ಯಾದಾಭಿಜ್ಞರಿಗೆ, ಇದು **ಅಗರ್ಹಿತಂ**-ಉಪಾದೇಯವಾದುದೇ; ಭಯಶಙ್ಕಾ ಮೊದಲಾದವುಗಳಿಂದ ಭೀತರಾದ ನಿಮಗೆ ನಿಂದ್ಯವಾಗಿ ತೋರಿದರೂ, ಇತರ ಮಹಾನುಭಾವರೂ, ಕಪೋತಾದಿಗಳೂ, ಅನುಮೋ

ದಿಸುವರೇವಿನಾ ನಿಂದಿಸುವರಲ್ಲವು ; ಅಥವಾ ದುಷ್ಟ ನಿಗ್ರಹ ಶಿಷ್ಟಪರಿಪಾಲನಾದಿ ಗಳಿಗಾಗಿಯೇ ಅವತಾರಮಾಡುವ ನೀನು, ಹೀಗೆ ಶರಣಾಗತನೆಂಬ ವ್ಯಾಜದಿಂದ ದುಷ್ಟ ಪರಿಪಾಲನ ಮಾಡಬಹುದೋ ಎಂದರೆ, ಇದು ಸಾಮಾನ್ಯ ಧರ್ಮ ಪ್ರಕ ರಣವನ್ನು ಕುರಿತ ಆಕ್ಷೇಪವು; ವಿಶೇಷ ಧರ್ಮವಾದ ಶರಣಾಗತ ಪರಿಪಾಲನರೀತ್ಯಾ, ಅಂತಹ ಸಾಮಾನ್ಯ ವಿಶೇಷಧರ್ಮವನ್ನು ಶಾಸ್ತ್ರಮುಖೇನ ಚನ್ನಾಗಿ ತಿಳಿದ, **ಸತಾಂ ಅಗರ್ಹಿತಂ** - ಉಪಾದೇಯವೇ ; ಗರ್ಹಿತವಲ್ಲದುದು ಪೂಜನೀಯವೆಂಬ ಭಾವವು ; ಆದುದರಿಂದ ಸರ್ವಶಕ್ತನಾದ ನನಗೆ ಶರಣಾಗತನ ವಿಷಯದಲ್ಲಿ, **"ನತ್ಯಜೇಯಂ"** ಎಂದು ಹೇಳಬೇಕಾಗಿರುವ ಒಂದು ಅಶಕ್ತತೆಯೂ, ಸರ್ವಜ್ಞ ನಾದ ನನಗೆ ಆತನ ವಿಷಯದಲ್ಲಿ ದೋಷವು ಕಣ್ಣಿಗೆ ಕಾಣದಿರುವ ಒಂದು ಅವಿಜ್ಞ ತೆಯೂ ಉಂಟೆಂದು ಈ ಶ್ಲೋಕದಲ್ಲಿ ಸರ್ವೇಶ್ವರನು ಹೇಳಿಕೊಂಡಿರುತ್ತಾನೆ.

(೩) **"ಯದಿವಾ ರಾವಣಸ್ಸ್ವಯಮ್" "ಆನಯೈನಂ ಹರಿಶ್ರೇಷ ದತ್ತ ಮಸ್ಯಾಭಯಂಮಯಾ । ವಿಭೀಷಣೋ ವಾ ಸುಗ್ರೀವ ಯದಿವಾ ರಾವಣಸ್ಸ್ವಯಂ"** ಎಂಬುದು ಪೂರಾ ಶ್ಲೋಕವು, **ಅಭಯಂ ಸರ್ವಭೂತೇ ಭ್ಯೋ ದದಾಮ್ಯೇತದ್ವ್ರತಂಮಮ** ಎಂಬ ತನ್ನ ಸ್ಥಿರಸಙ್ಕಲ್ಪವನ್ನು **ಶ್ರೀ** ರಾಮಚಂದ್ರ ಪ್ರಭುವು ತಿಳಿಸಿದ ನಂತರ ಹೇಳುವ ಮಾತು. **ಹೇ ಹರಿಶ್ರೇಷ್ಠ**- ಓ ವಾನರ ರಾಜನಾದ ಸುಗ್ರೀವನೇ, **ಏನಂ** - ಶರಣಾಗತನಾಗಿ ಇಲ್ಲಿಗೇನೇ ಬಂದಿರುವ ವಿಭೀಷಣನನ್ನು, **ಆನಯ** - ಕರೆದುಕೊಂಡುಬಾ ; ವಾನರ **ರಾಜನೇ** ಬಂದು ಕರೆದುಕೊಂಡು ಹೋದನು, ಎಂಬುದರಿಂದ ರಾಮಗೋಷ್ಠಿಗೆ ಸೇರಿದ ನಿನಗೂ ಮಹಾ ಖ್ಯಾತಿಯೂ ತನ್ಮೂಲಕ ನನಗೂ ಖ್ಯಾತಿಯೂ ಉಂಟಾಗುವದು; ನನಗೆ ಖ್ಯಾತಿ ಹೇಗೆಂದರೆ, ಇಂತಹ ಘನವಾದ ಸಚಿವರನ್ನು ಪುರುಷಕಾರರೂಪ ದಲ್ಲಿ ಮಧ್ಯವಲ್ಲಿ ನಿಲ್ಲಿಸಿರುತ್ತಾನೆಂಬದಾಗಿ ಯಶಸ್ಸು. ನಿಮ್ಮನ್ನು ಅಲ್ಲವೇ ಪುರುಷ ಕಾರರೂಪದಲ್ಲಿ ಯಾಚಿಸಿದುದು ? ಆದುದರಿಂದ ನೀನೇ ಕರೆದುಕೊಂಡು ಬರತಕ್ಕ ದ್ದೆಂಬ ಭಾವವು "ಮಹಾ ಪ್ರಾಜ್ಞ"ನಾದ ವಿಭೀಷಣನು ಪರಮ ಭಾಗವತೋ ತ್ತಮನು, ಅಂತವನಲ್ಲಿ ದೋಷಗಳನ್ನಾರೋಪಿಸಿ ಮೋಸಕೃತ್ಯಗಳನ್ನು ನಡೆಸುವ ನೆಂದು ಭಾಗವತಾಪಚಾರವನ್ನು ಸಂಪಾದಿಸಿಕೊಂಡದ್ದರಿಂದ ತನ್ನಿವೃತ್ತಿಗಾಗಿ ನೀನೇ ಹೋಗಿ ಕರೆತರುವದೆಂಬುದೂ ಸೂಚಿತವು. ಅಥವಾ ಓ ಸುಗ್ರೀವನೇ

(೩) ರಾ. ಯು ೧೮. ೩೬.

## ಶೊಲ್ಲುಗಿರ "ರಿಪೂಣಾಮಪಿ ವತ್ಸಲ"ನಾದ ಶರಣ್ಯನ ಶರಣಾಗತರಕ್ಷೈಯು

ನನಗೇನೋ ಪರಿಗ್ರಹಿಸಲೇ ಬೇಕೆಂಬ ಭಾವವು ; ನನ್ನ ಸತ್ಯಸಙ್ಕಲ್ಪವೂ ಹಾಗೆಯೇ; ನಿಮಗೆ ಇಷ್ಟವಿಲ್ಲದಿದ್ದರೆ ನನಗೆ ಮನಸ್ಸಮಾಧಾನವಿಲ್ಲವು ; ಆದುದರಿಂದ ನನಗೆ ಸಚಿವರಾಗಿರುವವರಲ್ಲಿ ಅಗ್ರೇಸರನಾದ ನೀನೇ ಹೋಗಿಕರತಂದರೆ ನನಗೆ ಮನಸ್ಸಮಾಧಾನವೆಂಬ ಭಾವವಾಗಲಿ ತೋರುತ್ತದೆ. ನಾನು ಈಗ ಉಪಪಾದಿಸಿದ ಶರಣಾಗತ ಶಾಸ್ತ್ರರೀತ್ಯಾ, ಮಯಾ - ಅಭಯವನ್ನು ಸರ್ವಪ್ರಪನ್ನರಿಗೂ ಏನೊಂದೂ ವ್ಯತ್ಯಾಸವಿಲ್ಲದೆ ಕೊಡುವದೇ ವ್ರತವಾಗಿರುವ ನನ್ನಿಂದ, ಅಸ್ಯ - ಈ ಶರಣಾಗತನಿಗೆ ಅಭಯವು, ದತ್ತಮ್ - ಶರಣಾಗತಿ ಮಾಡಿದ ತತ್ಕ್ಷಣವೇ, ದತ್ತಮ್ - ಕೊಡಲ್ಪಟ್ಟಿತು, ಈಗ ಬಂದಿರುವವನು, ವಿಭೀಷಣೋವಾ-ವಿಭೀಷಣೋವಾ ಧರ್ಮಾತ್ಮಾ ಎಂದೂ, ವಿಭೀಷಣೋ ಮಹಾಪ್ರಾಜ್ಞಃ ಎಂದೂ, ಹೇಳಿರುವ ಮೇರಿಗೆ ಕರ್ಮನಿಷ್ಠೆ ಜ್ಞಾನನಿಷ್ಠೆಗಳಿಂದ ಯುಕ್ತನಾಗಿ ಸತ್ವಗುಣಾಧಿಕ್ಯವುಳ್ಳ ವಿಭೀಷಣನೇಯಾಗಿರಲಿ ಅಥವಾ ಯದಿ ವಾ ರಾವಣಸ್ಸ್ವಯಂ - ಮಾಯಾವಿಯಾಗಿ ನೃಶಂಸನಾಗಿ ದುರುಳನಾಗಿ ಮಹಾಪಾಪಿಯಾಗಿರುವ ರಾವಣನೇ ಈ ವೇಷದಲ್ಲಿ ದುಷ್ಟಾಭಿಪ್ರಾಯಯುಕ್ತನಾಗಿ ತಾನೇ ಬಂದಿರಲಿ, ಗ್ರಾಹ್ಯವೇ ಸರಿ ; ಅಥವಾ ಹಾಗೆ ರಾವಣನೇ ಬಂದು ಒಂದುವೇಳೆ ಶರಣಾಗತನಾದರೆ ಇನ್ನೂ ಉತ್ತಮವೇ, ಏಕೆಂದರೆ ಈ ವಿಭೀಷಣನು ತನ್ನವರೆಂದು ನಾಲ್ಕು ಜನರನ್ನು ಮಾತ್ರ ಕರೆದುಕೊಂಡು ಬಂದಿರುವದರಿಂದ ಈ ಐದು ಜನಮಾತ್ರ ರಕ್ಷಿಸಲ್ಪಡುವರು, ರಾವಣನೇ ಬಂದು ಶರಣಾಗತನಾದರೆ ತನ್ನ ಲಂಕಾರಾಜ್ಯದ ಎಲ್ಲಾ ಜನರ ರಕ್ಷಣೆಗಾಗಿ ಪ್ರಾರ್ಥಿಸಬಹುದಾದುದರಿಂದ ನನ್ನ ಉದಾರಭಾವವು ಅತ್ಯಂತವಾಗಿ ಶೋಭಿಸುವದೆಂಬ ಭಾವವೂ ದ್ಯೋತಿತವು ; ಅಥವಾ ಸತ್ವಗುಣ ನಿಧಿಯಾಗಿರುವ ವಿಭೀಷಣ ರಕ್ಷಣೆಗಿಂತ ಮಹಾಪರಾಧಿಯಾದ ರಾವಣನ ರಕ್ಷಣೆಯು ತನ್ನ ಉದಾರಭಾವಕ್ಕೆ ವಿಶೇಷ ಭಾಸಮಾನತ್ವವನ್ನುಂಟು ಮಾಡುವದೆಂಬ ತಾತ್ಪರ್ಯವೂ ಸೂಚಿತವು ; ಅಂತೂ ಹೇಗಾದರೂ ಆಗಲಿ ನನ್ನ ವ್ರತಾನುಸಾರ ಕರೆದುಕೊಂಡುಬಾರೈಯ್ಯ ಎಂದು ಹೇಳಿದನು.

ಹೀಗೆ ಈ ಮೂರು ಪ್ರಮಾಣಗಳಿಂದಲೂ ತೋರುವದು ಏನೆಂದರೆ ಕರುಣಾಕರನಾದ ಸರ್ವೇಶ್ವರನಲ್ಲಿ ಪ್ರಣತನಾಗಿ ಶರಣಾಗತಿಮಾತ್ರ ಮಾಡಿದರೆ ಸಾಕು ; ಈ ಶರಣಾಗತನು ಎಂತವನೇ ಆಗಲಿ ಆತನನ್ನು ರಕ್ಷಿಸಿಬಿಡುತ್ತೇನೆಂದುದೃಢ ಸಙ್ಕಲ್ಪಯುಕ್ತನಾಗಿರುವವನು ; ಆತನು ಎಷ್ಟೇ ಅಪರಾಧಿಯಾಗಿ ಮಹಾ ಪಾಪಿಯಾಗಿ

**ದೋಷಙ್ಗಳೈಪ್ಪಾರ್‍ಕ್ಕುವೋ? "ಅನಾಲೋಚಿತವಿಶೇಷಾಶೇಷಲೋಕಶರಣ್ಯ" ಎನ್ರು ನ್ನೋ ಪೂರ್ವರುಗಳ್ ಪಾಶುರಮ್? ಆಗೈಯಾಲ್ ಇವೈ ಸಂಭಾವಿತ ಸ್ವಭಾವಙ್ಗಳಾ ಮಿತ್ತನೈಯನ್ರೋ? ಎನ್ರು ಶಿಲರ್ ಶೊಲ್ಲುವರ್‌ಗಳ್.**

---

ದ್ದರೂ ಚಿಂತೆಯಿಲ್ಲವು; ರಕ್ಷಿಸಿಬಿಡುವೆನೆಂಬ ದೀಕ್ಷಾವ್ರತದಲ್ಲಿರುವಾಗ, ಆನುಕೂಲ್ಯಾದಿ ಪರಿಕರಗಳನ್ನು ಅಪೇಕ್ಷಿಸುವನೋ ಎಂದು ಪೂರ್ವಪಕ್ಷವನ್ನು ಸಪಾದಿಸಿ ಅದಕ್ಕೆ ಸಮಾಧಾನವನ್ನು ಅನುಗ್ರಹಿಸುತ್ತಾರೆ. **ಎನ್ರುಮ್ ಶೊಲ್ಲುಗಿರ** - ಎಂದು ಮೇಲಿನ ಮೂರು ಪ್ರಮಾಣಗಳಲ್ಲಿ ತೋರಿಬರುವ, **ರಿಪೂಣಾಮಪಿವತ್ಸಲನಾನ** - ಶತ್ರುಗಳಲ್ಲೂ ವಾತ್ಸಲ್ಯವನ್ನು ತೋರಿಸುವ, ಆದರೆ ಸ್ವಾಮಿಗೆ ಯಾರೂ ಶತ್ರುಗಳು ಇಲ್ಲನೇ ಇಲ್ಲವು, ಮಹರ್ಷಿಗಳಲ್ಲಿ ಮಾಡಿದ ಅಕ್ರಮಕ್ಕಾಗಿ ಶಾಪಮೂಲಕ ರಿಪುಗಳಾಗಿ ಪರಿಣಮಿಸಿದರೇವಿನಾ ಆತನಿಗೆ ವಾಸ್ತವವಾಗಿಯೂ ಯಾರೂ ಶತ್ರುಗಳಿಲ್ಲವು; ಇದೂ ಅಲ್ಲದೆ ಈತನಿಗೆ ಶತ್ರುಗಳು ಯಾರೆಂದರೆ, ತನ್ನ ಆಜ್ಞೆಗಳನ್ನು ಮೀರಿದ ಕೃತ್ಯಾಕರಣಾಕೃತ್ಯಕರಣರೂಪದೋಷವುಳ್ಳವರು ತನ್ನ ಆಜ್ಞೆಗಳನ್ನು ಶಿರಸಾವಹಿಸಿ ಆಶ್ರಯಿಸಿದ ಶಿಷ್ಟರಿಗೆ ಶತ್ರುಗಳಾದ ದುಷ್ಕರ್ಮಿಗಳು; ಅಂತವರ ವಿಷಯದಲ್ಲೂ ಕೂಡ ವಾತ್ಸಲ್ಯಯುಕ್ತನು. ಶ್ರೀರಾಮನು ತನ್ನ ಶತ್ರುವಾದ ರಾವಣನು ಶರಣಾಗತನಾದರೂ ರಕ್ಷಿಸಿ ಬಿಡುವದಾಗಿ "ಯದಿವಾ ರಾವಣಸ್ಸ್ವಯಂ" ಎಂದು ಹೇಳಿದನು. ಮತ್ತು, ದುರ್ಯೋಧನನು ಪಾಂಡವರಿಗೆ ರಾಜ್ಯವನ್ನು ಕೊಟ್ಟುಬಿಟ್ಟು ಸಂಧಿಮಾಡಿಕೊಂಡರೆ ಮನ್ನಿಸಿಬಿಡುವದಾಗಿ ಮೊದಲು ಹೇಳಿಕಳುಹಿಸಿ, ಅನಂತರ ತಾನೇ ಹೋಗಿ ನಾಶವನ್ನು ತಪ್ಪಿಸಬೇಕೆಂದು ಪ್ರಯತ್ನಮಾಡಿದುದರಿಂದ ರಿಪೂಣಾಮಪಿವತ್ಸಲನು, ಇಂತಹ ಶರಣ್ಯರ್-ಶರಣಾಗತನಾದರೆಸಾಕು ರಕ್ಷಿಸಿಬಿಡುವನೆಂದಿರುವವನು, **ಶರಣಾಗತನುಡೈಯ ದೋಷಙ್ಗಳೈಪ್ಪಾರ್‍ಕ್ಕುವೋ** - ಶರಣಾಗತನಲ್ಲಿ ಆನುಕೂಲ್ಯ ಸಙ್ಕಲ್ಪ, ಪ್ರಾತಿಕೂಲ್ಯವರ್ಜನಾದಿಪರಿಕರಗಳಿಲ್ಲವೆಂಬ ದೋಷಗಳನ್ನು ಪರಿಗಣಿಸುವನೋ? "**ಅನಾಲೋಚಿತ ವಿಶೇಷಾಶೇಷಲೋಕಶರಣ್ಯ**"-"ಶರಣಾಗತನಲ್ಲಿ ಯಾವವಿಧವಾದ ವಿಶೇಷಗಳನ್ನೂ ನೋಡದವನಾಗಿರುವ ಎಲ್ಲಾ ಲೋಕಕ್ಕೂ ರಕ್ಷಕನು", **ಎನ್ನನ್ರೋ**-ಎಂದಲ್ಲವೇ, **ಪೂರ್ವರುಗಳ್ ಪಾಶುರಮ್**-ಪೂರ್ವಾಚಾರ್ಯರುಗಳಾದ ಶ್ರೀ ಭಾಷ್ಯಕಾರಪ್ರಭೃತಿಗಳ ದಿವ್ಯಸೂಕ್ತಿಯು? **ಆಗೈಯಾಲ್**- ಈ ಮೇಲಿನ ಕಾರಣಗಳಿಂದ ಎಂದರೆ ಶತ್ರುಗಳಿಗೂ ವಾತ್ಸಲ್ಯಯುಕ್ತನಾಗಿ, ಶರಣಾಗತರೆಲ್ಲಾ ಸಮರಾಗಿ ಅವರಲ್ಲಿ ಏನೊಂದು ವಿಶೇಷವನ್ನೂ ಆ ಕರುಣಾಸಾಗರನು ನೋಡುವದಿಲ್ಲವಾದುದರಿಂದ, **ಇವೈ** - ಈ ಆನುಕೂಲ್ಯಸಙ್ಕ

**ಇದುಕ್ಕು ಪ್ರಪತ್ತ್ಯುತ್ತರಕಾಲತ್ತಿಲ್ ಆನುಕೂಲ್ಯಾದಿ ಗಳ್ ಅನು ವರ್ತ್ತಿಯಾದೊಳಿಯಿಲುಮ್ ಪ್ರತಿಸಮಾಧಾನಂ ಪಿರನ್ದು ಪ್ರಪತ್ತಿ ಫಲ**

---

ಲ್ಪಾದಿ ಪರಿಕರಗಳು, **ಸಂಭಾವಿತ ಸ್ವಭಾವಙ್ಗಳಾಮ್** - ಆ ಶರಣಾಗತನಾದ ಪ್ರಪನ್ನನಲ್ಲಿ ಆ ಕಾಲದಲ್ಲಿ ತಾನಾಗಿಯೇ ಪ್ರಾಪ್ತವಾಗುವ ಸ್ವಭಾವಗಳಾಗುವುವು; ಅವುಗಳೇನೂ ಶರಣಾಗತಿಗೆ ಅಙ್ಗವಾಗಿ ಬೇಕಿಲ್ಲವು, ಆಕಾಲದಲ್ಲಿ ಅಂತವನು ಅಂತಹ ಆನುಕೂಲ್ಯಾದ್ಯವಸ್ಥೆಯುಳ್ಳವನಾಗಿ ಆಗುವನು ; **ಇತ್ತನೆಯನ್ನೋ** - ಇಷ್ಟುಮಾತ್ರವೇ ಅಲ್ಲವೋ ? **ಎನ್ರು** - ಎಂಬದಾಗಿ, **ಶಿಲರ್** - ಕೆಲವು ಪೂರ್ವ ಪಕ್ಷಿಗಳು, **ಶೊಲ್ಲುವರ್ಗಳ್** - ಹೇಳುವರು ; ಎಂದರೆ ಈ ಪರಿಕರಗಳು ಆವಶ್ಯ ಕವಾಗಿ ಆ ಕಾಲದಲ್ಲಿ ಶರಣಾಗತನಲ್ಲಿ ಇರಬೇಕೆಂದು ನೀವು ಪರಿಕರ ವಿಭಾಗಾಧಿ ಕಾರದಲ್ಲೂ ಸಾಙ್ಗಪ್ರಪದನಾಧಿಕಾರದಲ್ಲೂ ಉಪಪಾದಿಸಿದ ಹಾಗಲ್ಲವೆಂಬುದು ಪೂರ್ವ ಪಕ್ಷಿಯ ಅಭಿಪ್ರಾಯವು.

ಇದಕ್ಕೆ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ. ಮೇಲೆ ಉದಾಹರಿಸಿದ ಮೂರು ಪ್ರಮಾಣಗಳಲ್ಲೂ ಈ ಪರಿಕರಗಳು ಬೇಡವೆಂದು ಅವುಗಳ ಲ್ಲೇನೂ ಹೇಳಿಲ್ಲವು. ಶರಣಾಗತಿಯೇ ಸಾಙ್ಗಪ್ರಪದನವಾದುದರಿಂದ ಯಾವಾಗ ಶರಣಾಗತಿಯು ಮಾಡಲ್ಪಟ್ಟಿತೋ, ಆಗ ಸಾಙ್ಗವಾಗಿಯೇ ಅನುಷ್ಠಿಸಲ್ಪಟ್ಟಿತೆಂಬ ಭಾವವು. ಲೋಕದಲ್ಲೂ ಕೂಡ ಶರಣಾಗತನಾಗುವವನಿಗೆ ಆನುಕೂಲ್ಯಾದಿ ಪರಿಕರಗಳಿಂದ ಯುಕ್ತವಾದ ಭಾವವನ್ನೇ ಕಂಡಿರುವದರಿಂದ, ಅಂತಹ ಪರಿಕರಗ ಳಿಲ್ಲದೆ ಶರಣಾಗತಿಯಾಗುವದೇ ಇಲ್ಲವು. ಆದುದರಿಂದ ಕೆಲವು ಮಹನೀಯರೂ ಕೂಡ ಇಂತಹ ಪೂರ್ವಪಕ್ಷವನ್ನು ಮಾಡುವದರಿಂದ ಅದಕ್ಕೇನಾದರೂ ಒಂದ್ಯ ವಿಧವಾಗಿ ಸಮಾಧಾನವನ್ನು ಹೇಳಬೇಕೆಂಬಭಿಪ್ರಾಯದಿಂದ ಅಂತಹ ಪರಿಕರ ಗಳು ಪ್ರಪತ್ತ್ಯುತ್ತರಕಾಲದಲ್ಲೂ ಇರಬೇಕು ; ಆದರೆ ಅವುಗಳು ಇದ್ದೇ ತೀರಬೇ ಕೆಂಬ ಆವಶ್ಯಕತೆಯು ಇಲ್ಲವು ; ಒಂದುವೇಳೆ ಇಲ್ಲದಿದ್ದರೂ ಕಡೆಗೆ ಪರಿತಾಪಾದಿ ಗಳುಂಟಾಗಿ ಅವುಗಳನ್ನವಲಂಬಿಸಿದವನಾಗುತ್ತಾನೆ, ಅಂತೂ ಮೋಕ್ಷ ಪ್ರಾಪ್ತಿಯುಂಟಾಗುವದಕ್ಕೇನೂ ಅಭ್ಯಂತರವಿಲ್ಲವೆಂದು ಸಮಾಧಾನವನ್ನು ಹೇಳು ತ್ತಾರೆ. **ಇದುಕ್ಕು** - ಈ ಅಭಿಪ್ರಾಯಕ್ಕೆ ಎಂದರೆ ಆನುಕೂಲ್ಯಾದಿ ಪರಿಕರಗಳ ಪೇಕ್ಷೆಯು ಶರಣಾಗತಿಗೆ ಬೇಕಿಲ್ಲವೆಂಬಭಿಪ್ರಾಯಕ್ಕೆ, **ಪ್ರಪತ್ತ್ಯುತ್ತರ ಕಾಲ ತ್ತಿಲ್** ಶರಣಾಗತಿ ಮಾಡಿದ ಉತ್ತರಕಾಲದಲ್ಲಿ ಆನುಕೂಲ್ಯ ಸಙ್ಕಲ್ಪಾದಿ ಪರಿ ಕರಗಳು, **ಅನುವರ್ತ್ತಿಯಾದೊಳಿಯಿಲುಮ್** - ಶರಣಾಗತಿಕಾಲದಲ್ಲಂತು ಅವ

ಮುವ್ ಕುರ್ೈವತ್ತಿರುಕ್ಕು ಮೆನ್ನ್ಯಿಲೇ ತಾತ್ಪರ್ಯಂ ಕೊಳ್ಳಲಾಮ್. ಇಙ್ಗನಲ್ಲಾದಪೋದು (೧) "ಷಡ್ವಿಧಾ ಶರಣಾಗತಿಃ" ಎನ್ರುಮ್, (೨) "ನ್ಯಾಸಃ ಪಂಚಾಂಗ ಸಂಯುತಃ" ಎನ್ರುಮ್ (೩) "ಸ್ವಾಙ್ಗೈಃ

ಶ್ಯಕವಾಗಿ ಇಲ್ಲದ್ದು ಅನಂತರವೂ ಅನುವರ್ತಿಸಿಕೊಂಡು ಒಂದುವೇಳೆ ಬಾರದೇ ಇದ್ದರೆ, ಇದರಿಂದ ಪ್ರಪನ್ನನಿಗೆ ಅವು ಸಾಧಾರಣವಾಗಿ ಅನುವರ್ತಿಸಿ ಬಂದೇ ಬರುತ್ತವೆಂಬ ಭಾವವು; ಹಾಗೆ ಒಂದುವೇಳೆ ಬಾರದಪಕ್ಷದಲ್ಲಿ, **ಪ್ರತಿಸಮಾಧಾನಂಪಿರನ್ನು** - ಅನುತಾಪ, ಪ್ರಾಯಶ್ಚಿತ್ತ ಉಪರಮಗಳು ಉಂಟಾಗಿ, **ಪ್ರಪತ್ತಿ ಫಲಮುಮ್ ಕುರ್ೈವತ್ತಿರುಕ್ಕುಮ್** - ಶರಣಾಗತಿ ಮಾಡಿದುದರಫಲವು ಏನೊಂದೂ ನ್ಯೂನತೆಯನ್ನು ಹೊಂದುವದಿಲ್ಲವು, **ಎನ್ನ್ಯಿಲೇ**- ಎಂದು ಹೇಳುವದರಲ್ಲಿ, **ತಾತ್ಪರ್ಯಂ ಕೊಳ್ಳಲಾಮ್** - ಅಭಿಪ್ರಾಯವನ್ನಾಗಿ ಅಙ್ಗೀಕರಿಸಬಹುದು,ಪ್ರಪತ್ತ್ಯುತ್ತರಕಾಲದಲ್ಲೂ ಈ ಪರಿಕರಗಳು ಇರಬೇಕೆಂಬುದು ಹಿಂದೆಯೇ ಉಪದೇಶಿಸಲ್ಪಟ್ಟಿತು. (೧,೧೧೬) ನೆಯ ಪುಟವನ್ನು ಪರಾಂಬರಿಸಿ. ಅವುಗಳಿಲ್ಲದೆ ಈತನು ಅಪರಾಧಗಳಿಗೆ ಗುರಿಯಾದರೆ ಪರಿತಾಪಾದಿಗಳುಂಟಾಗಿ, ಕಡೆಗೆ ಈ ಪರಿಕರಗಳುಂಟಾಗಿ, ಮುಂದೆ ಅಪರಾಧಗಳಿಂದ ಉಪರಮವನ್ನು ಹೊಂದಿದವನಾಗಿ, ಕಡೆಗೆ ಹೇಗಿದ್ದರೂ ಶರಣ್ಯನ ವಾಗ್ದಾನಕ್ಕೆ ಏನೊಂದೂ ನ್ಯೂನತೆಯಿಲ್ಲದೆ ಮೋಕ್ಷವನ್ನು ದೇಹಾವಸಾನದಲ್ಲೇ ಹೊಂದುವನೆಂಬ ಭಾವವು. ಅದುದರಿಂದ ಮಹನೀಯರ ಆಕ್ಷೇಪಕ್ಕೆ ಪ್ರಪದನೋತ್ತರಕಾಲದಲ್ಲಿ ಯಾವಾಗಲೂ ಅವು ಇರಬೇಕೆಂಬ ನಿಯಮವಿಲ್ಲವೆಂದೂ, ಅವರಿಂದ ಮೋಕ್ಷಕ್ಕೇನೂ ಅಭ್ಯಂತರವಿಲ್ಲವೆಂದೂ ಭಾವಿಸತಕ್ಕದ್ದೆಂಬ ತಾತ್ಪರ್ಯವೆಂದು ಉಪದೇಶಿಸಿದರು;ಆದರೆ ಶರಣಾಗತ್ಯನುಷ್ಠಾನಕಾಲದಲ್ಲಾದರೋ ಆನುಕೂಲ್ಯಾದಿ ಪರಿಕರಗಳು ಆವಶ್ಯಕವಾಗಿರತಕ್ಕದ್ದೆಂಬುದು ಸ್ಥಾಪಿತವು.

ಆದರೆ ಹಾಗೆ ಆಕ್ಷೇಪಿಸುವರ ಅಭಿಪ್ರಾಯವನ್ನೇ ಅಙ್ಗೀಕರಿಸಿದರೆ ತೊಂದರೆಯೇನು ? ಎಂದರೆ, ಅದರಿಂದುಂಟಾಗುವ ಮುಂದೆ ಉದಾಹರಿಸುವ ಅಹಿರ್ಬುಧ್ನ್ಯಸಂಹಿತೆ ಮತ್ತು ಲಕ್ಷ್ಮೀತಂತ್ರಾದಿಗಳಿಗೆ ವಿರುದ್ಧವಾಗುತ್ತದೆಂಬ ಅನುಪಪತ್ತಿಯನ್ನು ಮುಂದೆ ಪ್ರದರ್ಶಿಸುತ್ತಾರೆ:—**ಇಙ್ಗನಲ್ಲಾದಪೋದು** – ಈಗ ನಾವು ಹೇಳಿದಹಾಗೆ ಸಮಾಧಾನವನ್ನು ಕಲ್ಪಿಸದಿದ್ದರೆ "**ಷಡ್ವಿಧಾಶರಣಾಗತಿಃ** ಎಂದೂ" ಮತ್ತು "**ನ್ಯಾಸಃಪಂಚಾಂಗಸಂಯುತಃ**" ಎಂದೂ "**ಸ್ವಾಂಗೈಃ ಪಂಚಭಿರಾ**

(೧) ಅಹಿ. ೩೭. ೨೮ (೨) ಲ. ತ. ೧೭. ೭೪. (೩) ಲ ತ ೨೮.೭.

**ಪಂಚಭಿರಾವೃತಾವ್" ಎನ್ರುಮ್ ಅಙ್ಗಾಙ್ಗಙ್ಗಳೈ ವಿಭಜಿತ್ತು ಚ್ಚೊಲ್ಲು ಗಿರ ಪಲಪ್ರಮಾಣಙ್ಗಳುಕ್ಕುಮ್ ವಿರುದ್ಧಮ್. ಲೋಕತ್ತಿಲ್ ರಕ್ಷ್ಯದ್ರವ್ಯ ಸಮರ್ಪಣ ಮರ್ಯಾದೈಕ್ಕುಮ್ ಪೊರುನ್ದಾದೆನ್ರುಮ್ ಇವ್ವಙ್ಗಙ್ಗಳುಡೈಯ ಸಕೃತ್ಕರಣಾದಿ ಪ್ರಕಾರಙ್ಗಳುಮ್ ಮುನ್ಬೇ ಶೊನ್ನೋಮ್.**

---

ವೃತಾಂ" ಎಂದೂ, **ಅಙ್ಗಾಙ್ಗಙ್ಗಳೈ ವಿಭಜಿತ್ತು** - ಅಙ್ಗಗಳನ್ನೂ ಅಙ್ಗಿಯನ್ನೂ ವಿಭಾಗಿಸಿ, **ಶೊಲ್ಲುಗಿರ** - ಹೇಳುವ **ಪಲಪ್ರಮಾಣಙ್ಗಳುಕ್ಕುಮ್** - ಹಲವು ಪ್ರಮಾಣಗಳಿಗೂ, **ವಿರುದ್ಧಮ್** - ವಿರುದ್ಧವಾದುದು ಆಗುತ್ತದೆ. ಈ ಮೂರು ಪ್ರಮಾಣಗಳಲ್ಲಿ (೨) ಮತ್ತು (೩) ನೆಯದರಲ್ಲಿ ಐದು ಅಙ್ಗಗಳು. **ನ್ಯಾಸ** ಅಥವಾ **ಪ್ರಪತ್ತಿಯು** "ಅಙ್ಗಿಯೆಂದೂ **ಅಙ್ಗಾಙ್ಗಙ್ಗಳೈ ವಿಭಜಿತ್ತು**" ಅಙ್ಗಾಙ್ಗಗಳನ್ನು ಪ್ರತ್ಯೇಕಿಸಿ ಹೇಳಿರುತ್ತದೆ. **ಷಡ್ವಿಧಾಶರಣಾಗತಿಃ** ಎಂಬಲ್ಲಿ ಹಾಗೆ ಎಲ್ಲಿ ವಿಭಾಗಿಸಿದೆ ಎಂದಾಕ್ಷೇಪಿಸಿದರೆ, ಅವಿನಾಭೂತವಾಗಿ ಅಙ್ಗಾಙ್ಗಗಳ ಸಮುಚ್ಚಯವು ಬಹುವ್ರೀಹಿಯಿಂದ ಏರ್ಪಟ್ಟ ಅವುಗಳು ಯಾವುವು ಎಂಬುದನ್ನು ತಿಳಿಸಿ ಅಙ್ಗಯುಕ್ತ ಆತ್ಮನಿಕ್ಷೇಪವೇ ಶರಣಾಗತಿ ಎಂದು ಹೇಳಿರುವದರಿಂದ ಅಙ್ಗಾಙ್ಗಗಳ ವಿಭಜನವು ವ್ಯಕ್ತವೆಂದು ಹೇಳಬಹುದು ಆ ಕಾಲದಲ್ಲಿ ಎಂದರೆ ಭರನ್ಯಾಸದ ಸಕೃದನುಷ್ಠಾನದ ಕಾಲದಲ್ಲಿ ಅವಿನಾಭೂತತ್ವವು ಉಂಟು. ಏಕೆಂದರೆ ಇಲ್ಲವಾದರೆ ಅದು ಶರಣಾಗತಿಯೇ ಆಗುವದಿಲ್ಲವೆಂಬ ಭಾವವು. ಆದರೆ ಭರನ್ಯಾಸೋತ್ತರಕಾಲದಲ್ಲೂ ಅನುವರ್ತಿಸಬೇಡವೋ? ಎಂದರೆ ಅನುವರ್ತಿಸತಕ್ಕದ್ದೇನೋ ಯುಕ್ತವು. ಆದರೆ ಆಗ ಮಾಡಿದ ಭರನ್ಯಾಸಕ್ಕೆ ಅಂಗತ್ವೇನ ಅಲ್ಲವು, ಏಕೆಂದರೆ ಅವು ಯಾವುದಾದರೂ ಇಲ್ಲವಾದರೆ ಮೋಕ್ಷಪ್ರಾಪ್ತಿಗೆ ಪ್ರತಿಬಂಧಕವಾಗುವದಿಲ್ಲವು. ಸರ್ವೇಶ್ವರನು ಆ ಅಙ್ಗವು ಪುನಃ ಉದಿಸುವಹಾಗೆ ಮಾಡಿ ದೇಹಾವಸಾನದಲ್ಲಿ ಮುಕ್ತಿಯನ್ನೀಯುವನೆಂಬುದು ತಾತ್ಪರ್ಯವು. ಈ ಮೇಲಿನ ಅಹಿರ್ಬುಧ್ನ್ಯ ವಾಕ್ಯ ಲಕ್ಷ್ಮೀತಂತ್ರವಾಕ್ಯಗಳ ಅರ್ಥಗಳು ವಿಶದವಾಗಿ ಹಿಂದೆ ಪರಿಕರವಿಭಾಗಾಧಿಕಾರದಲ್ಲಿ ಉಪಪಾದಿಸಲ್ಪಟ್ಟಿವೆ. ೯೫೨-೪ ಪುಟಗಳನ್ನು ನೋಡಿ "**ಸ್ವಾಂಗೈ ಪಂಚಭಿರಾವೃತಾಂ**" ಎಂಬುದೂ ಲಕ್ಷ್ಮೀತಂತ್ರವಾಕ್ಯವು, ಸಾಧ್ಯೋಪಾಯ ಶೋಧನಾಧಿಕಾರದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿರುತ್ತದೆ, **ಲೋಕತ್ತಿಲ್** - ಲೋಕದಲ್ಲೂ, **ರಕ್ಷ್ಯದ್ರವ್ಯ ಸಮರ್ಪಣಮರ್ಯಾದೈಕ್ಕುಂ**-ರಕ್ಷಿಸಲು ಯೋಗ್ಯವಾದ ದ್ರವ್ಯವನ್ನು ಸಮರ್ಪಿಸುವ ಮರ್ಯಾದೆಗೂ ಸಹ, **ಪೊರುನ್ದಾದು**-ಸಮಂಜಸವಾದುದಾಗುವದಿಲ್ಲವೆಂದೂ, **ಇವ್ವಙ್ಗಙ್ಗಳುಡೈಯ ಸಕೃತ್ಕರಣಾದಿಪ್ರಕಾರಙ್ಗಳುಮ್**- ಈ ಐದು

**ಪ್ರಪತ್ತಿಃ ಬ್ರಹ್ಮಾಸ್ತ್ರತುಲ್ಯಾ ಯದಿ ಕಥಮ್ ಪರಾಪೇಕ್ಷ ರೂಪಾಙ್ಗ ಸಾಪೇಕ್ಷಾ ?**

**ಬ್ರಹ್ಮಾಸ್ತ್ರಮುಮ್ ಸ್ವಾಙ್ಗ ಸಾಪೇಕ್ಷಮಾಯಿರೇ ಯಿರುಪ್ಪದು ;**

ಅಂಗಗಳೂ ಒಂದೇಸಲ ಭರನ್ಯಾಸಾನುಷ್ಠಾನ ಕಾಲದಲ್ಲಿ ಮಾತ್ರ ಆವಶ್ಯಕವೆಂಬಿವೇ ಮೊದಲಾದ ಪ್ರಕಾರಗಳನ್ನೆಲ್ಲಾ, ಇಲ್ಲಿ "ಆದಿ" ಶಬ್ದದಿಂದ ಪ್ರಯೋಜನವು ಹೇಳಲ್ಪಟ್ಟಿತು, ಮುನ್ನೇ - ಹಿಂದೆ, ಪರಿಕರ ವಿಭಾಗ ಸಾಙ್ಗಪ್ರಪದನಾಧಿಕಾರಗಳಲ್ಲಿ, ಶೊನ್ನೋಮ್ - ಹೇಳಿದೆವು. ರಕ್ಷ್ಯವಾದ ದ್ರವ್ಯವನ್ನು ಶಕ್ತನಲ್ಲಿ ಸಮರ್ಪಿಸುವ ಕಾಲದಲ್ಲಿ ಆನುಕೂಲ್ಯಸಙ್ಕಲ್ಪವೂ, ಪ್ರಾತಿಕೂಲ್ಯವನ್ನು ಬಿಡೋಣವೂ ರಕ್ಷಿಸುತ್ತಾನೆಂಬ ಪೂರ್ಣನಂಬಿಕೆ ಮೊದಲಾದವುಗಳು ಹೇಗೆ ಆವಶ್ಯಕವೋ, ಹಾಗೆಯೇ ಈ ಆತ್ಮಸಮರ್ಪಣ ಕಾಲದಲ್ಲಿ ಮಾತ್ರ ಅವು ಆವಶ್ಯಕವೆಂದು ಭಾವಿಸತಕ್ಕದ್ದೆಂದು ಹಿಂದೆ ೯೭೪ನೆಯ ಪುಟದಲ್ಲಿ ಹೇಳಲ್ಪಟ್ಟಿತು. ಉತ್ತರಕಾಲದಲ್ಲಿ ಅವುಗಳೇನೋ ಇರತಕ್ಕದ್ದು, ಆದರೆ ಅಙ್ಗಗಳ ಹಾಗೆ ಆವಶ್ಯಕವಲ್ಲವೆಂದೂ ಹಿಂದೆ ಸಾಙ್ಗಪ್ರಪದನಾಧಿಕಾರದಲ್ಲಿ ಹೇಳಲ್ಪಟ್ಟಿತು. (೧೧೧೬ನೆಯ ಪುಟವನ್ನು ನೋಡಿ.)

**ಪ್ರಪತ್ತಿಯು ಬ್ರಹ್ಮಾಸ್ತ್ರ ಸಮಾನವಾಗಿರುವಾಗ, ಅನ್ಯಾಪೇಕ್ಷೆ ರೂಪವಾದ ಅಙ್ಗಸಾಪೇಕ್ಷತೆಯು ಹೇಗೆ ?**

ಹಿಂದೆ ಶರಣಾಗತಿಯು ಕಾಲದಲ್ಲಿ ಪ್ರಪತ್ತಿಗೆ ಅನುಷ್ಠಾನಕಾಲದಲ್ಲಿ ಅಙ್ಗಗಳ ಅಪೇಕ್ಷೆಯುಂಟೆಂದು ಸ್ಥಾಪಿಸಲ್ಪಟ್ಟಿತು. ಆದರೆ ಸನತ್ಕುಮಾರ ಸಂಹಿತಾವಾಕ್ಯದಲ್ಲಿ, ಪ್ರಪತ್ತಿಗೆ ಪರಾಪೇಕ್ಷೆಯಿಲ್ಲವೆಂದು ಹೇಳಿದೆಯಲ್ಲಾ ಎಂದರೆ, ಅಙ್ಗಗಳಪೇಕ್ಷೆಯಿಲ್ಲವೆಂದು ಆ ಪ್ರಮಾಣವು ಹೇಳುವದಿಲ್ಲವು, ಆದುದರಿಂದ ಅದರ ಸರಿಯಾದ ಅಭಿಪ್ರಾಯವೇನೆಂಬುದನ್ನು ಉಪದೇಶಿಸುತ್ತಾರೆ. ಬ್ರಹ್ಮಾಸ್ತ್ರಕ್ಕೆ ಅಙ್ಗಗಳ ಅಪೇಕ್ಷೆ ಹೇಗೆ ಇಲ್ಲವೋ ಹಾಗೆ ಪ್ರಪತ್ತಿಗೂ ಅಙ್ಗಗಳ ಅಪೇಕ್ಷೆಯು ಬೇಕಿಲ್ಲವೆಂಬುದು ಪೂರ್ವಪಕ್ಷವು, ಅದನ್ನು ಖಂಡಿಸುತ್ತಾರೆ :—ಬ್ರಹ್ಮಾಸ್ತ್ರಮುಮ್- ಬ್ರಹ್ಮಾಸ್ತ್ರವೂ ಕೂಡ, ಸ್ವಾಙ್ಗಸಾಪೇಕ್ಷಮಾಯಿರೇ – ತನಗೆ ಬೇಕಾದ ಅಙ್ಗಗಳ ಸಾಪೇಕ್ಷವಾಗಿಯೇ, ಯಿರುಪ್ಪದು – ಇರುತ್ತದೆ. ಬ್ರಹ್ಮಾಸ್ತ್ರಬಂಧನವು ಇತರವಿಧ ಬಂಧನವನ್ನು ಸಹಿಸುವದಿಲ್ಲವೆಂದೂ, ಇತರ ಬಂಧನ

ಉಂಟಾದರೆ ತನಗೆ ಅವಮರ್ಯಾದೆಯಾಯಿತೆಂದು ತಿಳಿದು ಬಿಟ್ಟುಬಿಡುತ್ತ ದೆಂದು "ಅಸ್ತ್ರಬಂಧಸ್ಸಚಾನ್ಯಂಹಿ ನಬಂಧ ಮನುವರ್ತತೇ" (ರಾಮಾ. ಸುಂ. ೪೮. ೪೯.) ಎಂದು ಹೇಳಲ್ಪಟ್ಟಿರುವದೇನೋ ಸತ್ಯವು. ಹಾಗೆಯೇ ಇದಕ್ಕೆ ಉಪಪಾದನೆಯು ಉಂಟು. ಹೇಗೆಂದರೆ:—

ರಾಕ್ಷಸಾನಾ ಮವಿಸ್ರಂಭಾ ದಾಂಜನೇಯಸ್ಯ ಬಂಧನೇ ।
ಯಥಾ ವಿಗಳಿತಾ ಸದ್ಯ ಸ್ತ್ವನೋಘಾಪ್ಯ ಸ್ತ್ರಬಂಧನಾ ।
ತಥಾಪುಂಸಾ ಮವಿಸ್ರಂಭಾತ್ಪ್ರಪತ್ತಿಃ ಪ್ರಚ್ಯುತಾ ಭವೇತ್ ॥

ರಾಕ್ಷಸರ ಅವಿಶ್ವಾಸದಿಂದ ಆಂಜನೇಯನು ಬ್ರಹ್ಮಾಸ್ತ್ರದಿಂದ ಬಂಧಿಸಲ್ಪಟ್ಟಿರುವದು ಹೇಗೆ ಬಿಟ್ಟುಹೋಗಿ ಆ ಅಸ್ತ್ರಬಂಧನವು ವ್ಯರ್ಥವಾದುದು ಆಯಿತೋ, ಹಾಗೆಯೇ ಪ್ರಪನ್ನರ ಅವಿಶ್ವಾಸದಿಂದ ಪ್ರಪದನವೂ ಕೂಡ ಜಾರಿಹೋದುದೂ ಎಂದರೆ ವ್ಯರ್ಥವಾದುದೂ ಆಗಬಹುದೆಂದೂ ಹೇಳಲ್ಪಟ್ಟಿರುತ್ತದೆ. ಆದುದರಿಂದ ಈ ಪ್ರಪತ್ತಿ ಪರಿಕರಗಳ ಅಪೇಕ್ಷೆಯು ಬೇಕಾಗಿಲ್ಲವು ಎಂದು ಪೂರ್ವಪಕ್ಷವು. ಇದಕ್ಕೆ ಸಮಾಧಾನವನ್ನು ಶ್ರೀ ದೇಶಿಕರು ಉಪದೇಶಿಸಿರುವದೇನೆಂದರೆ, ಬ್ರಹ್ಮಾಸ್ತ್ರಕ್ಕೂ ಅಭಿಮಂತ್ರಣ ಧ್ಯಾನಾದಿಗಳು ಅಙ್ಗಗಳಾಗಿವೆ. ಆದರೆ ಇತರ ಸಹಾಯಗಳು ಯಾವುದೂ ಕೂಡದು ಎಂಬಭಿಪ್ರಾಯವು; ಅದು ಬಂಧಿಸಿರುವಾಗಲೇ ಇನ್ನೊಂದು ತುಚ್ಛವಾದುದನ್ನು ತಂದು ಬಂಧಿಸಕೂಡದೆಂಬ ಭಾವವು, ಆಂಜನೇಯನ ನಿಗ್ರಹವು ಇನ್ನು ಯಾವುದರಿಂದಲೂ ಸಾಧ್ಯವಿಲ್ಲದಿರಲು, ಇಂದ್ರಜಿತುವು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಆತನನ್ನು ಬಂಧಿಸಿದನು, ಅದು ಬಂಧಿಸಿರುವಾಗಲೇ, ಅಜ್ಞರಾದ ರಾಕ್ಷಸರು "ಶೇನ ವಲ್ಕೇನ" ಆ ಶಣಬು ಹಗ್ಗದಿಂದ ಆತನನ್ನು ಬಂಧಿಸಿದರು; ಆಗ ಬಹ್ಮಾಸ್ತ್ರಕ್ಕೆ ಅವಮರ್ಯಾದೆಯಾದುದರಿಂದ ಅದು ಬಂಧನವನ್ನು ಬಿಟ್ಟುಬಿಟ್ಟಿತು. ಆದರೆ ಬ್ರಹ್ಮಾಸ್ತ್ರಪ್ರಯೋಗಕ್ಕೆ ಬೇಕಾದ "ತತಸ್ಸ್ವಾಯಂಭುವೈರ್ಮಂತ್ರೈ ರ್ಬ್ರಹ್ಮಾಸ್ತ್ರ ಮಭಿಮಂತ್ರಿತಂ" (ರಾ. ಸುಂ. ೪೮. ೪೧.) ಎಂದು, ಹೇಳಿರುವಹಾಗೆ ಅಙ್ಗಗಳು ಬೇಕೇಬೇಕು, ಅವು ಇಲ್ಲದಿದ್ದರೆ ಬ್ರಹ್ಮಾಸ್ತ್ರ ಪ್ರಯೋಗವು ಕಾರ್ಯಕಾರಿಯಾಗದೆಂಬ ಭಾವವು. ಬ್ರಹ್ಮಾಸ್ತ್ರಕ್ಕೆ ಹೇಗೆ ಅಙ್ಗಗಳ ಆವಶ್ಯಕತೆಯುಂಟೋ, ಹಾಗೆಯೇ ಪ್ರಪತ್ತಿಗೂ ಸಹ ಅಙ್ಗಗಳು ಆವಶ್ಯಕವೆಂಬ ಭಾವವು. ಬ್ರಹ್ಮಾಸ್ತ್ರದ ಬಂಧನವು ಹೇಗೆ ಇತರಾಸ್ತ್ರಬಂಧವನ್ನಾಗಲಿ ಶಣವಲ್ಕ ಬಂಧವನ್ನಾಗಲಿ ಸಹಿಸದೋ, ಅಂತಹ ತುಚ್ಛವಾದ ಬಂಧನದಿಂದ ಬ್ರಹ್ಮಾಸ್ತ್ರವು ಹೇಗೆ ವ್ಯರ್ಥವಾಗುತ್ತದೋ, ಹಾಗೆಯೇ ಪ್ರಪತ್ತಿಯೂ ಅನ್ಯದೇವತಾಶ್ರಯಣ ಮೊದಲಾದವುಗಳಿಂದ ವ್ಯರ್ಥವಾಗುತ್ತದೆಂಬ ಭಾವವೂ ತೋರಿಬರುತ್ತದೆ. ಪುನಃ ಪೂರ್ವ ಪಕ್ಷಿಯು ಸನತ್ಕುಮಾರ ಸಂಹಿತಾ ವಾಕ್ಯವನ್ನುದಾ

**ಅಗ್ಯೆಯೊಲ್ "ಪ್ರಪತ್ತೇಃ ಕ್ವಚಿದಪ್ಯೇವಂ ಪರಾಪೇಕ್ಷಾ ನವಿದ್ಯತೇ। ಸಾಹಿ ಸರ್ವತ್ರ ಸರ್ವೇಷಾಂ ಸರ್ವಕಾಮಫಲಪ್ರದಾ" ಎನ್ರದುವುಮ್ ಧರ್ಮಾಂತರ ನೈರಪೇಕ್ಷ್ಯಮ್ ಶೊನ್ನಪಡಿ. ಇಪ್ಪಡಿಯಲ್ಲಾದಪೋದು**

---

ಹರಿಸಿ ಅದರಲ್ಲಿ ಪ್ರಪತ್ತಿಗೆ ಯಾವುದರ ಅಪೇಕ್ಷೆಯೂ ಇಲ್ಲವೆಂದು ಹೇಳಿದೆಯಲ್ಲಾ ಎಂದು ಮೂದಲಿಸಬಹುದೆಂದು ಭಾವಿಸಿ, ಅದರ ತಾತ್ಪರ್ಯವು, ಅಙ್ಗಗಳು ಬೇಡವೆಂದಲ್ಲವು; ಇತರ ಉತ್ಕೃಷ್ಟಧರ್ಮಗಳು ಅಧಿಕಾರಿಯಲ್ಲಿರಬೇಕೆಂಬ ನಿಯಮ ವೇನೂ ಇಲ್ಲವೆಂದೂ, ಅಧಿಕಾರಿಯ ಜಾತಿ, ಕುಲ, ಲಿಂಗ, ಗುಣ, ಕ್ರಿಯ, ದೇಶ,ಕಾಲ, ಅವಸ್ಥೆ ಮೊದಲಾದ ತಾರತಮ್ಯಗಳೊಂದನ್ನೂ ಇದು ಅಪೇಕ್ಷಿಸುವದಿಲ್ಲ ವೆಂಬುದೇ ಅಭಿಪ್ರಾಯವೆಂದು ಮುಂದೆ ತಿಳಿಸುತ್ತಾರೆ:— **ಪ್ರಪತ್ತೇಃ** - ಭರನ್ಯಾಸ **ರೂಪವಾದ ಉಪಾಯಕ್ಕೆ, ಏವಂ** - ಈ ಭಕ್ತ್ಯುಪಾಯದಲ್ಲಿ ಅಧಿಕಾರಿಯು ತ್ರೈವ ರ್ಣಿಕನೇ ಆಗಿರಬೇಕು ಎಂಬ ನಿಯಮವಿರುವಹಾಗೆ, ಅಲ್ಲದೆ, **ಕ್ವಚಿದಪಿ**-ಒಂದು ಸ್ಥಳದಲ್ಲಾಗಲಿ, **"ಪರಾಪೇಕ್ಷೆಯು"** ಎಂದರೆ ಅಙ್ಗಗಳಲ್ಲದೆ ಅಧಿಕಾರಿಯಲ್ಲಿ ಇತರ ಧರ್ಮಗಳ ಅಪೇಕ್ಷೆಯು, **ನವಿದ್ಯತೇ** - ಇರುವದಿಲ್ಲವು; ಈ ಅಭಿಪ್ರಾಯವನ್ನೇ ಉತ್ತರಾರ್ಧದಿಂದ ವಿಶದೀಕರಿಸುತ್ತಾರೆ, **ಸಾಹಿ**-ಆ ಪ್ರಪತ್ತಿಯಾದರೋ, **ಸರ್ವತ್ರ**- ಎಲ್ಲಾ ಪ್ರದೇಶದಲ್ಲೂ, **ಸರ್ವೇಷಾಂ** - ತ್ರೈವರ್ಣಿಕರು ಮೊದಲುಗೊಂಡು ಶೂದ್ರ ಚಂಡಾಲರು, ಸ್ತ್ರೀಪುರುಷರು, ಹೀಗೆ ಎಲ್ಲರಿಗೂ, **ಸರ್ವಕಾಮ ಫಲಪ್ರದಾ** - ಧರ್ಮಾರ್ಥಕಾಮಮೋಕ್ಷ ರೂಪ ಚತುರ್ವಿಧ ಪುರುಷಾರ್ಥಗಳನ್ನೂ ಕೊಡತಕ್ಕದ್ದು. **ಸರ್ವತ್ರ** ಎಂದು ಹೇಳಿರುವದರಿಂದ ಯೋಗಾಭ್ಯಾಸಕ್ಕೆ ಬೇಕಾದ ಹಾಗೆ ದಿವ್ಯಕ್ಷೇತ್ರಗಳಾದ ನೈಮಿಶಾರಣ್ಯ ಕುರುಕ್ಷೇತ್ರಾದಿಗಳಾಗಬೇಕೆಂಬ ನಿಯಮ ವಿಲ್ಲವೆಂಬ ಭಾವವು. ಆದುದರಿಂದ **"ಕ್ವಚಿದಪಿ ಪರಾಪೇಕ್ಷಾ ನವಿದ್ಯತೇ"** ಎಂಬುದರ ಅಭಿಪ್ರಾಯವೇನೆಂಬುದನ್ನು ತಿಳಿಸುತ್ತಾರೆ.— **ಎನ್ರದುವುಮ್** - ಎಂದು ಸಂಹಿತೆಯಲ್ಲಿ ಹೇಳಿರುವುದು, **ಧರ್ಮಾಂತರ ನೈರಪೇಕ್ಷ್ಯಂ ಶೊನ್ನಪಡಿ**- ಅಧಿಕಾರಿಯಲ್ಲಿ ಪರಿಕರರೂಪ ವಿಶೇಷಣಗಳಲ್ಲದೆ ಇತರ ವಿಶೇಷಣಗಳು ಯಾವುವೂ ಬೇಕಿಲ್ಲವೆಂದು ಹೇಳಿದಂತೆ ಭಾವಿಸತಕ್ಕದ್ದು; ಆ ಧರ್ಮಾಂತರಗಳು ಯಾವುವು ಎಂದರೆ **"ನಜಾತಿ ಭೇದಂ ನಕುಲಂ ನಲಿಙ್ಗಂ ನಗುಣಕ್ರಿಯಾಃ । ನ ದೇಶಕಾಲೌ ನಾವಸ್ಥಾಂ ಯೋಗೋಹ್ಯಯಮಪೇಕ್ಷತೇ"** ಎಂಬ ಶ್ಲೋಕ ದಲ್ಲಿ ಹೇಳಿರುವ ಧರ್ಮಗಳು ಯಾವುವೂ ಬೇಕಿಲ್ಲವು, ಭಕ್ತಿಯೋಗಕ್ಕಾದರೋ ಪರಾಪೇಕ್ಷೆಗಳುಂಟು; ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಿಂದ ಸೇರಿದ ಕರ್ಮ

ಯೋಗದ, ತ್ರೈವರ್ಣಿಕಾಧಿಕಾರತ್ವವೂ, ಪರಿಶುದ್ಧಸ್ಥಳದಲ್ಲಿ ಸಾಙ್ಗಯೋಗಾಭ್ಯಾಸವೂ, ಮೊದಲಾದವುಗಳ ಅಪೇಕ್ಷೆಯುಂಟು, ಈ ಪ್ರಪತ್ತಿಗಾದರೋ ತಾತ್ಕಾಲಿಕ ಅಙ್ಗಗಳವಿನಾ ಬೇರೆ ಇನ್ನು ಯಾವ ವಿಶೇಷಣಗಳ ಅಪೇಕ್ಷೆಯೂ ಅದಕ್ಕಿಲ್ಲವೆಂಬ ಭಾವವು. ಈ ಪ್ರಮಾಣವು, ಪರಾಪೇಕ್ಷೆಯು ಈ ಪ್ರಪತ್ತಿಗಿಲ್ಲವೆಂದು ಹೇಳಿರುವ ಸಂದರ್ಭದಲ್ಲಿ, ಪರಾಪೇಕ್ಷೆಯು ಯಾವುದು ಎಂದು ನಿರ್ಧರಿಸಬೇಕಾಗಿರುತ್ತದೆ. "ಏವಂ" ಎಂದಿರುವದರಿಂದಲೂ, ಉತ್ತರಾರ್ಧವು ಪೂರ್ವಾರ್ಧದ ಅರ್ಥವನ್ನೇ ಸಮರ್ಥನೆ ಮಾಡುವದರಿಂದಲೂ ನಿರ್ಧರಿಸಬಹುದು. ಭಕ್ತಿಮಾರ್ಗಕ್ಕೆ ಪರಾಪೇಕ್ಷೆ ಇರುವಹಾಗೆ ಇದಕ್ಕೆ ಬೇಕಿಲ್ಲವೆಂದರ್ಥಮಾಡಿದರೆ ಪರಿಕರಗಳ ಆವಶ್ಯಕತೆಯು ಬೇಡವೆಂದಾಗಲಿಲ್ಲವು. ಈ ವಿಷಯುವನ್ನು ಸಾರಪ್ರಕಾಶಿಕಾಯವರು ಒಂದು ನಿದರ್ಶನಮೂಲಕ ಬಹು ಚನ್ನಾಗಿ ಉಪಪಾದಿಸಿ ಹೇಳಿರುತ್ತಾರೆ. ಹೇಗೆಂದರೆ :—"ನಿಷಿದ್ಧಭಕ್ಷಣಂಜೈಹ್ಮ್ಯ ಮುತ್ಕರ್ಷೇಚ ವಚೋನೃತಂ । ರಜಸ್ವಲಾ ಮುಖಾಸ್ವಾದ ಸ್ಸುರಾಪಾನ ಸಮಾನಿತು" ಎಂಬಲ್ಲಿ "ನಿಷಿದ್ಧಭಕ್ಷಣಂ'' ಕೂಡದೆಂದು ನಿಷೇಧಿಸಲ್ಪಟ್ಟಿದ್ದರೆ, ಆ ನಿಸಿದ್ಧವಸ್ತುಗಳು ಯಾವುವು ಎಂಬ ಸಂದರ್ಭದಲ್ಲಿ, ಛತ್ರಾಕಂವಿಡ್ವರಾಹಂಚಲಶುನಂಗ್ರಾಮಕುಕ್ಕುಟಂ । ಪಲಾಂಡುಂ ಗೃಂಜನಂಚೈವ ಮತ್ಯಾಜಗ್ಧ್ವಾಪತೇದ್ದ್ವಿಜಃ ‖ ಎಂಬ ಬೇರೆ ಪ್ರಮಾಣದ ಮೂಲಕ ಹೇಗೆ ಸಮನ್ವಯಮಾಡಿಕೊಳ್ಳಬೇಕೋ, ಹಾಗೆಯೇ ಈ ಸಂದರ್ಭದಲ್ಲೂ ಪ್ರಪತ್ತಿಗೆ "ಪರಾಪೇಕ್ಷಾ ನವಿದ್ಯತೇ" ಎಂದು ಹೇಳಿದರೆ, ಆ ಪರಾಪೇಕ್ಷಾ ಎಂತಾದ್ದೆಂಬ ವಿಮರ್ಶೆಯಲ್ಲೂ, "ಪ್ರಪತ್ತಿಂ ಸರ್ವಫಲದಾಂ ಸರ್ವೋಪಾಯಾನಪೇಕ್ಷಿಣೀಂ" "ನರಸ್ಯ ಬುದ್ಧಿದೌರ್ಬಲ್ಯಾ ದುಪಾಯಾಂತರಮಿಷ್ಯತೇ" ಎಂಬ ಬೇರೇ ಪ್ರಮಾಣಗಳ ಬಲದಿಂದ, ಉಪಾಯಾಂತರಗಳು ಯಾವುದನ್ನೂ ಈ ಪ್ರಪತ್ತಿಯು ಅಪೇಕ್ಷಿಸುವದಿಲ್ಲವೆಂದು ಅರ್ಥಮಾಡುವದು ಸಮಂಜಸವಾದುದೆಂದು ಹೇಳಿರುತ್ತಾರೆ. "ಪ್ರಪತ್ತಿಯು ಸಮಸ್ತ ಫಲಗಳನ್ನೂ ಕೊಡುವಂತಾದ್ದು ಇತರ ಸಮಸ್ತ ಉಪಾಯಗಳನ್ನೂ ಅಪೇಕ್ಷಿಸುವದಿಲ್ಲವು ; ಆದರೆ ಮನುಷ್ಯನ ಅವಿಶ್ವಾಸರೂಪ ಬುದ್ಧಿಯ ದೌರ್ಬಲ್ಯದಿಂದ, ಉಪಾಸನಾದಿ ಬೇರೆ ಉಪಾಯವು ಅಪೇಕ್ಷಿಸಲ್ಪಡುತ್ತದೆ" ಎಂಬುದು ಈ ಮೇಲಿನ ಪ್ರಮಾಣಗಳ ತಾತ್ಪರ್ಯವು.

ಇದೀಗ ಸರಿಯಾದ ಸಮಾಧಾನವು ಹೀಗೆ ಅಭಿಪ್ರಾಯ ವೆಂದು ಭಾವಿಸದೆ ಹೋದರೆ ಪೂರ್ವಪಕ್ಷಿಗಳ ಇಷ್ಟಾಪತ್ತಿಗೂ ಕುಂದಕವೆಂದು ಹೇಳುತ್ತಾರೆ ಪೂರ್ವಪಕ್ಷಿಗಳು ಮಹಾವಿಶ್ವಾಸಮಾತ್ರ ಪ್ರಪತ್ತಿಗೆ ಆವಶ್ಯಕವೆಂದು ಹೇಳುವರು. ಈ ಪ್ರಮಾಣಕ್ಕೆ ನೀವು ಹೇಳುವ ಹಾಗೆ ಅರ್ಥಮಾಡಿಕೊಂಡು ಆನುಕೂಲ್ಯ ಸಙ್ಕಲ್ಪ

**ಇವರ್‌ಗಳಿಶೈನ್ನ ಮಹಾವಿಶ್ವಾಸತ್ತೈಯುಮ್ ಇಕ್ಕಟ್ಟಳೈಯಿಲೆ ಸಂಭಾವಿತ ಸ್ವಭಾವಮಾಕ್ಕಲಾಮ್.**

**ಮಹಾ ವಿಶ್ವಾಸೋಽಪಿನಾಙ್ಗಮಿತಿವಾದಸ್ಯ ನಿರಾಸಃ**

**ಇವ್ವವಕಾಶತ್ತಿಲೇ ವೇರೇ ಶಿಲರ್, ಆಸ್ತಿಕನುಕ್ಕು ಶಾಸ್ತ್ರಾರ್ಥ ವಿಶ್ವಾಸಮ್ ಪಿರಕ್ಕುಮದುಕ್ಕು ಮೇಲ್ಪಟ್ಟ ಮಹಾವಿಶ್ವಾಸ ಮೆನ್ರೊನ್ರುಣ್ಡೋ?**

---

ಪ್ರಾತಿಕೂಲ್ಯ ವರ್ಜನ, ಇವುಗಳು ಬೇಕಾಗಿಲ್ಲವೆಂದು ಅಭಿಪ್ರಾಯಪಟ್ಟರೆ, ಮಹಾವಿಶ್ವಾಸವೂ ಬೇಡವೆಂದಾಗಿ, ಅದು ಪ್ರಪನ್ನನಲ್ಲಿ ತೋರಿಬಂದರೆ ಅದೂ ಕೂಡ ನಿಮ್ಮ ಅಭಿಪ್ರಾಯದಹಾಗೆ ಸಂಭಾವಿತ ಸ್ವಭಾವವೆಂದರೆ ಪ್ರಾಪ್ತವಾದ ಧರ್ಮವೆಂದು ಹೇಳಬೇಕಾಗುತ್ತದೆಂದು ತಿಳಿಸುತ್ತಾರೆ. **ಇಪ್ಪಡಿಯಲ್ಲಾದಪ್ಪೋದು**-ಹೀಗೆ ಆನುಕೂಲ್ಯಾದಿ ಅಙ್ಗಗಳು ಆವಶ್ಯಕವೆಂದೂ, ಪರಾಪೇಕ್ಷೆ ಬೇಡವೆಂದರೆ ಉಪಾಯಾಂತರಾದಿಗಳು ಬೇಡವೆಂದೂ, ಅರ್ಥಮಾಡದಿದ್ದರೆ, **ಇವರ್‌ಗಳಿಶೈನ್ನ** – ಈ ಪೂರ್ವ ಪಕ್ಷಿಗಳು ಅಪೇಕ್ಷಿಸುವ, ಎಂದರೆ ಆವಶ್ಯಕವೆಂದು ಹೇಳುವ, **ಮಹಾವಿಶ್ವಾಸತ್ತೈಯುಮ್** - ಮಹಾವಿಶ್ವಾಸವೆಂಬ ಅಙ್ಗವನ್ನೂ, **ಇಕ್ಕಟ್ಟಳೈಯಿಲೇ** - ಈ ನ್ಯಾಯದಪ್ರಕಾರವೇ, ಎಂದರೆ ಆನುಕೂಲ್ಯಾದಿಗಳು ನೀವು ಹೇಳುವಹಾಗೆ ಸಂಭಾವಿತ ಸ್ವಭಾವಗಳಾದರೆ, ಅದೇ ನ್ಯಾಯದಪ್ರಕಾರ, **ಸಂಭಾವಿತ ಸ್ವಭಾವಮಾಕ್ಕಲಾಮ್** - ಸಂಭಾವಿತ ಸ್ವಭಾವವೆಂದೇ ಹೇಳಿಬಿಡಬಹುದು. ಮಹಾವಿಶ್ವಾಸವು ಆವಶ್ಯಕವು, ಪ್ರಾಪ್ತವಾದ ಧರ್ಮವಲ್ಲವು ಎಂದು ಹೇಳುವದಾದರೆ, ಆನುಕೂಲ್ಯಾದಿಗಳೂ ಕೂಡ ಸಂಭಾವಿತ ಸ್ವಭಾವವಲ್ಲವು, ಆವಶ್ಯಕವಾದ ಅಙ್ಗಗಳೇ ಎಂಬ ಭಾವವು.

**ಮಹಾವಿಶ್ವಾಸವೂ ಅಙ್ಗವಲ್ಲವೆಂಬ ವಾದದ ನಿರಸನವು.**

ಮೊದಲು ಮಹಾವಿಶ್ವಾಸವು ಅಙ್ಗವಾಗಲಾರದೆಂದು ಹೇಳುವವರ ಪಕ್ಷವನ್ನು ಅನುವಾದ ಮಾಡುತ್ತಾರೆ. **ಇವ್ವವಕಾಶತ್ತಿಲೇ** - ಇದೇ ಸಂದರ್ಭದಲ್ಲೇ, **ವೇರೇ ಶಿಲರ್** - ಇನ್ನು ಕೆಲವರು, ಮೇಲೆ ಆಕ್ಷೇಪಿಸಿದವರಲ್ಲದೆ ಬೇರೇ ಕೆಲವರು, **ಆಸ್ತಿಕನುಕ್ಕು** - ವೇದ, ಇತರ ಶಾಸ್ತ್ರ, ಪರಬ್ರಹ್ಮ ಮೊದಲಾದವುಗಳಲ್ಲಿ ಆಸ್ತಿಕ್ಯ ಬುದ್ಧಿಯುಳ್ಳವನಿಗೆ, **ಶಾಸ್ತ್ರಾರ್ಥವಿಶ್ವಾಸಮ್ ಪಿರಕ್ಕುಮ್** - ಶಾಸ್ತ್ರವು ಹೇಳಿರುವದರಲ್ಲಿ ವಿಶ್ವಾಸವು ಹುಟ್ಟಿಯೇ ಹುಟ್ಟುತ್ತದೆ, **ಅದಕ್ಕು ಮೇಲ್ಪಟ್ಟ** -

**ಆಗೈಯಾಲ್ ಇದುವುಮ್ ಸರ್ವಶಾಸ್ತ್ರಾರ್ಥ ಸಾಧಾರಣಮಾ ಮತ್ತನ್ನೈ ಪೋಕ್ಕಿ, ಪ್ರಪತ್ತಿಕ್ಕು ವಿಶೇಷಿತ್ತು ಅಜ್ಞಮಾಗ ವತ್ತೋವೆನ್ರು ನಿನೈಪ್ಪಾರ್‌ಗಳ್. ಅದುವುಮ್, (೧) "ನವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿ ವಿಶ್ವಸೇತ್" ಇತ್ಯಾದಿಗಳಿಲೇ ವಿಶ್ವಾಸ ತಾರತಮ್ಯಮ್ ಪ್ರಸಿದ್ಧಮಾಗೈಯಾಲುಮ್, ಇವ್ವಿಡತ್ತಿಲ್ ಅತಿಶಯಿತ ವಿಶ್ವಾಸಮಜ್ಞಮೆನ್ಗಿರ ವಚನತ್ತಾಲುಮ್ ಪರಿಹೃತಮ್.**

---

ಆ ಶಾಸ್ತ್ರಾರ್ಥವಿಶ್ವಾಸಕ್ಕೂ ಉತ್ಕೃಷ್ಟವಾದ, ಮಹಾವಿಶ್ವಾಸಂ ಎನ್ರು-ಎಂಬದಾಗಿ, ಒನ್ರುಂಡೋ-ಒಂದುಂಟೋ? **ಆಗೈಯಾಲ್**-ಆ ಕಾರಣದಿಂದ ಎಂದರೆ ಶಾಸ್ತ್ರಾರ್ಥ ವಿಶ್ವಾಸವಲ್ಲದೆ ಬೇರೇ ಅಧಿಕವಿಶ್ವಾಸವೆಂಬುದು ಇಲ್ಲವಾದುದರಿಂದ, **ಇದುವುಮ್** - ಪ್ರಪತ್ತಿಗೆ ಅಜ್ಞವೆಂದು ಹೇಳುವ ಈ ಮಹಾ ವಿಶ್ವಾಸವೂ ಕೂಡ, **ಸರ್ವಶಾಸ್ತ್ರಾರ್ಥ ಸಾಧಾರಣಮಾಮ್** - ಸರ್ವ ಶಾಸ್ತ್ರಾರ್ಥದಲ್ಲೂ ವಿಶ್ವಾಸ ಹೇಗೋ, ಹಾಗೆಯೇ ಸಾಧಾರಣವಾದುದೇಯಾಗುತ್ತದೆ, **ಅತ್ತನ್ನೈ ಪೋಕ್ಕಿ**-ಅಷ್ಟಲ್ಲದೆ, **ಪ್ರಪತ್ತಿಕ್ಕು ವಿಶೇಷಿತ್ತು** - ಪ್ರಪತ್ತಿಗೆ ವಿಶೇಷಿಸಿ ಎಂದರೆ ಮಹಾವಿಶ್ವಾಸವೆಂದು ಪ್ರಪತ್ತಿಗೆ ಬೇರೆ ಎಂದು ವಿಶೇಷಿಸಿ, **ಅಜ್ಞಮಾಗವತ್ತೋ** - ಅಜ್ಞವು ಹೇಗಾಗುತ್ತದೋ? ಎನ್ರು ನಿನೈಪ್ಪಾರ್‌ಗಳ್ - ಎಂದು ಯೋಚಿಸುವರು, ಎಂದು ಶಜ್ಕಿಸುವರು ಎಂಬ ಭಾವವು. ಈ ಶಜ್ಕೆಯನ್ನು ಮುಂದಿನ ವಾಕ್ಯದಿಂದ ಖಂಡಿಸುತ್ತಾರೆ:—ಶಾಸ್ತ್ರದಲ್ಲಿ ಯಾವಾಗ ಪ್ರಪನ್ನನಿಗೆ ವಿಶ್ವಾಸ ಉಂಟಾಯಿತೋ ಅದೇ ಸಾಕು. ಇನ್ನು ಬೇರೇ ಮಹಾವಿಶ್ವಾಸ ಒಂದು ಅಜ್ಞವಾಗಿ ಪ್ರಪತ್ತಿಗೆ ಆವಶ್ಯಕವೆಂಬುದು ಹೇಗೆ? ಶಾಸ್ತ್ರದಲ್ಲಿ ಇರುವ ವಿಶ್ವಾಸವೇ ಸಾಕಾಗಿರುತ್ತದೆಂಬುದು ಪೂರ್ವಪಕ್ಷವು. **ಅದುವುಮ್** - ಆ ಪೂರ್ವಪಕ್ಷವೂ ಸಹ, (೧) "**ಅವಿಶ್ವಸ್ತೇ** - ವಿಶ್ವಾಸವಿಡಲು ಯೋಗ್ಯನಲ್ಲದವನಲ್ಲಿ, **ನವಿಶ್ವಸೇತ್** - ವಿಶ್ವಾಸವನ್ನಿಡಬಾರದು, **ವಿಶ್ವಸ್ತೇ** - ವಿಶ್ವಾಸವಿಡಬಹುದಾದವನಲ್ಲಿ, **ನಾತಿವಿಶ್ವಸೇತ್** - ಹೆಚ್ಚು ವಿಶ್ವಾಸವನ್ನಿಡಬಾರದು", **ಇತ್ಯಾದಿಗಳಿಲೇ** - ಇವೇ ಮೊದಲಾದ ಪ್ರಮಾಣಗಳಲ್ಲಿ, ವಿಶ್ವಾಸ ತಾರತಮ್ಯವು ಪ್ರಸಿದ್ಧವಾದುದರಿಂದಲೂ, **ಇವ್ವಿಡತ್ತಿಲ್** - ಈ ಸಂದರ್ಭದಲ್ಲೂ, **ಅತಿಶಯಿತ ವಿಶ್ವಾಸಮಜ್ಞಮ್** - ಮಹಾ ವಿಶ್ವಾಸವು ಅಜ್ಞವು, ಎಜ್ಗಿರ **ವಚನತ್ತಾಲುಮ್** - ಎಂದು

---

(೧) ಭಾರ. ಉ. ೩೮. ೯.

ಹೇಳುವ ಪ್ರಮಾಣ ಬಲದಿಂದಲೂ, **ಪರಿಹೃತಮ್**-ಪರಿಹಾರವನ್ನು ಹೊಂದಿತು. ಆ **ಪೂರ್ವಪಕ್ಷ** ಪರಿಹಾರಕ್ಕೆ ಎರಡು ಕಾರಣಗಳನ್ನು ಹೇಳಿದರು :—

(೧) ವಿಶ್ವಾಸದಲ್ಲಿ ತಾರತಮ್ಯ ಉಂಟು. ಪೂರ್ವಪಕ್ಷಿಯು ಹೇಳಿದಹಾಗೆ ವಿಶ್ವಾಸವು ಶಾಸ್ತ್ರಾರ್ಥದಲ್ಲಿನ ಹಾಗೆ ಸಾಧಾರಣವಾದುದೇ ಎಲ್ಲಾ ಸಂದರ್ಭ ದಲ್ಲೂ ಎಂದು ಹೇಳಿದುದು ಸರಿಯಲ್ಲವು. ಇದಕ್ಕೆ ಉದ್ಯೋಗ ಪರ್ವವಾಕ್ಯ ವನ್ನು ಪ್ರಮಾಣವಾಗಿ ಉದಾಹರಿಸಿದರು. ಆದರಿಂದ ವಿಶ್ವಾಸ ತಾರತಮ್ಯವು ಉಂಟೆಂಬುದು ಸಿದ್ಧವು. ವಿಶ್ವಾಸ ತಾರತಮ್ಯವೇ ಇಲ್ಲವೆಂಬ ಪಕ್ಷವು ಇಲ್ಲಿ ಖಂಡಿಸಲ್ಪಟ್ಟಿತು

(೨) ಪ್ರಪತ್ತಿಗೆ ಮಹಾವಿಶ್ವಾಸವು ಅಙ್ಗವೆಂಬುದಕ್ಕೆ ಪ್ರಮಾಣವೇ ಇದೆ. ಪ್ರಮಾಣ ಶರಣರಾದ ನಮಗೆ ಇಂತಹ ಶಙ್ಕೆಗೆ ಕಾರಣವೇ ಇಲ್ಲವೆಂಬ ಭಾವವೂ ದ್ಯೋತಿತವು "**ರಕ್ಷಿಷ್ಯತೀತಿ ವಿಶ್ವಾಸಃ**"ಎಂಬುದು ಸಾಧಾರಣವಿಶ್ವಾಸವಾಗುವದಿ ಲ್ಲವು, ಅದು ಮಹಾವಿಶ್ವಾಸವೆಂಬ ಭಾವವು. ಭಗವಚ್ಛಾಸ್ತ್ರದಲ್ಲಿ "**ಸೌಲಭ್ಯೇದೀ ಭಜತೇ ಕಶ್ಚಿತ್ತಂ ಪರಮಾಸ್ತಿಕಃ**" ಎಂದು ಹೇಳಿರುವದರಿಂದ ಮಹಾವಿಶ್ವಾಸ ಯುಕ್ತನೇ ಪ್ರಪನ್ನನಾಗಿ ಶರಣಾಗತನಾಗುವನೆಂದು ಹೇಳಲ್ಪಟ್ಟಿರುತ್ತದೆ. ಮತ್ತು "**ರಕ್ಷಿಷ್ಯತ್ಯನುಕೂಲಾನ್ನ ಇತಿ ಯಾ ಸುದೃಢಾಮತಿಃ । ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಂ । ತದೇಕೋಪಾಯತಾಯಾಚ್ಞಾ ಪ್ರಪತ್ತಿಶ್ಶರಣಾಗತಿಃ**" ಎಂಬ ಭರತಮುನಿಯ ವಾಕ್ಯವು ಮುಖ್ಯ ಪ್ರಮಾಣವು (೧೦೫೩ ನೆಯ ಪುಟವನ್ನು ನೋಡಿ). ಇಲ್ಲಿ ಮಹಾವಿಶ್ವಾಸ ಪ್ರಯೋಗವನ್ನು ಕಾಣಬಹುದು. ವಿಶ್ವಾಸ ತಾರತಮ್ಯ ಉಂಟೆಂದು ಒಂದುವೇಳೆ ಒಪ್ಪಿದರೂ. ಈ ಮಹಾ ವಿಶ್ವಾಸವು ಒಂದು ಅಙ್ಗವೆಂದು ಹೇಳುವ ಪ್ರಮಾಣವಿಲ್ಲದಿದ್ದರೆ ಒಪ್ಪ, ದಿರಬಹುದಾಗಿತ್ತು. ಆದರೆ, ಪ್ರಬಲ ಪ್ರಮಾಣಗಳಿದ್ದರೆ ಪೂರ್ವ ಪಕ್ಷವು ನಿಲ್ಲದು ಎಂಬ ಭಾವವು.

ಆದರೆ ಪೂರ್ವಪಕ್ಷಿಯು ವಿದುರವಾಕ್ಯವಾದ "**ನವಿಶ್ವಸೇ ದವಿಶ್ವಸ್ತೇ**" ಎಂಬ ವಾಕ್ಯದಿಂದ ಲೋಕಮರ್ಯಾದೆಯಲ್ಲಿ ವಿಶ್ವಾಸ ತಾರತಮ್ಯ ಉಂಟೆಂದೇನೋ ಅಙ್ಗೀಕರಿಸುವೆವು ; ಬ್ರಹ್ಮವಿದ್ಯಾವಿಷಯದಲ್ಲಿ ಪರಬ್ರಹ್ಮಪ್ರಾಪ್ತಿಗೆ ಬೇಕಾದ ವಿಶ್ವಾಸದಲ್ಲಿ ತಾರತಮ್ಯವೆಂದರೇನು ಎಂದು ಆಕ್ಷೇಪಿಸಬಹುದೆಂದು, ಆ ಸಂದ ರ್ಭದಲ್ಲೂ ವಿಶ್ವಾಸ ತಾರತಮ್ಯ ಉಂಟೆಂಬುದಕ್ಕೂ ಅದರಿಂದ ಫಲದಲ್ಲಿ ವ್ಯತ್ಯಾಸ ಉಂಟೆಂಬುದಕ್ಕೂ ಶ್ರೀನಾರದ ಭಗವಾನರ ವಾಕ್ಯವನ್ನು "**ಇಪ್ಪಡಿ**" ಎಂದಾರಂ ಭಿಸಿ ಉದಾಹರಿಸುತ್ತಾರೆ.

**ಇಪ್ಪಡಿ ಪುರುಷ ವಿಶೇಷಙ್ಗಳಿಲೇ ವಿಶ್ವಾಸ ತಾರತಮ್ಯ ಮುಂಡೆನ್ರು ಮಿಡತ್ತೈ ಶ್ರೀಮದಷ್ಟಾಕ್ಷರ ಬ್ರಹ್ಮವಿದ್ಯೈಯಿಲೇ (೧) "ಯಸ್ಯ ಯಾವಾಂಶ್ಚ ವಿಶ್ವಾಸ ಸ್ತಸ್ಯ ಸಿದ್ಧಿಶ್ಚ ತಾವತೀ। ಏತಾವಾನಿತಿ ನೈತಸ್ಯ ಪ್ರಭಾವಃ ಪರಿಮೀಯತೇ" ॥ ಎನ್ರು ಶ್ರೀ ನಾರದ ಭಗವಾನರುಳಿಚ್ಚೆಯ್‌ದಾರ್.**

---

**ಇಪ್ಪಡಿ** - ಈ ರೀತಿಯಲ್ಲಿ ಎಂದರೆ ಮೇಲೆ ಉಪಪಾದಿಸಲ್ಪಟ್ಟ ರೀತಿಯಲ್ಲಿ, **ಪುರುಷ ವಿಶೇಷಙ್ಗಳಿಲೇ** - ಪ್ರಪನ್ನರಾದ ಪುರುಷವಿಶೇಷರಲ್ಲೂ, **ವಿಶ್ವಾಸ ತಾರತಮ್ಯವು** - ಉಂಟು, **ಎನ್ರುಮಿಡತ್ತೈ** - ಎನ್ನುವ ಸಂದರ್ಭದಲ್ಲಿ, **ಶ್ರೀಮದಷ್ಟಾಕ್ಷರಬ್ರಹ್ಮವಿದ್ಯೆಯಲ್ಲಿ**, "**ಯಸ್ಯ** - ಯಾವ ಈ ಅಷ್ಟಾಕ್ಷರ ಬ್ರಹ್ಮವಿದ್ಯಾಧಿಕಾರಿಗೆ, **ಯಾವಾಂಶ್ಚ ವಿಶ್ವಾಸಃ** - ಎಷ್ಟರಮಟ್ಟಿಗೆ ವಿಶ್ವಾಸ ಉಂಟೋ, **ತಸ್ಯ** - ಆ ಅಧಿಕಾರಿಗೆ, **ಸಿದ್ಧಿಶ್ಚ** - ಫಲವೂ ಕೂಡ, **ತಾವತೀ** - ಅಷ್ಟೇಎಂದರೆ ಅದಕ್ಕನುಗುಣವಾಗಿರುತ್ತದೆ" ಮಹಾ ವಿಶ್ವಾಸರೂಪದಲ್ಲಿ ವಿಶ್ವಾಸವು ಸಂಪೂರ್ಣವಾಗಿದ್ದರೆ ಮೋಕ್ಷಫಲವು; ಮಂದವಿಶ್ವಾಸವಾದರೆ ಮೋಕ್ಷಫಲವು ಒಡನೆಯೇ ಇಲ್ಲವೆಂಬ ತಾತ್ಪರ್ಯವೂ ತೋರಿ ಬರುತ್ತದೆ; ಇದರಿಂದ, **ಏತಸ್ಯ ಪ್ರಭಾವಃ**- ಈ ಅಷ್ಟಾಕ್ಷರ ಬ್ರಹ್ಮವಿದ್ಯೆಯ ಪ್ರಭಾವವು, **ಏತಾವಾನ್ ಇತಿ** – ಇಷ್ಟೇ ಎಂದು ಹೇಳಲು, **ನ ಪರಿಮೀಯತೇ** - ಪರಿಮಿತಿಯುಳ್ಳ ಹೊಂದಿಮದಲ್ಲವು. ಆದು ಅಪರಿಮಿತಪ್ರಭಾವ ಉಳ್ಳದೆಂಬ ಭಾವವು; ಏಕೆಂದರೆ ಪೂರ್ಣವಿಶ್ವಾಸವಿದ್ದುದಾದರೆ ನಿರತಿಶಯ ಪರಬ್ರಹ್ಮ ಪ್ರಾಪ್ತಿಯನ್ನೇ ಉಂಟುಮಾಡುವದರಿಂದ ಎಂಬ ಭಾವವು, **ಎನ್ರು** - ಎಂಬದಾಗಿ, **ಶ್ರೀ ನಾರದ ಭಗವಾನರು, ಅರುಳಿಚ್ಚೆಯ್‌ದಾರ್** - ಕೃಪಯಾ ಉಪದೇಶಿಸಿರುತ್ತಾರೆ.

ಹೀಗೆ ಹೇಳಿದುದರಿಂದ ತಿಳಿಯತಕ್ಕ ಅಂಶವೇನಾಯಿತು ಎಂದರೆ ಮಹಾ ವಿಶ್ವಾಸ ಯುಕ್ತರಿಗೆನೋ ಮೋಕ್ಷವು, ಮಹಾ ವಿಶ್ವಾಸದಲ್ಲಿ ನ್ಯೂನತೆಯಿರುವ ಮಂದವಿಶ್ವಾಸರಿಗೆಲ್ಲಾ ಮೋಕ್ಷವಿಲ್ಲವೆಂದು ಹೇಳಿದಂತಾಯಿತು ಎಂದು ಪೂರ್ವಪಕ್ಷಿಯು ಮೊದಲಿಸಬಹುದೆಂದು ಯೋಚಿಸಿ ಹಾಗೆ ಮೊದಲಿಸಿದರೇನಾಯಿತು? ಹಾಗೆ ಹೇಳುವದು ನಮಗೆ ಇಷ್ಟವೇ ಎಂದು ಹೇಳುವಿರೋ, ಆಗ "**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ**" ಎಂಬ ಈಶ್ವರ ಸಙ್ಕಲ್ಪಕ್ಕೆ ವಿರುದ್ಧವಾದುದಾಗುವದಿಲ್ಲವೇ ಎಂದರೆ ಅದಕ್ಕೆ ಸಮಾಧಾನವಾಗಿ, ಈ ಮಂದ ವಿಶ್ವಾಸಯುಕ್ತರಿಗೂ ಕೂಡ, ಕೊನೆಯಲ್ಲಿ ಮೋಕ್ಷ ಉಂಟೆಂದು ಉಪದೇಶಿಸುತ್ತಾರೆ. ಅದರ ಸಮರ್ಥನೆಗಾಗಿ, ವಿಷ್ಣುಧರ್ಮವಾಕ್ಯವನ್ನೂ, ಸ್ತೋತ್ರ

---

(೧) ನಾರ-ಕಲ್ ೧. ೧೪.

**ಮಂದ ವಿಶ್ವಾಸರಾನ ಪ್ರಪನ್ನಾಭಾಸರ್ಗೈಯುಮ್ ಮುಡಿವಿಲೇ ಸರ್ವೇಶ್ವರರ್ ರಕ್ಷಿಕ್ಕುಮ್. ಎಙ್ಗನೇ ಎನ್ನಿಲ್ (೧) ಸಕೃದುಚ್ಚಾರಿತಂ ಯೇನ ಹರಿರಿತ್ಯಕ್ಷರದ್ವಯಂ। ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮ**

---

ರತ್ನದಿಂದ ಎರಡು ಶ್ಲೋಕಗಳನ್ನೂ ಆಳ್ವಾರ್ರವರ ತಿರುವಾಲಿಯಿಂದ ಒಂದು ಪಾಶುರವನ್ನೂ, ಉದಾಹರಿಸುತ್ತಾರೆ.

**ಮಂದವಿಶ್ವಾಸರಾನ** – ವಿಶ್ವಾಸದಲ್ಲಿ ನ್ಯೂನತೆ ಯಿರುವ, ಆಕಾರಣದಿಂದ **ಪ್ರಪನ್ನಾಭಾಸರ್ಗೈಯುಮ್ – ಪ್ರಪನ್ನವತ್ ಈಷದ್ಭಾಸಂತೇ** - ಪ್ರಪನ್ನರ ಹಾಗೆ ಸ್ವಲ್ಪವಾಗಿ ತೋರುವಂತವರು ಎಂದರೆ ಪೂರ್ಣಪ್ರಪನ್ನರಲ್ಲದವರನ್ನೂ, **ಮುಡಿವಿಲೇ**-ಕೊನೆಯಲ್ಲಿ, ಸರ್ವೇಶ್ವರನು ರಕ್ಷಿಸಿಬಿಡುವನು, "**ನೇಹಾಭಿ ಕ್ರಮ ನಾಶೋಽಸ್ತಿ ಪ್ರತ್ಯವಾಯೋ ನವಿದ್ಯತೇ**" ಎಂಬ ಗೀತಾ ಶ್ಲೋಕದಲ್ಲಿ (೨-೪೦) ಕರ್ಮಯೋಗದ ವಿಷಯದಲ್ಲಿ ಪ್ರಾರಂಭಿಸಿ ಪೂರೈಸದೇ ಹೋಗಿ ಸ್ವಲ್ಪವಾಗಿ ಅನುಷ್ಠಿಸಿದ ಧರ್ಮವೂ ಕೂಡ,ಸಂಸಾರ ಭಯದಿಂದ ತಪ್ಪಿಸಬಹುದೆಂದು ಹೇಳಿದ ಹಾಗೆ, ಕೊನೆಗೆ ವಿಶ್ವಾಸ ಪೂರ್ತಿಯನ್ನುಂಟುಮಾಡಿ ಸಂಪೂರ್ಣ ಪ್ರಪನ್ನರನ್ನಾಗಿ ಮಾಡಿ ಸರ್ವೇಶ್ವರನು ಸಂರಕ್ಷಿಸುವನೆಂದು ಹೇಳಿದರು. ಹಾಗೆಯೇ ಇನ್ನೊಂದು ಸಂದರ್ಭದಲ್ಲೂ, ಗೀತೆಯಲ್ಲಿ "**ನಹಿ ಕಲ್ಯಾಣಕೃತ್ಕಶ್ಚಿತ್ ದುರ್ಗತಿಂ ತಾತ ಗಚ್ಛತಿ**" ಸುಕೃತವನ್ನು ಸ್ವಲ್ಪಮಟ್ಟಿಗೆ ಮಾಡಿರುವವನಿಗೂ ಎಂದಿಗೂ ದುರ್ಗತಿ ಎಂಬುವದಿಲ್ಲವೆಂದೂ, ಶ್ರೀಕೃಷ್ಣ ಭಗವಾನರವರು ಹೇಳಿರುತ್ತಾರೆ ಹಾಗೆಯೇ ಇಲ್ಲಿಯೂ ಶರಣಾಗತಿಯನ್ನೇನೋ ಅನುಷ್ಠಿಸಿರುತ್ತಾನೆ. ಪೂರ್ಣವಿಶ್ವಾಸವಿಲ್ಲದುದರಿಂದ ಅಙ್ಗಲೋಪಮೂಲಕ ಶರಣಾಗತಿಯು ಸಿದ್ಧಿಸಲಿಲ್ಲವು. ಹೀಗೆ ಪ್ರಾರಂಭಿಸಿದ ಸುಕೃತವು ವ್ಯರ್ಥವಾಗುವದಿಲ್ಲವು. ಕೊನೆಗೆ ಮಹಾ ವಿಶ್ವಾಸವು ಉಂಟಾಗಿ ಶರಣಾಗತಿಯು ಪೂರ್ಣವಾಗಿ ಮೋಕ್ಷಪ್ರಾಪ್ತಿಯುಂಟೆಂದು ಹೇಳಿರುತ್ತಾರೆ. ಮುಂದೆ **ಎಙ್ಗನೇ ಯೆನ್ನಿಲ್** – ಎಲ್ಲಿ ಹಾಗೆ ಹೇಳಿದೆ? ಎಂದಾರಂಭಿಸಿ ಪ್ರಮಾಣಗಳನ್ನು ಉದಾಹರಿಸುತ್ತಾರೆ. (೧) **ಯೇನ** - ಯಾವ ಪುಣ್ಯಶಾಲಿಯಿಂದ, **ಹರಿರಿತ್ಯಕ್ಷರದ್ವಯಂ**-ಹರಿಃ ಎಂಬ ಎರಡಕ್ಷರವು, **ಸಕೃದುಚ್ಚಾರಿತಂ**-ಒಂದೇಸಲವಾಗಲಿ ಉಚ್ಚರಿಸಲ್ಪಟ್ಟುದಾದರೆ, **ತೇನ** – ಅಂತವನಿಂದ, **ಮೋಕ್ಷಾಯ ಗಮನಂ ಪ್ರತಿ** - ಮೋಕ್ಷವನ್ನು ಕುರಿತು ಹೋಗುವದಕ್ಕಾಗಿ, **ಪರಿಕರಃ** - ಸೊಂಟಕ್ಕೆ ದಟ್ಟಿಯನ್ನು ಬಿಗಿಯೋಣವು ಎಂದರೆ ಸಾಧನವು, **ಬದ್ಧಃ** - ಕಟ್ಟಲ್ಪಟ್ಟಿತು,

(೧) ವಿ. ಧ. ೭೦. ೮೪.

**ನವ್ ಪ್ರತಿ" ಇತ್ಯಾದಿಗಳಿಲುವ್, ಇವತ್ತೈಯಡಿಯೊತ್ತಿನ(೨) "ತ್ವದಂಘ್ರಿಮುದ್ದಿಶ್ಯ,"(೩)"ಉದೀರ್ಣ ಸಂಸಾರ" ಎಙ್ಗಿರ ಶ್ಲೋಕಙ್ಗಳಿಲುಮ್,**

---

ಹರಿಶಬ್ದದ ಸಕೃದುಚ್ಚಾರಣೆಯಿಂದ ಮೋಕ್ಷವನ್ನುಹತ್ತಲು ಪ್ರಥಮ ಸೋಪಾನವನ್ನು ಕಟ್ಟಿದಹಾಗೆ; ಎಂದರೆ ಯಾವತ್ತಾದರೂ ಒಂದುದಿನ ಅದು ಉಪಾಯಾನುಷ್ಠಾನಕ್ಕೆ ಸಹಕಾರಿಯಾಗಿ ಪರಿಣಮಿಸಿ, ಕೊನೆಗೆಮೋಕ್ಷಪ್ರಾಪ್ತಿಯನ್ನುಂಟುಮಾಡುತ್ತದೆಂಬ ಭಾವವು", **ಇತ್ಯಾದಿಗಳಿಲುವ್** - ಇವೇ ಮೊದಲಾದವುಗಳಲ್ಲೂ; ಇಲ್ಲಿ ಆದಿಪದದಿಂದ, ಮೇಲೆ ಹೇಳಲ್ಪಟ್ಟ ಎರಡುಗೀತಾ ಶ್ಲೋಕಗಳೂ ಮತ್ತು "ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ। ಪುಮಾನ್ವಿಮುಚ್ಯತೇ ದ್ಯಃ" ಇಲ್ಲಿ ಭಗವನ್ನಾಮೋಚ್ಚಾರಣೆಯು, ಸ್ಮರಣ, ಜಪ, ಪ್ರದಕ್ಷಿಣ ಮೊದಲಾದವುಗಳಿಗೂ ಉಪಲಕ್ಷಣವಾಗಿ ಭಾವಿಸತಕ್ಕದ್ದೆಂದು ಆದಿಶಬ್ದಪ್ರಯೋಗವು, "ಸಕೃತ್ಸ್ಮೃತೋಽಪಿ ಗೋವಿಂದೋ ನೃಣಾಂ ಜನ್ಮಶತೈಶ್ಚಿತಂ । ಪಾಪರಾಶಿಂದಹತ್ಯಾಶು ತೂಲರಾಶಿ ಮಿವಾನಲಃ", "ಋಚೋ ಯಜೂಂಷಿ ಸಾಮಾನಿ ಯೋಽಧೀತೇಽಸಕೃದಂಜಸಾ । ಸಕೃದಷ್ಟಾಕ್ಷರಂ ಜಪ್ತ್ವಾ ಫಲಂತಸ್ಯ ಸಮಶ್ನುತೇ", "ವಿಷ್ಣೋರಾಯತನಂ ನಿತ್ಯಂ ಸಾಯಂಪ್ರಾತರ್ದಿನೇ ದಿನೇ। ಪ್ರದಕ್ಷಿಣ ದ್ವಯಂಕುರ್ಯಾದಶ್ವಮೇಧಫಲಂ ಲಭೇತ್", "ಯಾನಿ ಯಾನಿಚ ಪಾಪಾನಿ ಜನ್ಮಾಂತರ ಕೃತಾನಿಚ। ತಾನಿತಾನಿ ಪ್ರಣಶ್ಯಂತಿ ಪ್ರದಕ್ಷಿಣಪದೇಪದೇ" ಇತ್ಯಾದಿಗಳು ಅನುಸಂಧೇಯಗಳು. ಇವೇ ಮೊದಲಾದವು ಹೇಳಲ್ಪಟ್ಟವು; **ಇವತ್ತೈ ಅಡಿಯೊತ್ತಿನ**-ಇವುಗಳನ್ನು ಅನುಸರಿಸುವ, ತ್ವದಂಘ್ರಿಮುದ್ದಿಶ್ಯ ...**ಶ್ಲೋಕಙ್ಗಳಿಲುಮ್**-ಎಂಬೀ ಎರಡು ಶ್ಲೋಕಗಳಲ್ಲೂ; ಈ ಶ್ಲೋಕಗಳು ಯಾವುವು ಎಂದರೆ

(೨) **ತ್ವದಂಘ್ರಿಮುದ್ದಿಶ್ಯ । ಕದಾಪಿ ಕೇನಚಿದ್ಯಥಾತಥಾವಾಪಿಸಕೃತ್ಕೃತೋಂಜಲಿಃ । ತದೈವ ಮುಷ್ಣಾತ್ಯಶುಭಾ ನ್ಯಶೇಷತಶ್ಶುಭಾನಿ ಪುಷ್ಣಾತಿನಜಾತು ಹೀಯತೇ ॥ ೨೮ ॥** ಗುರುತರ **ಉಪಾಯ**ವಾದ ಭಕ್ತಿಯೋಗದಿಂದ ತುಂಬಾ ಕಷ್ಟದಿಂದ ಸಾಧ್ಯವಾದ ಈ ಪುರುಷಾರ್ಥವನ್ನು ತುಂಬಾ ಲಘುವಾದ ಪ್ರಪತ್ತಿಮೂಲಕ ಹೇಗೆ ಹೊಂದುವಿ ಎಂದರೆ ಅದಕ್ಕೂ ಲಘುತರವಾದ ಅಂಜಲೀ ಬಂಧನವೇ ಮೊದಲಾದ ಕಾಯಿಕ ವ್ಯಾಪಾರವೇ ಸಹಕಾರಿಯಾಗಿರುವಾಗ ಪ್ರಪತ್ತಿಯು ಸಾಧಿಸಲಾರದೇ

---

(೨) ಆಳ. ಸ್ತೋ. ೨೮ (೩) ಆಳ. ಸ್ತೋ. ೨೯.

ಎಂದು, ಸಾಭಿಪ್ರಾಯವಾಗಿ ಅಂಜಲಿಯ ಪ್ರಭಾವವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. **ತ್ವದಂಘ್ರಿಮುದ್ದಿಶ್ಯ** - ಸರ್ವಲೋಕ ಶರಣ್ಯನೆಂದು ವಿಖ್ಯಾತನಾದ ನಿನ್ನ ಪಾದಕಮಲವನ್ನು ಕುರಿತು, ಬ್ರಹ್ಮರುದ್ರೇಂದ್ರಾದಿಗಳ ಪಾದಕ್ಕೆ ಮೋಕ್ಷದಾಯಕ ಪ್ರಭಾವವಿಲ್ಲವಾದುದರಿಂದ, ಅವರುಗಳ ಪಾದವಲ್ಲದೆ, ಮೋಕ್ಷದಾಯಕನಾಗಿ ಮುಕುಂದನಾದ ನಿನ್ನ ಪಾದಕಮಲವನ್ನು ಕುರಿತು, ಇಲ್ಲಿ ಶುಭಾಶ್ರಯವೆಲ್ಲಾ ಇರುವಾಗ ಅಂಘ್ರಿಯನ್ನು ಮುಖ್ಯವಾಗಿ ಹೇಳಿದುದರಭಿಪ್ರಾಯವು, ಸರ್ವಶರಣ್ಯನ ಪಾದಗ್ರಹಣದಲ್ಲಿ ಅದು **"ಮಕರಂದ ನಿರ್ಭರೆ"** ವಾದುದರಿಂದ ನೈರರ್ಥಕ್ಯದ ಮಾತೇ ಇಲ್ಲವೆಂಬುದು ಸೂಚಿತವು; **"ಸಭ್ರಾತುಶ್ಚರಣೌಗಾಢಂ ನಿಪೀಡ್ಯ ರಘುನಂದನಃ"** (ರಾ. ಅಯೋ. ೩೧.೨) ಎಂಬಲ್ಲಿ ವಿಫಲತ್ವವಿಲ್ಲವೆಂಬುದು ವ್ಯಕ್ತವು, **ಕದಾಪಿ** - ಯಾವಾಗಲೇಯಾಗಲಿ ಇದರಿಂದ ದೇಶ ಕಾಲಾವಸ್ಥಾ ನಿಯಮಗಳು ಯಾವುವೂ ಬೇಕಿಲ್ಲವೆಂಬ ಭಾವವು; ಯಜ್ಞಯಾಗಾದಿಗಳಿಗೆ ದೇಶಕಾಲಾವಸ್ಥಾದಿ ನಿಯಮಗಳುಂಟು, ಅಂಜಲಿ ಮಾಡುವ ದಕ್ಕೆ ಮುಹೂರ್ತವಿಡಕೆಲಸವಿಲ್ಲವು, **ಕೇನಚಿತ್** - ಯಾರಿಂದಲೇಯಾಗಲಿ, ಬ್ರಾಹ್ಮಣಾದಿಗಳೇ ಅಂಜಲಿ ಮಾಡಬೇಕು, **"ಶೂದ್ರಶ್ವಪಾಕರು"** ಮಾಡಕೂಡದೆಂಬ ನಿಯಮವೇನೂ ಇಲ್ಲವು, ಸರ್ವಲೋಕ ಶರಣ್ಯನಿಗೆ ಅಂಜಲಿ ಬಂಧನ ಮಾಡಲು ಎಲ್ಲರಿಗೂ ಸಾಧ್ಯವು, **ಯಥಾತಥಾವಾಪಿ** - ಹೇಗೆಯಾಗಲಿ, ಇದರಿಂದ ಚನ್ನಾಗಿ ಅಂಜಲಿಮಾಡುವದೂ ಕೂಡ ತಿಳಿಯದೇ ಎರಡೂ ಕೈಗಳನ್ನೂ ಸುಮ್ಮನೆ ಜೋಡಿಸಿದರೂ ಸರಿಯೇ; ಪ್ರಣಾಮಾದಿಗಳಿಗಾದರೋ ಸ್ವಲ್ಪನಿಯಮಾದಿಗಳುಂಟು, ಸಾಷ್ಟಾಂಗವಾಗಿರಬೇಕು, ಒಂದು ಕೈಯಿಂದ ಪ್ರಣಾಮ ಮಾಡಕೂಡದು ಇತ್ಯಾದಿ ನಿಯಮಗಳುಂಟು; ಅಂಜಲಿಗೆ ಅಂತಹ ನಿಯಮಗಳು ಯಾವುದೂ ಇಲ್ಲದುದರಿಂದ **"ಯಥಾತಥಾವಾಪಿ"** ಎಂದು ಪ್ರಯೋಗವು; **ಸಕೃತ್ಕೃತೋಂಜಲಿಃ** - ಒಂದು ಸಲ ಮಾಡಿದ ಅಂಜಲಿಯು, ಈ ಅಂಜಲಿಯನ್ನು **"ವಸಂತೇ ವಸಂತೇ ಜ್ಯೋತಿಷಾ ಯಜೇತ"** ಪ್ರತಿ ವಸಂತ ಋತುವಿನಲ್ಲೂ ಮಾಡಬೇಕಾಗಿ ವಿಧಿಸಿರುವ ಪದೇಪದೇ ಕರ್ತವ್ಯತೆಯ ಆವಶ್ಯಕತೆ ಯಿಲ್ಲದೆ, ಒಂದು ಸಲ ಮಾಡಿದರೆ ಸಾಕು, ಫಲಸಿದ್ಧಿಯನ್ನುಂಟುಮಾಡುವ ಪ್ರಭಾವ ಉಳ್ಳದೆಂಬ ಭಾವವು, ಸರ್ವೇಶ್ವರನ ಕೃಪಾಪ್ರಾಪ್ತಿಗೆ ಸಕೃತ್ಕೃತವಾದರೇನೋ ಸಾಕು, ಒಂದು ಸಲ ಅಂಜಲಿ ಮಾಡಿರುತ್ತೇನೆ, ಮುಂದಕ್ಕೆ ಏಕೆ ಎಂಬ ಔದಾಸೀನ್ಯವು ಸರಿಯಲ್ಲವು; ಈ ಅಧಿಕಾರಿಯ ಮನದ ತೃಪ್ತ್ಯರ್ಥವಾಗಿ ಆವೃತ್ತಿಯೂ ಆವಶ್ಯಕವು; ಹೀಗೆ ಅಭಿಪ್ರಾಯವಲ್ಲದಿದ್ದರೆ, ಒಬ್ಬ ಮಹನೀಯನನ್ನು ಒಂದು ಸಲ ನೋಡಿದುದರಿಂದಲೇ ಫಲಸಿದ್ಧಿಯುಂಟಾದರೆ ಮುಂದಕ್ಕೆ ಆತನನ್ನು ಕೃತಜ್ಞತಾಭಾವದಿಂದ ನೋಡಬೇಕಾದ ಆವಶ್ಯಕತೆ ಯಿಲ್ಲವೆಂ

ದಾಗುತ್ತದೆ. ಇಂತಹ ಅಂಜಲಿಯು, ತದ್ವೈವ - ಆಗಲೇನೆ, ಉತ್ತರಜನ್ಮಾದಿ ಕಾಲವಿಳಂಬಗಳು ಬೇಕಿಲ್ಲದೆ, ಅಶುಭಾನಿ ಅಶೇಷತಃ ಮುಷ್ಣಾತಿ-ಅಮಂಗಳಗ ಳನ್ನು ನಿಶ್ಶೇಷವಾಗಿ ಅಪಹರಿಸುತ್ತದೆ. ಇಲ್ಲಿ ಅಂಜಲಿಯು ಅಶುಭಗಳನ್ನು ಅಪ ಹರಿಸುವ ಚೋರಕೃತ್ಯವನ್ನು ಮಾಡುತ್ತದೆಂದು ಹೇಳಿದುದರ ಅಭಿಪ್ರಾಯವೇ ನೆಂದರೆ, ಈ ಸಂಸಾರಿಯಾದ ಚೇತನನಿಗೆ ಯಾವುದು ಹಿತವೆಂದು ತಿಳಿಯದೆ, ಅಶುಭ ಫಲಗಳನ್ನುಂಟುಮಾಡುವ ಭೋಗಗಳನ್ನು ಬಹು ಹಿತವಾದುದೆಂದು ಭಾವಿಸಿ, ಅವುಗಳನ್ನು ಅನುಭವಿಸುತ್ತಿರುವನು. ಅಂಜಲಿಯಿಂದ ಪ್ರಸನ್ನನಾದ ದೇವನು ಬಲಾತ್ಕಾರದಿಂದ ಅಂತಹ ಅಮಂಗಳಗಳನ್ನೆಲ್ಲಾ ಅಪಹರಿಸಿ ಬಿಡುವನೆಂಬ ಭಾವವು. ಹಿತವಲ್ಲದನ್ನು ತಿನ್ನುತ್ತಿರುವ ಮೊಗುವಿನಿಂದ ತಾಯಿಯು ಹೇಗೆ ಮಗುವು ತಿಳಿಯದಹಾಗೆ ಅದನ್ನು ಅಪಹರಿಸಿ ಬಿಡುವಳೋ ಹಾಗೆ ಎಂಬ ತಾತ್ಪರ್ಯವು, ("ಮುಷಸ್ತೇಯೇ") ; ಶುಭಾನಿ ಮಂಗಳಗಳನ್ನು, ಪುಷ್ಣಾತಿ- ಪುಷ್ಟೀಕರಿಸುತ್ತದೆ, ಕದಾಪಿ - ಯಾವಾಗಲೇಯಾಗಲಿ, ಮುಂದಕ್ಕೆಲ್ಲಾ ಕಾಲ ದಲ್ಲೂ, ನಜಾತುಹೀಯತೇ - ವ್ಯರ್ಥವಾದುದು ಆಗುವದೇ ಇಲ್ಲವು ಅಂಜ ಲಿಯು ಅನಿಷ್ಟ ನಿವೃತ್ತಿಯನ್ನೂ ಇಷ್ಟಪ್ರಾಪ್ತಿಯನ್ನೂ ಸಹ ಉಂಟುಮಾಡು ತ್ತದೆ; ಆದುದರಿಂದ "ಅಂಜಲಿಃ ಪರಮಾಮುದ್ರಾ ಕ್ಷಿಪ್ರಂದೇವ ಪ್ರಸಾ ದಿನೀ" ಎಂದು ಹೇಳಲ್ಪಟ್ಟಿರುತ್ತದೆ. ಶ್ರೀಮದ್ರಾಮಾಯಣ ಕಿಷ್ಕಿಂಧಾಕಾಂಡ ದಲ್ಲಿ ಸೀತಾನ್ವೇಷಣದಲ್ಲಿ ಸಹಾಯ ಮಾಡುತ್ತೇವೆಂದು ವಾಗ್ದಾನಮಾಡಿ ಮರೆತು ಕೃತಾಪರಾಧನಾದ ಸುಗ್ರೀವನಿಗೆ ಮಹಾ ಪ್ರಾಜ್ಞನಾದ ಆಂಜನೇಯನು ಉಪದೇಶಿಸುತ್ತಾನೇನೆಂದರೆ :—"ಕೃತಾಪರಾಧಸ್ಯ ಹಿ ತೇ ನಾನ್ಯತ್ಪಶ್ಯಾ ಮ್ಯಹಂ ಕ್ಷಮಂ । ಅಂತರೇಣಾಂಜಲಿಂಬಧ್ವಾಲಕ್ಷ್ಮಣಸ್ಯ ಪ್ರಸಾದನಾತ್"॥ ಈಗ ಮಹಾ ಕೋಪದಿಂದ ಬಂದಿರುವ ಲಕ್ಷ್ಮಣನಲ್ಲಿ ಮಹಾಪರಾಧವನ್ನು ಮಾಡಿದ ನಿನಗೆ, ಅಂಜಲಿಯನ್ನು ಮಾಡಿ ಆತನ ಪ್ರಸನ್ನತೆಯನ್ನು ಪ್ರಾರ್ಥಿಸು ವದಕ್ಕಿಂತ ಉಚಿತವಾದ ಉಪಾಯವನ್ನು ನಾನು ಕಾಣೆನು," ಎಂದು ಅಂಜ ಲಿಯ ಪ್ರಭಾವವನ್ನು ವ್ಯಕ್ತಪಡಿಸಿರುತ್ತಾರೆ. ಸರ್ವೇಶ್ವರನ ಪ್ರಸನ್ನತೆಗಾಗಿ ಸಂಮಾರ್ಜನ, ಮಾಲಾಕರಣ, ದೀಪಾರೋಪಣ, ಅಭಿಷೇಕ, ಉತ್ಸವ, ಕೈಂಕರ್ಯಾ ದಿಗಳು ಹೇಳಲ್ಪಟ್ಟವೆ. ಇವುಗಳಲ್ಲೆಲ್ಲಾ ಕಷ್ಟತರವಾದ ದೇಹಶ್ರಮ, ವಿತ್ತ ಸಹಾಯ ಮೊದಲಾದವುಗಳು ಬೇಕು; ಅಂಜಲಿಯಾದರೋ ಹಾಗಲ್ಲದೆ ತುಂಬಾ ಸುಕರವಾಗಿ ದೇವದೇವನ ಕ್ಷಿಪ್ರ ಪ್ರಸನ್ನತೆಯನ್ನು ಸಂಪಾದಿಸಿಕೊಡುವ ಪ್ರಭಾವವುಳ್ಳದು ಎಂಬ ತಾತ್ಪರ್ಯವು. ಈ ಅಂಜಲಿಯು . ಈ ಮುಮುಕ್ಷುವಿಗೆ ಮೋಕ್ಷಪ್ರಾಪ್ತಿಯನ್ನೂ ಉಂಟುಮಾಡುತ್ತದೆಂದು ಹೇಳಿದರೆ, ಮೋಕ್ಷಕ್ಕೆ ಸಾಧನ

ಗಳು ನ್ಯಾಸವೂ ಉಪಾಸನೆಯೂ ಇವೆರಡೇ ಎಂಬ ಹೇಳಿಕೆಗೆ ವಿರುದ್ಧವಾಗುವದಿಲ್ಲವೇ ಎಂದರೆ ಈ ಕೇವಲ ಅಂಜಲಿಯೇ ಸಾಕ್ಷಾತ್ತಾಗಿ ಸಾಧನವಾಗುವದಿಲ್ಲವು. ಈ ಸಾಧನಗಳಲ್ಲಿ ಯಾವುದಾದರೂ ಒಂದನ್ನುಂಟುಮಾಡಲು ಸಹಕಾರಿಯೆಂದು ಭಾವಿಸತಕ್ಕದ್ದು. ಇದು ಅಶುಭಗಳಾದ ಪಾಪಗಳ ನಿವೃತ್ತಿಗೂ, ಸತ್ವೋನ್ಮೇಷಕ್ಕೂ, ಜ್ಞಾನ ಭಕ್ತಿವೈರಾಗ್ಯಗಳನ್ನುಂಟುಮಾಡುವದಕ್ಕೂ, ಹೀಗೆ ಮೋಕ್ಷಪ್ರಾಪ್ತಿಗೆ ಸಹಾಯಕರವಾದುದು; ಅಥವಾ ಗುರೂಪಸದನ ಭರನ್ಯಾಸಾದಿಗಳಿಗೂ ಸಹಾಯಕರವಾಗಬಹುದೆಂಬ ತಾತ್ಪರ್ಯವು ಆದರೆ **"ಧ್ಯಾಯನ್ ಕೃತೇಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್ । ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್"** ಕೃತಯುಗದಲ್ಲಿ ಉಪಾಸನೆಯಿಂದಲೂ, ತ್ರೇತಾಯುಗದಲ್ಲಿ ಯಜ್ಞಾನುಷ್ಠಾನಗಳಿಂದಲೂ, ದ್ವಾಪರದಲ್ಲಿ ಅರ್ಚಿಸುವದರಿಂದಲೂ ಯಾವ ಫಲಗಳನ್ನು ಸಾಧಿಸಬಹುದೋ, ಆ ಫಲಗಳನ್ನೇ ಕಲಿಯುಗದಲ್ಲಿ ಕೇಶವನ ಸ್ತೋತ್ರಮಾತ್ರದಿಂದಲೇ ಹೊಂದಬಹುದೆಂದು ಹೇಳಿದೆಯಲ್ಲಾ, ಹಾಗೆ ಅಂಜಲಿಯೂ ಕೂಡ ಮೋಕ್ಷಪರ್ಯಂತ ಸರ್ವಾರ್ಥದಾಯಕವೆಂದು ನಂಬಲು ಅಡ್ಡಿ ಏನು ಎಂದರೆ, ಇಲ್ಲಿಯೂ ಕೂಡ ಕೇವಲ ಕೇಶವ ಸಂಕೀರ್ತನೆಯೇ ಮೋಕ್ಷದಾಯಕವೆಂಬರ್ಥವಲ್ಲವು; ಆ ಕೇಶವ ಸಂಕೀರ್ತನೆಯೇ ಸಾಕ್ಷಾತ್ತಾದ ಮೋಕ್ಷೋಪಾಯಕ್ಕೆ ನಿಷ್ಪಾದಕನೆಂದು ತಿಳಿಯ ತಕ್ಕದ್ದು. ಆದುದರಿಂದ ಈ ಅಂಜಲಿಯು ಪ್ರಯೋಜನಾಂತರ ಪರರಿಗೆ ಅದನ್ನು ಸಾಧಿಸುವ ಉಪಾಯ ನಿಷ್ಪತ್ತಿಗೂ, ಅನನ್ಯಪ್ರಯೋಜನರಿಗೆ ಮೋಕ್ಷವನ್ನು ಸಾಧಿಸುವ ಉಪಾಯ ನಿಷ್ಪತ್ತಿಗೂ, ಸಾಕ್ಷಾತ್ತಾಗಿ ಹೇತುವೆಂಬ ಭಾವವು ಅಂಜಲಿ ಮಾಡಿದವನಿಗೆ **"ನೇಹಾಭಿಕ್ರಮ ನಾಶೋಸ್ತಿ"** ಎಂಬಲ್ಲಿ ಹೇಳಿರುವಹಾಗೆ ಎಂದಾದರೂ ಒಂದು ದಿನ ಮೋಕ್ಷಪ್ರಾಪ್ತಿಯುಂಟು ಎಂಬುದು ಚರಿತಾರ್ಥವು. ಆದರೆ ಅದು ಭರನ್ಯಾಸದೊಂದಿಗೆ ಸೇರಿದ್ದರೆ ಮೋಕ್ಷಪ್ರದವು.

(೨) **ಉದೀರ್ಣ ಸಂಸಾರದವಾಶುಶುಕ್ಷಣಿಂ ಕ್ಷಣೇನ ನಿರ್ವಾಪ್ಯ ಪರಾಂಚ ನಿರ್ವೃತಿಮ್ । ಪ್ರಯಚ್ಛತಿ ತ್ವಚ್ಚರಣಾರುಣಾಂಬುಜ ದ್ವಯಾನುರಾಗಾಮೃತಸಿಂಧು ಶೀಕರಃ ॥೨೯॥** ಈ ಶ್ಲೋಕದ ಮೂಲಕ ಮೇಲೆ ಹೇಳಿದ ರೀತಿಯಲ್ಲಿ ಅಂಜಲಿ ಮಾಡಲು ಕೂಡ ಅಶಕ್ತರಾಗಿರುವವರು **"ವಿಷಯೇತೇ ಮಹಾರಾಜ ರಾಮವ್ಯಸನ ಕರ್ಶಿತಾಃ । ಅಪಿವೃಕ್ಷಾಃ ಪರಿಮ್ಲಾನಾಃ ಸಪುಷ್ಪಾಂಕುರ ಕೋರಕಾಃ"** ॥ ಎಂದರೆ "ಓದಶರಥನೇ ನಿನ್ನ ದೇಶದಲ್ಲಿ ಶ್ರೀರಾಮನು ವನಕ್ಕೆ ತೆರಳಿದ ದುಃಖದಿಂದ, ಮನುಷ್ಯರು ಮಾತ್ರವೇ ಕ್ಲೇಶಪಡುತ್ತಿದ್ದಾರೆಂದು ಭಾವಿಸಬೇಡ, ಪುಷ್ಪ, ಚಿಗುರು, ಮೊಗ್ಗುಗಳಿಂದ ಪೂರ್ಣಗಳಾಗಿದ್ದ

ಮರಗಳೂ ಕೂಡ ಬಾಡಿಹೋದವು, ಎಂಬ ಸುಮಂತ್ರ ವಾಕ್ಯದಲ್ಲಿ ಹೇಳಿರುವ ಹಾಗೆ, ಅನುರಾಗ ಲೇಶಮಾತ್ರದಿಂದಲೂ ಕೂಡ ಶ್ರೇಷ್ಠಸುಖವಾದ ಮೋಕ್ಷವನ್ನೂ ಸಹ ಪ್ರಾಪ್ತಕಾಲದಲ್ಲಿ ಹೊಂದಬಹುದೆಂದು ಹೇಳುತ್ತಾರೆ, ಇಲ್ಲಿಯೂ ಅನಿಷ್ಟ ನಿವೃತ್ತಿಯೂ, ಇಷ್ಟಪ್ರಾಪ್ತಿಯೂ ಹೇಳಲ್ಪಟ್ಟಿವೆ. **"ತ್ವಚ್ಚರಣಾ........ಶೀಕರಃ" ತ್ವತ್** - ಸ್ವಯಂ ಆನಂದ ಸಾಗರನಾಗಿ ಆನಂದವನ್ನುಂಟುಮಾಡುವ ಕೃಪಾಕರನಾದ ನಿನ್ನ, **ಚರಣಾರುಣಾಂಬುಜದ್ವಯ** - ಕೆಂಪಗಿರುವ ಚರಣಾರವಿಂದ ಯುಗ್ಮದಲ್ಲಿ, **ಅನುರಾಗ** – ವಿಶೇಷ ಪ್ರೀತಿಯೆಂಬ, **ಅಮೃತಸಿಂಧು** - ಅಮೃತ ಸಮುದ್ರದ, **ಶೀಕರಃ** - ಒಂದು ಕಣವು, **ಉದೀರ್ಣ ಸಂಸಾರ ದವಾಶುಶುಕ್ಷಣಿಂ** - ಈ ಆತ್ಮನನ್ನು ನಾಶಮಾಡುವಹಾಗೆ ಜಾಜ್ವಲ್ಯಮಾನವಾದ ಸಂಸಾರವೆಂಬ ಕಾಡ್ಗಿಚ್ಚನ್ನು, **ಕ್ಷಣೇನ** – ಒಂದು ಕ್ಷಣದಲ್ಲಿ ಎಂದರೆ ಅಲ್ಪಕಾಲದಲ್ಲೇ, ಕಾಡ್ಗಿಚ್ಚನ್ನು ಆರಿಸುವದು ಸಾಧ್ಯವಲ್ಲವು, ನಾಲ್ಕು ಕಡೆಯಲ್ಲೂ ಜ್ವಲಿಸುತ್ತಾ ಬರುವವರಿಂದ ಶಮನಮಾಡುವದು ಕಷ್ಟವು; ಸ್ವಾಮಿಯ ಚರಣಾರವಿಂದದಲ್ಲಿ ಮಾಡಿದ ಪ್ರೇಮವೆಂಬ ಅಮೃತದ ಒಂದು ತುಂತುರು ಬಹು ಶೀಘ್ರದಲ್ಲೇ **"ಸಂಸಾರ ತಾಪತಾಪಿತರಿಗೆ"** ಶಮನವನ್ನುಂಟುಮಾಡುತ್ತದೆಂಬ ಭಾವವು, **ನಿರ್ವಾಪಯ್ಯ** - ಆರಿಸಿ, ತಾಪತ್ರಯ ಯುಕ್ತವಾದುದು ಈ ಸಂಸಾರವು; ಆದುದರಿಂದ ಮೋಕ್ಷಾರ್ಥಿಗಳಿಗೆ ಈ ತಾಪವು ಕಾಡ್ಗಿಚ್ಚಿನ ತಾಪಕ್ಕೆ ಸಮಾನವಾದುದಾಗಿ ಅನೇಕಸ್ಥಳದಲ್ಲಿ ಅದಕ್ಕೆ ಹೋಲಿಸಿರುತ್ತಾರೆ, **ಪರಾಂನಿರ್ವೃತಿಂಚ**-ಸರ್ವಶ್ರೇಷ್ಠ ಸುಖವಾದ ಮೋಕ್ಷವನ್ನೂ ಸಹ, **ಪ್ರಯಚ್ಛತಿ**-ಉಪಾಯ ನಿಷ್ಪತ್ತಿಯ ಮೂಲಕ ಕೊಡುತ್ತದೆ. ಈ ಪ್ರೀತಿಯು ಉಪಾಯಾನುಷ್ಠಾನಕ್ಕೆ ಸಹಾಯವಾಗಿ ಉಪಾಯ ನಿಷ್ಪತ್ತಿಯ ಮೂಲಕ ಮೋಕ್ಷರೂಪವಾದ ಪರಿಪೂರ್ಣ ಬ್ರಹ್ಮಾನುಭವ, ನಿತ್ಯ ಕೈಂಕರ್ಯಗಳ ಪ್ರಾಪ್ತಿಯನ್ನುಂಟುಮಾಡುತ್ತದೆಂಬಭಾವವು

(೪) **ಮೊಯ್‌ತ್ತವಲ್ವಿನೈಯುಳ್ ನಿನ್ರು ಮೂನ್ರೆಳುತ್ತುಡೈಯಪೇರಾಲ್।**
**ಕತ್ತಿರಬಂಧು ಮನ್ರೇ ಪರಾಙ್ಗದಿ ಕಣ್ಡು ಕೊಣ್ಡಾನ್ ।**
**ಇತ್ತನೈ ಯಡಿಯಾರಾನಾರ್ಕ್ಕಿರುಙ್ಗುಮ್ ನಮ್ಮರಙ್ಗನಾಯ ।**
**ಪಿತ್ತನೈ ಪೆತ್ರುಮನ್ರೋ ಪಿರಿವಿಯುಳ್ ಪಿಣಙ್ಗುಮಾರೇ ॥೪॥**

**ಮೊಯ್‌ತ್ತ**-ಜೇನು ಗೂಡಿನಲ್ಲಿ ಹುಳುಗಳು ಮುತ್ತಿರುವಹಾಗೆ ಮುತ್ತಿಕೊಂಡಿರುವ,**ವಲ್**-ಕಾಲತತ್ವವಿರುವವರೆಗೂ ಅನುಭವಿಸಿದರೂ ತೀರದಷ್ಟು ಬಲಿಷ್ಠವಾದ, **ವಿನೈಯ್ಯುಳ್ ನಿನ್ರು**–ಪಾಪರೂಪವಾದಸಮುದ್ರದೊಳಗೆ ನಿಂತು, **ಮೂನ್ರೆಳುತ್ತುಡೈಯಪೇರಾಲ್**-ಮೂರು ಅಕ್ಷರಗಳುಳ್ಳ ಗೋವಿಂದಾ ಎಂಬ ದಿವ್ಯನಾಮದಿಂದ, **ಕತ್ತಿರಬಂಧುಮ್ ಅನ್ರೆ**-**"ಬ್ರಹ್ಮಬಂಧು"** ಶಬ್ದವು ನೀಚ ಬ್ರಾಹ್ಮಣನನ್ನುಹೇಗೆ

**(೪) "ವೊಯ್‌ತ್ತ ವಲ್ಲಿನೈಯುಳ್ ನಿನ್ರು" ಇತ್ಯಾದಿಗಳಿಲುಮ್ ಅಭಿಪ್ರೇತಮಾನ ಪಡಿಯೇ ಇರ್ವ ಫಲಸಿದ್ಧಿಕ್ಕು ಕೋಲಿನ ಕಾಲತ್ತು ಕ್ಕುಳ್ಳೇ ಉಪಾಯ ಪೂರ್ತಿಯೈ ಯುಣ್ಡಾಕ್ಕಿ ರಕ್ಷಿಕ್ಕು ಮೆನ್ನುವಿಡತ್ತೈ**

ಹೇಳುತ್ತದೋ ಹಾಗೆ ತುಂಬಾ ನೀಚಕೃತ್ಯಗಳನ್ನು ಮಾಡುತ್ತಿದ್ದುದರಿಂದ ನೀಚ ಕ್ಷತ್ರಿಯನಾದ ಕ್ಷತ್ರಬಂಧುವಲ್ಲವೇ, **ಪರಾಂಗತಿಂ**-ಸರ್ವೋತ್ಕೃಷ್ಟಗತಿಯಾದ ಪರಮ ಪದವನ್ನು, **ಕಣ್ಡು ಕೊಣ್ಡ**-ನೋಡಿಕೊಂಡನು, ಎಂದರೆ ಹೊಂದಿ ಅನುಭವಿಸಿ ದನು ; **ಇತ್ತನೈ ಯಡಿಯಾರಾನಾರ್ಕು** – ಮನಸ್ಸಿನಿಂದ ಚಿನ್ತಿಸಿ ಉಪಾಸನಾದಿ ಗಳನ್ನು ಮಾಡದೆ ಬರೀ ಗೋವಿಂದಾ ಎಂದು ಇಷ್ಟುಮಾತ್ರ ನಾಮೋಚ್ಚಾರಣೆ ಮಾಡುವ ದಾಸಭೂತರಿಗೆ, **ಇರಙ್ಗುಮ್** - ಕೃಪೆಮಾಡಿ ಅನುಗ್ರಹಿಸುವ, **ನಮ್ ಅರಙ್ಗನ್ ಆಯ** - ನಮಗೆ ಸ್ವಾಮಿಯಾಗಿ ಮಹೋಪಕಾರಗಳನ್ನು ಮಾಡಬೇ ಕೆಂದು ಸಿದ್ಧವಾಗಿರುವ ಶ್ರೀರಂಗನಾಥನಾಗಿರುವ, **ಪಿತ್ತನೈ** - ಸೌಶೀಲ್ಯ ಗುಣ ಯುಕ್ತನಾದ ಭಗವಂತನನ್ನು, **ಪೆಱ್ರುಮ್** - ಅತನನ್ನು ಆಶ್ರಯಿಸಿ, ಇಲ್ಲೂ ಪರಮ ಪದದಲ್ಲೂ ಸಹ ಅನುಭವಿಸುವ ಅವಕಾಶವಿದ್ದರೂ, **ಪಿರಿವಿಯುಳ್** – ಪುನಃಪುನಃ ಜನ್ಮಗಳಿಗೆ ಸಿಲುಕಿ, **ಪಿಣಙ್ಗುಮ್ ಆರ್** - ನರಳುವ ವಿಧಾನವೇ, **ಅನ್ದೋ** - ಅಯ್ಯೋ ದುರ್ದೆಶೆಯೋ ಎಂಬ ಭಾವವು ಈ ಶ್ಲೋಕದಲ್ಲಿ ಮಹಾ ಪಾಪಿಷ್ಠನಾದ ಕ್ಷತ್ರಬಂಧುವೂ ಕೂಡ ಗೋವಿಂದನಾಮ ಸಂಕೀರ್ತನದಿಂದ ಮುಕ್ತಿಯನ್ನು ಹೊಂದಿದವನೆಂದು ಹೇಳಲ್ಪಟ್ಟಿರುತ್ತದೆ. ಕ್ಷತ್ರಬಂಧುವಿನ ವೃತ್ತಾಂ ತಕ್ಕೆ ಇದೇ ಗ್ರಂಥದ ಗುರುಪರಂಪರಾಸಾರದ ೫೦ ನೆಯ ಪುಟವನ್ನು ನೋಡಿ. ಈತನಿಗೆ ಸದ್ಗುರು ಪ್ರಾಪ್ತಿಯು ಶ್ರೀ ನಾರದರ ರೂಪದಲ್ಲಿ ಲಭಿಸಿ, ಮೂಲ ಮಂತ್ರ ಮೊದಲಾದ ಉಪದೇಶಗಳ ಮೂಲಕ ದೊರೆತು, ಮೋಕ್ಷಪ್ರಾಪ್ತಿಯುಂ ಟಾಯಿತೆಂಬ ವೃತ್ತಾಂತವಿರುವದರಿಂದ ಭರನ್ಯಾಸರೂಪೋಪಾಯಾನುಷ್ಠಾನ ಮೂಲಕವೇ ಲಭಿಸಿರಬಹುದೆಂದು ನಂಬತಕ್ಕದ್ದಾಗಿರುತ್ತದೆ. **ಇತ್ಯಾದಿಗಳಿ ಲುಮ್** - ಇವೇ ಮೊದಲಾದ ಪ್ರಮಾಣಗಳಲ್ಲೂ, **ಅಭಿಪ್ರೇತ ಮಾನ ಪಡಿಯೇ** - ತೋರಿ ಬರುವಹಾಗೆ, **ಇರ್ವ** – ಈ ಮುಂದ ವಿಶ್ವಾಸಯುಕ್ತನಾಗಿ ಭರನ್ಯಾಸವನ್ನನುಷ್ಠಿಸಿದವನು, **ಕೋಲಿನ ಕಾಲತ್ತುಕ್ಕುಳ್ಳೇ** – ಪ್ರಾರ್ಥಿಸಿದ ಕಾಲದೊಳಗೇ, **ಉಪಾಯ ಪೂರ್ತಿಯುಣ್ಡಾಕ್ಕಿ** - ಮಹಾ ವಿಶ್ವಾಸದೊಂದಿಗೆ, ಉಪಾಯ ಪೂರ್ತಿಯುಂಟಾಗುವಹಾಗೆ ಮಾಡಿ, **ರಕ್ಷಿಕ್ಕುಮ್** - ರಕ್ಷಿಸುವದು. ಇದಕ್ಕೆ ಕರ್ತೃಪದವು **ಅಪೂರ್ಣ** ಶರಣಾಗತಿಯು ಎಂದು ತಾತ್ಪರ್ಯಮೂಲಕ

(೪) ತಿರುಮಾಲೈ.

**ನಿನ್ನೈತ್ತು (೫)"ವೃಥೈವ ಭವತೋ ಯಾತಾ ಭೂಯಸೀ ಜನ್ಮ ಸಂತತಿಃ। ತಸ್ಯಾಮನ್ಯತಮಂ ಜನ್ಮ ಸಂಚಿಂತ್ಯ ಶರಣಂ ವ್ರಜ" ಎನ್ರು ದೇವಲನ್ನೈ ಕುರಿತ್ತು ಶ್ರೀ ಶಾಣ್ಡಿಲ್ಯ ಭಗವಾನರುಳಿಚೆಯ್‌ದಾನಿರೆ (೬) "ಶರಣ್ಯಂ ಶರಣಂಚ ತ್ವಾ ಮಾಹುರ್ದಿವ್ಯಾ ಮಹರ್ಷಯಃ" । ಎನ್ರುದು**

---

ಇಟ್ಟುಕೊಳ್ಳಬೇಕಾಗುತ್ತದೆ, ಹೀಗೆ ರಕ್ಷಿಸುತ್ತದೆ, ಎನ್ರುಮಿಡತ್ತೈ ನಿನ್ನೈತ್ತು - ಎಂಬ ಸಂದರ್ಭವನ್ನೇ ಪರ್ಯಾಲೋಚಿಸಿ, "**ಭವತಃ**-ನಿನಗೆ, **ಭೂಯಸೀ ಜನ್ಮ ಸಂತತಿಃ** - ಬಹುವಾದ ಜನ್ಮ ಪರಂಪರೆಯು, **ವೃಥೈವ** - ನಿನಗೆ ವಿಶ್ವಾಸವು ಮಂದವಾದುದರಿಂದಲಾಗಲಿ, ಇಲ್ಲದುದರಿಂದಲಾಗಲಿ ವ್ಯರ್ಥವಾಗಿಯೇ, **ಯಾತಾ**-ಕಳೆದು ಹೋಯಿತು, **ತಸ್ಯಾಂ** - ಆ ಜನ್ಮಸಂತತಿಯಲ್ಲಿ, **ಅನ್ಯತಮಂ ಜನ್ಮ** - ಈ ಒಂದು ಜನ್ಮವೆಂದು, **ಸಂಚಿಂತ್ಯ** - ಆಲೋಚಿಸಿ, **ಶರಣಂವ್ರಜ** - ಶರಣಾಗತಿಯನ್ನು ಹೊಂದು ಎಂದರೆ ಅನುಷ್ಠಿಸು,'' **ಎನ್ರು** - ಎಂದು, **ದೇವಲನ್ನೈಕುರಿತ್ತು** - ದೇವಲನನ್ನು ಕುರಿತು, ಶ್ರೀ ಶಾಂಡಿಲ್ಯ ಭಗವಾನ್, **ಅರುಳಿಚ್ಚೆಯ್‌ದಾನಿರೆ** - ಕೃಪಯಾ ಉಪದೇಶಿಸಿದರಷ್ಟೇ. ಹಿಂದೆ ಅನೇಕ ಜನ್ಮಸಂತತಿಕಳೆದರೂ ನೀನು ಶರಣಾಗತಿಯನ್ನನುಷ್ಠಿಸದೇ ಇದ್ದುದರಿಂದ ವ್ಯರ್ಥವಾದವು. ಈಗಲಾದರೂ ಆ ವ್ಯರ್ಥವಾದ ಜನ್ಮಗಳಲ್ಲಿ ಇದೂ ಒಂದೂ ವ್ಯರ್ಥವೆಂದಾದರೂ ಮಹಾ ವಿಶ್ವಾಸವಿರಲಿ, ಇಲ್ಲದಿರಲಿ ನೀನು ಶರಣಾಗತಿ ಮಾಡು ಹಾಗೆ ಮಾಡುವುದರಿಂದ, ಮುಂದಕ್ಕೆ ಮಹಾ ವಿಶ್ವಾಸಮೂಲಕ ಶರಣಾಗತಿಯನ್ನು ಮಾಡಿ ಕೊನೆಗೆ ಫಲವನ್ನು ಹೊಂದುವಿ ಎಂಬ ತಾತ್ಪರ್ಯವು. ಆದರೆ ಮಹಾ ವಿಶ್ವಾಸವುಂಟಾಗುವದು ಬಹಳ ದುಸ್ತರವು, ಮಹರ್ಷಿಗಳಿಗೆ ಒಂದುವೇಳೆ ಉಂಟಾಗಬಹುದು, ಹೀಗಿರುವಾಗ ಪ್ರಪತ್ತಿಗೆ ಅಙ್ಗವೆಂಬುದು ಹೇಗೆ ? ಎಂದರೆ "**ಶರಣ್ಯಂ**" ಎಂದಾರಂಭಿಸಿ ಸಮಾಧಾನ ಹೇಳಿ, ಪ್ರಪತ್ತಿಗೆ ಮಹಾ ವಿಶ್ವಾಸವು ಒಂದು ಅಙ್ಗವಾಗುವದರಲ್ಲಿ ನಿಸ್ಸಂದೇಹವೆಂದು ಈ ಮಹಾ ವಿಶ್ವಾಸಾಙ್ಗ ವಿಷಯವನ್ನು ನಿಗಮನಮಾಡಿ ಹೇಳುತ್ತಾರೆ:—(೬) **ಶರಣ್ಯಂ** - ಜ್ಞಾನಶಕ್ತಿ ದಯಾದಿ ಕಲ್ಯಾಣ ಗುಣಾಕರನಾಗಿ ಪ್ರಾಪ್ಯವೆಂದೂ, **ಶರಣಂಚ** - ಆಶ್ರಯಿಸಲು ಯೋಗ್ಯವಾದ ಗುಣಗಳಿಂದ ಸಿದ್ಧೋಪಾಯನೆಂದೂ, **ದಿವ್ಯಾ ಮಹರ್ಷಯಃ** - ತತ್ವಹಿತ ಪುರುಷಾರ್ಥಗಳ ಜ್ಞಾನವಿರುವ ಮಹರ್ಷಿಗಳು, ಶ್ರೀ ಪರಾಶರ ವ್ಯಾಸ ಶೌನಕ ವಾಲ್ಮೀಕ್ಯಾದಿಗಳು ಅಥವಾ ನಿತ್ಯ ಸೂರಿಗಳ ಅವತಾರವಾದ ಮಹರ್ಷಿಗಳು, **ಆಹುಃ** - ಹೇಳು

---

(೫) ಶಾಂಡಿಲ್ಯಸ್ಮೃತಿ. (೬) ರಾ. ಯುದ್ಧ. ೧೨೦. ೧೮.

**ವುಮ್, ಮಹರ್ಷಿಗಳುಕ್ಕೇ ವಿಶ್ವಾಸಮ್ ಕೊಡುವದು, ಇವರ್‌ಗಳ್ ವಾಕ್ಯತ್ತೈ ಯಿಟ್ಟು ಮಂದ ವಿಶ್ವಾಸರ್ಕ್ಕೆ ತೆಳಿವಿಕ್ಕ ವೇಣುಮ್ ಎನ್ರ ಪಡಿ. (ಇಪ್ಪಡಿ) ವಿಶ್ವಾಸತಾರತಮ್ಯ ಮುಣ್ಡಾಗೈಯಾಲೇ ಯಥಾಶಾಸ್ತ್ರಮ್ ಮಹಾ ವಿಶ್ವಾಸಮ್ ಪ್ರಪತ್ತ್ಯಙ್ಗಮಾಗಕ್ಕುರೈ ಯಿಲ್ಲೈ.**

---

ತ್ತಾರೆ. ಇದು ಚತುರ್ಮುಖನು ಶ್ರೀರಾಮನನ್ನು ಕುರಿತು ಹೇಳುವ ವಾಕ್ಯವು" **ಎನ್ರದುವುಮ್** - ಎಂಬಸ್ತ್ತಿಸು ಅಭಿಪ್ರಾಯವೇನೆಂದರೆ ತಿಳಿಸುತ್ತಾರೆ:— **ಮಹರ್ಷಿಗಳುಕ್ಕೇ ವಿಶ್ವಾಸಮ್ ಕೊಡುವದು** - ಮಹರ್ಷಿಗಳಿಗೇ ಮಹಾ ವಿಶ್ವಾಸವು ಸಲ್ಲತಕ್ಕದೆಂಬುವ ಹೇಳಿಕೆಯುಭಿಪ್ರಾಯವು, **ಇವರ್‌ಗಳ್ ವಾಕ್ಯತ್ತೈ ಯಿಟ್ಟು** – ಇವರುಗಳ ವಾಕ್ಯವನ್ನು ಮುಂದುಮಾಡಿ, **ಮಂದ ವಿಶ್ವಾಸರ್ಕ್ಕೆ** – ವಿಶ್ವಾಸದಲ್ಲಿ ನ್ಯೂನತೆ ಯಿರುವವರಿಗೆ, **ತೆಳಿವಿಕ್ಕವೇಣುಮ್**–ಸರಿಯಾದ ಜ್ಞಾನ ವನ್ನುಂಟುಮಾಡತಕ್ಕದ್ದೆಂದು, **ಎನ್ರಪಡಿ** - ಎಂದು ಉಪದೇಶಿಸಿದಹಾಗೆಂದು ಭಾವಿಸತಕ್ಕದ್ದು, **ಶರಣ್ಯಂ ಶರಣಂಚ** - ಎಂದು ಭಾವಿಸಬೇಕಾದರೆ, ಆತನೇ ಉಪೇಯನೂ ಉಪಾಯವೂ, ಆತನಲ್ಲದೆ ನಮಗೆ ಬೇರೆ ಗತಿಯಿಲ್ಲವಾದುದರಿಂದ ಆತನೇ ಖಂಡಿತವಾಗಿಯೂ ರಕ್ಷಿಸುವವನೆಂಬ ಮಹಾ ವಿಶ್ವಾಸದಿಂದ ಮಹರ್ಷಿ ಗಳೇನೋ ಹೇಳಿರುತ್ತಾರೆ; ಈ ಹೇಳಿಕೆಯಿಂದ ಮಂದ ವಿಶ್ವಾಸರೂಕೂಡ ಮುಂದಕ್ಕೆ ಪೂರ್ಣವಿಶ್ವಾಸಯುಕ್ತರಾಗಿ ಉಪಾಯ ನಿಷ್ಪತ್ತಿಯುಳ್ಳವರಾಗುತ್ತಾ ರೆಂಬ ಭಾವವು. ಆದುದರಿಂದ **ವಿಶ್ವಾಸ ತಾರತಮ್ಯ ಮುಣ್ಡಾಗೈಯಾಲೇ**- ವಿಶ್ವಾಸ ತಾರತಮ್ಯ ಉಂಟೆಂಬುದು ಶಾಸ್ತ್ರಮುಖೇನ ತೋರಿಬರುವದರಿಂದ, **ಯಥಾಶಾಸ್ತ್ರಮ್** - ಈ ಪ್ರಪತ್ತಿ ಶಾಸ್ತ್ರದಲ್ಲಿ ಹೇಳಿರುವಹಾಗೆ, **ಮಹಾ ವಿಶ್ವಾಸವು, ಪ್ರಪತ್ತ್ಯಙ್ಗಮಾಗಕ್ಕುರೈಯಿಲ್ಲೈ**–ಪ್ರಪತ್ತಿಗೆ ಅಙ್ಗವಾಗುವದಕ್ಕೇನೂ ಅಭ್ಯಂತರ ಅಥವಾ ನ್ಯೂನತೆ ಯಿಲ್ಲವು, ಪೂರ್ವ ಪಕ್ಷಿಗಳ ಎರಡು ಶಙ್ಕೆಗಳಿಗೂ ಸಮಾಧಾನ ಹೇಳಿರುತ್ತಾರೆ. (೧) ವಿಶ್ವಾಸದಲ್ಲಿ ತಾರತಮ್ಯವೆಂದರೇನು? ಎಂದು ಕೇಳಿದ್ದರು. ಇದಕ್ಕೆ ತಾರತಮ್ಯ ಉಂಟೆಂದು ಸ್ಥಾಪಿಸಿದರು. (೨) ಮಹಾವಿಶ್ವಾ ಸವು ಪ್ರಪತ್ತಿಗೆ ಅಙ್ಗವಲ್ಲವೆಂದ ಪೂರ್ವಪಕ್ಷಮಾಡಿದ್ದರು; ಮಹಾ ವಿಶ್ವಾಸವು ಅಙ್ಗವೆಂದು ಈಗ ಸ್ಥಾಪಿಸಿದರು

**ಮುಂದೆ ಭಕ್ತಿ ಪ್ರಪತ್ತಿಗಳಲ್ಲಿ ವಿಶ್ವಾಸವು ನಷ್ಟವಾಗಲು ಕಾರಣಗಳನ್ನು ತಿಳಿಸಿ, ಅವುಗಳಿಗೆ ಪರಿಹಾರವನ್ನು ಹೇಳುತ್ತಾರೆ.**

---

ಹಿಂದೆ ಮಹಾ ವಿಶ್ವಾಸವು ಪ್ರಪತ್ತ್ಯಙ್ಗವಾಗಲಾರದೆಂಬ ವಾದವನ್ನು ನಿರಾ

**ಅಥ ಭಕ್ತಿ ಪ್ರಪತ್ತ್ಯೋಃ ವಿಶ್ವಾಸ ಶೈಥಿಲ್ಯಹೇತೂನ್**
**ಅನೂದ್ಯ, ಪರಿಹರತಿ.**

**ಶಿಲರ್ಕ್ಕಿವತ್ತಿಲ್ ವಿಶ್ವಾಸಙ್ಕುಲೈಯುಮ್ ಪಡಿಯುಮ್, ಅದಕ್ಕು ಪರಿಹಾರಮುಮ್ ಶೊಲ್ಲುಗಿರೋಮ್.—ಭಕ್ತಿ ಪ್ರಪತ್ತಿಗಳ್ ಬುದ್ಧಿ ಭೇದತ್ತಾಲೆ ಐಶ್ವರ್ಯಮೋಕ್ಷಙ್ಗಳಾಗಿರ ವಿರುದ್ಧ ಫಲಙ್ಗಳೈ ಕೊಡುಕ್ಕಕ್ಕೂಡುಮೋ? ವಿರೈಕ್ಕ್ಕರವನುಡೈಯ ಅಭಿಸಂಧಿ ಭೇದತ್ತಾಲೆ ಒರುವಿರೈ**

---

ಕರಿಸಿ ಅವು ಪ್ರಪತ್ತಿಯ ಅಙ್ಗವೇ ಎಂದು ಸ್ಥಾಪಿಸಿದರು. ಪ್ರಾಸಙ್ಗಿಕವಾಗಿ, ಈ ಸಾಧ್ಯೋಪಾಯಗಳಾದ ಭಕ್ತಿ ಪ್ರಪತ್ತಿಗಳಲ್ಲಿ ವಿಶ್ವಾಸವು ಕಮ್ಮಿಯಾಗುವದಕ್ಕೆ ಹೇತುವಾಗಿ ಕೆಲವು ಶಙ್ಕೆಗಳುಂಟೆಂದು ಹೇಳಿ ಅವುಗಳಿಗೆ ಪರಿಹಾರವನ್ನು ಹೇಳುತ್ತಾರೆ. **ಶಿಲರ್ಕ್ಕು**-ಕೆಲವರಿಗೆ, **ಇವತ್ತಿಲ್**-ಈ ಸಾಧ್ಯೋಪಾಯಗಳಲ್ಲಿ, **ವಿಶ್ವಾಸವು ಕುಲೈಯುಮ್ ಪಡಿಯುಮ್**-ನಷ್ಟವಾಗುವ ಪ್ರಕಾರವನ್ನೂ, ಅದಕ್ಕೆ ಪರಿಹಾರವನ್ನೂ, **ಶೊಲ್ಲುಗಿರೋಮ್**-ಮುಂದೆ ಹೇಳುವೆವು ಇದು **ಪ್ರತಿಜ್ಞಾವಾಕ್ಯವು.**

ಮೊದಲು ವಿಶ್ವಾಸ ಶೈಥಿಲ್ಯ ಉಂಟಾಗುವಹಾಗೆ ಮಾಡುವ ಪೂರ್ವಪಕ್ಷವನ್ನು ಅನುವಾದ ಮಾಡುತ್ತಾರೆ, **ಭಕ್ತಿಪ್ರಪತ್ತಿಗಳು, ಬುದ್ಧಿಭೇದತ್ತಾಲೆ** - ಸಙ್ಕಲ್ಪ ಅಥವಾ ಉದ್ದೇಶ್ಯದ ಭೇದದಿಂದ, **ಐಶ್ವರ್ಯ ಮೋಕ್ಷಙ್ಗಳಾಗಿರ** - ಅಧಿಕಾರಿಯು ಐಶ್ವರ್ಯವನ್ನಪೇಕ್ಷಿಸದರೆ ಅದನ್ನೂ, ಅಥವಾ ಮೋಕ್ಷವನ್ನಪೇಕ್ಷಿಸಿದರೆ ಅದನ್ನೂ, ಹೀಗೆ ಬೇರೆಬೇರೆಯಾದ, **ವಿರುದ್ಧಫಲಙ್ಗಳೈ** - ವ್ಯತ್ಯಸ್ತಗಳಾದ ಫಲಗಳನ್ನು, ಹೇಗೆ ವ್ಯತ್ಯಸ್ತವೆಂದರೆ ಐಶ್ವರ್ಯವೆಲ್ಲಾ ಅಲ್ಪಾಸ್ಥಿರ ಫಲಗಳುಳ್ಳವು, ಮೋಕ್ಷವಾದರೋ ನಿತ್ಯವಾಗಿ ನಿರತಿಶಯವಾಗಿ ಮಹತ್ತಾಗಿರುವದು. ಹೀಗೆ ಭಿನ್ನ ಫಲಗಳನ್ನು, **ಕೊಡುಕ್ಕಕ್ಕೂಡುಮೋ** - ಕೊಡಲು ಸಾಧ್ಯವೋ? ಒಂದು ಕರ್ಮಕ್ಕೆ ಒಂದು ನಿಯತವಾದ ಫಲವಿರಬೇಕು. ಶರಣಾಗತಿಯೇಯಾಗಲಿ ಉಪಾಸನವೇ ಆಗಲಿ ಅಧಿಕಾರಿಯು ಐಹಿಕಾದಿ ಸಂಪತ್ತನ್ನಪೇಕ್ಷಿಸಿದರೆ ಆ ಫಲವನ್ನೂ ಅಥವಾ ಮೋಕ್ಷವನ್ನಪೇಕ್ಷಿಸಿದರೆ ಅದನ್ನೂ, ಹೀಗೆ ಎರಡು ಭಿನ್ನ ಫಲವನ್ನು, ಒಂದೇ ಕರ್ಮವು ಹೇಗೆ ಕೊಟ್ಟೀತು? ಎಂದಾಕ್ಷೇಪವು. ಈ ಆಕ್ಷೇಪವು ಒಂದು ಲೋಕದೃಷ್ಟಾಂತಮೂಲಕ ವ್ಯಕ್ತಗೊಳಿಸಲ್ಪಡುತ್ತದೆ, ಹೇಗೆಂದರೆ **ವಿರೈಕ್ಕಿರವನುಡೈಯ ಅಭಿಸಂಧಿಭೇದತ್ತಾಲೆ** - ಬೀಜಬಿತ್ತುವನ ಸಙ್ಕಲ್ಪದ ಭೇದದಿಂದ, **ಒರುವಿರೈ**-ಒಂದು ಬೀಜವು, **ವೇರೊರು ಫಲತ್ತೈ ಕ್ಕೊಡುಕ್ಕ**

**ವೇರೊರು ಫಲತ್ತೈಕ್ಕೊಡುಕ್ಕಕ್ಕೂಡವೋ? ಎನ್ರು ಶಿಲರ್ ಪಾರ್ಪ್ಪರ್ಗಳ್. ಇದುಕ್ಕು ಪರಿಹಾರಮ್:–ನ್ಯಾಯಜ್ಞಳಾಲ್ ಬಾಧಿಕ್ಕವೊಣ್ಣಾದ ಪಡಿ ಪ್ರತ್ಯಕ್ಷಾದಿಗಳ್ಪೊಲೆ ಸ್ವವಿಷಯತ್ತಿಲ್ ಪ್ರಮಾಣಮಾನ ಶಾಸ್ತ್ರಮ್ ಕಾಟ್ಟುಗೈಯಾಲ್ ಇಪ್ಪಡಿ ಕೂಡುಮ್. ಲೋಕತ್ತಿಲುಮ್**

---

**ಕೂಡವೋ** - ಭಿನ್ನ ಫಲಗಳನ್ನು ಕೊಡಲು ಸಾಧ್ಯವೊ? **ಎನ್ರು ಶಿಲರ್ ಪಾರ್ಪ್ಪರ್ಗಳ್** - ಎಂದು ಕೆಲವರು ಆಲೋಚಿಸುವರು. ಭತ್ತವನ್ನು ಬಿತ್ತಿ ಒಬ್ಬನು ರಾಗಿ ಪೈರನ್ನೂ, ಇನ್ನೊಬ್ಬನು ಗೋಧಿ ಪೈರನ್ನೂ, ತನ್ನ ಇಷ್ಟಾನುಸಾರ ಪಡೆಯುವದು ಹೇಗೆ ಅಸಾಧ್ಯವೋ ಹಾಗೆ ಭಕ್ತಿಯಾಗಲಿ, ಪ್ರಪತ್ತಿಯಾಗಲಿ ಒಬ್ಬನಿಗೆ ಐಶ್ವರ್ಯವನ್ನೂ ಇನ್ನೊಬ್ಬನಿಗೆ ಮೋಕ್ಷವನ್ನೂ ಅವರುಗಳ ಪ್ರಾರ್ಥನಾನುಗುಣವಾಗಿ ಕೊಡಲು ಸಾಧ್ಯವಲ್ಲವೆಂಬುದು ಆಕ್ಷೇಪವು. ಇದಕ್ಕೆ ಪರಿಹಾರ ವನ್ನು ಎರಡು ವಿಧವಾಗಿ ಅನುಗ್ರಹಿಸುತ್ತಾರೆ.

ಶಾಸ್ತ್ರಮರ್ಯಾದೆಯಲ್ಲಿ ಪ್ರತ್ಯಕ್ಷಾನುಮಾನಗಳ ನ್ಯಾಯವು ಕೂಡುವದಿಲ್ಲವು, ಎಂದು ತಿಳಿಸುತ್ತಾರೆ. ಆದರೆ ಅನೇಕ ಕಡೆಗಳಲ್ಲಿ ಶಾಸ್ತ್ರ ಪಙ್ತಿಗಳು ಲೋಕದೃಷ್ಟಾಂತದಿಂದ ಸಮರ್ಥಿಸಲ್ಪಟ್ಟಿರುತ್ತದೆಯಲ್ಲಾ ಎಂದರೆ, ಸಮರ್ಥನೆಯನ್ನು ಮಾಡಬಹುದು. ಆದರೆ ಶಾಸ್ತ್ರಪಙ್ತಿಗಳನ್ನು ಲೋಕ ನ್ಯಾಯದಿಂದ ಹೊಡೆದು ಹಾಕುವದು ಸರಿಯಲ್ಲವೆಂದು ತಿಳಿಸುತ್ತಾರೆ **ಇದುಕ್ಕು ಪರಿಹಾರಮ್** - ಇದಕ್ಕೆ ಪರಿಹಾರವು, ಕ್ರಿಯಾಪದವಿಲ್ಲದುದರಿಂದ ಹಿಂದಿನ **"ಶೊಲ್ಲು ಗಿರೋಮ್"** ಎಂದು ಇಟ್ಟುಕೊಳ್ಳತಕ್ಕದ್ದು; ಅಥವಾ ಪರಿಹಾರವು ಏನೆಂದರೆ ಎಂದು ಇಟ್ಟುಕೊಳ್ಳತಕ್ಕದ್ದು, **ನ್ಯಾಯಜ್ಞಳಾಲ್ ಬಾಧಿಕ್ಕವೊಣ್ಣಾದ** - ಪ್ರತ್ಯಕ್ಷಾನುಮಾನ ಪ್ರಮಾಣಗಳಿಗೆ ಸಂಬಂಧಿಸಿದ ನ್ಯಾಯಗಳಿಂದ ಬಾಧಿಸಕೂಡದ, ಎಂದರೆ ಹೊಡೆದು ಹಾಕಕೂಡದ, ತಿರಸ್ಕರಿಸಬಾರದ ಎಂಬರ್ಥವು, **ಪ್ರತ್ಯಕ್ಷಾದಿಗಳ್ಪೊಲೆ ಸ್ವವಿಷಯತ್ತಿಲ್ ಪ್ರಮಾಣಮಾನ ಶಾಸ್ತ್ರಮ್** - ಲೋಕ ವಿಷಯಗಳಲ್ಲಿ ಪ್ರತ್ಯಕ್ಷವೂ, ಆದಿಶಬ್ದದಿಂದ ಅನುಮಾನವೂ ಹೇಗೆ ಪ್ರಮಾಣಗಳೋ, ಹಾಗೆಯೇ **"ಸ್ವವಿಷಯತ್ತಿಲ್"** ಎಂದರೆ ಪ್ರತ್ಯಕ್ಷಾನುಮಾನಗಳಿಂದಲ್ಲದೆ **"ಶಾಸ್ತ್ರೇಣೈವಾವ ಸೇಯೇ"** ಶಾಸ್ತ್ರದಿಂದ ಮಾತ್ರ ವೇತಿಳಿಯತಕ್ಕ ವಿಷಯದಲ್ಲಿ, ಅಥವಾ ಭಕ್ತಿಪ್ರಪತ್ತಿರೂಪಸಾಧ್ಯೋಪಾಯಾನುಷ್ಠಾನದಲ್ಲಿ, **ಪ್ರಮಾಣಮಾನ** - ಪ್ರಮಾಣವಾಗಿರುವ, **ಶಾಸ್ತ್ರಮ್** - ಶಾಸ್ತ್ರವು, **ಕಾಟ್ಟುಗೈಯಾಲ್** - ತೋರಿಸುವದರಿಂದ, **ಇಪ್ಪಡಿ** - ಹೀಗೆ ಎಂದರೆ ಒಂದೇ ಅನುಷ್ಠಾನವು ಅಧಿಕಾರಿಯ ಪ್ರಾರ್ಥನಾನುಗುಣವಾಗಿ ಭಿನ್ನ ಫಲದಾಯಕವಾಗು

ವದು, ಕೂಡುವ್ - ಉಪಪನ್ನವಾದುದು ಅಥವಾ ಸಮಂಜಸವಾದುದು. ಲೌಕಿಕ ವಿಷಯದಲ್ಲಿ ಪ್ರತ್ಯಕ್ಷಾನುಮಾನಗಳು ಸಾಕ್ಷ್ಯವು. ಅತೀಂದ್ರಿಯ ವಾದ ವಿಷಯದಲ್ಲಿ ಪ್ರತ್ಯಕ್ಷಾನುಮಾನಗಳು ಪ್ರಯೋಜನವಾದವಲ್ಲವು. ಸರ್ವೇಶ್ವರನು ಒಬ್ಬನುಂಟು, ಆತನ ಸ್ವರೂಪವಿಂತಹುದು, ಸರ್ವೇಶ್ವರನನ್ನ ಹೊಂದುವ ಉಪಾಯಗಳು ಇವು, ಇಂತಹ ನಮ್ಮ ಇಂದ್ರಿಯಗಳಿಗೆ ಗೋಚರ ವಲ್ಲದ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣವು, ಲೌಕಿಕ ತರ್ಕವಾದಗಳು ಅವುಗಳ ವಿಷಯದಲ್ಲಿ ಉಪಯೋಗವಾದವುಗಳಲ್ಲವು. ಶಾಸ್ತ್ರ ಮರ್ಯಾದೆಯನ್ನು ಒಪ್ಪಿ ಕೊಂಡು ಅವುಗಳನ್ನು ಬೇಕಾದರೆ ಲೋಕತರ್ಕದಿಂದ ಸಮರ್ಥಿಸಬಹುದು. ಇಂತಹ ತರ್ಕವನ್ನು ವೇದವೂ ಕೂಡ ಅನುಮೋದಿಸುತ್ತದೆ; ಹೇಗೆಂದರೆ, ಸರ್ವೇಶ್ವರನು, ಜಗತ್ತಿಗೆ ಸರ್ವವಿಧಕಾರಣನು ಎಂದು ಸಮರ್ಥಿಸಲು ಯಥೋರ್ಣನಾಭಿ ಸ್ಸೃಜತೇ ಗೃಹ್ಣತೇಚ - ಜೇಡರ ಹುಳವು ತಂತು ನಿರ್ಮಾಣದಲ್ಲಿ ಹೇಗೆ ನಿಮಿತ್ತ ಉಪಾದಾನಾದಿ ಕಾರಣವೋ ಹಾಗೆ ಎಂದು ಲೋಕ ನ್ಯಾಯವನ್ನು ತರಬಹುದು. ಆದರೆ, "ನಹಿ ವಚನ ವಿರೋಧೇ ನ್ಯಾಯಃ ಪ್ರವರ್ತತೇ" ಎಂಬ ನ್ಯಾಯಾನುಸಾರ ಅತೀಂದ್ರಿಯ ವಿಷಯದಲ್ಲಿ ಲೋಕನ್ಯಾಯವನ್ನನುಸರಿಸಿ, ಶಾಸ್ತ್ರವಚನವನ್ನು ಹೊಡೆದು ಹಾಕಕೂಡದೆಂಬ ಭಾವವು. ಆದುದರಿಂದ ಸಾಧ್ಯೋಪಾಯಾನುಷ್ಠಾನವು ಅಧಿಕಾರಾನುಗುಣವಾಗಿ ತನ್ನ ಇಷ್ಟಾರ್ಥಪ್ರಾಪ್ತಿಗಾಗಿ ಶಾಸ್ತ್ರಗಳಲ್ಲಿ ವಿಧಿಸಿರುವದರಿಂದ ಭಿನ್ನ ಫಲಗಳನ್ನು ಕೊಡುವದರಲ್ಲಿ ಸಂದೇಹವಿಲ್ಲವು. ಸ್ವರ್ಗ ಅಥವಾ ಐಹಿಕ ಫಲಗಳನ್ನು ಕೋರಿ ದರೆ ಅವುಗಳೂ, ಮೋಕ್ಷವನ್ನು ಪ್ರಾರ್ಥಿಸಿದರೆ ಅದೂ, ದೊರೆಯುತ್ತವೆಂಬ ಭಾವವು. ಆದರೆ ಶಾಸ್ತ್ರವೆಂಬುದು ಯಾವುದು ಎಂದು ಕೇಳಬಹುದು ಕೆಲವು ಮಹನೀ ಯರೆಂದು ಭಾವಿಸಲ್ಪಟ್ಟಿರುವವರ ಹೇಳಿಕೆಗಳಾದ ಪ್ರಜಾಪತಿ ಸ್ಮೃತಿ, ಕಾಪಿಲ ಸ್ಮೃತಿ, ಇತ್ಯಾದಿ ವಾಕ್ಯಗಳೆಲ್ಲಾ ಶಾಸ್ತ್ರಗಳೇ? ಅವುಗಳು ಇತರ ಶ್ರುತ್ಯರ್ಥಗ ಳಿಗೆ ವಿರೋಧವಾದವುಗಳಾಗಿವೆಯಲ್ಲಾ? ಹಾಗಾದರೆ ಯಾವವುಗಳನ್ನು ಶಾಸ್ತ್ರ ವಾಗಿ ಇಟ್ಟುಕೊಳ್ಳತಕ್ಕದ್ದೆಂಬ ವಿಷಯದಲ್ಲಿ, "ಅಙ್ಗಾನಿವೇದಾಶ್ಚತ್ವಾರೋ ಮೀಮಾಂಸಾನ್ಯಾಯ ವಿಸ್ತರಃ। ಪುರಾಣಂಧರ್ಮಶಾಸ್ತ್ರಂಚ ವಿದ್ಯಾಹ್ಯೇತಾ ಚತುರ್ದಶ" ಎಂಬ ಮನುವಾಕ್ಯಾನುಸಾರ ಈ ಹದಿನಾಲ್ಕು ಪ್ರಮಾಣಗಳು. ಇವುಗಳನ್ನನುಸರಿಸಿರುವ ಪಾಂಚರಾತ್ರವೆಂಬ ಭಗವಚ್ಛಾಸ್ತ್ರವೂ, ಇವು ಗಳನ್ನನುಸರಿಸಿರುವ ಆಳ್ವಾರಾಚಾರ್ಯ ಸೂಕ್ತಿಗಳೂ ನಮಗೆ ಪ್ರಮಾಣ ಗಳೆ. ಇವುಗಳನ್ನೆಲ್ಲಾ ಪ್ರಮಾಣವಾಗಿಟ್ಟುಕೊಂಡು, ಲೋಕದೃಷ್ಟಾಂತ, ನ್ಯಾಯಗಳಿಂದ ಸಮರ್ಥಿಸಿದರೆ ಸತ್ತರ್ಕವು, ಹಾಗಲ್ಲದೆ ಲೋಕದೃಷ್ಟಾಂತ

**ಧರ್ಮಶೀಲನಾಯ್ ಉದಾರನಾನ ರಾಜಾವುಕ್ಕು ವಿಲೈಯಾಗ ಏದೇನು ಮೊನ್ರೈ ಕ್ಕೊಡುತ್ತಾಲ್ ಪೆರುಮ್ ವಿಲೈಕಿಡೈಕ್ಕವುಮ್; ಅದು ತನ್ನೈಯೇ ಉಪಹಾರ ಬುದ್ಧಿಯಾಲ್ ಕೊಡುತ್ತಾಲ್, ವೇಣ್ಡುವದೆಲ್ಲಾಮ್ ಕ್ಕಿಡೈಕ್ಕವುಮ್ ಕಾಣಾನಿನ್ರೋಮ್ ಇಪ್ಪಕ್ಕಿ ಪ್ರಪತ್ತಿಗಳ್ ಪ್ರಯೋಜ**

---

ನ್ಯಾಯಗಳನ್ನು ತಂದು ಶಾಸ್ತ್ರಪ್ರಮಾಣಗಳನ್ನು ದೂರೀಕೃತಮಾಡಿದರೆ ಅಸಮಂಜಸವಾದ ಕುತರ್ಕಗಳಾಗುತ್ತವೆಂಬ ತಾತ್ಪರ್ಯವು ಇಂತಹ ಶಾಸ್ತ್ರವನ್ನು ದೂರೀಕೃತಮಾಡಿದ ತರ್ಕವು "ತರ್ಕಾಽಪ್ರತಿಷ್ಠಾನಾತ್" ಎಂಬ ಬ್ರಹ್ಮಸೂತ್ರದಲ್ಲಿ (ಶಾ. ೨ ೧ ೧೧.) ನಿಂದಿಸಲ್ಪಟ್ಟಿರುತ್ತದೆ. ಹಾಗೆಯೇ ಸಿದ್ಧೋಪಾಯಶೋಧನಾಧಿಕಾರದಲ್ಲೂ "ಕುತರ್ಕವ್ಯಾಳದಷ್ಟಾನಾಂ ವಿಭ್ರಾಂತೇಂದ್ರಿಯವಾಜಿನಾಂ। ಅನ್ಯಥಾ ಪ್ರತಿಭಾತಿ" ಎಂದು ಇತಿಹಾಸ ಸಮುಚ್ಚಯದಲ್ಲೂ ನಿಂದಿಸಲ್ಪಟ್ಟಿರುತ್ತದೆ.

೨. ಮುಂದೆ ಇನ್ನೊಂದು ವಿಧವಾಗಿಯೂ ಸಮಾಧಾನವನ್ನು ಹೇಳುತ್ತಾರೆ ಬೀಜದೃಷ್ಟಾಂತದಿಂದ ಭಿನ್ನಫಲ ಲೋಕದಲ್ಲಿ ಕಂಡಿಲ್ಲವೆಂದಲ್ಲವೇ ಪೂರ್ವಪಕ್ಷವು ಹೇಳಲ್ಪಟ್ಟಿತು. ಆದುದರಿಂದ ಲೋಕದೃಷ್ಟಾಂತದಿಂದಲೇ ಸಮಾಧಾನವು ಯುಕ್ತವೆಂದು ಭಾವಿಸಿ ಭಿನ್ನಫಲವುಂಟೆಂದು ಬೇರೆ ದೃಷ್ಟಾಂತಗಳ ಮೂಲಕ ವ್ಯಕ್ತಪಡಿಸುತ್ತಾರೆ :— **ಲೋಕತ್ತಿಲುಮ್** - ಲೋಕದಲ್ಲೂ, ಧರ್ಮಶೀಲನಾದ, ಉದಾರ ಸ್ವಭಾವವುಳ್ಳ ರಾಜನಿಗೆ, **ವಿಲೈಯಾಗ** - ಕ್ರಯವಾಗಿ, **ಏದೋನುಮೊನ್ರೈ** - ಯಾವುದಾದರೂ ಒಂದನ್ನು (ಒಂದೆರಡು ನಿಂಬೇ ಹಣ್ಣನ್ನೇಯಾಗಲಿ) **ಕೊಡುತ್ತಾಲ್** - ಕೊಟ್ಟರೆ, **ಅದು ಪೆರುಮ್ ವಿಲೈಕ್ಕಿಡೈಕ್ಕುಂ**- ಅದು ಆಗುವ ಬೆಲೆಯು ಲಭಿಸುವದು; **ಅದು ತನ್ನೈಯೇ**-ಅವನ್ನೇ, **ಉಪಹಾರ ಬುದ್ಧಿಯಾಲೇ**-ರಾಜಮರ್ಯಾದೆ ಎಂಬ ಬುದ್ಧಿಯಿಂದ, **ಕೊಡುತ್ತಾಲ್**-ಕೊಟ್ಟರೆ, **ವೇಣ್ಡುವದೆಲ್ಲಾಮ್ ಕಿಡೈಕ್ಕುಮ್**-ಈತನು ಪ್ರಾರ್ಥಿಸುವದೆಲ್ಲಾ ಲಭಿಸುತ್ತದೆ ಎಂಬುದನ್ನು, **ಕಾಣಾನಿನ್ರೋಮ್** - ನಾವು ಪ್ರತ್ಯಕ್ಷದಲ್ಲೇ ಕಂಡಿರುವೆವು; ಪ್ರತ್ಯಕ್ಷ ಪ್ರಮಾಣದಿಂದಲೇ ವೇದ್ಯವೆಂಬ ಭಾವವು; ಒಬ್ಬ ಕವಿಯು ಒಂದು ಸಂಸ್ಕೃತ ಗ್ರಂಥವನ್ನು ಬರೆದು ರಾಜನಿಗೆ ಸಮರ್ಪಿಸಿದರೆ, ಅದರ ಕ್ರಯದಲ್ಲಿ ದೃಷ್ಟಿ ಇಟ್ಟು ಕೊಟ್ಟರೆ ಅದರ ಬೆಲೆಯಾದ ಒಂದೆರಡು ರೂಪಾಯಿಗಳು ಮಾತ್ರ ಈತನಿಗೆ ಲಭಿಸುತ್ತವೆ. ಹಾಗಲ್ಲದೆ ರಾಜನಿಗೆ ಮರ್ಯಾದಾರ್ಥವಾಗಿ ಸಮರ್ಪಿಸಿದರೆ, ಆತನು ಅದರಿಂದ ಸುಪ್ರೀತನಾದರೆ ಈತನು ಕೇಳುವ ಅತಿಶಯವಾದ ಇಷ್ಟಾರ್ಥಗಳು ಲಭಿಸುತ್ತವೆ. ಹೀಗೆ ನಡೆದಿರುವದು ನಾವು ಪ್ರತ್ಯಕ್ಷದಲ್ಲೇ ಕಂಡಿರುತ್ತೇವೆ

**ನಾಂತರ ಪರನುಕ್ಕು ಪ್ರವೃತ್ತಿಧರ್ಮ ಕೋಟಿಯಿಲೇ ನಿರ್ಕುಮ್; ಭಗವಚ್ಚರಣಾರ್ಥಿಗಳುಕ್ಕು ನಿವೃತ್ತಿ ಧರ್ಮಙ್ಗಳಾಮ್. ಇವ್ವರ್ಥಮ್ ನಿತ್ಯನೈಮಿತ್ತಿಕಾದಿಗಳಿಲುಮೊಕ್ಕುಮ್.**

---

ಎಂಬ ಭಾವವು. ಆದುದರಿಂದ ಹಾಗೆಯೇ ಭಕ್ತಿಪ್ರಪತ್ತಿಗಳು ಅಧಿಕಾರಿಯ ಇಷ್ಟಾನುಸಾರ ಭಿನ್ನ ಫಲದಾಯಕಗಳಾಗುವದರಲ್ಲಿ ಸಂದೇಹವಿಲ್ಲವೆಂಬ ತಾತ್ಪರ್ಯವು ಪ್ರತ್ಯಕ್ಷದಲ್ಲೇ ಒಂದೇ ಕಾರಣವು ಭಿನ್ನ ಫಲಗಳನ್ನು ಕೊಟ್ಟಿರುವದನ್ನು ಇತರ ಲೋಕದೃಷ್ಟಾಂತಗಳಿಂದ ವ್ಯಾಖ್ಯಾತೃಗಳು ವ್ಯಕ್ತಪಡಿಸಿರುತ್ತಾರೆ. ಬೆತ್ತದ ಬೀಜಕ್ಕೆ ಅಗ್ನಿಸಂಯೋಗ ಉಂಟಾದರೆ ವಿಜಾತೀಯವಾದ ಕದಳಿಯು (ಬಾಳೇಗಿಡ) ಉಂಟಾಗುವದನ್ನೂ ಹಾಗೆಯೇ ದ್ರವ್ಯಾರ್ಜನೆಗೆ ಸಾಧನವಾದ ರತ್ನ ಮೊದಲಾದವುಗಳಲ್ಲಿ ಪುರುಷಭೇದದಿಂದ ನ್ಯೂನಾಧಿಕ ಫಲವುಂಟಾಗುವದನ್ನೂ ಕಂಡಿರುವೆವು. ಹಾಗೆಯೇ ಭಕ್ತಿಪ್ರಪತ್ತಿಗಳೂ ಸರ್ವಫಲಗಳನ್ನೂ ಕೊಡುವುವು ಎಂಬ ತಾತ್ಪರ್ಯವು ಆದುದರಿಂದ ಭಕ್ತಿಪ್ರಪತ್ತಿಗಳೂ ಪ್ರವೃತ್ತಿಧರ್ಮರೂಪವಾದ ಕಾಮ್ಯಕರ್ಮಗಳಾಗಿ ಪರಿಣಮಿಸಿ, ಐಶ್ವರ್ಯಾದಿಗಳನ್ನು ಸಾಧಿಸಿಕೊಡಬಹುದು; ನಿವೃತ್ತಿ ಧರ್ಮರೂಪವಾದ ಫಲಾಭಿಸಂಧಿರಹಿತವಾದವುಗಳಾಗಿ ಮೋಕ್ಷವನ್ನು ಸಾಧಿಸಿಕೊಡಬಹುದು, ಎಂದು ಮುಂದಿನ ವಾಕ್ಯದಿಂದ ಸ್ಥಾಪಿಸುತ್ತಾರೆ:—

**ಇಬ್ಭಕ್ತಿಪ್ರಪತ್ತಿಗಳ್**- ಈ ಭಕ್ತಿಪ್ರಪತ್ತಿರೂಪ ಸಾಧ್ಯೋಪಾಯಗಳು, **ಪ್ರಯೋಜನಾಂತರ ಪರನುಕ್ಕು** - ಮೋಕ್ಷವಲ್ಲದೆ ಇತರ ಪ್ರಯೋಜನಗಳನ್ನಪೇಕ್ಷಿಸುವವನಿಗೆ, **ಪ್ರವೃತ್ತಿಧರ್ಮಕೋಟಿಯಿಲೇ** - ಪ್ರವೃತ್ತಿ ಧರ್ಮಗಳೆಂಬ ತರಗತಿಯಲ್ಲಿ **ನಿರ್ಕುಮ್** - ನಿಲ್ಲುವುವು; ಎಂದರೆ ಕಾಮ್ಯಕರ್ಮಗಳ ಹಾಗೆ ಫಲಗಳನ್ನು ಕೊಡುವುವು. **ಭಗವಚ್ಚರಣಾರ್ಥಿಗಳುಕ್ಕು** - ಭಗವಂತನ ಪಾದಕಮಲಗಳನ್ನೇ ಪ್ರಾಪ್ಯವಾಗಿ ಅಪೇಕ್ಷಿಸುವವರಿಗೆ, ಪರಮಪದದಲ್ಲಿ ಆತನ ಪಾದದ್ವಂದದಲ್ಲಿ ಕೈಂಕರ್ಯಪರರಿಗೆ ಎಂಬ ಭಾವವು, ಅವು, **ನಿವೃತ್ತಿಧರ್ಮಙ್ಗಳಾಮ್**- ನಿವೃತ್ತಿ ಧರ್ಮಗಳಾಗುವುವು. ಅಧಿಕಾರಿಗಳ ಅಭಿಸಂಧಿಯ ವ್ಯತ್ಯಾಸದಿಂದ ಒಂದೇ ಅನುಷ್ಠಾನವು ಭಿನ್ನಫಲಗಳನ್ನು ಕೊಡುತ್ತವೆ ಎಂಬುದು ತಾತ್ಪರ್ಯವು. ಜಾತೇಷ್ಟ್ಯಾದಿಗಳೂ ಕೂಡ ಫಲಾಭಿಸಂಧಿಯಿಲ್ಲದೆ ಅನುಷ್ಠಿಸಲ್ಪಟ್ಟರೆ ನೈಮಿತ್ತಿಕಗಳಾಗಿ ಪರಿಣಮಿಸಿ ವಿಶೇಷ ಭಗವತ್ಪ್ರೀಣನ ಮೂಲಕ ಅತಿಶಯಿತ ಫಲವನ್ನುಂಟುಮಾಡಬಹುದು. ಅದೇ ಫಲಕಾಮನೆಯಿಂದ ಮಾಡಲ್ಪಟ್ಟರೆ ಕಾಮ್ಯವಾಗಿ ಪರಿಣಮಿಸಿ ಅನಿತ್ಯಫಲವನ್ನುಂಟುಮಾಡುತ್ತದೆ ಹಾಗೆಯೇ ಇವುಗಳೂ ಎಂದು ಅಙ್ಗೀಕರಿಸಬಹುದೆಂಬ ತಾತ್ಪರ್ಯವು ಆದರೆ ಕಾಮ್ಯವಾಗಿ ಪ್ರವೃತ್ತಿ

**ಯಥಾಽಭಿಸಂಧಿ ಭೇದಾತ್ ಏತಯೋಃ ಭಿನ್ನ ಫಲತ್ವಂ, ತಥಾ ಭಿನ್ನಾಧಿಕಾರಾದಪಿ ಏಕಫಲಸಾಧನತ್ವಮ್,**

**ಇಪ್ಪಡಿಯೇ ಆವೃತ್ತ್ಯನಾವೃತ್ತ್ಯಾದಿಗಳಾಲೇ ವಿಷಮುಸ್ವಭಾವಙ್ಗಳಾನ**

---

ಧರ್ಮವಾಗಿ ಅನುಷ್ಠಿಸಿ, ಅನಿತ್ಯ ಫಲಕಾಮನೆಯಿಂದ ಮಾಡಿದರೂಕೂಡ, ಭಗವತ್ಪಾದಾರವಿಂದದಲ್ಲಿ ಮಾಡಿದ ಶರಣಾಗತಿಯಾದುದರಿಂದ, ಸುಕೃತವಾಗಿ ಪರಿಣಮಿಸಿ ಕಾಲಕ್ರಮದಿಂದ ಸದ್ಗುರೂಪದೇಶಾದಿಗಳು ಲಭಿಸಿ, ಮೋಕ್ಷಾರ್ಥವಾಗಿ ಪ್ರಪದನವನ್ನು ಅನುಷ್ಠಿಸಿ, ದಿವ್ಯ ವೈಕುಂಠವನ್ನು **"ನಹಿಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತಗಚ್ಛತಿ"** ಎಂಬ ವಾಕ್ಯಾನುಸಾರ ಪಡೆಯಬಹುದು. ಹೀಗೆ ಪ್ರವೃತ್ತಿ ಧರ್ಮಾನುಷ್ಠಾನವು ಉತ್ತರೋತ್ತರ ನಿವೃತ್ತಿಧರ್ಮಾನುಷ್ಠಾನಕ್ಕೆ ಹೇತುವಾಗಬಹುದು. ಹೀಗೆ ಒಂದೇ ಧರ್ಮವು ಅಭಿಸಂಧಿ ಭೇದದಿಂದ ಪ್ರವೃತ್ತಿ ಧರ್ಮವಾಗಲಿ ನಿವೃತ್ತಿಧರ್ಮವಾಗಲಿ ಆಗಿ, ಫಲ ಭೇದವನ್ನು, **"ಪ್ರವೃತ್ತಿಃ ಪುನರಾವೃತ್ತಿಃ ನಿವೃತ್ತಿಃ ಪರಮಾಗತಿಃ"** ಎಂದು ಮೋಕ್ಷಧರ್ಮದಲ್ಲಿ ಹೇಳಿರುವಹಾಗೆ ಕೊಟ್ಟು, ಪುನಸ್ಸಂಸಾರಕ್ಕಾಗಲಿ ಮೋಕ್ಷಕ್ಕಾಗಲಿ ಸಹಕಾರಿಯಾಗಬಹುದು. **ಇವ್ವರ್ಥಮ್** – ಈ ಅಭಿಪ್ರಾಯವು ಎಂದರೆ ಒಂದೇ ಧರ್ಮಾನುಷ್ಠಾನವು ಭಿನ್ನಫಲಗಳನ್ನುಂಟುಮಾಡುವದೆಂಬುದು, **ನಿತ್ಯನೈಮಿತ್ತಿಕಾದಿಗಳಿಲುಮ್ ಒಕ್ಕುಮ್**– ನಿತ್ಯ ನೈಮಿತ್ತಿಕಙ್ಗಳಲ್ಲೂ ತುಲ್ಯವಾದುದು, ಸಮಾನವಾದುದು. ನಿತ್ಯಕ್ಕೆ ಉದಾಹರಣೆಯಾಗಿ, ಸಂಧ್ಯೋಪಾಸನಾದಿಗಳು ಕೆಲವರಿಗೆ ಪ್ರತ್ಯವಾಯ ಪರಿಹಾರಾರ್ಥವಾದುದು ಮಾತ್ರವೇಯಾಗಿ, ಇನ್ನು ಕೆಲವರಿಗೆ ಮೋಕ್ಷಪ್ರಾಪ್ತಿಗೆ ಸಹಕಾರಿಯಾಗಿಯೂ ಆಗಬಹುದು. ನೈಮಿತ್ತಿಕಕ್ಕೆ ಹಿಂದೆ ಜಾತ್ಯೇಷ್ಟಿಯ ನಿದರ್ಶನವು ಹೇಳಲ್ಪಟ್ಟಿತು. ಹೀಗೆ ಅಧಿಕಾರಿಯು ಅಭಿಸಂಧಿ ಭೇದದಿಂದ ಫಲಭೇದ ಉಂಟೆಂಬುದನ್ನು ಶಾಸ್ತ್ರವೂ ಹೇಳುವದರಿಂದಲೂ, ಲೋಕನ್ಯಾಯದಿಂದಲೂ, ಸಮಂಜಸವೇ; ಆದುದರಿಂದಲೂ ಸ್ಥಾಪಿತವು ಎಂಬ ಭಾವವು.

**ಇವುಗಳಿಗೆ ಅಭಿಸಂಧಿ ಭೇದದಿಂದ ಭಿನ್ನಫಲತ್ವವು ಹೇಗೋ, ಹಾಗೆ ಅಧಿಕಾರಿ ಭೇದದಿಂದ ಏಕಫಲತ್ವವೂ ಕೂಡುತ್ತದೆ.**

---

ಪ್ರಾಸಙ್ಗಿಕವಾಗಿ ಇನ್ನೊಂದು ಪೂರ್ವಪಕ್ಷಕ್ಕೂ ಸಮಾಧಾನವನ್ನು **ಹೇಳುತ್ತಾರೆ. ಪೂರ್ವಪಕ್ಷವು** ಹೇಗೆಂದರೆ, **ಉಪಾಸನವು ಚಿರಕಾಲ ಸಾಧ್ಯವಾದುದು, ಯಾವಜ್ಜೀವವೂ ನಡೆಸತಕ್ಕದ್ದು, ಮಹಾಪ್ರಯತ್ನಸಾಧ್ಯವು, ಈ ದೇಹಾವಸಾನದಲ್ಲೇ**

**ಉಪಾಸನ ಪ್ರಪದನಙ್ಗಳ್ ಏಕಫಲಸಾಧನಮಾಗ ಕ್ಕೊಡುಮೋ ವೆನ್ನಿಲ್? ಇದುಕ್ಕುತ್ತರಮ್ ಅಧಿಕಾರಿ ವಿಶೇಷತ್ತಾಲೆ ಲೋಕವೇದಙ್ಗಳಿಲ್ಪಡಿಯೇ ಸಿದ್ಧಮ್.**

---

ಮೋಕ್ಷಪ್ರಾಪ್ತಿ ಆದರೂ ಆಗಬಹುದು, ಅಥವಾ ವಿಳಂಬಿಸಬಹುದು; ಹೀಗೆ ತುಂಬಾ ಗುರುತರವಾದುದು; ಪ್ರಪದನವಾದರೋ ಕ್ಷಣಕಾಲ ಸಾಧ್ಯವಾದುದು, ಅತಿ ಸುಲಭವಾಗಿ ಸಕೃದನುಷ್ಠೇಯವು, ದೇಹಾವಸಾನದಲ್ಲೇ ಮೋಕ್ಷದಾಯಕವು; ಇಂತಹ ಗುರು ಲಘುಗಳಾದ ಉಪಾಯಗಳೆರಡಕ್ಕೂ ಮುಮುಕ್ಷುಗಳಿಗೆ ತುಲ್ಯಫಲವೆಂದರೆ ಒಪ್ಪತಕ್ಕದ್ದೇ ಎಂಬಾಕ್ಷೇಪವು; ಇದಕ್ಕೆ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ:—**ಇಪ್ಪಡಿಯೇ** - ಹೀಗೆ ಎಂದರೆ ಹೇಗೆ ಅಧಿಕಾರಿಯು ಇಷ್ಟಾರ್ಥಾನುಗುಣವಾಗಿ ಅನಿತ್ಯ ಫಲವಾಗಲಿ ನಿರತಿಶಯ ನಿತ್ಯ ಫಲವಾಗಲಿ ಒಂದೇ ಅನುಷ್ಠಾನದಿಂದ ಲಭಿಸುತ್ತದೋ, ಹಾಗೆಯೇ ಅದೇ ನ್ಯಾಯದಿಂದಲೇ, **ಆವೃತ್ತ್ಯನಾವೃತ್ತಿ ವಿಷಮಸ್ವಭಾವಙ್ಗಳಾನ** - ಭಕ್ತಿಮಾರ್ಗದಲ್ಲಿ ಪ್ರಾರಬ್ಧವೆಲ್ಲಾ ಕಳೆದನಂತರವೇ ಮೋಕ್ಷವಾದುದರಿಂದ ಅನಭ್ಯುಪಗತ ಪ್ರಾರಬ್ಧವೂ ಕಳೆಯುವದಕ್ಕಾಗಿ ಒಂದುವೇಳೆ ಆವೃತ್ತಿ ಇದ್ದರೂ ಇರಬಹುದು, ಆದರೆ ಪ್ರಪತ್ತಿಗೆ ಅನಾವೃತ್ತಿಯೇ ವಿನಾ ಆವೃತ್ತಿಯಿಲ್ಲವು, ಹೀಗೆ ವ್ಯತ್ಯಸ್ತವಾದ ಸ್ವಭಾವವುಳ್ಳ, **ಉಪಾಸನ ಪ್ರಪದನಗಳು, ಏಕಫಲ ಸಾಧನಮಾಗಕ್ಕೊಡಮೋ** - ಒಂದೇ ಫಲವಾದ ಮೋಕ್ಷವನ್ನು ಸಾಧಿಸಿಕೊಡುತ್ತವೆಂದು ಹೇಳುವದು ಸಮಂಜಸವೋ? **ಇದಕ್ಕು ಉತ್ತರಮ್** - ಇದಕ್ಕೂ ಕೂಡ ಸಮಾಧಾನರೂಪವಾದ ಉತ್ತರವು, ಏನೆಂದರೆ:—**ಅಧಿಕಾರಿ ವಿಶೇಷದಿಂದ, ಲೋಕವೇದಙ್ಗಳಿಲ್ಪಡಿಯೇ** - ಲೋಕದೃಷ್ಟಾಂತದಿಂದಲೂ ವೇದಗಳಲ್ಲಿ ಪಠಿತವಾಗಿರುವದರಿಂದಲೂ ತೋರಬರುವದು ಹೇಗೋ ಹಾಗೆ, **ಸಿದ್ಧಮ್** - ಸ್ಥಾಪಿತವು. ಒಂದೇ ಅನುಷ್ಠಾನಕ್ಕೆ ಅಭಿಸಂಧಿ ಭೇದದಿಂದ ಭಿನ್ನಫಲವು ಹೇಗೆ ಸಮಂಜಸವೋ, ಹಾಗೆಯೇ ಭಿನ್ನಾನುಷ್ಠಾನಗಳಿಗೂ ಏಕಫಲವೂ ಸಮಂಜಸವು ಇದು ಲೋಕ ಮತ್ತು ವೇದಸಿದ್ಧವೆಂದು ಸಙ್ಗ್ರಹವಾಗಿ ಹೇಳಿದರು. ಆದುದರಿಂದ ಮೋಕ್ಷಾರ್ಥಿಯಾಗಿರುವವರು, ಉಪಾಸನಕ್ಕೆ ಅಧಿಕಾರಿಯಾಗಿ ಭಕ್ತ್ಯುಪಾಯವನ್ನು ಕೈಕೊಂಡರೂ, ಅಥವಾ ಪ್ರಪದನಕ್ಕೆ ಅಧಿಕಾರಿಯಾಗಿ ಭರನ್ಯಾಸವನ್ನು ಕೈಕೊಂಡರೂ ಒಂದೇ ಫಲವಾದ ಮೋಕ್ಷಪ್ರಾಪ್ತಿಯುಂಟಾಗುವದೂ ಸಹ ಸಮಂಜಸವೇ, ಇದಕ್ಕೆ ಲೋಕದೃಷ್ಟಾಂತ ಶಾಸ್ತ್ರ ಪ್ರಮಾಣಾಂತರವೂ ಉಂಟೆಂದು ಹೇಳುತ್ತಾರೆ, ಲೋಕದೃಷ್ಟಾಂತಕ್ಕೆ ಒಬ್ಬನು ಕೃಷಿಯಿಂದ ಸಾಧಿತ ಧಾನ್ಯವನ್ನು ಇನ್ನೊಬ್ಬನು

## ಆರ್ತದೃಪ್ತಾನಾಂ ಫಲ ನಿಷ್ಪತ್ತೌ ವಿಳಂಬಾವಿಳಂಬ ಶಙ್ಕಾಪರಿಹಾರಃ

**ಮುಮುಕ್ಷುಕ್ಕಳಾಯ್ ಸ್ವತಂತ್ರ ಪ್ರಪತ್ತಿ ಪಣ್ಣಿನವರ್‌ಗಳುಕ್ಕು ಉಪಾಯಮುಮ್ ಮೋಕ್ಷಮುಮ್ ಏಕರೂಪ ಮಾಯಿರುಕ್ಕ ಚ್ಚೆಯ್ ದೇಯುಮ್ ಸಂಸಾರಿತ್ತಿಲ್ ಅಡಿಚ್ಚೊಟ್ಟಾಲ್ ವರುಮ್ ತ್ವರೈಯಿನ್**

---

ವಾಣಿಜ್ಯದಿಂದ ಸಾವಿರ ರೂಪಾಯಿಯನ್ನೂ ಕ್ಲಿಪ್ತಕಾಲದಲ್ಲಿ ಸಂಪಾದಿಸಬಹುದು. ಇಲ್ಲಿ ಭಿನ್ನಾಧಿಕಾರಿಗಳು ಒಂದೇ ಫಲವನ್ನೇ ಹೊಂದಿರುತ್ತಾರೆ. ಹಾಗೆಯೇ ವೇದದಲ್ಲೂ ಮಾನಸ ಮಂತ್ರಸ್ನಾನಕ್ಕೂ ಜಲಾಶಯದಲ್ಲಿ ವಾರುಣಸ್ನಾನಕ್ಕೂ ಒಂದೇ ಫಲವೆಂದು ಹೇಳಲ್ಪಟ್ಟಿರುತ್ತದೆ, ಹಾಗೆಯೇ ತ್ರಿವರ್ಣದವರಿಗೂ ಶೂದ್ರರಿಗೂ ನಿತ್ಯ ನೈಮಿತ್ತಿಕಗಳು ಭಿನ್ನವಾದವುಗಳಾಗಿದ್ದರೂ ಅವರುಗಳಿಗೆಲ್ಲಾ ಫಲದಲ್ಲಿ ಸಮಭಾವವೇ ಉಂಟು ಇದನ್ನು ತಿಳಿಯದೆ ಶೂದ್ರಾದಿಗಳಿಗೆ **ಶೂದ್ರಸ್ಸಾಧುಃ** ಎಂದು ಹೇಳಿರುವಹಾಗೆ ಅವುಗಳು ಅತಿ ಸುಲಭವಾಗಿದ್ದರೂ ಕಷ್ಟತರಗಳಾದ ಅನುಷ್ಠಾನಪರರಾದ ಬ್ರಾಹ್ಮಣರಲ್ಲಿ ಅಸೂಯೆಯು ತಪ್ಪಲಿಲ್ಲವು. ಇಂತಹ ದೃಷ್ಟಾಂತಗಳು **ಲೋಕಾನುಭವವಿರುವವರಿಗೂ**, ಶಾಸ್ತ್ರಮರ್ಯಾದೆಯನ್ನರಿತವರಿಗೂ, ವ್ಯಕ್ತವಾದುದರಿಂದ ಅವುಗಳನ್ನು ಉದಾಹರಿಸದೆ, **ಸಿದ್ಧಮ್** ಎಂದು ಇಷ್ಟುಮಾತ್ರವೇ ಹೇಳಿದರು. **ಲೋಕವೇದಙ್ಗಳಿಲ್** ಎಂಬ ಪ್ರಯೋಗದಲ್ಲಿ ಲೋಕ ಶಬ್ದಕ್ಕೆ **ಲೋಕ್ಯತೇ ಅನೇನ** ಎಂಬ ವ್ಯುತ್ಪತ್ತಿ ಮೂಲಕ ಪ್ರಮಾಣವೆಂದು ಶ್ರೀ ನಿಗಮಾಂತದೇಶಿಕರೇ ಅರ್ಥಮಾಡಿರುತ್ತಾರೆ ಇಲ್ಲಿ ಪ್ರಮಾಣವು ಶಾಸ್ತ್ರ ಪ್ರಮಾಣವಾದುದರಿಂದ, ವೇದವು ಹೇಳಲ್ಪಟ್ಟಿರುವದರಿಂದ ಗೋಬಲೀವರ್ದ ನ್ಯಾಯರೀತ್ಯಾ ಲೋಕವೆಂದರೆ ಸ್ಮೃತಿ ಎಂದು ಅರ್ಥಮಾಡಿರುತ್ತಾರೆ. ಸ್ಮೃತಿ ಶ್ರುತಿಗಳಲ್ಲಿ ಸಿದ್ಧವೆಂದು ಅರ್ಥಮಾಡಬಹುದು

## ಆರ್ತ ದೃಪ್ತರಿಗೆ ಫಲಪ್ರಾಪ್ತಿಯಲ್ಲಿ ವಿಳಂಬಾವಿಳಂಬಗಳು ಯುಕ್ತವೋ ಎಂಬ ಶಙ್ಕಾ ಪರಿಹಾರವು.

ಒಂದೇ ಉಪಾಯವಾದ ಭರನ್ಯಾಸವನ್ನೇ ಇಬ್ಬರು ಮುಮುಕ್ಷುಗಳು ಅನುಷ್ಠಿಸಿದ್ದರೂ, ಇಬ್ಬರಿಗೂ ಮೋಕ್ಷಫಲವು ಒಂದೇಯಾಗಿ ಇದ್ದರೂ, **ಆರ್ತನಾದ** ಒಬ್ಬನಿಗೆ ವಿಳಂಬವಿಲ್ಲದೆ ದೇಹಾವಸಾನದಿಂದ ಮೋಕ್ಷವೆಂದೂ, **ದೃಪ್ತನಾದ** ಮತ್ತೊಬ್ಬನಿಗೆ ವಿಳಂಬದಿಂದ ದೇಹಾವಸಾನ ಉಂಟಾಗಿ ಮೋಕ್ಷವೆಂದೂ, ಹೀಗೆ ಹೇಳುವದು ಉಚಿತವೋ ಎಂಬ ಆಕ್ಷೇಪತಂದರೆ ಅದಕ್ಕೂ ಸಮಾಧಾನವನ್ನು

**ತಾರತಮ್ಯತ್ತುಕ್ಕೇಡಾಗ ತಮ್ ತಾಮಿಚ್ಛೈಯಾಲೇಕಾಲಮ್ ಕುರುಕ್ಕಿರದಿಲ್ ಏತ್ತಚ್ಚುರುಕ್ಕತ್ತಾಲೇ ಫಲತ್ತಿಲ್ ವಿಳಂಬಾವಿಳಂಬಗಳ್ ಕೂಡುಮ್. ಆೞ್ವಾರ್ (ಗಳ್) ನಾಥಮುನಿಗಳುಳ್ಳಿಟ್ಟಾರ್ಕ್ಕು ಭಗವತ್ಸಾಕ್ಷಾ**

---

ಹೇಳುತ್ತಾರೆ:—**ಮುಮುಕ್ಷುಕ್ಕಳಾಯ್** - ಮೋಕ್ಷಾರ್ಥಿಗಳಾಗಿ, **ಸ್ವತಂತ್ರಪ್ರಪತ್ತಿ ಪಣ್ಣಿನವರ್‌ಗಳುಕ್ಕು** - ಭರನ್ಯಾಸವನ್ನು ಅನುಷ್ಠಿಸಿದವರಿಗೆ, **ಉಪಾಯಮುಮ್** - ಉಪಾಯಾನುಷ್ಠಾನವೂ, **ಮೋಕ್ಷಮುಮ್** - ಅದರ ಫಲವಾದ ಮೋಕ್ಷವೂ ಕೂಡ, **ಏಕರೂಪಮಾಯಿರುಕ್ಕಚ್ಚೆಯ್‌ದೇಯುಮ್** - ಸಮಾನವಾಗಿ ಒಂದೇಯಾಗಿದ್ದರೂ ಕೂಡ, **ಸಂಸಾರತ್ತಿಲ್** - ಸಂಸಾರದಲ್ಲಿ, **ಅಡಿಚ್ಚೊಟ್ಟಾಲ್** - ಸಂಸಾರತಾಪದಿಂದ ಕಾಲು ಬೆಂದು ಹೋಗುವದರಿಂದ **ವರುಮ್** - ಪ್ರಾಪ್ತವಾಗುವ, **ತ್ವರೈಯಿನ್ ತಾರತಮ್ಯತ್ತುಕ್ಕೇಡಾಗ** - ತ್ವರೆಯಲ್ಲಿರುವ ವ್ಯತ್ಯಾಸಕ್ಕನುಗುಣವಾಗಿ, **ತಮ್ ತಾಮಿಚ್ಛೈಯಾಲೇ**-ಆಯಾ ಅಧಿಕಾರಗಳ ಇಷ್ಟದಿಂದ, **ಕಾಲಮ್ ಕುರುಕ್ಕಿರದಿಲ್** - ತನಗೆ ದೇಹಾವಸಾನವೂ ಮೋಕ್ಷವೂ ಉಂಟಾಗಬೇಕಾದ ಕಾಲವನ್ನು ಕೋರುವದರಲ್ಲಿರುವ, **ಏತ್ತಚ್ಚುರುಕ್ಕತ್ತಾಲೇ**-ಹೆಚ್ಚುಕಡಮೆಯಿಂದ, **ಫಲತ್ತಿಲ್** - ಫಲವುಂಟಾಗುವದರಲ್ಲಿ, **ವಿಳಂಬಾವಿಳಂಬಗಳು, ಕೂಡುಮ್** - ಸಲ್ಲುತ್ತವೆ. ಈ ಸಂದರ್ಭದಲ್ಲಿ ಇಬ್ಬರಿಗೂ ಪ್ರಪದನಾನುಷ್ಠಾನವೂ ಒಂದೇ, ಫಲವೂ ಒಂದೇ, ಹೀಗಿರುವಾಗ ಕೆಲವರಿಗೆ ಮೋಕ್ಷಪ್ರಾಪ್ತಿಯಲ್ಲಿ ವಿಳಂಬವು, ಇನ್ನು ಕೆಲವರಿಗೆ ವಿಳಂಬವಿಲ್ಲದಿರೋಣವೂ, ಹೀಗೆ ಎಲ್ಲಾದರೂ ಉಂಟೋ ಎಂಬುದು ಆಕ್ಷೇಪವು. ಕೆಲವರು ಸಂಸಾರಬಲ್ಲಿರುವದು ಬೆಂಕಿಯ ಮಧ್ಯದಲ್ಲಿರುವಹಾಗೆ ಭಾವಿಸುವರು. ಅಂತಹ ಆರ್ತರು ಒಡನೇ ದೇಹಾವಸಾನಮೂಲಕ ಮೋಕ್ಷವನ್ನಪೇಕ್ಷಿಸುವದರಿಂದ, ಶರಣಾಗತರ ಅಭೀಷ್ಟವನ್ನು ದಯಪಾಲಿಸಲೇಬೇಕೆಂಬ ಕಂಕಣಬದ್ಧನಾಗಿರುವ ಸರ್ವೇಶ್ವರನು ಒಡನೆ ಅನುಗ್ರಹಿಸುವನು. ಇನ್ನೂ ಕೆಲವು ಕಾಲ ಇಲ್ಲೇ ಇದ್ದು ಭೋಗಗಳನ್ನನುಭವಿಸಿ ದೇಹಾವಸಾನಾನಂತರ ಮೋಕ್ಷಬೇಕೆಂದು ಸಙ್ಕಲ್ಪಿಸಿದವನಿಗೆ ಹಾಗೆಯೇ ದಯಪಾಲಿಸಬೇಕಾಗುತ್ತದೆ. ಹೀಗೆ ಶರಣಾಗತಿಯನ್ನನುಷ್ಠಿಸುವಾಗ ಮಾಡಿದ ಸಙ್ಕಲ್ಪಕ್ಕನುಗುಣವಾಗಿ ವಿಳಂಬವಾಗಿಯೂ ವಿಳಂಬವಿಲ್ಲದೆಯೂ ಫಲಪ್ರಾಪ್ತಿಯುಂಟಾಗುವದರಲ್ಲಿ ಏನೊಂದೂ ಅಸಮಂಜಸವಾದುದಿಲ್ಲವೆಂಬ ಭಾವವು. ಹೀಗೆ ಪ್ರಪದನಕಾಲದಲ್ಲಿ ಮಾಡಿದ ಸಙ್ಕಲ್ಪ ಭೇದದಿಂದ ವಿಳಂಬಾವಿಳಂಬಗಳು ಪ್ರಾಪ್ತವಾಗುತ್ತದೆಂಬುದು ಸಿದ್ಧವು. ಹೀಗೆ (೧) ಒಂದು ಅನುಷ್ಠಾನವು ಸಙ್ಕಲ್ಪಭೇದದಿಂದ ಭಿನ್ನಫಲವನ್ನು ಕೊಡಲಾರದೆಂಬ, (೨) ಎರಡು ಭಿನ್ನಧರ್ಮಗಳು

**ರಾದಿಗಳುಣ್ಡಾಯಿರುಕ್ಕ. ಶಿಲರ್ಕ್ಕು ಇವೈ ಯುನ್ದಿಕ್ಕೇ ಯೊಳಿಗೈಕ್ಕು ಕಾರಣಮ್, ಪ್ರಪತ್ತಿ ಕಾಲತ್ತಿಲ್ ಫಲಸಙ್ಕಲ್ಪತ್ತಿಲ್ ವೈಷಮ್ಯಮ್; ಪ್ರಾರಬ್ಧ ಕರ್ಮ (ಸುಕೃತ) ವಿಶೇಷ ಮಾಗವುಮಾಮ್. ಮುನ್ಬು ಕೋಲಿನ**

---

ಒಂದೇ ಫಲವನ್ನು ಕೊಡಲಾರವೆಂಬ, (೩) ಭಿನ್ನಾಧಿಕಾರಿಗಳ ಒಂದೇ ಅನುಷ್ಠಾನಕ್ಕೆ ಫಲವು ಒಂದಾದರೂ ಫಲಪ್ರಾಪ್ತಿಯಲ್ಲಿ ಕಾಲ ವ್ಯತ್ಯಾಸವು ಸರಿಯಲ್ಲವೆಂಬ ಮೂರು ಆಕ್ಷೇಪಗಳೂ ಹಿಂದೆ ಖಂಡಿಸಲ್ಪಟ್ಟವು.

ಹಾಗೆಯೇ ಪ್ರಾಸಙ್ಗಿಕವಾಗಿ, ಪ್ರಪದನ ಕಾಲದ ಸಙ್ಕಲ್ಪಭೇದದಿಂದ ಭಗವತ್ಸಾಕ್ಷಾತ್ಕಾರಾದಿಗಳು ಕೆಲವರಿಗೆ ಲಭಿಸಬಹುದು; ಇನ್ನು ಕೆಲವರಿಗೆ ಲಭಿಸದೇ ಇರಬಹುದು ಎಂದು ಉಪದೇಶಿಸುತ್ತಾರೆ. **ಆಳ್ವಾರ್**-ಶ್ರೀ ನಮ್ಮಾಳ್ವಾರ್ರವರು **ಆಳ್ವಾರ್ಗಳ್** ಎಂಬ ಪಾಠವಾದರೆ ಎಲ್ಲಾ (ಹತ್ತು) ಆಳ್ವಾರುಗಳು, ಮತ್ತು ನಾಥಮುನಿಗಳು, **ಉಳ್ಳಿಟ್ಟಾರ್ಕ್ಕು**-ಮೊದಲಾದವರಿಗೆ, ಭಗವತ್ಸಾಕ್ಷಾತ್ಕಾ**ರಾದಿಗಳ್ಳು**, ಇಲ್ಲಿ ಆದಿ ಪದದಿಂದ ಉಪಾಯಾನುಷ್ಠಾನಾನಂತರ ಬುದ್ಧಿಪೂರ್ವಕ ಅಕೃತ್ಯಕರಣ ಕೃತ್ಯಾಕರಣರೂಪ ಅಪರಾಧಗಳಿಲ್ಲದೇ ಇರೋಣವೂ ಸಹ ಹೇಳಲ್ಪಟ್ಟಿತು. ಇದು ಸಾರಾಸ್ವಾದಿನಿಯವರ ಅಭಿಪ್ರಾಯವು, ಸಾರದೀಪಿಕೆಯವರು ಆ ಭಗವಂತನ ಸಾಕ್ಷಾತ್ಕಾರದಿಂದುಂಟಾಗುವ ಆನಂದವೂ ನಿರಪರಾಧ ಕೈಂಕರ್ಯವೂ, ಹೇಳಲ್ಪಟ್ಟಿತೆಂದು ಅಭಿಪ್ರಾಯಪಡುವರು; **ಉಂಡಾಯಿರುಕ್ಕ**-ಪ್ರಾಪ್ತವಾಗಿರುವಾಗ, **ಶಿಲರ್ಕ್ಕು**-ಇನ್ನು ಕೆಲವರಿಗೆ, **ಇವೈ ಯುನ್ದಿಕ್ಕೆಯೊಳಿಗೈಕ್ಕುಮ್** ಇವುಗಳಿಲ್ಲದೇ ಇರುವದಕ್ಕೂ ಎಂದರೆ ಭಗವತ್ಸಾಕ್ಷಾತ್ಕಾರ ಲಭಿಸದೇ ಇರುವದಕ್ಕೂ ಮತ್ತು ಸಾಧ್ಯೋಪಾಯಾನುಷ್ಠಾನಪಾದನಂತರ ಬುದ್ಧಿಪೂರ್ವಕವಾದ ಅಕೃತ್ಯಕರಣ ಕೃತ್ಯಾಕರಣರೂಪ ಅಪರಾಧಗಳು ಸಂಭವಿಸುವದಕ್ಕೂ ಕಾರಣವೇನೆಂದರೆ-**ಪ್ರಪತ್ತಿ** ಕಾಲದಲ್ಲಿ ಫಲಸಙ್ಕಲ್ಪದಲ್ಲಿ, **ವೈಷಮ್ಯಂ**-ವ್ಯತ್ಯಾಸವು ಕೆಲವರು ಪ್ರಪದನಾನುಷ್ಠಾನಕಾಲದಲ್ಲೇ ಭಗವತ್ಸಾಕ್ಷಾತ್ಕಾರ ಉಂಟಾಗಬೇಕೆಂದೂ ಮತ್ತು ಪ್ರಾರಬ್ಧ ಕರ್ಮದ ಪರಿಪಾಕವು ತೊಲಗಬೇಕೆಂದೂ ಸಙ್ಕಲ್ಪಿಸಿ ಮಾಡುತ್ತಾರೆ; ಆದುದರಿಂದ ಅವರಿಗೆ ಅಂತಹ ಫಲವು. ಇನ್ನು ಕೆಲವರು ಹಾಗೆ ಸಙ್ಕಲ್ಪಿಸದೇ ಪ್ರಪದನ ಮಾಡುತ್ತಾರೆ, ಅಂತವರಿಗೆ ಭಗವತ್ಸಾಕ್ಷಾತ್ಕಾರವು ಲಭಿಸದೇ ಇರಬಹುದು, ಮತ್ತು ಪ್ರಾರಬ್ಧ ಕರ್ಮದ ಪರಿಪಾಕವು ನಶಿಸದೇ ಇರಬಹುದು ಎಂಬ ತಾತ್ಪರ್ಯವು. ಆದುದರಿಂದ **ಪ್ರಾರಬ್ಧಸುಕೃತ ವಿಶೇಷ ಮಾಗವುಮಾಮ್**-ಪ್ರಪದನಕಾಲದಲ್ಲಿ ಹಾಗೆ ಸಙ್ಕಲ್ಪಿಸದೆ ಪ್ರಪದನ ಮಾಡಿದವನಿಗೂ ಒಂದುವೇಳೆ ಭಗವತ್ಸಾಕ್ಷಾತ್ಕಾರವು ಲಭಿಸಬಹುದು, ಅದು

**ಫಲಾಂಶಮ್ ಸಕೃತ್ಪ್ರಪತ್ತಿಯಾಲೇ ಸಿದ್ಧಮಾನಾಲುಮ್ ಕೊಲಾದ ಅಂಶತ್ತೈ ಪ್ಪತ್ತ ಪಿನ್ಪು ತೀವ್ರ ಸಂವೇಗಮ್ ಪಿರನ್ದಾರ್ಕ್ಕು ಪುನಃ ಪ್ರಪತ್ತಿ ಪಣ್ಣವುಮಾಮ್.**

ಪ್ರಾರಬ್ಧಕರ್ಮದ ಸುಕೃತವಿಶೇಷದ ಫಲವಾಗಲೂ ಬಹುದು. ಹೀಗೆ ಹೇಳಿದುದು ಹಾಗೆ ಕೆಲವರಿಗೆ ಲಭಿಸದೇ ಇರುವದು **ಪ್ರಾರಬ್ಧ ದುಷ್ಕೃತ ವಿಶೇಷಮೂಗವು ಮಾಮ್** ಎಂದು ಹೇಳುವದಕ್ಕೂ ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕು. ಹೀಗೆ ಕೆಲವರಿಗೆ ಭಗವತ್ಸಾಕ್ಷಾತ್ಕಾರ ಉಂಟಾಗುವದಕ್ಕೂ, ಬುದ್ಧಿ ಪೂರ್ವೋತ್ತರಾಘಾದಿಗಳಿಲ್ಲದಿರುವದಕ್ಕೂ, ಎರಡು ಕಾರಣಗಳನ್ನು ತಿಳಿಸಿದರು:—(೧) ಪ್ರಪದನಕಾಲದಲ್ಲಿ ಅವುಗಳಿಗಾಗಿ ಸಙ್ಕಲ್ಪಿಸಿರೋಣವೂ, (೨)ಹಾಗೆ ಸಙ್ಕಲ್ಪಿಸದೇ ಇದ್ದರೂ ಉಂಟಾದರೆ ಪ್ರಾರಬ್ಧ ಸುಕೃತವಿಶೇಷದ ಮೂಲಕವೂ ಎಂದು ಭಾವಿಸತಕ್ಕದ್ದು. ಆಳ್ವಾರುಗಳಲ್ಲಿ ಶ್ರೀ ನಮ್ಮಾಳ್ವಾರ್ರವರಿಗೆ ಸಾಕ್ಷಾತ್ಕಾರವೂ ಜನ್ಮಪ್ರಭೃತಿಯಿಂದಲೇ ಉಂಟು; ನಿತ್ಯಸೂರಿಗಳವತಾರವಾದುದರಿಂದ; ಮತ್ತು ಆರನೆಯ ಪತ್ತಿನಲ್ಲಿ ಶ್ರೀವಾಸನಲ್ಲಿ "ಅಗಲಗಿಲ್ಲೇನ್" ಎಂಬ ಪಾಶುರದಲ್ಲಿ ಸಾಙ್ಗಪ್ರಪದನವನ್ನೂ ಅನುಷ್ಠಿಸಿರುತ್ತಾರೆ, ಪರಮಾತ್ಮ ಸಾಕ್ಷಾತ್ಕಾರವನ್ನೂ ಸಙ್ಕಲ್ಪಿಸಿರುವದರಿಂದ ಅದೂ ಲಭಿಸಿರುತ್ತದೆ. ಅಕ್ರೂರರಿಗೆ ಅವಗಾಹನ ಕಾಲದಲ್ಲಿ ಉಂಟಾದ ಸಾಕ್ಷಾತ್ಕಾರವು ಈ ಎರಡು ಕಾರಣಗಳಿಂದಲೂ ಉಂಟಾಗಿರಬಹುದು; ಶ್ರೀ ವಿದುರರಿಗೆ ಪ್ರಾರಬ್ಧಕರ್ಮ ಸುಕೃತಮೂಲಕ ಉಂಟಾಗಿರಬಹುದು.

ಪ್ರಪದನಕಾಲದಲ್ಲಿ ಸಙ್ಕಲ್ಪಿಸದೇ ಇರುವದರಿಂದ ಪರಮಾತ್ಮಸಾಕ್ಷಾತ್ಕಾರವಿಲ್ಲದಿರೋಣವೂ, ಬುದ್ಧಿಪೂರ್ವೋತ್ತರಾಘದ ಸಂಘಟನೆಯೂ ಉಂಟಾಗಬಹುದೆಂದು ಹೇಳಲ್ಪಟ್ಟಿತು ಆದರೆ ಮೋಕ್ಷಕ್ಕಾಗಿ ಪ್ರಪದನವು ಸಕೃದನುಷ್ಠೇಯವೆಂದು ಹೇಳಿರುವದರಿಂದ, ಭಗವತ್ಸಾಕ್ಷಾತ್ಕಾರವೂ, ಬುದ್ಧಿಪೂರ್ವೋತ್ತರಾಘವಿಲ್ಲದಿರೋಣವೂ ಉಂಟಾಗುವಹಾಗೆ ಮಾಡಿಕೊಳ್ಳುವದಕ್ಕೆ ಏನಾದರೂ ಉಪಾಯ ಉಂಟೋ? ಆಗ ಬುದ್ಧಿಯಿಲ್ಲದೆ ಸಙ್ಕಲ್ಪಿಸಲಿಲ್ಲವು. ಆಗ ಸಙ್ಕಲ್ಪಿಸದೇ ನಿಂತುಹೋದವು ಲಭಿಸುವ ಹಾಗೆ ಮಾಡಿಕೊಳ್ಳಲು ಏನಾದರೂ ಸಾಧನ ಉಂಟೋ? ಎಂಬ ಪ್ರಶ್ನೆಯು ಪ್ರಾಸಙ್ಗಿಕವಾಗಿ ಉಂಟಾಗುತ್ತದೆ. ಆಗಿನ ಪ್ರಪದನಾನುಷ್ಠಾನವು ಮೋಕ್ಷಪ್ರಾಪ್ತಿಗಾಗಿಯಾದುದರಿಂದ ಅದು ಸಕೃದನುಷ್ಠೇಯವೇ. ಆದುದರಿಂದ ಆಗ ಪ್ರಾರ್ಥಿಸದೇ ಇರುವ ಅಂಶಗಳಿಗಾಗಿ ಪುನಃ ಪ್ರಪದನವನ್ನು ಅನುಷ್ಠಿಸಬಹುದೆಂದೂ ಇದರಿಂದ ಮೊದಲನುಷ್ಠಿಸಿದ ಪ್ರಪತ್ತಿಗೆ ಏನೊಂದೂ ತೊಂದರೆಯಿಲ್ಲವೆಂದೂ ಉಪದೇಶಿಸುತ್ತಾರೆ. ಮುನ್ಬು - ಮೊದಲು, ಮೊದಲು ಕೋ

## ಅಥ ದೃಷ್ಟಾರ್ಥ ಪ್ರಪತ್ತಿ ವೈಫಲ್ಯ ದರ್ಶನ ಪ್ರಯುಕ್ತಾಮ್ ವಿಶ್ವಾಸ ಶಜ್ಕಾಂ ವಾರಯತಿ

ವೇರೇ ಶಿಲರ್ ದೃಷ್ಟಾರ್ಥ ಪ್ರಪತ್ತಿಗಳಿಲೆ ಶಿಲ ಫಲಿಯಾದೊಳಿಯುಕ್ಕಣ್ಡು ಸಕಲ ಫಲಸಾಧನವಾನ ಪ್ರಪತ್ತಿಯಿಲೇ ಅತಿಶಜ್ಕೈ ಪಣ್ಣುವಾರ್‌ಗಳ್, ಅವರ್‌ಗಳ್ಕೈಯುಮಲ್ಲಾದ ಶಾಸ್ತ್ರಾರ್ಥಜ್ಞರ್ಕಳಿರ್ಪ್ಪಡಿಗಳಿಲೇ ಕರ್ಮ ಕರ್ತೃ ಸಾಧನವೈಗುಣ್ಯತ್ತೈಯಿಟ್ಟು ತೆಳಿವಿಕ ವೇಣುಮ್, ಇಜ್ಙ

---

ಲಿನ ಫಲಾಂಶಮ್ - ಮೋಕ್ಷಾರ್ಥಿಯಾಗಿ ಪ್ರಾರ್ಥಿಸಿದ ಫಲಭಾಗವಾದ ಮುಕ್ತಿಯು, ಪ್ರಪತ್ತಿಯಾಲೇ ಸಿದ್ಧಮಾನಾಲುಮ್ - ಆ ಪ್ರಪದನದಿಂದ ನಿಸ್ಸಂಶಯವಾಗಿ ಲಭಿಸುವದಾದರೂ, ಕೋಲಾದ ಅಂಶತ್ತೈಪ್ಪತ್ತ - ಆಗ ಅಪೇಕ್ಷಿಸದೇ ಇರುವ ಭಾಗವನ್ನು ಕುರಿತು, ತೀವ್ರ ಸಂವೇಗಮ್ - ತುಂಬಾ ಪರಿತಾಪವು, ಪಿರನ್ದಾರ್ಕ್ಕು - ಹುಟ್ಟಿದವರಿಗೆ, ಪುನಃ ಪ್ರಪತ್ತಿ ಪಣ್ಣವುಮಾಮ್—ಪುನಃ ಪ್ರಪತ್ತಿಯನ್ನು ಮಾಡಬಹುದು. ಮೋಕ್ಷಕ್ಕಾಗಿಯೇ ಪುನಃ ಶರಣಾಗತಿಯನ್ನು ಮಾಡುವದು ಯುಕ್ತವಲ್ಲವೇ ವಿನಾ, ಪ್ರಾರಬ್ಧದ ಪಾಪಾಂಶವು ಕಳೆಯುವದಕ್ಕಾಗಿಯಾಗಲಿ, ಬುದ್ಧಿ ಪೂರ್ವಾಘ ಸಂಘಟನೆಯಿಂದ ಪರಿತಾಪ ಹುಟ್ಟಿ ಅದರ ಶಮನಕ್ಕಾಗಿ ಪ್ರಾಯಶ್ಚಿತ್ತರೂಪದಲ್ಲಿಯಾಗಲಿ ಪುನಃ ಶರಣಾಗತಿಯನ್ನು ಮಾಡಬಹುದೆಂಬ ಭಾವವು.

## ಮುಂದೆ ದೃಷ್ಟ ಫಲಕ್ಕಾಗಿ ಮಾಡಿದ ಪ್ರಪತ್ತಿಯು ಫಲಿಸದಿರುವ ಪ್ರಯುಕ್ತ ಉಂಟಾಗುವ ಅವಿಶ್ವಾಸ ಶಜ್ಕಾನಿವೃತ್ತಿಯು.

ವೇರೇ ಶಿಲರ್ - ಇನ್ನು ಕೆಲವರು, ದೃಷ್ಟಾರ್ಥ ಪ್ರಪತ್ತಿಗಳಿಲೇ- ಪ್ರತ್ಯಕ್ಷಗಳಾದ ಪುರುಷಾರ್ಥಪ್ರಾಪ್ತಿಗಾಗಿ ಮಾಡಿದ ಪ್ರಪತ್ತಿಗಳಲ್ಲಿ, ಶಿಲ - ಕೆಲವು ಪುರುಷಾರ್ಥಗಳು, ಫಲಿಯಾದೊಳಿಯುಕ್ಕಣ್ಡು - ಫಲಿಸದೇ ಇರುವದನ್ನು ಕಂಡು, ಸಕಲ ಫಲಸಾಧನವಾನ ಪ್ರಪತ್ತಿಯಿಲೆ - ಸರಿಯಾಗಿ ಅನುಷ್ಠಿಸಲ್ಪಟ್ಟರೆ ಸಕಲ ಫಲಗಳನ್ನೂ ಸಾಧಿಸಿಕೊಡುವ ಎಂದರೆ ಚತುರ್ವಿಧ ಪುರುಷಾರ್ಥಗಳನ್ನೂ ಸಾಧಿಸಿಕೊಡುವ ಪ್ರಪತ್ತಿಯ ವಿಷಯದಲ್ಲಿ, ಅತಿಶಜ್ಕೈ - ಸಾಧ್ಯೋಪಾಯವಾಗಲು ಅರ್ಹವಲ್ಲವೆಂಬ ವಾದಮೂಲಕ ಹೆಚ್ಚಾದ ಶಜ್ಕೆಯನ್ನು, ಪಣ್ಣುವಾರ್‌ಗಳ್ - ಮಾಡುವರು; ಕೆಲವರು ಐಶ್ವರ್ಯ ಸುತಗೇಹಪ್ರಾಪ್ತಿಗಾಗಿ ಪ್ರಪತ್ತಿಯನ್ನನುಷ್ಠಿಸಬಹುದು ; ಅವು ಅವರಿಗೆ ಲಭಿಸದೇ ಹೋಗುವದರಿಂದ ಅದರಲ್ಲಿ ವಿಶ್ವಾಸವನ್ನು ತೊರೆಯಬಹುದು, ಇದರಿಂದ ಪ್ರಪತ್ತಿಯು ಸರಿಯಾದ

**ಕರ್ಮವೈಗುಣ್ಯವಾವದು ? ಮಹಾ ವಿಶ್ವಾಸಾದಿಗಳ್ ಕುರೈಗೈ. ಕರ್ತೃವೈ ಗುಣ್ಯವಾವದು ? ಪ್ರಪತ್ತಿಕ್ಕು ಚ್ಚೊನ್ನ ಅಧಿಕಾರವ್ ನ್ಯೂನಮಾಗೈ ಸಾಧನವೈಗುಣ್ಯವಾವದು ? ಯಥಾಶಾಸ್ತ್ರಮ್ ಪ್ರಪತ್ತ್ಯನುಷ್ಠಾನತ್ತುಕ್ಕು**

---

ಸಾಧ್ಯೋಪಾಯವಲ್ಲವೆಂದು ಭಾವಿಸುವದು ಸರಿಯಲ್ಲವು; ಏಕೆಂದರೆ ಪ್ರಪತ್ತಿಯು ದೃಷ್ಟಾದೃಷ್ಟಗಳಾದ ಚತುರ್ವಿಧ ಪುರುಷಾರ್ಥಗಳನ್ನೂ ಸಾಧಿಸಿಕೊಡುವ ಮಾಹಾತ್ಮ್ಯೆಯುಳ್ಳದು, ಶರಣಾಗತನ ಕೋರಿಕೆಯನ್ನು ಸಲ್ಲಿಸುವದಕ್ಕಾಗಿಯೇ ಸರ್ವೇಶ್ವರನು ಬದ್ಧಕಂಕಣನಾಗಿದ್ದಾನೆ. ಹೀಗಿರುವಾಗ ಪ್ರಪತ್ತಿಯು ದೃಷ್ಟಾರ್ಥವನ್ನು ಸಾಧಿಸಿ ಕೊಡದೇ ಹೋದರೆ, ಅದನ್ನನುಷ್ಠಿಸುವ ಕ್ರಮದಲ್ಲಿ ವೈಗುಣ್ಯ ಉಂಟೆಂದು ಭಾವಿಸತಕ್ಕದ್ದು ನ್ಯಾಯವೇ ವಿನಾ, ಅದು ಪ್ರಬಲವಾದ ಉಪಾಯವಾಗಲೀನೂ ಸಂದೇಹವಿಲ್ಲವೆಂದು ಉಪದೇಶಿಸುತ್ತಾರೆ. ಪ್ರಪತ್ತಿಯು ಫಲಿಸದೇ ಇರಲು ಮೂರರ ವೈಗುಣ್ಯ ಮೂಲಕವೆಂದು ಅಂತಹ ಪೂರ್ವಪಕ್ಷಿಗಳಿಗೆ ತಿಳಿಸಿ, ಅವರ ಅಂತಹ ಅಜ್ಞಾನವು ತೊಲಗುವಹಾಗೆ ಮಾಡತಕ್ಕದ್ದೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ. **ಅವರ್ಗಳ್ಳೈಯುಮ್** - ಅಂತಹ, ಶಾಸ್ತ್ರಜ್ಞಾನವಿಲ್ಲದೆ ಭ್ರಮೆಯುಳ್ಳವರನ್ನು ಕೂಡ, **ಅಲ್ಲಾದ ಶಾಸ್ತ್ರಾರ್ಥಜ್ಞರ್ಪಡಿಯೇ**- ಇತರ ಕಾಮ್ಯಶಾಸ್ತ್ರಗಳಲ್ಲಿ ಕಾರೀರೀ ಮೊದಲಾದ ಯಾಗಗಳಲ್ಲಿರುವ, ಪ್ರಕಾರ ಕರ್ಮವೈಗುಣ್ಯವೇನು, ಕರ್ತೃ ವೈಗುಣ್ಯವೇನು, ಸಾಧನ ವೈಗುಣ್ಯವೇನು, **ಯಿಟ್ಟು-ವೆಳಿಯಿಟ್ಟು**, ಇವುಗಳ ಮೂಲಕವಾಗಿ ಪ್ರಕಾಶಪಡಿಸಿ, **ತೆಳವಿಕ್ಕವೇಣುಮ್** - ಸರಿಯಾದ ಜ್ಞಾನವುಂಟಾಗುವಹಾಗೆ ಮಾಡಬೇಕು. ಕಾಮ್ಯ ಭಾಗದಲ್ಲಿ ಶಾಸ್ತ್ರವು "ವೃಷ್ಟಿಕಾಮಃ ಕಾರೀರ್ಯಾಯಜೇತ" ಮಳೆ ಬೇಕೆಂಬಪೇಕ್ಷೆಯುಳ್ಳವನು ಕಾರೀರೀಯಾಗವನ್ನು ಮಾಡಬೇಕೆಂಬ ವಿಧಿ ಇರುತ್ತದೆ. ಈ ಯಜ್ಞದಲ್ಲಿ ಕರ್ಮ ಕರ್ತೃ ಸಾಧನ ವೈಗುಣ್ಯಗಳಿಲ್ಲವಿದ್ದರೆ ಯಜ್ಞಾಪೂರ್ತಿಯಲ್ಲಿ ಮಳೆಯು ಬರುತ್ತದೆ. ಇಲ್ಲವಾದರೆ ಯಜ್ಞಾಙ್ಗಗಳಲ್ಲಿ ಏನಾದರೂ ನ್ಯೂನತೆಯುಂಟಾದರೆ ಇಲ್ಲವು. ಆಗ ಕಾರೀರೀ ಯಜ್ಞವು ಸತ್ಯವಾದುದಲ್ಲವೆಂಬ ಭಾವವು ಹೇಗೆ ಉಂಟಾಗುವದಿಲ್ಲವೋ, ಹಾಗೆಯೇ ಪ್ರಪತ್ತಿಯೂ ಸಹ ದೃಷ್ಟಾರ್ಥದಲ್ಲಿ ಪ್ರಪತ್ತಿಯು ಫಲಿಸದೇ ಹೋದರೆ ಕರ್ಮ ಕರ್ತೃ ಸಾಧನ ವೈಗುಣ್ಯಗಳಿಂದ ಹಾಗಾಯಿತೆಂದು ಭಾವಿಸತಕ್ಕದ್ದೇ ವಿನಾ, ಅಂತಹ ದೋಷಗಳಿಲ್ಲವಿದ್ದರೆ ಪ್ರಪತ್ತಿಯು ಅಧಿಕಾರಿಯ ದೃಷ್ಟಾರ್ಥವನ್ನೂ ಹಾಗೆ ಅದೃಷ್ಟಾರ್ಥವನ್ನೂ ಸಹ ಸಾಧಿಸಿಕೊಡುವದರಲ್ಲಿ ಈಷದಪಿ ಸಂದೇಹವಿಲ್ಲವೆಂಬ ಭಾವವು ಕಾಮ್ಯ ಕರ್ಮಗಳಲ್ಲಿ ಸಾಙ್ಗವಾಗಿ ಯಥಾವಿಧಿ ಅನುಷ್ಠಾನದಿಂದ ಫಲಸಿದ್ಧಿಯುಂಟೆಂದು ಹೇಗೆ ನಂಬಿಕೆಯೋ, ಹಾಗೆಯೇ ಪ್ರಪದನದಲ್ಲೂ ಎಂದು

**ಮೂಲಮಾನ ಸದುಪದೇಶಾದಿಗಳ್ನ್ರಿಕ್ಕೇ ಯೊಳಿಗ್ಗೈ, ಇವ್ವೈಗುಣ್ಯಙ್ಗಳ್ ನ್ರಿಕ್ಕೇ ಪ್ರಪತ್ತಿಪಣ್ಣಿನ ಪೋದು ತಕ್ಕಫಲಙ್ಗಳಾಗಕ್ಕೊಳ್ಳೋಲಿನ ದೃಷ್ಟಙ್ಗಳುಮ್ ಸಿದ್ಧಿಕ್ಕಕ್ಕಾಣಾನಿನ್ರೋಮ್.**

---

ಪೂರ್ಣ ನಂಬಿಕೆ ಇರತಕ್ಕದ್ದೆಂಬ ಭಾವವು ಮುಂದೆ ಕರ್ಮ ಕರ್ತೃಸಾಧನ ವೈಗುಣ್ಯ ದೋಷಗಳು ಯಾವುವೆಂಬುದನ್ನು ತಿಳಿಸುತ್ತಾರೆ ಪ್ರಪತ್ತಿಯು ಸರ್ವಾಧಿಕಾರವಾದುದು, ಹೀಗಿರುವಲ್ಲಿ ಅದಕ್ಕೆ ಕರ್ತೃವೈಗುಣ್ಯವೆಂದರೇನು? ಪ್ರಪದನವು ಒಂದು ಮಾನಸಿಕ ಬುದ್ಧಿ ವಿಶೇಷವೆಂದು ಹೇಳಲ್ಪಟ್ಟಿರುತ್ತದೆ, ಹಾಗಾದರೆ ಅದಕ್ಕೆ ಕರ್ಮವೈಗುಣ್ಯವುಂಟೋ? ಹಾಗೆಯೇ ಅದಕ್ಕೆ ಸಾಧನವೈಗುಣ್ಯವೆಂದರೇನು? ಎಂದರೆ, ಅವು ಮೂರನ್ನು ನಿರೂಪಿಸುತ್ತಾರೆ. ಇಙ್ಗ-ಈ ಸಂದರ್ಭದಲ್ಲಿ, ಕರ್ಮವೈಗುಣ್ಯ ಮಾವದು-ಎಂದರೇನು? ಮಹಾ ವಿಶ್ವಾಸವೇ, ಮೊದಲಾದವುಗಳು. ಕುರೈಗೈ - ನ್ಯೂನವಾಗಿರೋಣವು ಎಂದರೆ ಮಹಾ ವಿಶ್ವಾಸ ರೂಪವಾದ ಅಙ್ಗವೇ ಇಲ್ಲದುದರಿಂದ ಪ್ರಪದನವು ಫಲಿಸಲಿಲ್ಲವೆಂದು ಹೇಳತಕ್ಕದ್ದು; ಇಲ್ಲಿ ಆದಿಶಬ್ದದಿಂದ ಕಾರ್ಪಣ್ಯ ಮೊದಲಾದ ಅಙ್ಗಗಳ ನ್ಯೂನತೆಯೂ ಹೇಳಲ್ಪಟ್ಟಿತು. ಮುಂದೆ ಅಧಿಕಾರಿಯಲ್ಲಿ ನ್ಯೂನತೆ ಎಂಥಾದ್ದೆಂಬುದನ್ನು ತಿಳಿಸುತ್ತಾರೆ. ಕರ್ತೃವೈಗುಣ್ಯವೆಂದರೇನು? ಪ್ರಪತ್ತಿಕ್ಕು ಮುನ್ನ-ಪ್ರಪತ್ತಿಗೆ ಹಿಂದೆ ಉಪಪಾದಿಸಿದ ಅಧಿಕಾರವು, ನ್ಯೂನಮಾಗೈ - ಇಲ್ಲದಿರೋಣವು ತಾನು ಅನನ್ಯಗತಿಕನಾದುದರಿಂದಲ್ಲವೇ ಪ್ರಪತ್ತಿಗೆ ಯೋಗ್ಯನು, ಹಾಗಲ್ಲದೆ ಶರಣಾಗತಿಯನ್ನು ಮಾಡಿಬಿಟ್ಟು ಉಪಾಯಾಂತರವನ್ನೂ ಅವಲಂಬಿಸಿದರೆ ಶರಣಾಗತಿಯು ಫಲಿಸುವದಿಲ್ಲವು ಸಾಧನವೈಗುಣ್ಯವೆಂದರೇನು? ಯಥಾಶಾಸ್ತ್ರಮ್ ಪ್ರಪತ್ತ್ಯನುಷ್ಠಾನತ್ತುಕ್ಕು - ಶಾಸ್ತ್ರದಲ್ಲಿ ಹೇಗೆ ವಿಧಿಸಿದಿಯೋ ಹಾಗೆ ಪ್ರಪತ್ತಿಯನ್ನು ಅನುಷ್ಠಿಸುವದಕ್ಕೆ, ಮೂಲಮಾನ - ಕಾರಣವಾದ, ಉಪದೇಶಾದಿಗಳನ್ರಿಕ್ಕೇ ಯೊಳಿಗೈ - ಸದ್ಗುರುವಿನಲ್ಲಿರಬೇಕಾದ ಗುಣಗಳಿಲ್ಲ ಸಂಪೂರ್ಣವಾಗಿ ಇರುವ ಗುರುವಿನ ಲಾಭವೂ ಅಂತವರಿಂದ ಪ್ರಾಪ್ತವಾಗುವ, ಶರಣಾಗತಿ ಶಾಸ್ತ್ರವಿಷಯವಾದ ಉಪದೇಶ ಮುಂತಾದವುಗಳಿಲ್ಲವೇ ಹೋಗೋಣವೂ, ಇಂತಹ ದೋಷಗಳಿಲ್ಲದಹಾಗೆ ದೃಷ್ಟಾರ್ಥಕ್ಕೇಯಾಗಲಿ, ಅದೃಷ್ಟಾರ್ಥಕ್ಕೇಯಾಗಲಿ ಅನುಷ್ಠಿಸಿದ ಪ್ರಪತ್ತಿಯು ಎಂದಿಗೂ ವಿಫಲವಾಗುವದಿಲ್ಲವೆಂದು ಉಪದೇಶಿಸುತ್ತಾರೆ. ಇವ್ವೈಗುಣ್ಯಙ್ಗಳನ್ರಿಕ್ಕೇ - ಈ ಮೂರು ವಿಧ ವೈಗುಣ್ಯಗಳೂ ಇಲ್ಲದಹಾಗೆ, ಪ್ರಪತ್ತಿಪಣ್ಣಿನ ಪೋದು - ಪ್ರಪತ್ತಿಯನ್ನನುಷ್ಠಿಸಿದಾಗ, ತಕ್ಕಫಲಙ್ಗಳಾಗ ಆ ಪ್ರಪತ್ತಿಯು ಫಲಗಳಾಗಿ, ಕೊಳ್ಳಿನ - ಅಪೇಕ್ಷಿಸಿದ, ದೃಷ್ಟಙ್ಗಳುಮ್ - ಪ್ರತ್ಯಕ್ಷ

## ಪ್ರಪತ್ತಿರ್ಭಕ್ತ್ಯಙ್ಗಏವ, ನತು ಅಙ್ಗೀ ಇತಿಪಕ್ಷಸ್ಯನಿರಾಸಃ

ವೇರೇ ಶಿಲರ್ ಪ್ರಪತ್ತಿಶಾಸ್ತ್ರತ್ತೋಡುಮ್ ಶಾಸ್ತ್ರಾಂತರಙ್ಗಳೋಡುಮ್ ವಾಶಿಯುರ ಸರ್ವಶಾಸ್ತ್ರಙ್ಗಳುಕ್ಕುಮ್ ಪ್ರವರ್ತಕರಾನ ವ್ಯಾಸಾ

ವಾದ ಪುರುಷಾರ್ಥಗಳೂ ಕೂಡ, ಸಿದ್ಧಿಕ್ಕ ಕಾಣಾನಿನ್ರೋಮ್ - ಸಿದ್ಧಿಸಿರುವದನ್ನು ಕಂಡಿರುವೆವು. ದ್ರೌಪದಿಯು ಮಾನಭಂಗ ಸಮಯದಲ್ಲಿ ದೃಷ್ಟಫಲವಾಗಿ ಸಿದ್ಧಿಸಿದ ಹಾಗೂ, ವಿಭೀಷಣನಿಗೂ ಕುಚೇಲನಿಗೂ ದೃಷ್ಟಫಲವು ಅಪೇಕ್ಷಿತವಲ್ಲದಿದ್ದರೂ ಸಿದ್ಧಿಸಿದಹಾಗೂ, ಧ್ರುವನಿಗೂ ಗಜೇಂದ್ರನಿಗೂ ಸಿದ್ಧಿಸಿದಹಾಗೂ ಪ್ರತ್ಯಕ್ಷವಾಗಿಯೇ ಸಿದ್ಧಿಸುವದೆಂಬ ಭಾವವು ಆದುದರಿಂದ ಪ್ರಪತ್ತಿಯು ಸರ್ವಾಭೀಷ್ಟಸಾಧಕವಾದ ಸರ್ವಾಧಿಕಾರವಾದ ಸಾಧ್ಯೋಪಾಯವಾಗುವದರಲ್ಲಿ ಸಂದೇಹವಿಲ್ಲವು.

ಮುಂದೆ ಕೆಲವರು ಮೋಕ್ಷೋಪಾಯವು "ತಮೇವಂ ವಿದ್ವಾನ್ ಅಮೃತ ಇಹ ಭವತಿ, ನಾನ್ಯಃ ಪನ್ಥಾ ಅಯನಾಯವಿದ್ಯತೇ" ಎಂಬುದನ್ನು ತಮಗೆ ಪ್ರಮಾಣವಾಗಿ ಮಾಡಿಕೊಂಡು, ಭಕ್ತ್ಯುಪಾಯ ಮಾತ್ರವೇ ಮೋಕ್ಷಸಾಧಕವು, ಪ್ರಪತ್ತಿಯಾದರೋ "ಮಾಮೇವ ಯೇ ಪ್ರಪದ್ಯಂತೇ" ಎಂಬ (೭. ೭೧೪) ಗೀತಾ ಶ್ಲೋಕದಲ್ಲಿ ಹೇಳಿರುವಹಾಗೆ ಅಙ್ಗಮಾತ್ರವೇ ಎಂದು ಭಾವಿಸುವರು. ಈ ಅಭಿಪ್ರಾಯವನ್ನು ಪ್ರಮಾಣಗಳ ಪೂರ್ವಕವಾಗಿ ಖಂಡಿಸುತ್ತಾರೆ

## ಪ್ರಪತ್ತಿಯು ಸ್ವತಃ ಅಙ್ಗಿಯಾಗಿ ಉಪಾಯುವಲ್ಲವು, ಅಙ್ಗಿಯಾದ ಉಪಾಸನಕ್ಕೆ ಅಙ್ಗಮಾತ್ರವೆಂಬ ವಾದ ನಿರಾಸವು

ಮೊದಲು ಪೂರ್ವಪಕ್ಷವನ್ನು ಅನುವಾದಮಾಡಿ ಅನಂತರ ಖಂಡಿಸುತ್ತಾರೆ ವೇರೇ ಶಿಲರ್- ಇನ್ನುಬೇರೆ ಕೆಲವರು, ಪ್ರಪತ್ತಿಶಾಸ್ತ್ರತ್ತೋಡುಮ್ - ಪ್ರಪತ್ತಿಶಾಸ್ತ್ರದೊಂದಿಗೆಯೂ, ಶಾಸ್ತ್ರಾಂತರಙ್ಗಳೋಡುಮ್ - ಇನ್ನು ಬೇರೆ ಶಾಸ್ತ್ರಗಳೊಂದಿಗೆಯೂ, ವಾಶಿಯುರ - ಏನೊಂದೂ ವ್ಯತ್ಯಾಸವಿಲ್ಲದಹಾಗೆ, ಸರ್ವಶಾಸ್ತ್ರಾರ್ಥಙ್ಗಳುಕ್ಕುಮ್-ಸಮಸ್ತ ಶಾಸ್ತ್ರಾರ್ಥಗಳಿಗೂ ಪ್ರವರ್ತಕರಾಗ, ವ್ಯಾಸ ಮೊದಲಾದವರು, ಆದಿ ಶಬ್ದದಿಂದ ಪರಾಶರಾದಿಗಳು ಹೇಳಲ್ಪಟ್ಟರು, ಪೂರ್ವಪಕ್ಷಿಯು ತನಗೆ ಸಹಾಯವೆಂದು ಭಾವಿಸಿ ಶ್ರೀ ವ್ಯಾಸೋಕ್ತಿಯನ್ನು ಉದಾಹರಿಸುತ್ತಾರೆ; ಶ್ರೀ ವ್ಯಾಸರಿಗಿಂತ ಶಾಸ್ತ್ರಜ್ಞರೂ, ಜ್ಞಾನಿಯೂ ದೊರೆಯಲಾರರು, ಆದುದರಿಂದ ಅವರ ದಿವ್ಯಸೂಕ್ತಿಯನ್ನು ಪ್ರಮಾಣವಾಗಿ ಉದಾಹರಿಸುವದು

**ದಿಗಳ್ (೧) "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ" ಎನ್ರುವರ್, (೨) "ಹರಿರೇಕಸ್ಸದಾ ಧ್ಯೇಯೋ ಭವದ್ಭಿಸ್ಸತ್ವಸಂಸ್ಥಿತೈಃ" (೩) "ಸ್ಮರ್ತವ್ಯಸ್ಸತತಂ ವಿಷ್ಣುಃ" ಎನ್ರುವರ್, ಇಪ್ಪಡಿ ನಿಷ್ಕರ್ಷಿಯಾನಿರ್ಕ ಸಕೃತ್ಪ್ರಪತ್ತಿಮಾತ್ರಮೇ ಮೋಕ್ಷಸಾಧನಮಾಗಕ್ಕೂಡಮೋ? (೪) "ಮಾಮೇವ**

ತಮ್ಮ ವಾದಕ್ಕೆ ಬಲವೆಂದು ಭಾವಿಸಿ ಹೇಳುತ್ತಾರೆ (೧) "**ಸರ್ವ ಶಾಸ್ತ್ರಾಣಿ** - ಸಮಸ್ತ ಶಾಸ್ತ್ರಗಳನ್ನೂ, **ಆಲೋಡ್ಯ** - ಚೆನ್ನಾಗಿ ವಿಮರ್ಶಿಸಿ ನೋಡಿ, **ಪುನಃ ಪುನಃ** - ಪೂರ್ವಾಪರ ವಿರೋಧಗಳೂ ಯಾವ ಉಂಟಾಗದೇ ಇರುವದಕ್ಕಾಗಿ, ಅವುಗಳನ್ನು ಪುನಃ ಪುನಃ, **ವಿಚಾರ್ಯ** - ವಿವೇಕೋತ್ಥಜ್ಞಾನದಿಂದ ವಿಚಾರಮಾಡಿ, **ಇದಮೇಕಂ ಸುನಿಷ್ಪನ್ನಂ** - ಇದೊಂದೇ ಸರಿ ಎಂದು ಚೆನ್ನಾಗಿ ನಿಶ್ಚಯಿಸಲ್ಪಟ್ಟಿತು, ಏನೆಂದರೆ, **ಧ್ಯೇಯೋ ನಾರಾಯಣಸ್ಸದಾ** - ಮುಕ್ತಿಗೆ ಮುಖ್ಯವಾದ ಉಪಾಯಕ್ಕಾಗಿ ಶ್ರೀಮನ್ನಾರಾಯಣನು ಯಾವಾಗಲೂ ಧ್ಯಾನಿಸತಕ್ಕವನು, ಉಪಾಸಿಸಲ್ಪಡತಕ್ಕವನೆಂಬ ಭಾವವು." **ಎನ್ರುವರ್** - ಎಂಬದಾಗಿಯೂ, (೨) "**ಸತ್ವಸಂಸ್ಥಿತೈಃ** - ಸತ್ವಮಾರ್ಗದಲ್ಲಿ ಸದಾಚಾರ್ಯದಿಂದ ಸುಪ್ರತಿಷ್ಠಿತರಾಗಿರುವ, **ಭವದ್ಭಿಃ** - ನಿಮ್ಮಗಳಿಂದ, **ಶ್ರೀಹರಿಯೋ**, **ಏಕಃ** - ಜಗತ್ಕಾರಣನಾಗಿಯೂ ಉಪಾಸ್ಯನಾಗಿ ಮೋಕ್ಷಪ್ರದನಾಗಿಯೂ ಆತನೊಬ್ಬನೇ, **ಸದಾ** - ಯಾವಾಗಲೂ, **ಧ್ಯೇಯಃ** - ಉಪಾಸ್ಯನು," **ಎನ್ರುವರ್** - ಎಂಬದಾಗಿಯೂ (೩) "ವಿಷ್ಣುವು, **ಸತತಂ** - ಯಾವಾಗಲೂ, **ಸ್ಮರ್ತವ್ಯಃ** ಸ್ಮರಿಸಲು ಯೋಗ್ಯನು." **ಎನ್ರುವರ್** - ಎಂಬದಾಗಿಯೂ, **ಇಪ್ಪಡಿ ನಿಷ್ಕರ್ಷಿಯಾನಿರ್ಕ** - ಹೀಗೆ ವ್ಯಾಸರು ನಿಷ್ಕರ್ಷಿಸಿ ಹೇಳಿರುವಾಗ, **ಸಕೃತ್ಪ್ರಪತ್ತಿಮಾತ್ರಮೇ** - ಒಂದು ಸಲ ಮಾಡಿದ ಪ್ರಪತ್ತಿ ಮಾತ್ರವೇ, **ಮೋಕ್ಷಸಾಧನಮಾಗಕ್ಕೂಡಮೋ?** - ಮೋಕ್ಷಕ್ಕೆ ಸಾಧನವಾಗಲು ಸಾಧ್ಯವೋ? ಪ್ರಪತ್ತಿಯು ಅಙ್ಗಮಾತ್ರವೇ ಎಂದು ಭಾವಿಸಿ, ಅಙ್ಗವೇ ಎಲ್ಲಿಯಾದರೂ ಫಲವನ್ನು ಸಾಧಿಸೀತೋ? ಅಙ್ಗಿಯು ಸಾಧಿಸಬಹುದು ಎಂಬ ತಾತ್ಪರ್ಯವು. ಪ್ರಪತ್ತಿಯು ಅಙ್ಗವೇ ಸರಿ ಎಂಬುದಕ್ಕೆ ಗೀತಾಪ್ರಮಾಣವನ್ನು ಉದಾಹರಿಸುತ್ತಾರೆ; ಆದರೆ ಚರಮಶ್ಲೋಕದಲ್ಲಿ ಪ್ರಪತ್ತಿಯನ್ನು ಅಙ್ಗಿಯಾಗಿಯೂ, ಉದಾಹರಿಸಿರುತ್ತದೆಯಲ್ಲಾ ಎಂಬಾಕ್ಷೇಪ ಬಂದೀತೆಂದು ಭಾವಿಸಿ, ಅದನ್ನೂ ಕೂಡ ಅಙ್ಗವಾಗಿಯೇ ಭಾವಿಸತಕ್ಕದ್ದೇ

(೧) ಭಾರ. ಅನು. ೧೮, ೩೪, (೨) ಹರಿವಂಶ. ೧೩೨. ೫.
(೩) ಹರಿವಂಶ. ೧೩೨. ೧೪ (೪) ಗೀ. ೭. ೧೪.

**ಯೋ ಪ್ರಪದ್ಯನ್ತೇ" ಇತ್ಯಾದಿಗಳ್ ಅಙ್ಗ ಪ್ರಪತ್ತಿ ವಿಷಯ‌ಙ್ಗಳಾನಾರ್ಪೋಲೆ, ಚರಮಶ್ಲೋಕಾದಿಗಳುಮ್ ಸಪರಿಕರ ಪ್ರಪತ್ತಿಯೈ ಭಕ್ತ್ಯಙ್ಗಮಾಗ ವಿಧಿಕ್ಕಿರನವಾಗ ವೇಣ್ಡಾವೋ ವೆನ್ರು ಶೊಲ್ಲುವರ್ಗಳ್. ಇದುವು**

---

ನ್ಯಾಯುವೆಂದು ಪೂರ್ವಪಕ್ಷಿಯು ಹೇಳುತ್ತಾರೆ. "**ಮಾಮೇವಯೇ ಪ್ರಪದ್ಯನ್ತೇ**- "ನನ್ನೊಬ್ಬನನ್ನು ಮಾತ್ರವೇ ಕುರಿತು ಯಾರು ಪ್ರಪತ್ತಿಯನ್ನನುಷ್ಠಿಸುವರೋ ?" **ಇತ್ಯಾದಿಗಳ್** - ಇವೇ ಮೊದಲಾದ ಪ್ರಮಾಣಗಳು, **ಅಙ್ಗ ಪ್ರಪತ್ತಿ ವಿಷಯಙ್ಗಳಾನಾರ್ಪೋಲೇ** - ಉಪಾಸನಕ್ಕೆ ಅಙ್ಗವಾದ ಪ್ರಪತ್ತಿ ಹೇಗೋಹಾಗೆ, ಗೀತಾ ೧೮ನೇ ಅಧ್ಯಾಯದ ೬೬ನೆಯ ಶ್ಲೋಕವಾದ, **ಚರಮ ಶ್ಲೋಕಾದಿಗಳುಮ್** - "**ಸರ್ವಧರ್ಮಾನ್**" ಎಂಬ ಚರಮಶ್ಲೋಕವೂ, **ಆದಿ** ಪದದಿಂದ ಅದರಹಾಗೆಯೇ ಸ್ವತಂತ್ರ ಪ್ರಪತ್ತಿಯುಹಾಗೆ ತೋರುವ ಇತರ ಪ್ರಮಾಣಗಳೂ ಕೂಡ, **ಸಪರಿಕರ ಪ್ರಪತ್ತಿಯೈ** - ಅಙ್ಗಗಳಿಂದ ಕೂಡಿದ ಪ್ರಪತ್ತಿಯನ್ನು, **ಭಕ್ತ್ಯಙ್ಗಮಾಗ** - ಉಪಾಸನಕ್ಕೆ ಅಙ್ಗವಾಗಿ, **ವಿಧಿಕ್ಕಿರನವಾಗವೇಣ್ಡಾವೋ**-ವಿಧಿಸುತ್ತದೆ ಎಂದಾಗ ಬೇಡವೋ? !**ಎನ್ರು ಶೊಲ್ಲುವರ್ಗಳ್** - ಎಂದು ಆಕ್ಷೇಪಿಸಿ ಹೇಳುವರು, "**ಮಾಮೇವ ಯೇ ಪ್ರಪದ್ಯಂತೇ**" ಎಂಬ **ಪೂರ್ವಶ್ಲೋಕ**ವು ಯಾವುದೆಂದರೆ.

**ದೈವೀ ಹ್ಯೇಷಾಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವಯೇ ಪ್ರಪದ್ಯಂತೇ ಮಾಯಾಮೇತಾಂತರಂತಿತೇ ॥**

ಈ ತ್ರಿಗುಣಾತ್ಮಕವಾದ ಪ್ರಕೃತಿಯು ಲೀಲಾಪರನಾದ ನನ್ನ ಸಂಬಂಧವಾದುದು. ಇದರಲ್ಲಿ ಭೋಗ್ಯತ್ವ ಬುದ್ಧಿಯನ್ನು ಬಿಡುವದು ತುಂಬಾ ಕಷ್ಟವು, ಅದರ ಬಲೆಯಿಂದ ತಪ್ಪಿಸಿಕೊಳ್ಳುವದು ಸುಲಭವಲ್ಲವು ನಿರತಿಶಯಾನಂದ ಸುಖವನ್ನೀಯುವ ನನ್ನನ್ನು ಉಪಾಸನೆ ಮಾಡುವದಕ್ಕೆ ಇದು ದೊಡ್ಡ ಪ್ರತಿ ಬಂಧಕವು. ನನ್ನನ್ನು ಕುರಿತು ಪ್ರಪದನಾನುಷ್ಠಾನವನ್ನು ಮಾಡಿದವರು ಇಂತಹ ಪ್ರಬಲ ಪ್ರತಿ ಬಂಧಕವನ್ನು ಸುಲಭವಾಗಿ ದಾಟುವರು ಎಂಬುದು ಈ ಶ್ಲೋಕ ತಾತ್ಪರ್ಯವು. ಇದರಿಂದ ಈ ಶರಣಾಗತಿಯು ಮಾಯಾತರಣಕ್ಕಾಗಿಯೂ ಉಪಾಸನೆ ಕೈಗೂಡುವದಕ್ಕಾಗಿಯೂ ವಿಧಿಸಲ್ಪಟ್ಟಿತೆಂಬ ಭಾವವು. ಈ ಅಭಿಪ್ರಾಯಕ್ಕನುಸಾರವಾಗಿಯಲ್ಲವೇ ಚರಮಶ್ಲೋಕದಲ್ಲಿ ಹೇಳಲ್ಪಟ್ಟಿರುವ ಶರಣಾಗತಿಯನ್ನೂ ಅನ್ವಯಿಸತಕ್ಕದ್ದು? ಅದನ್ನು ಸ್ವತಂತ್ರಪ್ರಪತ್ತಿ ವಿಧಿಯಾಗಿ ಭಾವಿಸಲು ಹೇಗೆ ಸಾಧ್ಯವೆಂಬುದು **ಪೂರ್ವಪಕ್ಷಿಯು** ಅಭಿಪ್ರಾಯವು. **ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ** ಎಂಬುದರಿಂದ ಉಪಾಸನೆಗೆ **ಪ್ರತಿ**ಬಂಧಕಗಳಾದ ಸಮಸ್ತ ಪಾಪಗಳಿಂದಲೂ ಬಿಡಿಸುವೆನು ಅಳಬೇಡ ಎಂಬ ತಾತ್ಪರ್ಯವಿದ್ದರೂ ಇರಬಹು

**ಮನುಪಪನ್ನಮ್** :—(೧) **"ಶರಣಂ ತ್ವಾಂ ಪ್ರಪನ್ನಾಯೇ ಧ್ಯಾನ ಯೋಗವಿವರ್ಜಿತಾಃ । ತೇಪಿಮೃತ್ಯುಮತಿಕ್ರಮ್ಯ ಯಾಂತಿ ತದ್ವೈಷ್ಣವಂ ಪದಮ್" ಎನ್ನುಮ್, (೨) "ಯದ್ಯೇನ ಕಾಮ ಕಾಮೇನ ನಸಾಧ್ಯಂ**

---

ದೆಂಬುದೂ ಮತ್ತು **"ಸರ್ವಧರ್ಮಾನ್ ಪರಿತ್ಯಜ್ಯ"** ಎಂಬುದರಿಂದ ಮೋಕ್ಷಕ್ಕೆ ಉಪಾಸನರೂಪ ಉಪಾಯಾಂತರ ತ್ಯಾಗವನ್ನೇನೂ ಹೇಳಲಿಲ್ಲವು ; ಆ ಉಪಾಯಾಂತರಕ್ಕೆ ಈ ಪ್ರಪದನರೂಪ ಅಜ್ಞಕ್ಕಿಂತ ಬೇರೆಯಾದ ಇತರಗಳ ತ್ಯಾಗವೇ ಬೋಧಿಸಲ್ಪಟ್ಟಿತೆಂದೂ ಪೂರ್ವಪಕ್ಷಿಯ ಆಶಯವು. ಈ ಅಭಿಪ್ರಾಯಗಳು ಸರಿಯಲ್ಲವೆಂದು ಮುಂದೆ ಉಪಪಾದಿಸುತ್ತಾರೆ :— **ಇದುವುಮನುಪಪನ್ನಮ್**-ಈ ಪೂರ್ವಪಕ್ಷವೂ ಕೂಡ ಮೇಲಿನ ಇತರ ಪೂರ್ವಪಕ್ಷಗಳ ಹಾಗೆ ಸಮಂಜಸವಾದುದಲ್ಲವು. ಮೊದಲು ಪ್ರಮಾಣಗಳನ್ನು ಉದಾಹರಿಸಿ, ಸ್ವತಂತ್ರವಾಗಿಯೂ ಪ್ರಪತ್ತಿಯು ಅಜ್ಞ ಎಂಬುದರಲ್ಲಿ ಸಂದೇಹವಿಲ್ಲವೆಂದು ಸ್ಥಾಪಿಸುತ್ತಾರೆ (೧) **"ಧ್ಯಾನಯೋಗ ವಿವರ್ಜಿತಾಃ** - ಧ್ಯಾನಯೋಗವನ್ನವಲಂಬಿಸಲು ಸಂಪೂರ್ಣ ಅಶಕ್ತರಾಗಿರುವ, **ಯೇ** - ಯಾರು, **ತ್ವಾಂ** - ಶರಣಾಗತವತ್ಸಲನಾದ ನಿನ್ನನ್ನು, **ಶರಣಂ**-ಶರಣಾಗತಿಯ ಮೂಲಕ ಸಿದ್ಧೋಪಾಯನನ್ನಾಗಿ, **ಪ್ರಪನ್ನಾಃ**-ಆಶ್ರಯಿಸುವರೋ, **ತೇಪಿ** - ಭಕ್ತಿಯೋಗ ನಿಷ್ಠರಹಾಗೆ ಅವರೂ ಕೂಡ, **ಮೃತ್ಯುಂ** - ಸಂಸಾರವನ್ನು **ಅತಿಕ್ರಮ್ಯ** - ದಾಟಿ, **ತತ್** - ಆನಂದಮಯವೆಂದು ಮಹಾ ಪ್ರಸಿದ್ಧಿಯನ್ನು ಹೊಂದಿದ, **ವೈಷ್ಣವಂ ಪದಂ**-ತದ್ವಿಷ್ಣೋಃ ಪರಮಮ್‌ಪದಮ್ ಎಂದು ಶ್ರುತಿಯಲ್ಲಿ ಹೇಳಿರುವ ದಿವ್ಯ ವೈಕುಂಠವನ್ನು, **ಯಾಂತಿ**-ಹೊಂದುತ್ತಾರೆ." ಹೀಗೆ ಈ ಶ್ಲೋಕದಲ್ಲಿ ಭಕ್ತಿಮಾರ್ಗವು ಹೇಗೆಮೋಕ್ಷೋಪಾಯವೋ ಹಾಗೆಯೇ ಉಪಾಸನೆಯ ಗಂಧವೇ ಇಲ್ಲವೆ ಅಸಮರ್ಥರಾದ,ಭಕ್ತಿಗೆ ಅಧಿಕಾರಿಗಳಲ್ಲದ ಸ್ತ್ರೀಯರೂ, ಶೂದ್ರಾದಿಗಳೂ ಹೀಗೆ ಸರ್ವರಿಗೂ ಪ್ರಪತ್ತಿಯು ಸ್ವತಂತ್ರವಾದ ಉಪಾಯವೆಂದು ಹೇಳಲ್ಪಟ್ಟಿರುತ್ತದೆ ; (೨) " **ಕಾಮಕಾಮೇನ** - ಪುರುಷಾರ್ಥಗಳ ಕಾಮನೆಯುಳ್ಳ, **ಯೇನ** - ಬ್ರಾಹ್ಮಣಾದಿ ತ್ರೈವರ್ಣಿಕರೇಯಾಗಿರಬೇಕೆಂಬ ಆವಶ್ಯಕತೆಯಿಲ್ಲದಿರುವ ಯಾವ ಅಧಿಕಾರಿಯಿಂದಲೇಯಾಗಲಿ, **ಸಾಧನಾಂತರೈಃ** - ಜ್ಯೋತಿಷ್ಟೋಮಾದಿ ಬೇರೆ ಸಾಧನಗಳಿಂದ, **ನಸಾಧ್ಯಂ** - ಅಧಿಕಾರವಿರುವುದು ದ್ರವ್ಯಸಹಾಯಾದಿಗಳಿಲ್ಲದಿರುವದು, ಇವೇ ಮೊದಲಾದ ಅಸಮರ್ಥತೆಯಿಂದ ಸಾಧಿಸಲು ಅಸಾಧ್ಯವಾದುದು ಯಾವ ಫಲವುಂಟೋ, ಹೀಗೆ ಕಾಮ್ಯ ಕರ್ಮಗಳನ್ನೆಸಗಿ ಪಡೆಯಲು ಯಾವ ಅಧಿಕಾರಿಗೆಯಾಗಲಿ ಅಸಾಧ್ಯವಾದ ಮನೋರಥವು ಯಾವುದುಂಟೋ ಅದೂ, ಮತ್ತು

---

(೧) ಬ್ರಾಹ್ಮ ಪುರಾಣ. (೨) ಅಹಿ ಸಂ. ೩೭. ೨೫

**ಸಾಧನಾಂತರೈಃ । ಮುಮುಕ್ಷುಣಾ ಯತ್ಸಾಂಖ್ಯೇನ ಯೋಗೇನ ನಚ ಭಕ್ತಿತಃ ॥ ಪ್ರಾಪ್ಯತೇ ಪರಮಂ ಧಾಮ ಯತೋನಾ ವರ್ತತೇಯತಿಃ । ತೇನ ತೇನಾಪ್ಯತೇ ತತ್ತ್ವನ್ಯಾಸೇನೈವ ಮಹಾಮುನೇ ॥ ಪರಮಾತ್ಮಾಚ ತೇನೈವ ಸಾಧ್ಯತೇ ಪುರುಷೋತ್ತಮ ॥" ಎನ್ರುವ್, ಇತ್ಯಾದಿ ವಚನಙ್ಗ**

---

**ಮುಮುಕ್ಷುಣಾ** - ಪ್ರಕೃತಿಬಂಧ ಮೋಕ್ಷವನ್ನು ಅಪೇಕ್ಷಿಸುವ ಅಧಿಕಾರಿಯಿಂದ ಎಂದರೆ ಮೋಕ್ಷಾರ್ಥಿಯಿಂದ, ಇದರಿಂದ ಹಿಂದಿನ ಪೂರ್ವಾರ್ಧದಿಂದ ಹೇಳಲ್ಪಟ್ಟ ಅಧಿಕಾರಿಗಳು ಬುಭುಕ್ಷುಗಳೇವಿನಾ ಮುಮುಕ್ಷುವಲ್ಲವೆಂಬುದು ವ್ಯಕ್ತವು ; ಮುಖ್ಯವಾಗಿ ಅರ್ಥಕಾಮ ಪರರನ್ನು ಪೂರ್ವಾರ್ಧದಲ್ಲಿ ಹೇಳಿ, ಮೋಕ್ಷಕಾಮರನ್ನು ಉತ್ತರಾರ್ಧಾದಿಗಳಿಂದ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು ; **ಸಾಂಖ್ಯೇನ** - ಜ್ಞಾನಯೋಗದಿಂದಲಾಗಲಿ, **ಯೋಗೇನ** - ಕರ್ಮಯೋಗದಿಂದಲಾಗಲಿ ಕೂಡಿದ, **ಭಕ್ತಿತಃ** - ಭಕ್ತಿಯೋಗದಿಂದಲಾಗಲಿ, **ಯತಿಃ** - ಇಂದ್ರಿಯಗಳ ನಿಯಮನ ಪೂರ್ವಕ ಐಹಿಕದಲ್ಲಿ ವೈರಾಗ್ಯ ಉಳ್ಳವನು, **ಯತಃ ನಾವರ್ತತೇ**-ಯಾವುದನ್ನು ಹೋಗಿ ಸೇರಿದನಂತರ ಅಲ್ಲಿಂದ ಹಿಂತಿರುಗಿ ಬರುವದೆಂಬುವದಿಲ್ಲವೋ, ಅಂತಹ **ಪರಮಂಧಾಮ** - ಸರ್ವೋತ್ಕೃಷ್ಟವಾದ **ತದ್ವಿಷ್ಣೋಃ ಪರಮಂ ಪದಂ** ಎಂದು ಶ್ರುತಿಯಲ್ಲಿ ಅತಿಶಯವಾಗಿ ಶ್ಲಾಘಿಸಲ್ಪಟ್ಟ ದಿವ್ಯ ವೈಕುಂಠವು, **ನಪ್ರಾಪ್ಯತೇ** - ವಿಘ್ನಗಳು ಕಳೆಯದೆ ಇರುವದರಿಂದಲೋ, ಅಭ್ಯಾಸ ಸಾಲದಿರುವದರಿಂದಲೋ, ವಿಶ್ವಾಸ ಸಾಲದಿರುವದರಿಂದಲೋ, ಅಧಿಕಾರ ಶೂನ್ಯತೆಯಿಂದಲೋ **ನಪ್ರಾಪ್ಯತೇ** - ಹೊಂದಲ್ಪಡುವದಿಲ್ಲವೋ, **ತತ್ತತ್** - ಅವೆಲ್ಲವೂ, ಎಂದರೆ ಆ ಫಲವೆಲ್ಲವೂ, ಓ **ಮಹಾ ಮುನಿಯೇ, ತೇನ ತೇನ** ಆಯಾ ಅಧಿಕಾರಿಯಿಂದ, **ನ್ಯಾಸೇನೈವ** - ಸ್ವತಂತ್ರ ಪ್ರಪತ್ತಿಯಿಂದಲೇ, **ಆಪ್ಯತೇ** ಹೊಂದಲ್ಪಡುತ್ತದೆ. **ತೇನೈವ** - ಆ ಭರನ್ಯಾಸದಿಂದಲೇ, ಪರಮಾತ್ಮಾವಾದ **ಪುರುಷೋತ್ತಮ**ನೂ ಕೂಡ, **ಸಾಧ್ಯತೇ**-ಸಿದ್ಧೋಪಾಯನಾಗಿ ನಿಂತು ರಕ್ಷಿಸುವಹಾಗೆ ಸಾಧಿಸಲ್ಪಡುತ್ತಾನೆ. ಇಲ್ಲಿ ಭಕ್ತಿಯೋಗವಾದ ಉಪಾಸನದಿಂದಲೂ ಸಾಧಿಸಲಸಾಧ್ಯವಾದುದನ್ನೂ ಪ್ರಪತ್ತಿಯಿಂದಲೇ ಸಾಧಿಸಬಹುದೆಂದೂ, ಸರ್ವೇಶ್ವರನು ಸಿದ್ಧೋಪಾಯನಾಗಿ ಉಪಾಸನೆಯಸ್ಥಾನದಲ್ಲಿ ತಾನೇ ನಿಂತು ನಿಸ್ಸಂಶಯವಾಗಿಯೂ ಖಂಡಿತವಾಗಿಯೂ ನಡೆಸಿಕೊಡುವದರಿಂದ, ಭಕ್ತ್ಯುಪಾಯಕ್ಕಿಂತ ಸುಲಭವಾಗಿ ಸಾಧಿಸಿಕೊಡುವ ಉಪಾಯವೆಂದು ಹೇಳಿದುದರಿಂದ, ಭರನ್ಯಾಸವೂ ಸ್ವತಂತ್ರವಾದ ಉಪಾಯವೆಂಬುದು ಸಿದ್ಧವು. ಈ **ಶ್ಲೋಕಕ್ಕೆ** ಸರ್ವಸಮಂಜಸವಾಗಿ ಹೀಗೆ ಅರ್ಥಹೇಳದೆ ಭಿನ್ನಭಿನ್ನವಾಗಿ ಅರ್ಥಮಾಡಿರುತ್ತಾರೆ. **"ಯೇನ" "ತೇನ"** ಎಂಬ ಶಬ್ದ

ಗಳು ಅಧಿಕಾರಿ ಪರವಾದ ಶಬ್ದಗಳಲ್ಲವು ಎಂದು ಹೇಳಿ, **ಯಾವ ಮನಸ್ಸಿನಿಂದ, ಆ ಮನಸ್ಸಿನಿಂದ** ಎಂದರ್ಥಮಾಡಿರುತ್ತಾರೆ. ಆಗ ಎರಡು ತೃತೀಯೆಗಳು ಒಟ್ಟಿಗೆ ಹೇಳಿರುವದೂ ಯೋಗ ಎಂದು ಮನಸ್ಸಿಗೇನೆ ಪ್ರಸಿದ್ಧಿ ಹೇಗೆ? ಇಚ್ಛೆಯು ಆಗಕೂಡದೋ? ಎಂಬ ಆಕ್ಷೇಪಗಳುಂಟಾದೀತು. ಇನ್ನು ಕೆಲವರು ಭರನ್ಯಾಸವೇ ಸಿದ್ಧೋಪಾಯವನ್ನು ಸಾಧಿಸಿ ಕೊಡುತ್ತದೆಂದು ಹೇಳಿದರೆ **"ಯಮೇವೈಷ ವೃಣುತೇ ತೇನಲಭ್ಯಃ"** "ಸರ್ವೇಶ್ವರನು ಯಾವನನ್ನು ಮುಕ್ತಿಗೆ ಯೋಗ್ಯನೆಂದು ವರಿಸುವನೋ ಅವನಿಗೇ ಮೋಕ್ಷವು" ಎಂಬ ಹೇಳಿಕೆಗೆ ವಿರೋಧವಾಗುವದಿಲ್ಲವೋ ಎಂದಾಕ್ಷೇಪಿಸುವರು. ಆ ಶ್ರುತಿಯು ಸರ್ವೇಶ್ವರನು ತನ್ನಿಷ್ಟಾನುಸಾರ ಮುಕ್ತಿಯನ್ನು ಕೊಡುವನೆಂದು ಹೇಳಲಿಲ್ಲವು. ಯಾವನು ಸಾಧ್ಯೋಪಾಯಾನುಷ್ಠಾನದಲ್ಲಿ ತುಂಬಾ ಪ್ರೀತಿಯನ್ನು ಸರ್ವೇಶ್ವರನಲ್ಲಿ ಮಾಡುವನೋ, ಆದರಿಂದ ಪ್ರೀತನಾದ ಶ್ರಿಯಃಪತಿಯು ಈತನು ಮುಕ್ತಿಗೆ ಯೋಗ್ಯನೆಂದು ವರಿಸುವನೆಂಬ ಭಾವವು ಇದಕ್ಕೆ ನಿದರ್ಶನವಾಗಿ ಬಾಲಕರು ಬರೀ ಪರೀಕ್ಷೆಗೆ ಹೋಗುವದರಿಂದಲೇ ತೇರ್ಗಡೆಯಾಗುವದಿಲ್ಲವು; ಪರೀಕ್ಷಕನು ಯಾವನನ್ನು ತೇರ್ಗಡೆಗೆ ಅರ್ಹನೆಂದು ಚುನಾಯಿಸುವನೋ ಅವನೇ ಅರ್ಹನಾಗುವನು ಎಂದರೆ ಪರೀಕ್ಷಕನು ತನ್ನಿಷ್ಟಬಂದಂತೆ ತೇರ್ಗಡೆಯನ್ನು ಹೊಂದಿಸುವನೆಂದಾಗುತ್ತದೆಯೋ? ಅಥವಾ ಪರೀಕ್ಷೆಯು ನಿರರ್ಥಕವೆಂದಾಗುತ್ತದೆಯೋ? ಎರಡೂ ಆಗುವದಿಲ್ಲವು. ಹಾಗೆಯೇ ಇಲ್ಲಿಯೂ ಎಂಬ ಭಾವವು. ಪ್ರಪತ್ತಿಯು ಸಾಧ್ಯೋಪಾಯವೆಂಬುದರಲ್ಲಿ ಸಂದೇಹವಿಲ್ಲವು, ಆದರಿಂದ ಪ್ರೀತನಾದ ಸಿದ್ಧೋಪಾಯನಾದ ಪರಮಾತ್ಮನೇ ಈತನು ದಿವ್ಯ ವೈಕುಂಠವನ್ನು ಹೊಂದಲರ್ಹನೆಂದು ವರಿಸತಕ್ಕವನು ಎಂಬ ಭಾವವು. ಈ ಅಭಿಪ್ರಾಯವನ್ನೇ ಸಂಹಿತಾವಾಕ್ಯವಾದ **"ಪರಮಾತ್ಮಾಚ ತೇನೈವ ಸಾಧ್ಯತೇ ಪುರುಷೋತ್ತಮಃ"** ಎಂಬುದು ಸಮರ್ಥಿಸುತ್ತದೆ.

ಆದರೆ, ಇಂತಹ ಸುಲಭೋಪಾಯದ ಉಪದೇಶವು ಗೀತೆಯಲ್ಲಿಲ್ಲದೇ ಇರಬಹುದೇ? ಎಂದರೆ; ಅರ್ಜುನನು ೨-೭ ನೆಯ ಶ್ಲೋಕದಲ್ಲಿ ಮೋಹಜ್ಞಾನವು ತೊಲಗಿ, ತನಗೆ ಪರಮಶ್ರೇಯಸ್ಸುಂಟಾಗುವ ಉಪದೇಶಕ್ಕಾಗಿ ಸ್ವತಂತ್ರ ಪ್ರಪತ್ತಿಯನ್ನನುಷ್ಠಿಸಿರುತ್ತಾನೆ. ಪುನಃ ೧೧ನೆಯ ಅಧ್ಯಾಯದ ೪೨, ೪೩, ೪೪ನೆಯ ಶ್ಲೋಕಗಳಲ್ಲಿ ತಾನು ಸ್ನೇಹ ಭಾವದಲ್ಲಿ ಶ್ರೀಕೃಷ್ಣ ಮಾಹಾತ್ಮ್ಯೆಯನ್ನು ತಿಳಿಯದೆಯೂ ಮರೆತೂ ಮಾಡಿದ ಸರ್ವಾಪರಾಧಗಳನ್ನೂ ಕ್ಷಮಿಸು ಎಂದು ಇನ್ನೊಂದು ಸಲ ಸ್ವತಂತ್ರ ಪ್ರಪತ್ತಿಯನ್ನು ಅನುಷ್ಠಿಸಿರುತ್ತಾನೆ ಮತ್ತು ೧೮ನೆಯ ಅಧ್ಯಾಯದ ಚರಮ ಶ್ಲೋಕವು ಅಙ್ಗರೂಪ ಶರಣಾಗತಿಯಾದರೂ ಎರಡಕ್ಕೂ ಅನ್ವಯಿಸುವ ಹಾಗೆ ಉಪದೇಶಿಸಿರುತ್ತಾರೆ

**ಆಾಲೇ, ಸ್ವತಂತ್ರ ಪ್ರಪತ್ತಿ ಸಿದ್ಧಿತ್ತಾಲ್, ಇನ್ನಿಷ್ಟೈ ಯುಡೈಯುವ ನುಕ್ಕು ಶ್ರೀ ವೈಕುಂಠಗದ್ಯತ್ತಿರ್ಪಡಿ ಯಿಲೇ ಸ್ವಯಂ ಫಲಮಾಗ "ಧ್ಯೇಯೋ ನಾರಾಯಣಸ್ಸದಾ" ಎಙ್ಗಿರ ಅರ್ಥತ್ತಿಲ್ ತರ್ ವಿಳುಕ್ಕಾಡ**

ಹೀಗಾದನಂತರ ಶ್ರೀ ವಚನ ಭೂಷಣವಲ್ಲಿ ಮುಕ್ತದೆಶೆಯುಲ್ಲಿ ಕೆಲವರು ಅನುಭವಪರರು, ಕೆಲವರು ಕೈಂಕರ್ಯಪರರೆಂದು ಹೇಳುವ ಅಭಿಪ್ರಾಯವು ಸರಿಯಲ್ಲವೆಂದು ಸಾರಸಂಗ್ರಹವ್ಯಾಖ್ಯಾತೃವು ಹೇಳುತ್ತಾರೆ. ಹೇಗೆಂದರೆ, ಶ್ರೀ ಪಿಳ್ಳೈ ಲೋಕಾಚಾರ್ಯರವರ ಅಭಿಪ್ರಾಯಪ್ರಕಾರ ಪರಮಾತ್ಮನ ಸಿದ್ಧೋಪಾಯತ್ವವಾದರೋ ಭೋಗ್ಯತ್ವವೇಷದಿಂದಲೂ ಮತ್ತು ಅವರನ್ನು ಕೈಂಕರ್ಯದಲ್ಲಿ ವಿನಿಯೋಗಿಸುವ ರೂಪದಿಂದಲೂ ಆದುದರಿಂದ ಕೆಲವರು ಅನುಭವಪರರು, ಕೆಲವರು ಕೈಙ್ಕರ್ಯಪರರು ಎಂಬುದು ಅವರ ಅಭಿಪ್ರಾಯವು ಇದು **"ಪರಮಾತ್ಮಾ ಚತೇನೈವ ಸಾಧ್ಯತೇಃ** ಎಂಬುದರಂತೆ ಭರನ್ಯಾಸದಿಂದಲೇ ಆತನೂ ಸಾಧ್ಯನೆಂದು ಹೇಳಿರುವದರಿಂದ ಸಮಂಜಸವಾಗುವದಿಲ್ಲವು ಮುಕ್ತಿಯುಲ್ಲಿ ಸಾಮ್ಯವು ಹೇಳಿರುವದರಿಂದ ಹೀಗೆ ವ್ಯತ್ಯಾಸಗಳನ್ನು ಹೇಳುವದು ಶಾಸ್ತ್ರ ಸಮ್ಮತವಲ್ಲವು" **ಎನ್ರುಮ್** - ಎಂದು ಹೇಳುವ, **ಇತ್ಯಾದಿವಚನಙ್ಗಳಾಲೇ** - ಇಂತಹ ಪ್ರಮಾಣವಚನಗಳಿಂದ, **ಸ್ವತಂತ್ರ ಪ್ರಪತ್ತಿ ಸಿದ್ಧಿತ್ತಾಲ್** - ಈ ಅಙ್ಗರೂಪವಾದ ಸ್ವತಂತ್ರಪ್ರಪತ್ತಿಯು ಸಿದ್ಧಿಸಿದರೆ, **ಈ ನಿಷ್ಠೈಯುಡೈಯವನುಕ್ಕು** - ಇಂತಹ ಲಘೂಪಾಯ ನಿಷ್ಠೆಯನ್ನು ಅವಲಂಬಿಸಿದವನಿಗೆ, **ಶ್ರೀ**ಭಾಷ್ಯಕಾರರು ಅವರು ರಚಿಸಿದ ಶ್ರೀವೈಕುಂಠಗದ್ಯದಲ್ಲಿ ಹೇಳಿರುವಹಾಗೆ, **ಸ್ವಯಂ ಫಲಮಾಕ** - ಸ್ವಯಂ ಅದೇ ಎಂದರೆ ಭಕ್ತಿಯೇ ಫಲವು ಎಂಬದಾಗಿ, **"ಧ್ಯೇಯೋ ನಾರಾಯಣಸ್ಸದಾ"** ಎಂಬುದರ, **ಅರ್ಥತ್ತಿಲ್** - ಅರ್ಥದಲ್ಲಿ, **ತರ್ ವಿಳಕ್ಕಾಡು ಅನ್ವಯತ್ತುಕ್ಕು ವಿರೋಧಮಿಲ್ಲೈ** - ಸ್ವತಃ ಪ್ರಾಪ್ತವಾದ ಅನ್ವಯಕ್ಕೆ, ಈ ಎರಡು ಉಪಾಯಗಳ ಸ್ವರೂಪಾನುಗುಣವಾಗಿ ಅರ್ಥಮಾಡಿದರೆ ವಿರೋಧವಿಲ್ಲವು. ಹೇಗೆಂದರೆ, **ಧ್ಯೇಯೋ ನಾರಾಯಣಸ್ಸದಾ** ಎಂಬ ವ್ಯಾಸೋಕ್ತಿಯಲ್ಲಿ ಹೇಳಿರುವ ಧ್ಯಾನವು ಶಕ್ತನಾದ ಭಕ್ತಿಯೋಗಿಯ ವಿಷಯದಲ್ಲಿ, **"ಭಕ್ತ್ಯಾತ್ವನನ್ಯಯಾ"** ಎಂದು ಹೇಳಿರುವಹಾಗೆ ಉಪಾಯ ರೂಪ ಭಕ್ತಿಯೂ, ಅಶಕ್ತನಾದ ಪ್ರಪತ್ತಿ ನಿಷ್ಠನ ವಿಷಯದಲ್ಲಿ ಫಲರೂಪ ಭಕ್ತಿಯೂ ಎಂದು ಅನ್ವಯಿಸಬಹುದೆಂಬ ತಾತ್ಪರ್ಯವು. ಅಲ್ಲಿ **ಧ್ಯೇಯಃ** ಎಂದು **ಇಷ್ಟು**ಮಾತ್ರವೇ ಹೇಳಿ, ಉಪಾಯತ್ವರೂಪದಲ್ಲಿಯಾಗಲಿ, ಫಲತ್ವರೂಪದಲ್ಲಿಯಾಗಲಿ ಎಂದು ಹೇಳದೇ ಇರುವದರಿಂದ ಎರಡಕ್ಕೂ ಸಮಂಜಸವಾಗುವಹಾಗೆ ಅನ್ವಯಿಸಬಹುದೆಂಬ ತಾತ್ಪರ್ಯವು. ಶ್ರೀ ವೈಕುಂಠ ಗದ್ಯದಲ್ಲಿ ಶ್ರೀ

**ನ್ನಯತ್ತುಕ್ಕು ವಿರೋಧಮಿಲ್ಲೈ. ಇದು ಅರೋಗನುಕ್ಕು ಮಾರೋಗ್ಯಾರ್ಥಿಕ್ಕುಮ್ ಕ್ಷೀರಂ ಸೇವ್ಯ ಮೆನ್ನತ್ತೊಡುಕ್ಕುಮ್.**

---

ಭಾಷ್ಯಕಾರರ ಸೂಕ್ತಿಯು ಯಾವುದೆಂದರೆ "**ಮಹಾವಿಭೂತೇ ಶ್ರೀಮತಶ್ಚರಣಾರವಿಂದಯುಗಳಮನನ್ಯಾತ್ಮಸಂಜೀವನೇನ ತದ್ಗತಸ್ಸರ್ವ ಭಾವೇನ ಶರಣ ಮನುವ್ರಜೇತ್, ತತಶ್ಚ ಪ್ರತ್ಯಹಮಾತ್ಮೋಜ್ಜೀವನಾಯೈವ ಮನುಸ್ಮರೇತ್**" "ನಿತ್ಯವಿಭೂತಿ ಲೀಲಾವಿಭೂತಿ ಎಂಬ ಉಭಯ ನಿಯಾಮ್ಯವರ್ಗವನ್ನುಳ್ಳ ಮತ್ತು **ಶ್ರೀಮತಃ** - ಲಕ್ಷ್ಮೀಯುಕ್ತನಾದ ಎಂದರೆ ಶ್ರಿಯಃಪತಿಯಾದ ಶ್ರೀಮನ್ನಾರಾಯಣನ ಪಾದಕಮಲದ್ವಂದ್ವವನ್ನು ಆತ್ಮೋಜ್ಜೀವನ ವಿಷಯದಲ್ಲಿ ಆತನಲ್ಲದೆ ಇನ್ನು ಯಾರಿಗೂ ಸಾಮರ್ಥ್ಯವಿಲ್ಲವೆಂಬ ಭಾವನೆಯಿಂದ ಆತನನ್ನು ಉಪಾಯವನ್ನಾಗಿ ವರಿಸತಕ್ಕದ್ದು, **ತತಶ್ಚ** - ಎಂದರೆ ಪ್ರಪದನಾನುಷ್ಠಾನಾಂತರದಲ್ಲಿ, ಪ್ರತಿದಿನವೂ ತನಗೆ ಅಲಭ್ಯವಾದುದು ಮುಂದೆ ಸರ್ವೇಶ್ವರನ ಕರುಣೆಯಿಂದ ಲಭಿಸುತ್ತದೆಂಬ ಮನಸ್ತೃಪ್ತಿಯಿಂದ ಆತ್ಮೋಜ್ಜೀವನಕ್ಕಾಗಿ ಆತನನ್ನು ಧ್ಯಾನಿಸತಕ್ಕದ್ದು. ಇದರಿಂದ ಫಲರೂಪ ಭಕ್ತಿಯು ಹೇಳಲ್ಪಟ್ಟಿತೇ ವಿನಾ ಉಪಾಯರೂಪ ಭಕ್ತಿಯಲ್ಲವು. ಹಾಗಾದರೆ **ಧ್ಯೇಯೋ ನಾರಾಯಣಸ್ಸದಾ** ಎಂಬುದು ಎರಡು ವಿಧ ಉಪಾಯನಿಷ್ಠರಿಗೂ ಅನ್ವಯಿಸಬಹುದೋ ಎಂದರೆ, ಅನ್ವಯಿಸಿದರೆ ಪ್ರತ್ಯವಾಯವೇನು ? ಎಂದು ಕೇಳುತ್ತಾರೆ. ಉಪಾಯರೂಪ ಭಕ್ತಿಯ ವಿಷಯದಲ್ಲಿ **ಧ್ಯೇಯೋ ನಾರಾಯಣಸ್ಸದಾ** ಎಂಬುದರಿಂದ ಯಾವಜ್ಜೀವವೂ ಉಪಾಸನೆಯನ್ನು ಮಾಡತಕ್ಕದ್ದು ಎಂಬರ್ಥವು ಫಲರೂಪ ಭಕ್ತಿಯ ವಿಷಯದಲ್ಲಿ, ಭರನ್ಯಾಸರೂಪ ಸಕೃದನುಷ್ಠಾನವನ್ನೂ ಮಾಡಿದರೆ ತನಗುಂಟಾಗುವ ಆತ್ಮೋಜ್ಜೀವನಕ್ಕಾಗಿ ಸರ್ವೇಶ್ವರನನ್ನು ಯಾವಜ್ಜೀವವೂ ಧ್ಯಾನಿಸತಕ್ಕದ್ದು ಸ್ಮರಿಸತಕ್ಕದ್ದು ಎಂಬ ಭಾವವು. ಹೀಗೆ ಒಂದೇಪ್ರಯೋಗವು ಎರಡು ಅಧಿಕಾರಿಗಳಿಗೂ ಅನ್ವಯಿಸುವದುಂಟೋ ಎಂದರೆ ಒಂದು ದೃಷ್ಟಾಂತ ಮೂಲಕ ಆಗಬಹುದೆಂದು ತಿಳಿಸುತ್ತಾರೆ:—**ಕ್ಷೀರಮ್**-ಹಾಲು, **ಅರೋಗನಕ್ಕು**-ರೋಗವಿಲ್ಲದವನಿಗೂ, **ಆರೋಗ್ಯಾರ್ಥಿಕ್ಕುಮ್**-ಆರೋಗ್ಯವಿಲ್ಲದೆ ಅದನ್ನು ಬಯಸುವವನಿಗೂ ಸಹ, **ಸೇವ್ಯಂ** - ಸೇವಿಸಲು ಯೋಗ್ಯವಾದುದು, **ಎನ್ನತ್ತೊಡು**-ಎಂಬುದರೊಂದಿಗೆ, **ಇದು** - ಈ, "**ಧ್ಯೇಯಃ**" ಎಂಬಲ್ಲಿ ತೋರಿಬರುವ ಧ್ಯಾನರೂಪ ಭಕ್ತಿಯು, **ಒಕ್ಕುಮ್** - ಸಮಾನವು ಹಾಲು ಹೇಗೆ ಆರೋಗ್ಯವಿರುವವನಿಗೂ ಆರೋಗ್ಯವಿಲ್ಲದೆ ಆರೋಗ್ಯಬೇಕೆಂದಿರುವವನಿಗೂ ಸಹ ಪುಷ್ಟಿಕರವೋ, ಹಾಗೆಯೇ ಭಕ್ತಿಯಿಂದ ಪರಮಾತ್ಮನನ್ನು ಧ್ಯಾನಿಸುವದು, ಭಕ್ತಿನಿಷ್ಠನಿಗೂ

## ಅತಃ ಸದಾ ಭಗವತ್ಸ್ಮರಣೇ ಸರ್ವಾಧಿಕಾರತ್ವಮ್.

**ಸಾಙ್ಗಮಾನ ಧ್ಯಾನವಿಶೇಷಮ್ ಸರ್ವಾಧಿಕಾರಮನ್ರೇಯಾಗಿಲುಮ್, ಭಗವದ್ವಿಷಯತ್ತಿಲ್ ಅಧಿಕಾರಾನುರೂಪಮಾಗ ಅರಿಯಲಾಮಳವುಮ್ (೧) "ನಿರನ್ತರಮ್ ನಿನ್ಯೆಪ್ಪದಾಗ ನೀ ನಿನೈಕ್ಕ ವೇಣ್ಡುಮೋ" ಇತ್ಯಾದಿಗಳಿಲ್ಪಡಿಯೇ ಅನುಸಂಧಿಕ್ಕವುಮ್ ಕುರೈಯಿಲ್ಲೈ.**

---

ಪ್ರಪತ್ತ್ಯನುಷ್ಠಿಸಿದವನಿಗೂ ಇಬ್ಬರಿಗೂ ಬೇಕಾದುದು. ಭರನ್ಯಾಸ ಮಾಡಿದವನು ಕೃತಕೃತ್ಯನು, ಹಾಲು ಭೋಗ್ಯವಾಗಿರುವ ಆರೋಗ್ಯಸ್ಥಾನೀಯನು, ಇವನಿಗೂ ಕೃತಜ್ಞತಾಭಾವ ಪ್ರದರ್ಶಕವಾಗಿ ತನ್ನ ಸ್ವರೂಪಕ್ಕನುಗುಣವಾದುದಾಗಿ ಭಕ್ತಿರೂಪ ಧ್ಯಾನವು ಯುಕ್ತವು, ಉಪಸನಾನಿಷ್ಠನು ಹಾಲು ಆವಶ್ಯಕವಾಗಿರುವ ಆರೋಗ್ಯವನ್ನು ಬಯಸುವವನ ಸ್ಥಾನೀಯನು; ಇವನಿಗೆ ಭಕ್ತಿರೂಪ ಧ್ಯಾನವು ಉಪಾಯರೂಪದಲ್ಲಿ ಆವಶ್ಯಕವೆಂಬ ಭಾವವು.

**ಆದುದರಿಂದ ನಿರಂತರ ಭಗವದ್ಧ್ಯಾನದಲ್ಲಿ ಸರ್ವರಿಗೂ ಅಧಿಕಾರವು.**

---

ಭಕ್ತಿಯು ಅಷ್ಟಾಂಗಯುಕ್ತವಾಗಿ ಧ್ಯಾನಯೋಗಿಗೆ ಆವಶ್ಯಕವು. ಆ ಧ್ಯಾನಯೋಗವು ತ್ರೈವರ್ಣಿಕರಿಗೆ ಮಾತ್ರವೇ? ಹೀಗಿರುವಾಗ, ಭಕ್ತಿಯು ಸರ್ವಾಧಿಕಾರ ಹೇಗೆ? ಎಂದರೆ ಉಪಾಯರೂಪ ಪರಭಕ್ತಿಯು ಉಪಾಸಕನಿಗೇ ಆವಶ್ಯಕವಾದರೂ ಸಾಮಾನ್ಯವಾದ ಭಕ್ತಿಯು ಫಲರೂಪವಾಗಿ ಸಾರ್ವತ್ರಿಕವಾಗಿ ಸ್ತ್ರೀಶೂದ್ರಾದಿ ಮೊದಲುಗೊಂಡು ಸಮಸ್ತರಿಗೂ ಬೇಕಾದುದೇ ಎಂದು **ಸಾಙ್ಗಮಾನ** ಎಂದಾರಂಭಿಸಿದ ವಾಕ್ಯಮೂಲಕ ಹೇಳುತ್ತಾರೆ. **ಸಾಙ್ಗಮಾನ** - ಅಷ್ಟಾಂಗಗಳಿಂದ ಯುಕ್ತವಾದ, ಧ್ಯಾನ ವಿಶೇಷವು, **ಸರ್ವಾಧಿಕಾರಮನ್ರೇಯಾಗಿಲುಮ್** - ತ್ರೈವರ್ಣಿಕರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಮಾತ್ರವೇ ಅಧಿಕಾರವುಳ್ಳದ್ದಾಗಿ ಸ್ತ್ರೀಶೂದ್ರಾದಿಗಳಿಗೆ ಅಧಿಕಾರವಿಲ್ಲದುದರಿಂದ ಸರ್ವಾಧಿಕಾರವುಳ್ಳದುದಲ್ಲವೇ ಇದ್ದರೂ, **ಭಗವದ್ವಿಷಯತ್ತಿಲ್** - ಭಗವಂತನನ್ನು ಹೊಂದುವ ಸಂದರ್ಭದಲ್ಲಿ, **ಅಧಿಕಾರಾನುರೂಪಮಾಗ** - ಸಮರ್ಥರಾಗಿಯೂ ತ್ರಿವರ್ಣದವರಾಗಿಯೂ ಇರುವವರಿಗೆ ಉಪಾಸನವೂ, ತ್ರಿವರ್ಣವಲ್ಲದವರಿಗೂ ಅಶಕ್ತರಿಗೂ ಪ್ರಪತ್ತಿಯೂ, ಹೀಗೆ ಅಪರವರುಗಳ ಅಧಿಕಾರಕ್ಕನುಗುಣವಾಗಿ, **ಅರಿಯಲಾಮಳವುಮ್** - ಎಲ್ಲಿವರೆಗೆ ತಿಳಿಯಲು ಸಾಧ್ಯವಾಗುತ್ತದೋ ಅಲ್ಲಿಯವರೆಗೂ (೧) **ನಿರನ್ತರಂ-ಯಾವ**

---

(೧) ತಿರುಚ್ಛಂದವಿರುತ್ತಂ ೧೦೧.

ಗಲೂ, ನಿನೈಪ್ಪದಾಗ - ಹೇಗೆ ಸ್ಮರಣೆಯುಂಟಾಗತಕ್ಕದ್ದೋ ಹಾಗೆ ನೀ - ಕರುಣಾಳುವಾದ ನೀನು, ನಿನೈಕ್ಕವೇಣ್ಡುಮೋ - ಸಙ್ಕಲ್ಪಿಸತಕ್ಕದ್ದು" ಇತ್ಯಾದಿಗಳಿರ್ಪ್ಪದಿಯೋ - ಇವೇ ಮೊದಲಾದವುಗಳಲ್ಲಿ ಹೇಳಿರುವ ಹಾಗೆ, ಅನುಸಂಧಿಕ್ಕವುಮ್ ಕುರೈಯಿಲ್ಲೈ-ಅನುಸಂಧಾನ ಮಾಡುವದರಲ್ಲೇನೂ ನ್ಯೂನತೆ ಯಿಲ್ಲವು. ಭರನ್ಯಾಸವನ್ನು ಮಾಡಿ ಕೃತಕೃತ್ಯನಾದ ಪ್ರಪನ್ನನಿಗೂ ಕೂಡ ಉಪಾಸನಾರೂಪದಲ್ಲಿ ತೈಲಧಾರಾವದವಿಚ್ಛಿನ್ನವಾದ ಭಗವಂತನ ಸ್ಮರಣೆಯು ಬೇಕಾಗಿಲ್ಲದಿದ್ದರೂ ಸಾಮಾನ್ಯ ಭಗವತ್ಸ್ಮರಣೆಯು ನಿರಂತರವಾಗಿ ಅಪೇಕ್ಷಿತವೇ ಎಂಬ ಭಾವವು. ಈ ತಿರುಚ್ಚಂದ ವಿರುತ್ತದ ಪೂರ್ಣಪಾಠವು ಯಾವುದೆಂದರೆ :—

"ಇರನ್ದುರೈಪ್ಪದುಣ್ಡು ವಾಳಿ ಯೇಮ ನೀರ್ ನಿರತ್ತಮಾ ।
ವರನ್ತರು ತ್ತಿರುಕ್ಕುರಿಪ್ಪಿಲ್ ವೈತ್ತದಾಗಿಲ್ ಮನ್ನು ಶೀರ್ ।
ಪ್ಪರನ್ದ ಚಿನ್ದೈ ಯೊನ್ರಿ ನಿನ್ರು ನಿನ್ನ ಪಾದ ಪಙ್ಕಜಂ ।
ನಿರನ್ತರಂ ನಿನೈಪ್ಪದಾಗ ನೀನಿನೈಕ್ಕ ವೇಣ್ಡುಮೇ ॥ ೧೦೧ ॥

ಇದರರ್ಥವು:—ಏಮ - ಮಹತ್ತಾಗಿರುವ, ನೀರ್ - ಸಮುದ್ರದ ಹಾಗೆ, ನಿರತ್ತು - "ಅಪ್ರಮೇಯೋ ಮಹೋದಧಿಃ" ಎಂದು ಹೇಳಿರುವಹಾಗೆ ಅಪರಿಚ್ಛಿನ್ನ ಪರಿಪೂರ್ಣತೆಯುಳ್ಳ, ಅಮಾ-"ಪಿತಾತ್ವಂ ಮಾತಾತ್ವಂ" ಎಂಬ ಶ್ಲೋಕದಲ್ಲಿ ಉಪಪಾದಿಸಿರುವಹಾಗೆ ನಮಗೆ ಸರ್ವವಿಧ ಬಂಧುವಾದವನೇ, ಇರನ್ದು - ಯಾಚಿಸಿ, ಉರೈಪ್ಪದು ಉಂಡು - ವಿಜ್ಞಾಪಿಸಿಕೊಳ್ಳುವದು ಒಂದುಂಟು, ವಾಳಿ- ನಿನಗೆ ಮಂಗಳಾಶಾಸನವು, ವರಂತರುಮ್ - ಈ ಆತ್ಮಾವಿಗೆ ಕೈಂಕರ್ಯವಮಾಡುವ ಪರಮ ಶ್ರೇಯಸ್ಸನ್ನುಂಟುಮಾಡುವದೇ ಸ್ವಭಾವವಾಗಿವುಳ್ಳ, ಮನ್ನು ಶೀರ್ - ಸ್ಥಿರವಾದ ಕೈಂಕರ್ಯ ಸಾಮ್ರಾಜ್ಯ ರೂಪಶ್ರೇಯಸ್ಸನ್ನು, ತಿರುಕ್ಕುರಿಪ್ಪಿಲ್ ವೈತ್ತಾಗಿಲ್ - ಮನಸ್ಸಿನಲ್ಲಿಟ್ಟದುದಾದರೆ, ಪರನ್ದ ಚಿನ್ದೈ - ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸುವ ನನ್ನ ಮನಸ್ಸು, ಒನ್ರಿ ನಿನ್ರು-ಮತ್ತೆ ಯಾವುದರಲ್ಲೂ ಹಾಗೆ ಹೋಗದೆ ನಿನ್ನಲ್ಲೇ ಸ್ಥಿರವಾಗಿ ನಿಂತು, ನಿನ್ ಪಾದ ಪಂಕಯಂ - ನಿನ್ನ ಪಾದ ಕಮಲವನ್ನು, ನಿರಂತರಂ - ವಿಚ್ಛೇದವಿಲ್ಲದಹಾಗೆ, ನಿನೈಪ್ಪದಾಗ ಧ್ಯಾನಿಸುವಹಾಗೆ, ನೀ ನಿನೈಕ್ಕವೇಣ್ಡುಮ್ - ನೀನು ಸಂಕಲ್ಪಿಸತಕ್ಕದ್ದು."

"ಈ ವೇಳೆ ಉದಾಹರಿಸಿರುವ ಶ್ರೀ ಭಾಷ್ಯಕಾರರವರ ವೈಕುಂಠಗದ್ಯದಲ್ಲಿನ ವಾಕ್ಯದಲ್ಲಿ ಆತ್ಮೋಜ್ಜೀವನಕ್ಕಾಗಿ ಪ್ರತಿದಿನವೂ ಭಗವಂತನನ್ನು ಧ್ಯಾನಿಸತಕ್ಕದ್ದೆಂದು ಹೇಳಿರುವದರಿಂದ, ಸ್ವಯಂ ಫಲರೂಪವಾದ ಭಕ್ತಿಯು ಹೇಳಲ್ಪಟ್ಟಿತೆಂಬುದು ವಿರುದ್ಧಾಭಿಪ್ರಾಯವಾಗುವದು; ಪ್ರತಿದಿನವೂ ಮಾಡತಕ್ಕದ್ದೆಂದು ವಿಧಿಸಿರುವದರಿಂದ ಸಾಙ್ಗಧ್ಯಾನ ವಿಶೇಷವೇ ಹೇಳಬೇಕಾಗುತ್ತದೆ.

**ಶ್ರೀ ಭಾಷ್ಯಕಾರೈರ್ಭರನ್ಯಾಸೋಪಾಯಸ್ಯ ಉಪಾದೇಯತ್ವ ಕಥನಮ್.**

ಶ್ರೀ ಭಾಷ್ಯಕಾರರು ಮಿವ್ವುಪಾಯ ನಿಷ್ಟೈಯೈ ಶಿರಿಯಗದ್ಯತ್ತಿಲುಮ್, ಪೆರಿಯ ಗದ್ಯತ್ತಿಲುಮ್, ಅರುಳಿಚ್ಚೆಯ್‌ದು ಶ್ರೀವೈಕುಂಠಗದ್ಯ

---

ಇದೂ ಅಲ್ಲದೆ ಅವರು ಬರೆದಿರುವ ನಿತ್ಯವೆಂಬ ಗ್ರಂಥದಲ್ಲೂ ಪೂಜೋಪಕ್ರಮತಃ ಪ್ರ್ವಂ ಪ್ರತ್ಯಕ್ಷ ರೂಪಾನುಧ್ಯಾನೇನ ಧ್ಯಾಯನ್ನಾಸೀತ ಎಂದು ಹೇಳಿರುವದರಿಂದ ಉಪಾಸನಮಾತ್ರವೇ ಉಪಾಯವೆಂದು ಹೇಳಲ್ಪಟ್ಟಹಾಗೆ ತೋರುತ್ತದೆ; ಮತ್ತು ಶ್ರೀ ಭಾಷ್ಯದಲ್ಲಿ ಪ್ರಪದನ ವಿಷಯವೇ ಹೇಳಲ್ಪಡದೆ ವೇದನ ಮೊದಲಾದ ಶಬ್ದಗಳಿಂದ ಉಪಾಸನವೇ ಹೇಳಲ್ಪಟ್ಟಿರುವದರಿಂದಲೂ, ಈ ಉಪಾಸನಕ್ಕೆ ಅನನ್ಯೋಪಾಯತ್ವ ಪ್ರಯೋಗವಿರುವದರಿಂದಲೂ ಉಪಾಸನವೇ ಉಪಾಯವೇ ವಿನಾ ಭರನ್ಯಾಸವಲ್ಲವು" ಎಂಬುದು ಕೆಲವರ ಪೂರ್ವಪಕ್ಷವು; ಮತ್ತು ಶ್ರೀ ಭಗವದ್ಗೀತೆಯ ಚರಮಶ್ಲೋಕದ ಭಾಷ್ಯದಲ್ಲೂ ಉಪಾಸನಾಪರವಾಗಿ ವ್ಯಾಖ್ಯಾನ ಮಾಡಿದರೇ ವಿನಾ ಭರನ್ಯಾಸ ವಿಷಯವಾಗಿ ಅರ್ಥಮಾಡಲಿಲ್ಲವು. ಇವೆಲ್ಲಾ ಕಾರಣಗಳಿಂದಲೂ ಉಪಾಸನವೇ ಸಾಧ್ಯೋಪಾಯವೇ ವಿನಾ ಭರನ್ಯಾಸವಲ್ಲವು ಎಂಬುದು ಕೆಲವರ ಅಭಿಪ್ರಾಯವು ಇದು ಸರಿಯಾದಭಿಪ್ರಾಯವಲ್ಲವೆಂದು ಮುಂದೆ ತಿಳಿಸುತ್ತಾರೆ. "ಯದ್ಯೇನ ಕಾಮಕಾಮೇನ" ಎಂದಾರಂಭಿಸಿ "ಸಾಧ್ಯತೇ ಪುರುಷೋತ್ತಮಃ" ಎಂದು ಮುಗಿಸಿರುವ ಅಹಿರ್ಬುಧ್ನ್ಯ ವಾಕ್ಯವು ನಿಸ್ಸಂಶಯವಾಗಿ ಈ ಪೂರ್ವಪಕ್ಷವನ್ನು ಖಂಡಿಸುತ್ತದೆ ಎಂದು ತಿಳಿಯತಕ್ಕದ್ದು. ಆದರೂ ಸ್ವತಂತ್ರಪ್ರಪತ್ತಿಯೂ ಸಹ ಉಪಾಯವೇ ಎಂಬದು, ಶ್ರೀ ಭಾಷ್ಯಕಾರರಭಿಪ್ರಾಯವು. ಇವನ್ನು ಮುಂದಿನ ವಾಕ್ಯಗಳಿಂದ ವ್ಯಕ್ತಪಡಿಸುತ್ತಾರೆ.

**ಶ್ರೀ ಭಾಷ್ಯಕಾರರೇ ಸ್ವತಂತ್ರಪ್ರಪತ್ತಿಯೂ ಉಪಾಯವೆಂದೂ ಅಙ್ಗೀಕರಿಸಿರುತ್ತಾರೆ.**

ಶ್ರೀ ಭಾಷ್ಯಕಾರರೂ ಸಹ, ಇಲ್ಲಿ ಶ್ರೀ ಭಾಷ್ಯಕಾರರು ಸ್ವತಂತ್ರಪ್ರಪತ್ತಿಯನ್ನು ಉಪಾಯವಾಗಿ ಅಙ್ಗೀಕರಿಸಲೇ ಇಲ್ಲವೆಂದು ಹೇಳುವ ಪೂರ್ವಪಕ್ಷಕ್ಕೆ ಸಮಾಧಾನೋಕ್ತಿಯಾದುದರಿಂದ, ಅವರೂ ಕೂಡ ಮೂರು ಗದ್ಯಗಳಲ್ಲೂ ಉಪಾಯವಾಗಿ ಅಙ್ಗೀಕರಿಸುತ್ತಾರೆಂದು ಹೇಳುವದಕ್ಕಾಗಿ ಹಾಗೆ ಪ್ರಯೋಗವು. ಇವ್ವುಪಾಯ ನಿಷ್ಟೈಯೈ – ಈ ಭರನ್ಯಾಸರೂಪ ಉಪಾಯನಿಷ್ಠೆಯನ್ನು, ಶಿರಿಯ ಗದ್ಯತ್ತಿಲುಮ್ – ಚಿಕ್ಕ ಗದ್ಯವಲ್ಲೂ ಎಂದರೆ ಶ್ರೀರಂಗ ಗದ್ಯದಲ್ಲೂ, ಪೆರಿಯ

ತ್ತಿಲು ಇನ್ನಿಷ್ಟ್ರೈಯೈಚ್ಚುರಙ್ಗಕ್ಕಾಟ್ಟಿ, ಯಿರುನ್ಸನಾಳ್ ಪ್ರಾಪ್ಯರುಚಿ ಕುಲೈಯಾದೆ ವಳರ್ನ್ದು ಪೋರುಮ್ಪಡಿ ಕ್ಕೀಡಾನ ಅನುಸಂಧಾನ ವಿಶೇಷತ್ತೈ "ತತಶ್ಚ ಪ್ರತ್ಯಹ ಮಾತ್ಮೋಜ್ಜೀವನಾಯೈವ ಮನುಸ್ಮರೇತ್" ಎನ್ರು ತುಡಙ್ಗಿ ಅರುಳಿಚ್ಚೆಯ್ದಾರ್.

---

**ಗದ್ಯತ್ತಿಲುಮ್** - ಪೃಥು ಗದ್ಯವಲ್ಲೂ ಎಂದರೆ ಶರಣಾಗತಿ ಗದ್ಯದಲ್ಲೂ, **ಅರುಳಿಚ್ಚೆಯ್ದು** - ಅನುಷ್ಠಿಸತಕ್ಕದ್ದೆಂದು ಹೇಳಿ, ಶ್ರೀ ವೈಕುಂಠ ಗದ್ಯದಲ್ಲೂ, **ಇನ್ನಿಷ್ಟೈಯೈ** - ಈ ಸ್ವತಂತ್ರ ಪ್ರಪತ್ತಿ ನಿಷ್ಠೆಯನ್ನು, **ಚುರುಙ್ಗಕ್ಕಾಟ್ಟಿ** - ಸಙ್ಗ್ರಹವಾಗಿ ತೋರಿಸಿ, **ಇರುನ್ದನಾಳ್** - ಪ್ರಪನ್ನನು ಈ ಪೃಥ್ವಿಯಲ್ಲಿರುವ ತನಕ, **ಪ್ರಾಪ್ಯ ರುಚಿಕುಲೈಯಾದೆ** - ಪ್ರಾಪ್ಯನಾದ ಶ್ರಿಯಃಪತಿಯನ್ನು ಹೋಗಿ ಸೇರಬೇಕೆಂಬುದರಲ್ಲಿ ಆಶೆಯು ನಷ್ಟವಾಗದಹಾಗೆ, **ವಳರ್ನ್ದು ಪೋರುಮ್ಪಡಿಕ್ಕೀಡಾನ**-ವೃದ್ಧಿಯಾಗುತ್ತಾ ಹೋಗ ವದಕ್ಕನುಗುಣವಾದ, **ಅನುಸಂಧಾನ ವಿಶೇಷವನ್ನು**. "**ತತಶ್ಚ** - ಅನಂತರದಲ್ಲಿ, **ಪ್ರತ್ಯಹಂ**-ಪ್ರತಿದಿನವೂ, **ಆತ್ಮೋಜ್ಜೀವನಕ್ಕಾಗಿ**, **ಏವಂ** - ಹೀಗೆಯೇ, **ಅನುಸ್ಮರೇತ್**-ಸ್ಮರಿಸತಕ್ಕದ್ದು." **ಎನ್ರುತ್ತುಡಙ್ಗಿ** - ಎಂದಾರಂಭಿಸಿ, **ಅರುಳಿಚ್ಚೆಯ್ದಾರ್** - ಕೃಪೆಯಾ ಅಪ್ಪಣೆ ಕೊಡಿಸಿರುತ್ತಾರೆ. ಶಿರಿಯ ಗದ್ಯವಾದ ಶ್ರೀರಂಗ ಗದ್ಯದಲ್ಲಿ ಪ್ರಥಮತಃ ಭಕ್ತಿಯೋಗಕ್ಕೆ ಅಸಮರ್ಥತೆಯನ್ನು, ಭಕ್ತಿತದುಪಾಯತ್ವಕ್ಕೆ ಬೇಕಾದ ಸ್ವರೂಪಾತ್ಮಗುಣ ವಿಹೀನನೆಂದು ಹೇಳಿ, ಭಗವನ್ಮಾಯಾತಿರೋಹಿತ ಸ್ವಪ್ರಕಾಶತೆಯಿಂದುಂಟಾದ ಕಾರ್ಪಣ್ಯವನ್ನು ಪ್ರದರ್ಶಿಸಿ, ಅವ್ಯಸ್ಥಸಂತಾರೋಪಾಯಃ ಎಂಬುದರಿಂದ ಅನನ್ಯ ಗತಿತ್ವವನ್ನು ತೋರ್ಪಡಿಸಿ, "ನಿಖಿಲಜನಸ್ತು ಜಾತ ಶರಣ್ಯ" ಎಂದು ಸಂಬೋಧಿಸಿ, ಸಾಧಾರಣ ಜಂತುಗಳಿಗೂ ಕೂಡ ಶರಣ್ಯನಾಗಿರುವವನು ಪ್ರಪನ್ನರಾದ ತನಗೆ ಪರಾಙ್ಮುಖನಾಗುವನೇ ಎಂಬಭಿಪ್ರಾಯವನ್ನು ವ್ಯಕ್ತಪಡಿಸಿ, "ಶ್ರೀಮನ್ನಾರಾಯಣ ತವ ಚರಣಾರವಿಂದಯುಗಳಂ ಶರಣಮಹಂ ಪ್ರಪದ್ಯೇ" ಎಂದು ಶರಣಾಗತಿಯನ್ನನುಷ್ಠಿಸಿ, ಹೀಗೆ ಭರನ್ಯಾಸ ಮಾಡುವಾಗ ಮಹಾ ವಿಶ್ವಾಸವು ತನಗುಂಟೆಂದು "ವಿಶ್ವಾಸಪೂರ್ವಕಂ ಭಗವಂತಂ ನಿತ್ಯಕಿಂಕರತಾಂ ಪ್ರಾರ್ಥಯೇ" ಎಂದು ಹೇಳಿರುತ್ತಾರೆ. ಪೃಥು ಗದ್ಯವಾದ ಶರಣಾಗತಿ ಗದ್ಯದಲ್ಲಿ, ಪ್ರಥಮತಃ ಶ್ರೀ ಶರಣಾಗತಿಯನ್ನು ಪುರುಷಕಾರತ್ವೇನ ಅನುಷ್ಠಿಸಿ ಅನಂತರ ಶ್ರಿಯಃಪತಿಯ ರಕ್ಷಣೋಪಯುಕ್ತ ಕಲ್ಯಾಣ ಗುಣಗಳನ್ನೆಲ್ಲಾ ಅನುಸಂಧಾನಮಾಡಿ "ಅಶರಣ್ಯ ಶರಣ್ಯ ಅನನ್ಯ ಶರಣಸ್ತ್ವತ್ಪಾದಾರವಿಂದಯುಗಳಂ ಶರಣಮಹಂ ಪ್ರಪದ್ಯೇ" ಎಂದು ಶರಣಾಗತಿಯನ್ನನುಷ್ಠಿಸಿರು

ಇಪ್ಪಸನ್ನನುಕ್ಕು (೧) "ಪೂಶಿತ್ತುವ್ ಪೋಕ್ಕಿನೇನ್ ಪೋದು" ಎಙ್ಗ್ಳ ಅನನ್ಯ ಪ್ರಯೋಜನಸಮಾನ ಪೂಜಾವಿಶೇಷತ್ತೈ, (೨) "ಅಥ ಪರಮೈಕಾಂತಿನೋ ಭಗವದಾರಾಧನ ಪ್ರಯೋಗಂ ವಕ್ಷ್ಯೇ, ಭಗವ

---

ತ್ತಾರೆ ಸರ್ವೇಶ್ವರನು ಪ್ರತಿವಚನ ರೂಪದಲ್ಲಿ ಅಭಯವನ್ನು "ನಿತ್ಯಕಿಂಕರೋ ಭವಿಷ್ಯಸಿ, ಮಾತೇಭೂದತ್ರ ಸಂಶಯಃ" ಎಂದು ದಯಪಾಲಿಸಿದ್ದಾನೆ. ಇದನ್ನು ಅನುಸಂಧಾನ ವಿಶೇಷವೆಂದು ಹೇಳಿರುತ್ತಾರೆ; ಏಕೆಂದರೆ ಭರನ್ಯಾಸವು ಗುರುಮುಖೇನ ಸಕೃದನುಷ್ಠೇಯವು ಈ ಗದ್ಯಗಳಲ್ಲಿ ಶರಣಮಹಂ ಪ್ರಪದ್ಯೇ ಇತ್ಯಾದಿಗಳನ್ನು ನಿತ್ಯವೂ ಪಠನ ಮಾಡುವದರಿಂದ ನಿತ್ಯವೂ ಶರಣಾಗತಿಯನ್ನನುಷ್ಠಿಸಿದ ಹಾಗಲ್ಲವು. ಪ್ರತಿದಿನದಲ್ಲೂ ದ್ವಯಮಂತ್ರೋಚ್ಚಾರಣ ರೂಪ ಜಪವು ಹೇಗೆ ಭರನ್ಯಾಸವಾಗದೆ ಅದರ ಮಾಹಾತ್ಮ್ಯಾನುಸಂಧಾನವೋ, ಹಾಗೆಯೇ ಈ ಗದ್ಯ ಪಠನವೂ ಎಂದು ಭಾವಿಸತಕ್ಕದ್ದು. ಹಾಗಾದರೆ ಈ ಅನುಸಂಧಾನದಿಂದುಂಟಾಗುವ ಪ್ರಯೋಜನವೇನೆಂದು ಪ್ರಶ್ನಿಸಬಹುದು. ಫಲರೂಪ ಭಕ್ತಿಯು ಸದಾ ನೆಲೆಗೊಂಡಿರುವದೇ ಪ್ರಯೋಜನವು. ಇದನ್ನೇ ಪ್ರಾಪ್ಯರುಚಿ ಕೆಟ್ಟೆಯಾದೇ ನಳರ್ನ್ನು ಪೋರುವ್ ಪಡಿಕ್ಕೇಡಾನ ಅನುಸಂಧಾನ ವೆಂದು ಹೇಳಿರುತ್ತಾರೆ.

ಆದರೆ ಶ್ರೀ ಭಾಷ್ಯಕಾರರು ತಾವು ಬರೆದಿರುವ "ನಿತ್ಯ"ವೆಂಬ ಭಗವದಾರಾಧನ ಕ್ರಮಾದಿಗಳನ್ನು ತಿಳಿಸುವ ಗ್ರಂಥದಲ್ಲಿ "ಪ್ರತ್ಯಕ್ಷರೂಪಾನುಧ್ಯಾನೇನ ಧ್ಯಾಯನ್ನಾಸೀತ" ಎಂದು ಉಪಾಸನ ರೂಪಸಾಕ್ಷಾತ್ಕಾರವನ್ನೇ ಉಪದೇಶಿಸಿರುವಹಾಗೆ ತೋರುತ್ತದೆಯಲ್ಲಾ ಎಂದರೆ ಹಾಗಲ್ಲವೆಂದೂ, ಅದು ಪ್ರಪನ್ನನಿಗೆ ಬೇಕಾದ ಫಲರೂಪ ಧ್ಯಾನವಾದ ಭಗವತ್ಕೈಂಕರ್ಯೈಕರತಿಯನ್ನೂ ಪರಮೈಕಾಂತಿತ್ವವನ್ನೂ, ಬೋಧಿಸುತ್ತದೆ ಎಂದು ಹೇಳುತ್ತಾರೆ.

ಇಪ್ಪಸನ್ನನುಕ್ಕು-ಈ ಪ್ರಪನ್ನನಿಗೆ (೧) "ಪೂಶಿತ್ತುವ್ ಪೋಕ್ಕಿನೇನ್ ಪೋದು," ಸರ್ವೇಶ್ವರನನ್ನು ಆರಾಧಿಸುತ್ತಾ ಕಾಲವನ್ನು ಕಳೆದೆನು" ಎಙ್ಗ್ಳ- ಎಂಬಲ್ಲಿ ಹೇಳಿರುವ, ಅನನ್ಯಪ್ರಯೋಜನಮಾನ - ಸ್ವಯಂ ಪ್ರಯೋಜನವಾಗಿ ಇನ್ನು ಯಾವ ಪ್ರಯೋಜನಕ್ಕೂ ಅಲ್ಲದ, ಪೂಜಾವಿಶೇಷತ್ತೈ - ಭಗವದಾರಾಧನೆಯನ್ನು, (೨) "ಅಥ-ಅನಂತರದಲ್ಲಿ, ಪರಮೈಕಾಂತಿನಃ - ಪರಮೈಕಾಂತಿಗಳ, ಭಗವದಾರಾಧನ ಪ್ರಯೋಗವನ್ನು, ವಕ್ಷ್ಯೇ - ಹೇಳುವೆನು; ಭಗ

---

(೧) ನಾನ್ಮುಖನ್ ತಿರುವಂದಾದಿ ೬೩. (೨) ಶ್ರೀ ಭಾಷ್ಯಕಾರರ ನಿತ್ಯಂ.

**ತ್ಕೈಙ್ಕರ್ಯೈಕರತಿಃ ಪರಮೈಕಾಂತೀ ಭೂತ್ವಾ" ಎನ್ರು ತುಡಙ್ಗಿ, ನಿತ್ಯತ್ತಿಲೇ "ಅತ್ಯರ್ಥಪ್ರಿಯಾ ವಿರತ ವಿಶದತಮ ಪ್ರತ್ಯಕ್ಷರೂಪಾನು ಧ್ಯಾನೇನ ಧ್ಯಾಯನ್ನಾಸೀತ" ಎನ್ರು ಮರುಳಿಚ್ಚೆಯ್‌ದಾರ್.**

---

**ವತ್ಕೈಙ್ಕರ್ಯೈಕರತಿಃ** - ಭಗವತ್ಕೈಙ್ಕರ್ಯ ಒಂದರಲ್ಲೇ ಆಶೆಯುಳ್ಳವನಾಗಿ, ಇದರಿಂದ ಇಂದ್ರಿಯೋಪಭೋಗಾದಿಗಳಲ್ಲಿ ಮನಸ್ಸಿಲ್ಲದವನಾಗಿ ಇರಬೇಕೆಂಬ ತಾತ್ಪರ್ಯವು, ಐಹಿಕಾಸಕ್ತಿಯಿಲ್ಲದೇ ಭಗವಂತನಾರಾಧನೆಯಲ್ಲಿ ಮನಸ್ಸಿಟ್ಟ' **ಪರಮೈಕಾಂತೀಭೂತ್ವಾ** - ಪರಮೈಕಾಂತಿಯಾಗಿ, ಆತನೊಬ್ಬನಲ್ಲೇ ಮನಸ್ಸನ್ನಿಟ್ಟವನಾಗಿ" ಎನ್ರುತುಡಙ್ಗಿ - ಎದಾರಂಭಿಸಿ, **ನಿತ್ಯತ್ತಿಲೇ** - ಶ್ರೀ ಭಾಷ್ಯಕಾರರು ಅನುಗ್ರಹಿಸಿರುವ ನಿತ್ಯವೆಂಬ ಗ್ರಂಥದಲ್ಲಿ, "**ಅತ್ಯರ್ಥಪ್ರಿಯ** - ನಿರತಿಶಯ ಪ್ರಿಯವಾಗಿ, **ಅವಿರತ** - ಎಡೆಬಿಡದ, **ವಿಶದತಮ** - ಅತ್ಯಂತ ವಿಶದವಾದ, **ಪ್ರತ್ಯಕ್ಷರೂಪ**-ಸಾಕ್ಷಾತ್ಕರಿಸಿರುವ, **ಅನುಧ್ಯಾನೇನ**-ಅನುಸಂಧಾನದಿಂದ ಕೂಡಿ, **ಧ್ಯಾಯನ್** - ಪರಮಾತ್ಮನನ್ನು ಧ್ಯಾನಿಸುತ್ತಾ, **ಆಸೀತ** - ಕೂತುಕರತಕ್ಕದ್ದು" **ಎನ್ರುವರ್** - ಎಂದು, **ಅರುಳಿಚ್ಚೆಯ್‌ದಾರ್** - ಅಪ್ಪಣೆ ಕೊಡಿಸಿರುತ್ತಾರೆ ಇಲ್ಲಿ **ನಿತ್ಯ** ವೆಂಬ ಗ್ರಂಥವು ಪ್ರತಿದಿನದಲ್ಲೂ ಪ್ರಪನ್ನನೂ ಭಗವತ್ಕೈಙ್ಕರ್ಯರೂಪದಲ್ಲಿ ಮಾಡತಕ್ಕ ನಿತ್ಯ ನೈಮಿತ್ತಿಕ ಅನುಷ್ಠಾನಗಳನ್ನು ತಿಳಿಸುವ ಗ್ರಂಥವಾಗಿರುವದರಿಂದಲೂ ಶರಣಾಗತಿ ಗದ್ಯದಲ್ಲಿ ಹೇಳಿರುವ ಸ್ವತಂತ್ರ ಪ್ರಪತ್ತಿನಿಷ್ಠೆಯನ್ನು ಅನುಷ್ಠಿಸಿದ ನಂತರ ಉತ್ತರಕೃತ್ಯರೂಪದಲ್ಲಿ ಮಾಡುವ ಕೈಂಕರ್ಯ ವಿಷಯವಾದುದರಿಂದಲೂ, ಇಲ್ಲಿನ ಧ್ಯಾನವು, ಉಪಾಸನವನ್ನು ಎಂದಿಗೂ ಬೋಧಿಸಲಾರದು; ಆದುದರಿಂದ ಫಲರೂಪ ಭಕ್ತಿಗೆ ಸಹಕಾರಿಯಾಗಿ ಪ್ರತಿದಿನವೂ ಮಾಡತಕ್ಕ ನಿತ್ಯ ಕರ್ಮಾನುಷ್ಠಾನಕ್ಕೆ ಸೇರಿದ ಭಗವದಾರಾಧನ ರೂಪ ಧ್ಯಾನ ವಿಶೇಷವೆಂದು ಭಾವಿಸತಕ್ಕದ್ದು. ಇದೂ ಭಗವದಾರಾಧನಾಂಗವಾದ ಫಲರೂಪ ಧ್ಯಾನವೇ ವಿನಾ ಉಪಾಸನವಲ್ಲವೆಂಬ ಭಾವವು. **ಪೂಶಿತ್ತಂ ಪೋಕ್ಕಿನೇನ್** ಎಂಬ ಪೂರ್ಣ ಪಾಶುರವು ಯಾವುದೆಂದರೆ:—

> **ಶಿರಿತ್ತಿರುನ್ದೇನಾಗವೇ ತಾರಾಗಣಪ್ಪೋಲ್**
> **ವಿರಿತ್ತುರೈತ್ತವೆನ್ನಾಗತ್ತುನ್ನೈ-ತ್ತಿರಿತ್ತೆಳುದಿ**
> **ವಾಶಿತ್ತುಙ್ಕೇಟ್ಟುಮ್ ವಣಙ್ಗಿ ವಳಿಪಟ್ಟುಮ್**
> **ಪೂಶಿತ್ತುಮ್ಪೋಕ್ಕಿನೇನ್ ಪೋದು || ೬೩ ||** ಇದರರ್ಥವೇನೆಂದರೆ:

**ತಾರಾಗಣಂ ಪೋಲ್ ವಿರಿತ್ತುರೈತ್ತ** - ನಕ್ಷತ್ರಗಳ ಸಂಚಾರವನ್ನು ಜ್ಯೋತಿಶ್ಶಾಸ್ತ್ರಮುಖೇನ ವಿಶದವಾಗಿ ಹೇಳಿದ, **ವೆನ್ನಾಗತ್ತುನ್ನೈ** - ಶತ್ರುಗಳಿಗೆ

ಭಯಂಕಾರನಾಗಿರುವ ಆದಿಶೇಷನಿಗೆ ಆತ್ಮನಾಗಿರುವ ನಿನ್ನನ್ನು, **ಎಳುದಿ ವಾಶಿತ್ತುಕ್ಕೇಟ್ಟುಸುರ್** - ಬರೆದು, ಓದಿ, ಕೇಳಿ, ಎಂದರೆ ನಿನ್ನ ಮಾಹಾತ್ಮ್ಯೆಯೇನು, ದಿವ್ಯಚೇಷ್ಟಿತಗಳೇನು ನೀನು ಹೇಳಿದ ಶಾಸ್ತ್ರಗಳೇನು, ಇವುಗಳನ್ನು ಬರೆದು, ಓದಿ ಮತ್ತು ಗುರುಗಳಮೂಲಕ ಉಪಾಯ ಯಾವುದೆಂದು ಕೇಳಿ, ತಿಳಿದು, ವಣಙ್ಗಿ - ನಿನ್ನನ್ನು ಶರಣಾಗತಿಯ ಮೂಲಕ ಅಂತಹ ಗುರುವಿನ ಮೂಲಕವೇ, ವಳಿಪಟ್ಟುವುರ್ - ಅದರ ಅನುಸಂಧಾನಾದಿಗಳೇ ಯಾತ್ರೆಯಾಗಿ, **ಪೂಶಿತ್ತುಂ** - ಉತ್ತರ ಕೃತ್ಯರೂಪದಲ್ಲಿ ಆತನ ಆರಾಧನೆಯನ್ನು ಮಾಡಿಕೊಂಡು, **ಪೋಕ್ಕಿನೇನ್ ಪೋದು** - ಕಾಲವನ್ನು ಕಳೆದೆನು, **ಆಕವೇ ತರುತ್ತಿರನ್ದೇನ್** - ಆದುದರಿಂದಲೇ ನಾನು ಒಳ್ಳೆ ಸತ್ತೆಯನ್ನು ಹೊಂದಿರುತ್ತೇನೆ; ಲೋಕದಲ್ಲಿ ಎಲ್ಲರೂ ಹೀಗೆ ಮಾಡುವದಿಲ್ಲವೇ ಎಂದು ಆಳ್ವಾರವರಿಗೆ ಅವರ ವಿಷಯದಲ್ಲಿ ಪರಿತಾಪವೂ, ತಮ್ಮ ವಿಷಯದಲ್ಲಿ ಸಮಾಧಾನವೂ ಇಲ್ಲಿ ದ್ಯೋತಿತವು. ಶ್ರೀ ಭಾಷ್ಯಕಾರರು ತಾವು ಅನುಗ್ರಹಿಸಿರುವ ನಿತ್ಯವೆಂಬ ಗ್ರಂಥದಲ್ಲಿ ಹೇಳಿರುವ ಧ್ಯಾನಯುಕ್ತವಾದ ಪೂಜಾವಿಶೇಷವು ಉಪಾಸನೆಯ ವಿಷಯವಲ್ಲವೆಂದೂ, ಪ್ರಪತ್ತಿ ನಿಷ್ಠನಿಗೆ ಸ್ವಯಂ ಪ್ರಯೋಜನವಾದ ಭಕ್ತಿ ಪರೀವಾಹ ಕೈಙ್ಕರ್ಯವೆಂದೂ, ಸಂಧ್ಯಾವಂದನಾದಿ ನಿತ್ಯ ನೈಮಿತ್ತಿಕಗಳೂ ಕೂಡ ಹೇಗೆ ಕೈಙ್ಕರ್ಯಗಳೋ, ಹಾಗೆಯೇ ಧ್ಯಾನಯುಕ್ತ ಭಗವದಾರಾಧನೆಯೂ ಕೂಡ ಭಗವತ್ಪ್ರೀತಿಜನಕ ಕೈಙ್ಕರ್ಯವೇ ಎಂಬ ಭಾವವು. ಹಾಗೆ ಶ್ರೀ ಭಾಷ್ಯಕಾರರು ಹೇಳಿರುವದು ಪ್ರಮಾಣಪುರಸ್ಸರವಾಗಿಯೇ ಹೇಳಿರುತ್ತಾರೆ ಭಗವಚ್ಛಾಸ್ತ್ರವೂ ಆಳ್ವಾರ್ ಆಚಾರ್ಯರುಗಳೂ ವ್ಯಾಸ ದಕ್ಷಾದಿ ಮಹರ್ಷಿಗಳೂ ಹಾಗೆಯೇ ವಿಧಿಸಿರುತ್ತಾರೆಂದು ಹೇಳುತ್ತಾರೆ. ಹೀಗೆ ಶ್ರೀ ಭಾಷ್ಯಕಾರರು ಉಪದೇಶಿಸಿರುವ ಪಾಂಚಕಾಲಿಕ ಭಗವದಾರಾಧನರೂಪ ಅನುಷ್ಠಾನಗಳು ಅವರೇ ಸ್ವತಂತ್ರಿಸಿ ವಿಧಿಸಿದ ಕ್ರಮವಲ್ಲವೆಂದೂ ಶಾಸ್ತ್ರಪ್ರಮಾಣ ಸಮ್ಮತಿಯೂ, ಮಹರ್ಷಿಗಳು ಮತ್ತು ಆಳ್ವಾರಾಚಾರ್ಯರುಗಳು ಅನುಷ್ಠಿಸಿರುವದರಿಂದ ಶಿಷ್ಟಾಚಾರ ಸಮ್ಮತಿಯೂ, ಉಂಟೆಂದು ಹೇಳುತ್ತಾರೆ.

## ಅಭಿಗಮನಾದಿ ಪಾಂಚಕಾಲಿಕಾನುಷ್ಠಾನಗಳ ಕರ್ತವ್ಯತೆಯು.

---

ಸ್ವತಂತ್ರ ಪ್ರಪತ್ತಿಯನ್ನು ಅನುಷ್ಠಿಸಿದವನಿಗೂ ಕೂಡ ಭಗವದ್ಧ್ಯಾನದಲ್ಲಿ ಸ್ವಯಂ ಪ್ರಯೋಜನವಾಗಿ ಫಲರೂಪವಾಗಿ ಅನ್ವಯ ಉಂಟೆಂದು ಉಪದೇಶಿಸಿದರು. ಪಾಂಚಕಾಲಿಕ ಅನುಷ್ಠಾನಗಳ ಕರ್ತವ್ಯತೆಯನ್ನು ಪಪಾದಿಸಿ, ಅವು ಹೇಗೆ ಪ್ರಪನ್ನನಿಗೆ ಮುಖ್ಯವಾಗಿ ಕರ್ತವ್ಯಗಳೋ, ಹಾಗೆಯೇ ಇದೂ ಎಂದು ಹೇಳಿ ಇಂತಹ ಧ್ಯಾನವು ಸ್ವಯಂಪ್ರಯೋಜನವಾಗಿ ಸರ್ವಾಧಿಕಾರವುಳ್ಳದು ಎಂಬುದ

**ಎನ್ರು ಭಾಷ್ಯಕಾರರ್ ಅರುಳಿಚ್ಚೆಯ್ಯ ಕೇಟ್ಟು, ವಂಗಿ ಪುರತ್ತು ನಮ್ಬಿ ನಿತ್ಯತ್ತಿಲೆ ಸಙ್ಗ್ರಹಿತ್ತಾರ್.**

---

**ಅರುಳಿಚ್ಚೆಯ್ಯಕೇಟ್ಟು** - ಉಪದೇಶಿಸಿದುದನ್ನು ಕೇಳಿ, **ವಂಗಿಪುರುತ್ತುನಮ್ಬಿ**- ವಂಗಿಪುರದ ನಂಬಿ ಎನುವರು, **ನಿತ್ಯತ್ತಿಲೇ** - ತಾವು ಬರೆದ ಐನೂರು ಶ್ಲೋಕಗಳುಳ್ಳ ಪಾಂಚಕಾಲಿಕ ಅನುಷ್ಠಾನ ಪ್ರಕ್ರಿಯೆಯನ್ನು ತೋರಿಸುವ **ನಿತ್ಯ** ವೆಂಬ ಗ್ರಂಥದಲ್ಲಿ, **ಸಂಗ್ರಹಿತ್ತಾರ್** - ಸಂಗ್ರಹಿಸಿ ಹೀಗೆ ಹೇಳಿರುತ್ತಾರೆ.

ಈ ಪಾಂಚಕಾಲಿಕಾನುಷ್ಠಾನವು ಭಗವಚ್ಛಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತದೆ ಎಂದು ತಿಳಿಸಿರುತ್ತಾರೆ: —ಜಯಾಖ್ಯ ಸಂಹಿತೆಯಲ್ಲಿ **"ಏಕೋಹಿ ಶ್ರೂಯತೇ ದೇವ ಕಾಲೋ ಲೋಕೇ ನಚಾಪರಃ। ಪಂಚಕಾಲಾ ಸ್ತ್ವಯೋದ್ದಿಷ್ಟಾಃ ಕಿಮೇ ತನ್ಮೇತ್ರ ಸಂಶಯ"** ಕಾಲವೆಲ್ಲಾ ಒಂದೇಯಾಗಿ ತೋರುತ್ತಿರುವಲ್ಲಿ, ಪಂಚಕಾಲವಾದು ನಿನ್ನಿಂದ ಉಪದೇಶಿಸಲ್ಪಟ್ಟಿತಲ್ಲಾ, ಆ ಸಂಶಯವನ್ನು ಹೋಗಲಾಡಿಸು ಎಂದು ನಾರದನಿಂದ ಪ್ರಶ್ನಿಸಲ್ಪಡಲಾಗಿ ಭಗವಂತನು ಹೇಳುತ್ತಾನೇನೆಂದರೆ :—

**"ಏಕಸ್ಯೈವ ಹಿ ಕಾಲಸ್ಯ ವಾಸರೀಯಸ್ಯ ನಾರದ।**
**ಆ ಪ್ರಭಾತಾನ್ನಿಶಾಂತಂ ನ್ಯೈ ಪಂಚಧಾ ಪರಿಕಲ್ಪನಾ॥**
**ಪೃಥಕ್ಕರ್ಮವಶಾತ್ಕಾರ್ಯಾ ನಕಾಲಾ ಬಹವ ಸ್ಸ್ಮೃತಾಃ"**

ಕಾಲವೆನ್ನುವುದು ಒಂದೇ, ಅನೇಕವಲ್ಲವು. ಒಂದುದಿನದಲ್ಲೇ ಪ್ರಭಾತಸಮಯ ಮೊದಲುಗೊಂಡು ರಾತ್ರಿಯಾಗ ದವರೆಗೂ ಇರುವಕಾಲ ಐದಾಗಿ ಭಾಗಿಸಿ ಆಯಾ ಭಾಗಗಳಲ್ಲಿ ಮಾಡತಕ್ಕ ಕಾರ್ಯವು ಬೇರೆಬೇರೆಯೆಂದು ತಿಳಿಯತಕ್ಕದ್ದು ಎಂದು ಭಗವಂತನು ಹೇಳಲು, ಆ ಐದು ಕಾಲಗಳಲ್ಲೂ ಮಾಡತಕ್ಕದ್ದು ಯಾವುವು ಎಂದು ನಾರದರಿಂದ ಪ್ರಶ್ನಿಸಲ್ಪಟ್ಟು ಭಗವಂತನೇ ಪುನಃ ಹೇಳುತ್ತಾನೆ :—

ಬ್ರಾಹ್ಮನ್ಮುಹೂರ್ತಾದಾರಭ್ಯ ಪ್ರಾಗಂಶಂ ವಿಪ್ರ ವಾಸರೇ। **ಜಪಧ್ಯಾನಾರ್ಚನಸ್ತೋತ್ರೈಃ ಕರ್ಮವಾಕ್ಚಿತ್ತ ಸಂಯುತೈಃ। ಅಭಿಗಚ್ಛೇದ್ಜಗದ್ಯೋನಿಂ ತಚ್ಚಾಭಿಗಮನಂ ಸ್ಮೃತಂ। ತತಃ ಪುಷ್ಪಫಲಾದೀನಾಮರ್ಥಾಯಾರ್ಜನ ಮಾಚರೇತ್। ಭಗವದ್ಯಾಗ ನಿಷ್ಪತ್ತಿ ಕಾರಣಂ ಪ್ರಹರಾತ್ಪರಂ। ತದುಪಾದಾನ ಸಂಜ್ಞಂವೈ ಕರ್ಮಕಾಲ ಮದಾಶ್ರಿತಂ। ತತೋಷ್ಟಾಂಗೇನಯೋಗೇನ ಪೂಜಯೇತ್ಪರಮೇಶ್ವರಂ ಸಾಧಿಕಂ ಪ್ರಹರಂ ವಿಪ್ರ**

**ಇಜ್ಯಾಕಾಲಸ್ತು ಸಸ್ಸ್ಮೃತಃ । ಶ್ರವಣಂ ಚಿಂತನಂ ವ್ಯಾಖ್ಯಾ ತತಃ ಪಾಠ ಸಮನ್ವಿತಾ । ಸ್ವಾಧ್ಯಾಯ ಸಂಜ್ಞಂ ತದ್ವಿದ್ಧಿ ಕಾಲಾಂಶಂ ಮುನಿಸತ್ತಮ । ದಿನಾವಸಾನೇ ಸಂಪ್ರಾಪ್ತೇ ಪ್ರೂಜಾಂ ಕೃತ್ವಾ ಸಮಭ್ಯಸೇತ್ । ಯೋಗಂ ನಿಶಾವಸಾನೇಚ ವಿಶ್ರಮೇ ನಾಂತರೀಕೃತಂ । ಪಂಚಮೋ ಯೋಗ ಸಂಜ್ಞೋಸೌ ಕಾಲಾಂಶೋ ಬ್ರಹ್ಮಸಿದ್ಧಿದ ॥**

**ಇ**ದರಿಂದ ಹಗಲಿನ ಕಾಲವು ರಾತ್ರಿಯವರೆಗೂ (೧) ಅಭಿಗಮನ (೨) ಉಪಾದಾನ (೩) ಇಜ್ಯಾ (೪) ಸ್ವಾಧ್ಯಾಯ (೫) ಯೋಗವೆಂಬದಾಗಿ ಐದಾಗಿ ವಿಭಜನಮಾಡಿ, ಆ ಕಾಲಗಳಲ್ಲಿ ಏನು ಮಾಡತಕ್ಕದ್ದೆಂಬುದು ಮಂಗಿ ನಿತ್ಯದಲ್ಲಿ **ಹೇಳಿ**ರುವಹಾಗೆ ಎಂದು ಭಾವಿಸತಕ್ಕದ್ದು.

(೨) ಪಾದ್ಮ ಪುರಾಣದಲ್ಲಿ—"**ಪಂಚಕಾಲ ವಿಧಿಜ್ಞಾನಾಂ ಪ್ರಾಶಸ್ತ್ಯಂ ಭಗವನ್ನಿಹ । ಕಥಿತಂ ಪಂಚಕೇ ಕಾಲಾ ವಿಧಯಶ್ಚಾಪಿ ಪಂಚಕೇ**" ಎಂಬದಾಗಿ ಚತುರ್ಮುಖನಿಂದ ಕೇಳಲ್ಪಟ್ಟವನಾಗಿ ಭಗವಂತನು ಹೇಳುತ್ತಾನೆ :—"**ಆದ್ಯಂ ಕರ್ಮಾಭಿಗಮನಮುಪಾದಾನಂ ತತಃ ಪರಂ । ಇಜ್ಯಾಚ ಪಶ್ಚಾತ್ಸ್ವಾಧ್ಯಾಯ ಸ್ತತೋಯೋಗಸ್ತತಃ ಪರಂ । ಪಂಚೈವ ವಿಧಯಸ್ತೇಷಾಂ ಕಾಲಾಃ ಪಂಚೈವತೇ ಕ್ರಮಾತ್**" ಎಂಬದಾಗಿ

(೩) ಸಾತ್ವತ ಪೌಷ್ಕರಗಳಲ್ಲೂ ಹೀಗೆಯೇ ಹೇಳಲ್ಪಟ್ಟಿರುತ್ತದೆ.

(೪) ಶ್ರೀ ವ್ಯಾಸಮಹರ್ಷಿಯು ಹೇಳಿರುವದೇನೆಂದರೆ :—"**ಬ್ರಾಹ್ಮೇ ಮುಹೂರ್ತೇ ಉತ್ಥಾಯ**" ಎಂದು ಪ್ರಾರಂಭಿಸಿ, "**ಅಥಾಗತ್ಯ ಗೃಹಂ ವಿಪ್ರ ಸ್ಸಮಾಚಮ್ಯ ಯಥಾ ವಿಧಿ । ಪ್ರಜ್ವಾಲ್ಯ ವಹ್ನಿಂ ವಿಧಿವತ್**" ಎಂದು ಮುಗಿಸಿ ಬೆಳಗ್ಗೆ ಹೋಮ ಪರ್ಯಂತ ಪೌರ್ವಾಹ್ಣಿಕ ಕ್ರಿಯಾಕಲಾಪವನ್ನೆಲ್ಲಾ ಹೇಳಿ, "**ದೇವಾದೀನಾಮ್ ಸುರಸ್ಕುರ್ಯಾದುಪಹಾರಂ ನಿವೇದಯೇತ್**" ಎಂದು ಅಭಿಗಮನವನ್ನು ಹೇಳಿ, "**ಉಪೇಯಾದೀಶ್ವರಂಚಾಪಿ ಯೋಗಕ್ಷೇಮಾರ್ಥ ಸಿದ್ಧಯೇ । ಸಾಧಯೇ ದ್ವಿವಿಧಾನರ್ಥಾನ್**" ಎಂದು ಉಪಾದಾನವನ್ನು ಹೇಳಿ "**ತತೋ ಮಧ್ಯಾಹ್ನ ಸಮಯೇ**" ಎಂದಾರಂಭಿಸಿ, "**ನ ವಿಷ್ಣ್ವಾರಾಧನಾತ್ಪುಣ್ಯಂ ವಿದ್ಯತೇ ಕರ್ಮವೈದಿಕಂ । ತಸ್ಮಾದನಾದಿಮಧ್ಯಾಂತಂ ನಿತ್ಯ ಮಾರಾಧಯೇದ್ಧರಿಂ । ತದ್ವಿಷ್ಣೋರಿತಿ ಮಂತ್ರೇಣ ಸೂಕ್ತೇನ ಪುರುಷೇಣತ । ನೈವಾಭ್ಯಾಂ ಸದೃಶೋ ಮಂತ್ರೋ ವೇದೇಷೂಕ್ತಶ್ಚತುರ್ಷ್ವಪಿ । ನಿವೇದಯೀತ ಸ್ವಾತ್ಮಾನಂ ವಿಷ್ಣಾವಮಲ ತೇಜಸಿ**" ಹೀಗೆ ಭಗವದಾರಾಧನವನ್ನು ಇಜ್ಯಾ ಕಾಲದಲ್ಲಿ ಮಾಡತಕ್ಕದ್ದೆಂದು ವಿಧಿಸಿ, (ಇಲ್ಲಿ ಭಗವದಾರಾಧನವು ಪ್ರಪದನಾನುಸಂಧಾನವೇ ಎಂದೂ ಅವುಗಳಲ್ಲಿ "**ತದ್ವಿಷ್ಣೋಃ ಪರಮಂ**

ಪೆದಂ" ಎಂಬ ಮಂತ್ರವೂ, ಪುರುಷ ಸೂಕ್ತವೂ ಸಹ ವೇದಗಳಲ್ಲೆಲ್ಲಾ ಸರ್ವ ಶ್ರೇಷ್ಠವೆಂದು ಮಹರ್ಷಿಯಿಂದ ಹೇಳಲ್ಪಟ್ಟಿತು.) ಅಲ್ಲಿಂದ ಭೋಜನ, ಸ್ವಲ್ಪ ವಿಶ್ರಮ, ಅನಂತರ ಸ್ವಾಧ್ಯಾಯ ಕ್ರಮವೆಂದು ಹೇಳಲು, "ಭುಕ್ತ್ವೈವಂ ಸುಖಮಾಸ್ಥಾಯ ತದನ್ನಂ ಪರಿಣಾಮಯೇತ್ । ಇತಿಹಾಸ ಪುರಾಣಾಭ್ಯಾಮ್ ವೇದಂ ಸಮುಪಬೃಂಹಯೇತ್" ಎಂದು ಸ್ವಾಧ್ಯಾಯವನ್ನು ಹೇಳಿ, "ತಥಾಕ್ಷರೇಣಸ್ವಾತ್ಮಾನಂ ಯೋಜಯೇತ್ಬ್ರಹ್ಮಣೇತಿಹಿ। ಸರ್ವೇಷಾಮೇವ ಯೋಗಾನಾಮಾತ್ಮಯೋಗಃ ಪರಸ್ಸ್ಮೃತಃ।ಯೋಗೇನ ವಿಧಿನಾ ಕುರ್ಯಾತ್ಸಯಾತಿ ಪದ ಮಕ್ಷಯಂ" ಎಂದು ಯೋಗವನ್ನು ಹೇಳಿ, ಕೊನೆಗೆ "ತದೇತದಖಿಲೇನೋಕ್ತ ಮಹನ್ಯಹನಿ ಯನ್ಮಯಾ । ಬ್ರಾಹ್ಮಣಾನಾಂ ಕೃತ್ಯಜಾತ ಮಪವರ್ಗ ಫಲಪ್ರದಂ" ಹೀಗೆ ಪ್ರತಿ ದಿನವೂ ಪಾಂಚಕಾಲಿಕ ಅನುಷ್ಠಾನಗಳನ್ನು ನಡಿಸೋಣವು ಮುಕ್ತಿಪ್ರದವೆಂದು ಹೇಳಿ ಮುಗಿಸಿರುತ್ತಾರೆ

೪ ದಕ್ಷರಿಂದ ಹೇಳಲ್ಪಟ್ಟಿರುವದೇನೆಂದರೆ :—ಪ್ರಾತರುತ್ಥಾಯ ಕರ್ತವ್ಯಮ್ ಯದ್ದ್ವಿಜೇನ ದಿನೇದಿನೇ । ತತ್ಸರ್ವಂ ಸಂಪ್ರವಕ್ಷ್ಯಾಮಿ ದ್ವಿಜಾನಾಮುಪಕಾರಕಂ" ಬೆಳಿಗ್ಗೆ ಎದ್ದು ಪ್ರತಿದಿನದಲ್ಲೂ ಬ್ರಾಹ್ಮಣನು ಅಥವಾ ತ್ರಿವರ್ಣದವರು ಮಾಡತಕ್ಕದ್ದು ಏನೆಂಬುದನ್ನು ತಿಳಿಸುತ್ತೇನೆಂದು ಸಙ್ಕಲ್ಪಿಸಿ, "ಅಜ್ಞಾನಾದಥವಾಲೋಭಾತ್ತ್ಯಾಗೇನ ಪತಿತೋ ಭವೇತ್" ಎಂದು ಹೀಗೆ ಈ ನಿತ್ಯ ನೈಮಿತ್ತಿಕಗಳನ್ನು ಬಿಟ್ಟರೆ ಪ್ರತ್ಯವಾಯವೆಂದು ತಿಳಿಸಿ, "ದಿವಸಸ್ಯಾದ್ಯಭಾಗೇನ ಕೃತ್ಯಂ ತಸ್ಯೋಪದಿಶ್ಯತೇ" ಎಂದಾರಂಭಿಸಿ, ದಿವಸವನ್ನು ಎಂಟು ಭಾಗವಾಗಿ ಭಾಗಿಸಿ, ಸಂಧ್ಯಾಹೀನೋಽಶುಚಿರ್ನಿತ್ಯ ಮನರ್ಹಸ್ಸರ್ವಕರ್ಮಸು । ಯದನ್ಯತ್ಕುರುತೇ ಕರ್ಮ ನ ತಸ್ಯ ಫಲಭಾಗ್ಭವೇತ್"ಸಂಧ್ಯಾವಂದನೆ ಮಾಡದವನು ಯಾವಾಗಲೂ ಅಶುಚಿಯೇ, ಸಮಸ್ತ ಕರ್ಮಗಳಿಗೂ ಅನರ್ಹನು, ಆತನು ಯಾವ ಇತರ ಕರ್ಮವನ್ನೆಸಗಿದರೂ, ಫಲಭಾಕ್ಕಾಗುವದಿಲ್ಲವು ಎಂದು ಹೇಳಿ ಮುಗಿಸುವದರಲ್ಲಿ, ಸ್ನಾನಾಚಮನ ಸಂಧ್ಯಾವಂದನೆಗಳ ಕ್ರಮಗಳನ್ನು ಚನ್ನಾಗಿ ಹೇಳಿ "ದೇವಕಾರ್ಯಂ ತತಃಕೃತ್ವಾಗುರುಮಙ್ಗಳವೀಕ್ಷಣಂ । ದೇವಕಾರ್ಯಸ್ಯ ಸರ್ವಸ್ಯ ಪೂರ್ವಾಹ್ಣಸ್ತು ವಿಶಿಷ್ಯತೇ" ಎಂದು ಅಭಿಗಮನವನ್ನು ಹೇಳಿ, ಅನಂತರ, "ಸಮಿತ್ಪುಷ್ಪ ಕುಶಾದೀನಾಂಸಕಾಲಸ್ಸಮುದಾಹೃತಃ" ಎಂದು ಉಪಾದಾನವನ್ನು ಹೇಳಿ."ಪಂಚಮೇತು ತಥಾಭಾಗೇ ಸಂವಿಭಾಗೋ ಯಥಾರ್ಹತಃ । ಪಿತೃದೇವ ಮನುಷ್ಯಾಣಾಂ ಕೀಟಾನಾಂ ಚಾಪಿ ದೃಶ್ಯತೇ" ಹಿಂದೆ ದೇವತಾರ್ಚನವೆಂದು ಹೇಳಿದ ಸ್ಥಳದಲ್ಲೇ ಇಲ್ಲಿ ಸಂವಿಭಾಗ ಶಬ್ದಪ್ರಯೋಗಮಾಡಿರುವದರಿಂದ ಇಜ್ಯೆಯನ್ನೂ ಹೇಳಿ, "ಇತಿಹಾಸ ಪುರಾಣಾಭ್ಯಾಂ ಷಷ್ಠಂ

**ಸಪ್ತಮಭ್ಯಸೇತ್**" ಎಂದು ಸ್ವಾಧ್ಯಾಯವನ್ನು ಹೇಳಿ, "**ಅಷ್ಟಮೇ ಲೋಕಯಾತ್ರಾಂತು**" ಎಂದಾರಂಭಿಸಿ, "**ಸರ್ವಭಾವ ವಿನಿರ್ಮುಕ್ತಂ ಕ್ಷೇತ್ರಜ್ಞಂ ಬ್ರಹ್ಮಣಿನ್ಯಸೇತ್ । ಏತದ್ಧ್ಯಾನಂಚ ಯೋಗಶ್ಚ ಶೇಷೋನ್ಯೋಗ್ರಂಥ** ವಿಸ್ತರಃ" ಎಂದು ಮುಗಿಸಿ ಯೋಗವನ್ನು ಹೇಳಿರುತ್ತದೆ.

ಹೀಗೆ ಈ ಪ್ರಮಾಣಗಳ ಮೂಲಕ ಪಂಚಕಾಲದಲ್ಲೂ ಪ್ರಪನ್ನನು ಮಾಡುವ ನಿತ್ಯಕರ್ಮಗಳೆಲ್ಲಾ ಸಾಕ್ಷಾದ್ಭಗವದಾರಾಧನರೂಪಗಳೆಂಬುದು ವ್ಯಕ್ತವು. ಇನ್ನು ಆಳ್ವಾರುಗಳೂ ಈ ಕ್ರಮವನ್ನೇ ಅಙ್ಗೀಕರಿಸುತ್ತಾರೆಂಬುದಕ್ಕೆ "**ಮರುನ್ತಿಕಳುಂ**" ಎಂಬ ಪಾಶುರವನ್ನು ಉದಾಹರಿಸಿರುತ್ತಾರೆ. ಅದು ಯಾವುದೆಂದರೆ- "**ಮರನ್ದಿಕಳು ಮನನೊಳಿತ್ತು ವಞ್ಜ ಮಾತ್ತಿಯೈಮ್ಬುಲನ್ಗಳಡಕ್ಕಿಯಿಡರ್ಪ್ಪಾರತ್ತುನ್ಬಂ । ತುರುನ್ದಿರುಮುಪ್ಪೊಳದೇತ್ತಿ ಯೆಲ್ಲೈಯಿಲ್ಲಾ ತ್ತೊನ್ನೆರಿಕ್ಕಣ್ ನಿಲ್ಯೆ ನಿನ್ರತ್ತೊಣ್ಡರಾನ । ಅರನ್ದಿಗಳು ಮನತ್ತವರ್ ತಙ್ಗತಿಯೈಪ್ಪೊನ್ನಿ ಯಣಿಯರಙ್ಗತ್ತರವಣೈಯಿರ್ಪ್ಪಳ್ಳಿಕೊಳ್ಳುಮ್ । ನಿರನ್ದಿಗಳು ಮಾಯೋನೈಕಂಡೆನ್ ಕಣ್ಗಳ್ ನೀರ್ಮಲ್ಗನೆನ್ರು ಕೋಲೋನಿರ್ಕ್ಕನಾಳೇ**" ಇವರರ್ಥವು. **ಮರಪ್** - ಕೊಲೆ ಮೊದಲಾದವುಗಳಿಂದ, **ತಿಗಳುಮ್** - ಸಲಿಸುವ, ಉಜ್ವಲಿಸುವ, **ಮನಂ** - ಮನಸ್ಸನ್ನು, **ಒಳಿತ್ತು** - ವಾಸನೆಯೊಂದಿಗೆ ಹೋಗಲಾಡಿಸಿ **ವಂಜಮ್** - ಸುಳ್ಳನ್ನು, **ಮಾತ್ತಿ**-ಹೋಗಲಾಡಿಸಿ, **ಐಮ್ಬುಲಙ್ಗಳ್** - ಪಂಚೇಂದ್ರಿಯಗಳನ್ನು, **ಅಡಕ್ಕಿ** - ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸದಹಾಗೆ ಅಡಗಿಸಿ, **ಇಡರ್** - ದುಃಖೋದರ್ಕವಾದ, **ಪಾರಂತುನ್ಬಂ** - ಭಾರವಾದ ಅಗಾಧವಾದ ಪಾಪವನ್ನು, **ತುರನ್ದು** - **ಹತ್ತಾಗಿ** ಕೊಯ್ದು, **ಇರುಮುಪ್ಪೊಳಿದು** - ಎರಡು ಮೂರು ಕಾಲವೆಂದೂ ಪಂಚಕಾಲದಲ್ಲೂ, ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಯೋಗ, ಎಂಬ ಐದು ಕಾಲವಲ್ಲೂ, **ಏತ್ತಿ** - ಸ್ವಾಮಿಯನ್ನು ಆರಾಧನೆ ಮೂಲಕ **ಸ್ತೋತ್ರಮಾಡಿ**, **ಎಲ್ಲೈ ಯಿಲ್ಲಾ ತೊಲ್ ನೆರಿ ನಿಲ್ಯೆನಿನ್ರ**-ಅಳವಿಲ್ಲದ ಹಿಂದಿನ ಸಂಪ್ರದಾಯರೂಪ ಆಚಾರದಲ್ಲಿ ಯಾವಿಂದಲೂ ಕದಲಿಸಲಾಗದಹಾಗೆ ಸ್ಥಿರವಾಗಿರುವ, **ತೊಂಡರಾನ**-ದಾಸಭೂತರಾದ, ಶೇಷತ್ವವನ್ನು ಚನ್ನಾಗಿ ಅರಿತಿರುವ, **ಅರಿನ್ದಿಗಳುಮ್ ಮನತ್ತವರ್ ತವಮ್** - ಆನೃಶಂಸ್ಯ ರೂಪ ಧರ್ಮದಿಂದ ಪ್ರಕಾಶಿಸುತ್ತಲಿರುವ ಮನಸ್ಸನ್ನು ಹೊಂದಿರುವ, ಶ್ರೀ ವೈಷ್ಣವರುಗಳಿಗೆ, **ಕತಿಯೈ** - ಪರಮ ಪ್ರಾಪಕಪ್ರಾಪ್ಯನಾಗಿರುವ, **ಪೊನ್ನಿ** - ಕಾವೇರಿಯಿಂದ ಸುತ್ತಲ್ಪಟ್ಟ, **ಅಣಿ ಅರಙ್ಗತ್ತು**-ಲೀಲಾ ವಿಭೂತಿಗೆ ಆಭರಣ ರೂಪವಾದ ದೇವಾಲಯದಲ್ಲಿ, **ಅರವು ಅಣೈಯಿಲ್** - ಶೇಷ ಪರ್ಯಂಕದಲ್ಲಿ, **ಪಳ್ಳಿಕೊಳ್ಳುಮ್** - ಶಯನಿಸಿರುವ, ಬಿಜ

**ಇಪ್ಪಡಿ ಪೆರಿಯ ಜೀಯರುಳ್ಳಿಟ್ಟಾರ್ ನಿತ್ಯಙ್ಗಳಿಲುಮ್ ಕಣ್ಡುಕೊಳ್ವದು. ಇವತ್ತಿಲುಳ್ಳ ವೈಷಮ್ಯಙ್ಗಳ್ ಅವ್ವೋಸಂಹಿತಾ ವಿಶೇಷಙ್ಗಳಿಲೇ**

---

ಮಾಡಿಸಿರುವ, **ನಿರಂತಿಗಳುಮ್** - ಲಾವಣ್ಯದಿಂದ ಪ್ರಕಾಶಿಸುತ್ತಿರುವ, **ಮಾಯೋನೈ** - ಆಶ್ಚರ್ಯಭೂತನಾದ ಶ್ರೀರಂಗನಾಥನನ್ನು, **ಎನ್ ಕಣ್ಗಳ್** - ನನ್ನ ಕಣ್ಣುಗಳು, **ಕಣ್ಡು** - ಮನದಣಿಯುವನೋಡಿ, **ನೀರ್ ಮಲಗ** - ಆನಂದಾಶ್ರುಗಳು ಪ್ರವಹಿಸುವ ಹಾಗೆ, **ನಿರ್ಕುಮ್ ನಾಳ್** - ಇರುವ ಕಾಲವು, **ಎನ್ರು ಕೊಲೋ**-ಯಾವಾಗ ಲಭಿಸುತ್ತದೋ ತಿಳಿಯದು ಎಂಬ ಭಾವವು. ಈ ಪಾಶುರದಲ್ಲಿ ಪಂಚಕಾಲದಲ್ಲೂ ಭಗವದಾರಾಧನರೂಪವೃತ್ತಿಯು ವಿಧಿಸಲ್ಪಟ್ಟಿರುವದರಿಂದ ಉದಾಹರಿಸಲ್ಪಟ್ಟಿತು. ಇವುಗಳನ್ನನುಸರಿಸಿಯೇ ವಙ್ಗಿಪುರದ ನಂಬಿಯವರಿಗೆ ಶ್ರೀ ಭಾಷ್ಯಕಾರರು ಉಪದೇಶಿಸಿದರು. ಇದು ಸರ್ವರಿಗೂ ಕ್ರಮವಾಗಿ ತಿಳಿಯಲಿ ಎಂಬ ಉದಾರ ಭಾವದಿಂದ ಶ್ರೀ ವಙ್ಗಿಪುರದ ನಂಬಿಯವರು ತಾವು ಬರೆದ ನಿತ್ಯವೆಂಬ ಗ್ರಂಥದಲ್ಲಿ "ಅಭಿಗಚ್ಛೇ ಹರಿಂ ಪ್ರಾತಃ" ಎಂದಾರಂಭಿಸಿ ಪಾಂಚಕಾಲಿಕಾನುಷ್ಠಾನಗಳನ್ನು ಉಪದೇಶಿಸಿರುತ್ತಾರೆ ಈ ವಿಷಯವನ್ನು ಉಭಯ ಕಲಿಯವರೂ ಒಪ್ಪತಕ್ಕದ್ದೇ ಎಂದು ಶ್ರೀ ನಂಜೀಯರೂ ಅವರು ಬರೆದ ನಿತ್ಯದಲ್ಲೂ ಹಾಗೆಯೇ ಉಪದೇಶಿಸಿರುತ್ತಾರೆಂದು ಹೇಳುತ್ತಾರೆ.—

**ಇಪ್ಪಡಿ** - ಈ ಪಾಂಚಕಾಲಿಕವಾದ ಅನುಷ್ಠಾನ ಕ್ರಮವನ್ನು **ಪೆರಿಯ ಜೀಯರುಳ್ಳಿಟ್ಟಾರ್** - ಶ್ರೀ ನಂಜೀಯರೇ ಮೊದಲಾದವರು, ಮೊದಲಾದವರು ಎಂಬುದರಿಂದ ಶ್ರೀನಾರಾಯಣ ಮುನಿಗಳು ಹೇಳಲ್ಪಟ್ಟರು; ಶ್ರೀ ಭಾಷ್ಯಕಾರರವರು ಉಪದೇಶಿಸಿರುವಹಾಗೆ ಪಾಂಚಕಾಲಿಕ ಭಗವದಾರಾಧನ ರೂಪಾನುಷ್ಠಾನವೇನೋ ಒಪ್ಪತಕ್ಕದ್ದೇ; ಆದರೆ ಇವರುಗಳು ಬರೆದಿರುವ, ನಿತ್ಯಗಳಲ್ಲಿ, **ಕಂಡುಕೊಳ್ವದು** - ತಿಳಿದುಕೊಳ್ಳತಕ್ಕದ್ದು. ಇವರು ಬರೆದಿರುವ ನಿತ್ಯಗಳಲ್ಲಿ ವ್ಯತ್ಯಾಸಗಳಿವೆಯಲ್ಲಾ, ಹಾಗಾದರೆ ಯಾವ ಗ್ರಂಥದಲ್ಲಿ ಹೇಳಿರುವ ಕ್ರಮವನ್ನು ಅನುಸರಿಸತಕ್ಕದ್ದು ಎಂಬ ಪ್ರಶ್ನೆಗೆ ಸಮಾಧಾನವನ್ನು ಹೇಳುತ್ತಾರೆ. ಈ ವ್ಯತ್ಯಾಸಗಳಿಗೆ ಕಾರಣವು ಆವರವರುಗಳು ಪ್ರಮಾಣವಾಗಿಟ್ಟುಕೊಂಡು ಬರೆದ ಸಂಹಿತೆಗಳಲ್ಲಿರುವ ವಾಕ್ಯಗಳು. ಅವುಗಳು ವಿಕಲ್ಪಗಳಾಗಿರುವದರಿಂದ ಯಾವ ಕ್ರಮವನ್ನಾದರೂ ಈ ಭಗವದಾರಾಧನರೂಪಾನುಷ್ಠಾನದಲ್ಲಿ ಅವಲಂಬಿಸಬಹುದು ಎಂದು ಮುಂದೆ ಹೇಳುತ್ತಾರೆ.

**ಇವತ್ತಿಲುಳ್ಳ ವೈಷಮ್ಯಙ್ಗಳ್** - ಈ ನಿತ್ಯಗಳಲ್ಲಿ ಹೇಳಿರುವ ಕ್ರಮಗಳಲ್ಲಿರುವ ವ್ಯತ್ಯಾಸಗಳು, **ಅವ್ವೋಸಂಹಿತಾ ವಿಶೇಷಙ್ಗಳಿಲೇ** - ಅವರುಗಳು ಅನು

**ಶೊಲ್ಲುವಾ್ ವಿಕಲ್ಪಙ್ಗಳಾಲೇ ಸಙ್ಗತಙ್ಗಳ್: ಇಷ್ಪಡಿ ಯಾಗ್ಯೆಯಾಲೇ**
**(೧) "ನ ದೇವಲೋಕಾ ಕ್ರಮಣಂ" (೨) "ಭವಾಂಸ್ತು ಸಹ ವೈದೇಹ್ಯಾ"**

---

ಸರಿಸಿರುವ ಪಾಂಚರಾತ್ರ ಸಂಹಿತಾ ವಿಶೇಷಗಳಲ್ಲಿ, **ಶೊಲ್ಲುವಾ್ ವಿಕಲ್ಪಙ್ಗಳಾಲೇ**- ಹೇಳುವ ವಿಕಲ್ಪಗಳಿಂದ, **ಸಂಗತಙ್ಗಳ್** - ಉಪಾದೇಯಗಳೇ; ಎರಡು ಮೂರು ಕ್ರಮಗಳಿಗೆ ಫಲವು ಒಂದೇಯಾದರೆ ಅವುಗಳು ವಿಕಲ್ಪಗಳೆನಿಸುವುವು; ಅವುಗಳೆಲ್ಲಾ ಉಪಾದೇಯಗಳೇ ; ಆದುದರಿಂದ ಅವುಗಳಲ್ಲಿ ಯಾವುದಾದರೂ ಒಂದನ್ನು ಅವಲಂಬಿಸಬಹುದೆಂಬ ತಾತ್ಪರ್ಯವು. ಈಗ ಉಪಾಸನೆಗೂ ಪ್ರಪತ್ತಿಗೂ ಫಲ ಒಂದೇಯಾದುದರಿಂದ, ಎರಡುವಿಧ ಉಪಾಯಗಳೂ ಉಪಾದೇಯಗಳೇ ; ಆದುದರಿಂದ ಅಧಿಕಾರಾನುಗುಣವಾಗಿ ಯಾವುದಾದರೂ ಒಂದನ್ನು ಅವಲಂಬಿಸಬಹುದು; ಇದರ ಹಾಗೆಯೇ ಆ ನಿತ್ಯಗಳಲ್ಲಿ ಹೇಳಿರುವ ಕ್ರಮಗಳಲ್ಲಿ ಯಾವುದಾದರೂ ಒಂದನ್ನು ಅವಲಂಬಿಸಬಹುದು; ಅವರಲ್ಲಿ ಅಸಂಗತವಾದುದು ಯಾವುದೂ ಇಲ್ಲವೆಂಬ ಭಾವವು. ಹೀಗೆ ನಾನಾ ವಿಕಲ್ಪಗಳಿದ್ದರೂ ಸ್ವೇಚ್ಛಾನುಗುಣ ಪ್ರವರ್ತನೆಯನ್ನನುಸರಿಸಿ ತನ್ನ ಮನಬಂದಂತೆ ಅವಲಂಬಿಸಕೂಡದೆಂದೂ, ಆ ಪ್ರವರ್ತನೆಯು ಸ್ವಾಚಾರ್ಯೋಪದಿಷ್ಟಕ್ರಮವೇ ಆಗಿರಬೇಕೆಂದೂ, ಇದೀಗ ಪ್ರಪನ್ನನಿಗೆ ಅವಶ್ಯ ಕರ್ತವ್ಯವೆಂದೂ, ಕೆಲವು ಪ್ರಮಾಣಮೂಲಕ ಉಪದೇಶಿಸಿ ಪಾಂಚಕಾಲಿಕ ನಿತ್ಯನೈಮಿತ್ತಿಕಗಳು ಆವಶ್ಯಕವಾಗಿ ಕರ್ತವ್ಯಗಳೆಂದು ನಿಗಮನಮಾಡಿ ಹೇಳುತ್ತಾರೆ :— **ಇಷ್ಪಡಿಯಾಗ್ಯೆಯಾಲೇ** - ಈ ಭಗವತ್ಕೈಙ್ಕರ್ಯವು ಸ್ವಯಂ ಪ್ರಯೋಜನತಯಾ ವಿಹಿತವಾಗಿರುವದರಿಂದ, ಲಕ್ಷ್ಮಣನು ಶ್ರೀ ಸೀತಾರಾಮರಲ್ಲಿ ಪೂರ್ಣ ಶರಣಾಗತಿಯನ್ನು ಅನುಷ್ಠಿಸಿ, ಅನನ್ಯೋಪಾಯತ್ವವನ್ನೂ ಅನನ್ಯ ಪ್ರಯೋಜನತ್ವವನ್ನೂ ಪ್ರಕಟಿಸಿರುವ ಪ್ರಕರಣವನ್ನು ಉದಾಹರಿಸಿ, ಶ್ರೀರಾಮ ಕೈಙ್ಕರ್ಯ ಪ್ರೀಣನವಿನಾ ತನಗೇ ಬೇರೇ ಪ್ರಯೋಜನವಿಲ್ಲವೆಂಬುದನ್ನು ತಿಳಿಸಿದುದನ್ನು ಉದಾಹರಿಸುತ್ತಾರೆ :—"**ನ ದೇವಲೋಕಾಕ್ರಮಣಂ ನಾಮರತ್ವಮಹಂ ವೃಣೇ । ಐಶ್ವರ್ಯಂ ವಾಪಿ ಲೋಕಾನಾಂ ಕಾಮಯೇ ನ ತ್ವಯಾವಿನಾ" ತ್ವಯಾವಿನಾ** - ಸರ್ವವಿಧ ಬಂಧುವಾಗಿರುವ ನೀನಲ್ಲದೆ ಎಂದರೆ ನಿನಗೆ ಸರ್ವವಿಧ ಕೈಙ್ಕರ್ಯಗಳನ್ನೆಸಗಿ ನಿನ್ನ ಪ್ರೀತಿಗೆ ಪಾತ್ರನಾಗಿರುವದು ವಿನಾ ಎಂಬ ಭಾವವು, **ಲೋಕಾನಾಂ ಐಶ್ವರ್ಯಂವಾ** - ತ್ರಿಲೋಕಗಳ ಐಶ್ವರ್ಯವನ್ನಾಗಲಿ, ಅಥವಾ, ರುದ್ರ ಬ್ರಹ್ಮ ಕುಬೇರಾದಿ ಲೋಕಗಳ ಐಶ್ವರ್ಯವನ್ನಾಗಲಿ, **ನಕಾಮಯೇ** - ನಾನು ಅಪೇಕ್ಷಿಸುವದಿಲ್ಲವು, **ನಾಮರತ್ವಂವಾ**

---

(೧) ರಾಮಾ. ಅಯೋಧ್ಯಾ. ೩೧. ೫. (೨) ರಾಮಾ ಅಯೋಧ್ಯಾ. ೩೧. ೨೫.

**ಅಹಂವೃಣೇ-ಜರಾಮರಣ ಮೋಕ್ಷಾಯ** ಎಂದು (ಗೀ. ೭-೨೯) ಯಲ್ಲಿ ಹೇಳಿರುವ ಕೈವಲ್ಯಾರ್ಥಿಯ ಅಪುನರಾವೃತ್ತಿ ದೆಶೆಯನ್ನಾಗಲಿ ನಾನು ಅಪೇಕ್ಷಿಸುವದಿಲ್ಲವು, ಅಥವಾ **ನ ದೇವಲೋಕಾಕ್ರಮಣಮಪಿ ವಾ ಅಹಂ ವೃಣೇ-"ದೇವಾನಾಂ ಪೂರಯೋಧ್ಯಾ"** ನಿತ್ಯಸೂರಿಗಳಿರುವ ಪಟ್ಟಣವು ಅಯೋಧ್ಯೆಯು ಎಂದು ಹೇಳಿರುವಹಾಗೆ ದೇವಲೋಕವೆಂದರೆ **ದಿವ್ಯ ವೈಕುಂಠವು** ಅವರ ಪ್ರಾಪ್ತಿಯನ್ನೂ ಕೂಡ ನಾನು ಅಪೇಕ್ಷಿಸುವದಿಲ್ಲವು ಎಂಬರ್ಥವು. ಇದರಿಂದ ಸ್ವಾಮಿ ಕೈಙ್ಕರ್ಯವೂ ತತ್ಪ್ರೀಣನವೇ ಪ್ರಯೋಜನಗಳೇ ವಿನಾ ತನಗೆ ಇನ್ನು ಯಾವ ಪ್ರಯೋಜನವೂ ಬೇಕಿಲ್ಲವೆಂಬ ಅನನ್ಯ ಪ್ರಯೋಜನತ್ವವು ಪ್ರದರ್ಶಿಸಲ್ಪಟ್ಟಿತು ಎಂಬೂ, ಇದರಿಂದ ಪ್ರಪನ್ನನೂ ಸಹ ಮಾಡತಕ್ಕ ಸರ್ವ ವಿಧವಾದ ನಿತ್ಯ ನೈಮಿತ್ತಿಕ ರೂಪಗಳೂ ಸ್ವಪ್ರಯೋಜನಕ್ಕಾಗಿ ಅಲ್ಲದೆ ಸ್ವಯಂಪ್ರಯೋಜನಗಳಾಗಿ ಭಗವತ್ಪ್ರೀಣನ ರೂಪವಾಗಿ ಮಾಡತಕ್ಕದ್ದೆಂಬುದು ವಿಧಿಸಲ್ಪಟ್ಟಿತು. **"ಭವಾಂಸ್ತು ಸಹ ವೈದೇಹ್ಯಾ ಗಿರಿಸಾನುಷು ರಂಸ್ಯತೇ । ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವಪತಶ್ಚ ತೇ" ಭವಾಂಸ್ತು** - ಸರ್ವಶೇಷಿಯಾಗಿರುವದರಿಂದ ಸ್ವಾಮಿಯಾದ ನೀನಾದರೋ, **ವೈದೇಹ್ಯಾ ಸಹ** - ನಿನ್ನ ಪತ್ನಿಯಾದ ಸೀತೆಯೊಂದಿಗೆ, **ಗಿರಿಸಾನುಷು** - ಈ ಪರ್ವತ ತಪ್ಪಲುಗಳಲ್ಲಿ, **ರಂಸ್ಯತೇ** - ಇವೆಲ್ಲಾ ನಿನಗೆ, ಲೀಲಾರೂಪವಾದುದರಿಂದ ವಿಹರಿಸು; **ಅಹಂ** - ನಿನಗೆ ಸಹಜ ದಾಸಭೂತನಾಗಿ ನಿನಗೆ ಕೈಙ್ಕರ್ಯಮಾಡವದೇ ಮುಖ್ಯವೃತ್ತಿಯಾಗಿರುವ ನಾನು, **ತೇ ಜಾಗ್ರತಸ್ಸ್ವಪತಶ್ಚ** -ನೀನು ಎದ್ದೇ ಇರಲಿ, ನಿದ್ರೆ ಮಾಡುತ್ತೇ ಇರಲಿ, ಇಂತಹ ನಿನಗೆ, **ಸರ್ವಂ ಕರಿಷ್ಯಾಮಿ**-ಸರ್ವದೇಶ ಸರ್ವಕಾಲ, ಸರ್ವಾವಸ್ಥೋಚಿತ ಸರ್ವ ವಿಧ ಕೈಂಕರ್ಯಗಳನ್ನೂ ನನ್ನ ಪ್ರಯೋಜನಕ್ಕಾಗಲ್ಲವೆ ನಿನ್ನ ಪ್ರೀಣನಾರ್ಥವಾಗಿ ಮಾಡುವೆನು. ಭಗವತ್ಪ್ರೀತಿ ಮಾತ್ರವೇ ತನಗೆ ಪ್ರಯೋಜನವೆಂದು ಲಕ್ಷ್ಮಣನು ಯಾವಾಗ ಹೇಳಿಕೊಂಡನೋ, ಆತನು ಸಂಪೂರ್ಣ ಕೈಂಕರ್ಯವನ್ನು ಮಾಡಿದರೆ ಎಷ್ಟು ಪ್ರೀತಿಯೋ ಅಷ್ಟು ಪ್ರೀತಿಯುಕ್ತನಾದನೆಂದು **ಸುಪ್ರೀತಃ** ಎಂಬ ಪ್ರಯೋಗದಿಂದ ಉತ್ತರ ಶ್ಲೋಕದಲ್ಲಿ **"ರಾಮಸ್ತ್ವನೇನ ವಾಕ್ಯೇನ ಸುಪ್ರೀತಃ"** ಎಂದು ಮಹರ್ಷಿಯು ಹೇಳಿರುತ್ತಾರೆ. ಇದರಿಂದ ಶೇಷಭೂತನಾದ ಚೇತನನು ಮಾಡುವ ಕೈಂಕರ್ಯವೂ ನಾರಾಯಣನಿಗೊಬ್ಬನಿಗೇ ಅಲ್ಲವೆಂದೂ, ಅದಕ್ಕೆ ಲಕ್ಷ್ಮೀಯುಕ್ತ ನಾರಾಯಣನೇ ಉದ್ದೇಶ್ಯನೆಂದೂ, **ಸಹ ವೈದೇಹ್ಯಾ** ಎಂಬ ಪ್ರಯೋಗದಿಂದ ದ್ವಯಮಂತ್ರದ ಉತ್ತರಖಂಡಾರ್ಥವೂ, ಪ್ರಾಪ್ಯಸ್ವರೂಪವೂ ಪ್ರದರ್ಶಿಸಲ್ಪಟ್ಟವು. ಶ್ರೀರಾಮನು ನಿದ್ರಿಸುವಾಗಲೂ ತಾನು ನಿದ್ರೆಯಿಲ್ಲದೆ ಯಾವ ಕಾಲದಲ್ಲಿ ಯಾವ ದೇಶದಲ್ಲಿ ಯಾವ ವಿಧ ಕೈಂಕರ್ಯಮಾಡಬೇಕಾಗು

**೩) "ಯತ್ರ ಕುತ್ರ ಕುಲೇವಾಸೋ ಯೇಷು ಕೇಷು ಭವೋಸ್ತು ಮೇ । ತವದಾಸ್ಯೈಕ ಭೋಗೇಸ್ಯಾತ್ಸದಾ ಸರ್ವತ್ರ ಮೇ ರತಿಃ ॥ ಕರ್ಮಣಾ ಮನಸಾ ವಾಚಾ ಶಿರಸಾ ವಾ ಕಥಂಚನ । ತ್ವಾಂ ವಿನಾ ನಾನ್ಯಮುದ್ದಿಶ್ಯ ಕರಿಷ್ಯೇ**

---

ತ್ರ್ಯವೇ ಎಂದು ಆತಂಪ್ರೀತನಾಗಿ ಕಾಪಾಡುತ್ತೇನೆ ಎಂಬುದರಿಂದ ಅನನ್ಯ **ಪ್ರಯೋಜನತ್ವವು ಸೂಚಿತವು**; (೩) ಮೇ ನನಗೆ ಎಂದರೆ ದಾಸಭೂತನಾಗಿ **ಕೈಂಕರ್ಯ** ಮಾಡುವುದೇ ನನಗೆ ಸ್ವರೂಪವೂ, ಅದೇ ನನಗೆ ಪರಮಸಾಮ್ರಾಜ್ಯವೆಂದು ಭಾವಿಸಿರುವ ನನಗೆ, **ಯತ್ರ ಕುತ್ರ ಕುಲೇ ವಾಸಃ**- ನನ್ನ ಕರ್ಮಾನುಗುಣವಾಗಿ ಉತ್ಕೃಷ್ಟ ಕುಲದಲ್ಲಿಯಾಗಲಿ ಅಥವಾ ನಿಕೃಷ್ಟ ಕುಲದಲ್ಲಿಯಾಗಲಿ ವಾಸವು, ಅಸ್ತು - ಆದರೂ, **ಯೇಷು ಕೇಷು** - ಬೇರೆಯಾವುದಾದರೂ ಉತ್ಕೃಷ್ಟ ನಿಕೃಷ್ಟ ಜಾತಿಯಲ್ಲೇ ಆಗಲಿ **ಭವಃ ಅಸ್ತು** - ಜನ್ಮವೇ ಉಂಟಾಗಲಿ, **ಮೇ** - ದಾಸನಾದ ನನಗೆ, ರತಿಃ - ಆಸಕ್ತಿಯು, **ಸರ್ವತ್ರ** - ನಾನಿರುವ ಎಲ್ಲಾ ಪ್ರದೇಶದಲ್ಲಿಯೂ, **ಸದಾ** - ನಾನಿರುವ ಎಲ್ಲಾ ಕಾಲದಲ್ಲಿಯೂ, **ತವದಾಸ್ಯೈಕ ಭೋಗೇ** – ನಿನಗೆ ಕೈಂಕರ್ಯ ಮಾಡುವದೆಂಬುವ ಮುಖ್ಯವಾದ ಭೋಗದಲ್ಲಿ ಮಾತ್ರವೇ, **ಸ್ಯಾತ್** - ಉಂಟಾಗಲಿ; **ಕರ್ಮಣಾ** - ಆರಾಧನರೂಪ ಕರ್ಮದಿಂದಲೇ ಆಗಲಿ, **ಮನಸಾ** – ಮಾನಸಿಕ ಆರಾಧನರೂಪಧ್ಯಾನದಿಂದಲೇ ಆಗಲಿ, **ವಾಚಾ** – ಆರಾಧನರೂಪ ಸ್ತುತಿಯಿಂದಲೇ ಆಗಲಿ, **ಶಿರಸಾ ವಾ** - ನಮಸ್ಕಾರಾದಿಗಳನ್ನು ಮಾಡುವ ಶಿರಸ್ಸಿನಿಂದ, ಇಲ್ಲಿ **ಮನಸ್ಸು, ವಾಕ್ಕು, ಶಿರಸ್ಸು** ಎಂಬ ಎಲ್ಲಾ ಅವಯವಗಳಾದುದರಿಂದ **ಕರ್ಮಣಾ** ಎಂಬುದಕ್ಕೆ ಕರ್ಮಗಳನ್ನು ಮಾಡಲು ಸಾಧನಗಳಾದ **ಕೈಕಾಲುಗಳೂ** ಅವುಗಳ ಸಹಾಯಕಗಳಾದ ಚಕ್ಷುರಾದಿ ಇಂದ್ರಿಯಗಳು ಹೇಳಲ್ಪಟ್ಟವೆಂದು ಭಾವಿಸಬಹುದು, ಅಥವಾ **"ಯನ್ಮನಸಾ ಧ್ಯಾಯತೇ, ತದ್ವಾಚಾವದತಿ ತತ್ಕರ್ಮಣಾ ಕರೋತಿ"** ಎಂದಿರುವದರಿಂದ ಮನಸ್ಸಿನಿಂದ **ಧ್ಯಾನಿಸಿ, ವಾಕ್ಕಿನಿಂದ** ಸ್ತುತಿಸಿ, ಆರಾಧನರೂಪ ಕರ್ಮವೇ ಎಂದೇ **ಅರ್ಥಮಾಡಿದರೂ** ಬಾಧಕವಿಲ್ಲವು, **ಕಥಂಚನ** - ಯಾವವಿಧದಿಂದಲೂ, **ತ್ವಾಂ ವಿನಾ** – **ದಾಸನಾದ** ನನಗೆ ನೀನೇ **ನಾಥನು**, ಆದದರಿಂದ ನಿನ್ನನ್ನು ಬಿಟ್ಟು, **ಅನ್ಯಮುದ್ದಿಶ್ಯ** - ಇತರ ತುಚ್ಛ ದೇವತೆಗಳನ್ನು ಕುರಿತು, **ಕಿಂಚಿದಪಿ-ಏನೊಂದನ್ನೂ ಎಂಬದರಿಂದ ನಾಮಗ್ರಹಣವನ್ನೂ ಕೂಡ, ನ ಕರಿಷ್ಯೇ** - ನಾನು ಮಾಡುವದಿಲ್ಲವು, ಹಾಗೇನಾದರೂ ಮಾಡಿದರೆ ನನ್ನ ಸ್ವರೂಪಕ್ಕೇ ಕಂಟಕವೆಂಬ ಭಾವವು.

---

(೩) ದ್ವಿತೀಯ ಜಿತಂತಾ.

**ಕಿಂಚಿದಪ್ಯಹವ್"॥ (೪) "ತನಕ್ಕೇಯಾಗ ವೆನ್ನೈಕ್ಕೊಳ್ಳ ವಿಾವೆ" ಎಙ್ಗುರಪಡಿಯೇ ಭಗವತ್ಪ್ರೀತಿಮಾತ್ರಂ ಪ್ರಯೋಜನಮಾನ ಕೈಙ್ಕರ್ಯ ತ್ತಿಲೇ ಸ್ವಾಚಾರ್ಯೋಪದಿಷ್ಟಮಾಯಿರುಪ್ಪದೊರು ಶಾಸ್ತ್ರೀಯಪ್ರಕ್ರಿಯೈಯೈಕ್ಕೊಂಡು ಯಥಾಕಾಲಮನುಷ್ಠಿಕ್ಕ ಪ್ರಾಪ್ತಮ್.**

---

ಇಲ್ಲಿಯೂ ಭಗವತ್ಪ್ರೀಣನಾರ್ಥನಾಗಿಯೇ ಅನನ್ಯ ಪ್ರಯೋಜನನಾಗಿ ಭಗವತ್ಕೈಙ್ಕರ್ಯವನ್ನು ಮಾಡತಕ್ಕದ್ದೆಂಬುದು ಹೇಳಲ್ಪಟ್ಟಿತು.

(೪) **ತನಕ್ಕೇಯಾಗ** - ಸರ್ವಶೇಷಿಯಾದ ತನಗೆ ಮಾತ್ರವೇ, ಎಂದರೆ ಶೇಷಭೂತನಾಗಿ ಕೈಂಕರ್ಯಮಾಡಿಕೊಂಡು ಪರತಂತ್ರನಾಗಿರುವ ಹಾಗೆ, ಅನ್ಯದೇವತೆಗಳಿಗೆ ಯಾರಿಗೂ ಶೇಷಭೂತನಾಗದೆ ಎಂಬರ್ಥವು ಸೂಚಿತವು, **ಎನ್ನೈಕೊಳ್ಳವಿಾದೆ** - ನನ್ನನ್ನು ಅಙ್ಗೀಕರಿಸುವನು, ಇದೇ ಶ್ರೀಕೃಷ್ಣನಲ್ಲಿ ಪ್ರಾರ್ಥನೆಯು ಎಂಬ ಭಾವವು. ಪೂರಾ ಪಾಸುರ ಮತ್ತು ಅರ್ಥಗಳಿಗೆ ೧೨೩೭ ನೆಯ ಪುಟ ನೋಡಿ; **ಎಙ್ಗುರಪಡಿಯೇ** - ಎಂಬೀ ಪ್ರಮಾಣಗಳಲ್ಲಿ ಹೇಳಿರುವ ಹಾಗೆ, **ಭಗವತ್ಪ್ರೀತಿಮಾತ್ರವೇ** ಪ್ರಯೋಜನವಾಗಿರುವ, **ಕೈಙ್ಕರ್ಯತ್ತಿಲೇ** - ಕೈಙ್ಕರ್ಯದಲ್ಲಿ, ಇಲ್ಲಿ **ಮಾತ್ರ** ಶಬ್ದದಿಂದ ಭಗವತ್ಪ್ರೀತಿಯಲ್ಲದೆ ಇನ್ಯಾವ **ಪ್ರಯೋ**ಜನವನ್ನು ತಾನು ಅಪೇಕ್ಷಿಸಕೂಡದೆಂದು ಹೇಳಲ್ಪಟ್ಟಿತು, ಹೀಗೆ ಸ್ವಯಂ ಪ್ರಯೋಜನವಾದ ಕೈಙ್ಕರ್ಯದಲ್ಲಿ, **ಸ್ವಾಚಾರ್ಯೋಪದಿಷ್ಟಮಾಯ್** - ತನ್ನ ಸ್ವಂತ ಆಚಾರ್ಯರಿಂದ ಉಪದೇಶಿಸಲ್ಪಟ್ಟದ್ದಾಗಿಯೂ, **ಇರುಪ್ಪದೊರು ಶಾಸ್ತ್ರೀಯ ಪ್ರಕ್ರಿಯೈ ಕೊಂಡು** - ಇರುವ ಶಾಸ್ತ್ರಪದ್ಧತಿಯನ್ನು ಅನುಸರಿಸಿರುವ ಮಾರ್ಗವನ್ನು ಕೈಕೊಂಡು, **ಯಥಾಕಾಲಮ್** - ಶಾಸ್ತ್ರವಿಹಿತವಾದ ಕಾಲದಲ್ಲಿ ತನಗೆ ಎಷ್ಟು ಅವಕಾಶ ಉಂಟೋ ಅಷ್ಟು ಕಾಲ, **ಅನ್ಯಷ್ಠಿಕ್ಕ ಪ್ರಾಪ್ತಮ್**- ಈ ಅಭಿಗಮನಾರಾಧನಾದಿನ ನಿತ್ಯನೈಮಿತ್ತಿಕಾನುಷ್ಠಾನಗಳನ್ನು ಇವುಗಳಲ್ಲಿ ಸಂಬಂಧವಿಡುವದು ಉಚಿತವು ಈತನು ಅವಲಂಬಿಸುವ ಅಭಿಗಮನಾರಾಧನಾದಿ ನಿತ್ಯನೈಮಿತ್ತಿಕಾನುಷ್ಠಾನಗಳು ಶಾಸ್ತ್ರ ಪ್ರಕ್ರಿಯೆಯನ್ನು ಅನುಸರಿಸಿದವುಗಳಾಗಬೇಕು ; ಇಷ್ಟೇ ಅಲ್ಲದೆ ಸ್ವಾಚಾರ್ಯೋಪದಿಷ್ಟವಾಗಿರಬೇಕು. ಆದುದರಿಂದ ಸ್ವಾಚಾರ್ಯೋಪದೇಶವು ಆವಶ್ಯಕವೆಂದು ಹೇಳಿದುದಲ್ಲದೆ ಅದು ಶಾಸ್ತ್ರಮರ್ಯಾದೆಗೆ ವ್ಯತಿರಿಕ್ತವಾಗಿಕೂಡದೆಂದು ಹೇಳಲ್ಪಟ್ಟಿತು. ಶಾಸ್ತ್ರಮರ್ಯಾದೆಯನ್ನು ವಿಾರಿದುದಾದರೆ ಸ್ವಾಚಾರ್ಯೋಪದಿಷ್ಟವಾದರೂ ಗ್ರಾಹ್ಯ

---

(೪) ತಿರು. ೨. ೯. ೪

ವಲ್ಲವು ಶಾಸ್ತ್ರಮರ್ಯಾದೆಗೆ ವಿರುದ್ಧಾಚರಣೆಯನ್ನು ಬೋಧಿಸುವವರು ಆಚಾರ್ಯ ಸ್ಥಾನಕ್ಕೆ ಯೋಗ್ಯರಲ್ಲವೆಂಬ ಭಾವವು. **"ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ । ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂಗತಿಮ್"** ಎಂಬ (ಗೀ. ೧೬. ೨೩) ಶ್ಲೋಕವು ಇಲ್ಲಿ ಅನುಸಂಧೇಯವು. ಶಾಸ್ತ್ರದಲ್ಲಿ ವಿಕಲ್ಪ ವೈವಿಧ್ಯಾದಿಗಳು ಬೋಧಿತವಾಗಿದ್ದ ಪಕ್ಷದಲ್ಲಿ ಸ್ವಾಚಾರ್ಯರಿಗೆಯಾವುದು ಇಷ್ಟವೋ ಹಾಗೆ ನಡೆಸತಕ್ಕದ್ದೆಂಬ ಭಾವವು ಭಗವದಾರಾಧನೆಗಳಲ್ಲಿ ಕ್ರಮವೂ ಷೋಡಶೋಪಚಾರಗಳೂ ಒಂದೇಯಾಗಿದ್ದರೂ, ಹೇಳತಕ್ಕ ಮಂತ್ರಗಳೂ ಮೊದಲಾದವು ಬೇರೆ ಬೇರೆಯಾಗಬಹುದು. ಅವುಗಳಲ್ಲಿ ಯಾವುದು ಸ್ವಾಚಾರ್ಯೋಪದಿಷ್ಟವೋ ಅದನ್ನು ಅವಲಂಬಿಸಬಹುದೆಂಬ ತಾತ್ಪರ್ಯವು. ಹೀಗೆ ಈ ನಿತ್ಯನೈಮಿತ್ತಿಕ ಕರ್ಮಗಳಲ್ಲಿ ಸೇರಿದ ಭಗವದಾರಾಧನೆ ಮುಂತಾದವುಗಳನ್ನಾಚರಿಸುವಾಗ ಯಾವವಿಧ ಫಲದಲ್ಲಿಯೂ ಮಮತೆಯಿಲ್ಲದೆ ಕೇವಲ ಭಗವತ್ಪ್ರೀಣನಾರ್ಥವಾಗಿ ನಡೆಸತಕ್ಕದ್ದೆಂಬುದು ಉಪದೇಶವು. ಆದರೆ **"ಪ್ರಯೋಜನ ಮನುದ್ದಿಶ್ಯ ನಮಂದೋಽಪಿ ಪ್ರವರ್ತತೇ"** ಎಂದಿರುವಾಗ ಏನೂ ಪ್ರಯೋಜನವಿಲ್ಲದೆ ಕೈಙ್ಕರ್ಯರೂಪ ಆರಾಧನೆಯನ್ನು ಯಾವ ಮಂದಬುದ್ಧಿಯುಳ್ಳವನೂ ಮಾಡಲಾರನು, ಹೀಗಿರುವಾಗ ಅನನ್ಯ ಪ್ರಯೋಜನಭಾವ ಹೇಗೆ ಕೂಡುತ್ತದೆ? ಮತ್ತು ಪ್ರಪನ್ನನಾದವನೇನೋ ಇಂತಹ ಕೈಙ್ಕರ್ಯವನ್ನು ಫಲಾಭಿಸಂಧಿ ಇಲ್ಲದೇ ನಡೆಸಬಹುದು. ಆದರೆ ಬಹು ಆಯಾಸ ಸಾಧ್ಯವಾದ ಇಂತಹ ಕೈಙ್ಕರ್ಯದಲ್ಲಿ ಸಾಧಾರಣವಾಗಿ ಮಮತೆಯು ಹೇಗೆ ಹುಟ್ಟಲಾರದೆ ಇದ್ದೀತು? ಎಂದರೆ, ನಾಥನಾದ ಸ್ವಾಮಿಯು ತನ್ನ ದಾಸನ ಕೈಙ್ಕರ್ಯದಲ್ಲಿ ಮಮತೆಯನ್ನಿಟ್ಟು ಅದನ್ನು ಸ್ವೀಕರಿಸುವದು ಒಂದು ದೊಡ್ಡ ಪರಮಲಾಭವಲ್ಲವೋ? ತನಗೆ ಇಂತಹ ನಿರತಿಶಯ ಸುಖಾನುಭವವನ್ನುಂಟುಮಾಡುವ ಸ್ವಾಮಿಯು ಸುಪ್ರೀತನಾಗುವದೂ ಪರಮಲಾಭವಲ್ಲವೋ? ಎಂಬ ಭಾವವು. ಹೀಗೆ ಭಗವತ್ಪ್ರೀತ್ಯರ್ಥವಾಗಿ ಪಾಂಚಕಾಲಿಕ ಸರ್ವ ನಿತ್ಯ ನೈಮಿತ್ತಿಕಾದಿಗಳೆಲ್ಲವನ್ನೂ ಪ್ರಪನ್ನನು ಅವಶ್ಯಕವಾಗಿ ಅನುಷ್ಠಿಸತಕ್ಕದ್ದು ಎಂಬುದು ಮುಖ್ಯ ತಾತ್ಪರ್ಯವು.

ಈ ಪ್ರಪನ್ನನು ಫಲಾಭಿಸಂಧಿ ರಹಿತನಾಗಿಯೇ ಕೇವಲ ಭಗವತ್ಪ್ರೀತ್ಯರ್ಥವಾಗಿಯೇ ಈ ಅಭಿಗಮನಾದಿಗಳಾದ ನಿತ್ಯ ನೈಮಿತ್ತಿಕಗಳನ್ನು ಮಾಡಿದರೂ ಇದು, ಏನಾದರೂ ಸತ್ಫಲಗಳನ್ನು ಕೊಡದೆ ಹೋಗುವದಿಲ್ಲವು. ವಿಭೀಷಣನು ಶ್ರೀರಾಮನಲ್ಲಿ ಶರಣಾಗತಿಯನ್ನು ಮಾಡುವಾಗ ಕೇವಲ ಭಗವತ್ಪ್ರೀತ್ಯರ್ಥವಾಗಿಯೇ ಮಾಡಿದರೂ, ಉತ್ತರಕ್ಷಣದಲ್ಲೇ ಅದು ಲಂಕಾರಾಜ್ಯಾಭಿಷೇಕಕ್ಕೆ ಹೇಗೆ ಹೇತುವಾಯಿತೋ ಹಾಗೆಯೇ ಇಲ್ಲಿ ಅಭಿಗಮನಾರಾಧನಾದಿಗಳೂ ಅನೇಕ ದುಷ್ಕೃತಗಳು ದೂರವಾಗುವದಕ್ಕೆ ಕಾರಣವಾಗಬಹುದೆಂದು ಹೇಳುತ್ತಾರೆ.

## ಅಭಿಗಮನಾದಿ ನಿತ್ಯನೈಮಿತ್ತಿಕಾನಾಮನೇಕಾನರ್ಥ ಪರಿಹಾರಕತ್ವಸ್ಯ ಕಥನಮ್.

**ಇಪ್ಪಡಿ ನಿತ್ಯಮಾಗ ವಿಧಿಕ್ಕಿರ ಭಗವದಭಿಗಮನಾದಿಗಳಿಲ್ ಲೋಕಾಯತಿಕರ್ಕೈಪ್ಪೋಲೆ ಖ್ಯಾತಿ ಲಾಭ ಪೂಜೈಗಳುಕ್ಕಾಗವಾದಲ್, ತತ್ತ್ವಜ್ಞಾನ ವೈರಾಗ್ಯಙ್ಗಳಿಲ್ಲಾದಾರ್ಕೈಪ್ಪೋಲೆ ಪ್ರಯೋಜನಾಂತರತ್ತುಕ್ಕಾಗವಾದಲ್, ಪೂರ್ಣೋಪಾಯರಲ್ಲಾದಾರ್ಪೋಲೆ ಮೋಕ್ಷಾರ್ಥಮಾಗವಾದಲ್, ಅನ್ರಿಕ್ಕೇ ಮುಕ್ತರ್ಕೈಪ್ಪೋಲೆ ಸ್ವಾಮ್ಯಭಿಮತತ್ತೈ ನಡತ್ತ ವೇಣು**

---

## ಅಭಿಗಮನಾದಿ ನಿತ್ಯನೈಮಿತ್ತಿಕಗಳು ಅನೇಕ ಅನರ್ಥ ಪರಿಹಾರಕಗಳು

**ಇಪ್ಪಡಿ** - ಮೇಲೆ ಹೇಳಿದ ರೀತಿಯಲ್ಲಿ, **ನಿತ್ಯಮಾಗವಿಧಿಕ್ಕಿರ** - ಪ್ರತಿನಿತ್ಯವೂ ಮಾಡಬೇಕೆಂದು ವಿಧಿಸಿರುವ, **ಭಗವದಭಿಗಮನಾದಿಗಳಿಲ್** - ಭಗವಂತನನ್ನು ಆರಾಧಿಸುವುದೇ ಮೊದಲಾದವುಗಳಲ್ಲಿ. **ಲೋಕಾಯತಿಕರ್ಕೈಪ್ಪೋಲೆ** - ದೇವರು, ವೇದಗಳು, ಜೀವಾತ್ಮ, ವೈಕುಂಠ ಮೊದಲಾಗಿ ಕಣ್ಣಿಗೆ ಕಾಣಿಸದೇ ಇರುವವು ಯಾವುವೂ ಇಲ್ಲವೆಂದು ಹೇಳುವವರಾಗಿ ಬರೀ ಐಹಿಕ ಪ್ರಯೋಜನಗಳೇ ಪ್ರಯೋಜನಗಳೆಂದು ಹೇಳುವ ಚಾರ್ವಾಕರ ಹಾಗೆ, **ಖ್ಯಾತಿ ಲಾಭ ಪೂಜೈಗಳುಕ್ಕಾಗವಾದಲ್** ತನಗೆ ಉಂಟಾಗುವ ಖ್ಯಾತಿ, ಲಾಭ ಮತ್ತು ಮರ್ಯಾದೆ ಇಂತಹ ಐಹಿಕ ಪ್ರಯೋಜನಗಳಿಗಾಗಿಯಾಗಲಿ, **ತತ್ತ್ವಜ್ಞಾನ ವೈರಾಗ್ಯಙ್ಗಳಿಲ್ಲಾದಾರ್ಕೈಪ್ಪೋಲೆ** - ಮುಕ್ತಿದಾಯಕನಾದ ಶ್ರೀಯಃಪತಿಯೊಬ್ಬ ಸಿದ್ಧನೆಂಬ ತತ್ತ್ವಜ್ಞಾನವೇನು, ಐಹಿಕೋಪಭೋಗಗಳೂ ಸ್ವರ್ಗಾದಿ ಸುಖಗಳೂ ನಶ್ವರಗಳು ಆದುದರಿಂದ ಅವುಗಳು ತುಚ್ಛವಾದವುಗಳೆಂಬ ವೈರಾಗ್ಯವೇನು, ಇಂತಹ ಜ್ಞಾನಗಳಿಲ್ಲದ ಅಜ್ಞರ ಹಾಗೆ, **ಪ್ರಯೋಜನಾಂತರತ್ತುಕ್ಕಾಗವಾದಲ್**-ಮೋಕ್ಷೇತರವಾದ ಸ್ವರ್ಗಾದ್ಯುಪಭೋಗಗಳಿಗಾಗಿಯಾಗಲಿ, **ಪೂರ್ಣೋಪಾಯರಲ್ಲಾದಾರ್ ಪೋಲೆ** - ಸಿದ್ಧೋಪಾಯಾನುಷ್ಠಾನವನ್ನು ಸಂಪೂರ್ಣವಾಗಿ ಅನುಷ್ಠಿಸದೇ ಇರುವವರ ಹಾಗೆ, **ಮೋಕ್ಷಾರ್ಥಮಾಗವಾದಲ್**-ಮೋಕ್ಷವನ್ನು ಸಂಪಾದಿಸುವುದಕ್ಕಾಗಿ ಆಗಲಿ, **ಅನ್ರಿಕ್ಕೇ** - ಇಲ್ಲದೆ ಎಂದರೆ ಇಂತಹ ಪ್ರಯೋಜನಗಳಭಿಲಾಷೆಯಾವುದೂ ಇಲ್ಲದೆ ಎಂಬ ಭಾವವು. **ಮುಕ್ತರ್ಕೈಪ್ಪೋಲೇ** - ಮುಕ್ತರು ಹೇಗೆ ಅನುಷ್ಠಿಸುತ್ತಾರೋ ಹಾಗೆ, ಅವರು ಹೇಗೆ

**ಅನ್ಯಾಭಿಗಮನಾದಿ ಪಂಚಕಾನಾಂ ಪ್ರಪನ್ನ ವಿರುದ್ಧತ್ವೇ ಪ್ರಮಾಣಾನಿ.**

೧. ಅನ್ಯಾಭಿಗಮನ ಮಾಗಾದೆನ್ನು ಮಿಡತ್ತಿಲ್ (೧) ಇನಿಪ್ಪೋಯ್ ಒರುವರ್ ತನಕ್ಕುಪ್ಪಣಿನ್ದು ಕಡೈತ್ತಲೈ ನಿರ್ಕ್ಕ ನೀ ಶಾಯ್ಯ ಯುಳಿವು ಕಣ್ಣಾಯ್" ಎನ್ರು ಪೆರಿಯಾಳ್ವಾರರುಳಿಚ್ಚೆಯ್ದಾರ್

---

**ಅನ್ಯಾಭಿ ಗಮನಾದಿ ಪಂಚಕಗಳು ಪ್ರಪನ್ನನಿಗೆ ವಿರುದ್ಧವಾದ ವೆಂಬುದಕ್ಕೆ ಪ್ರಮಾಣಗಳು.**

೧ **ಅನ್ಯಾಭಿಗಮನಂ** - ಅನ್ಯದೇವತಾರಾಧನೆಯು, **ಆಗಾದು** - ಈ ಪ್ರಪನ್ನನಿಗೆ ಸ್ವರೂಪವಿರುದ್ಧವು, **ಎನ್ನುಮಿಡತ್ತಿಲ್** - ಎಂಬ ಸಂದರ್ಭವನ್ನು (೧) **"ಇನಿಪ್ಪೋಯ್"** ಎನ್ರು - ಎಂಬ ಪಾಶುರದಲ್ಲಿ, ಪೆರಿಯಾಳ್ವರವರು ತಾವು ಬರೆದ ತಿರುಮೊಳಿಯಲ್ಲಿ, **ಅರುಳಿಚ್ಚೆಯ್ದಾರ್** - ಅಪ್ಪಣೆಕೊಡಿಸಿರುತ್ತಾರೆ:— ಆ ಪಾಶುರವು ಯಾವುದೆಂದರೆ :— **ಉನಕ್ಕುಪ್ಪಣಿ ಶೆಯ್ದಿರುಕ್ಕುಮ್ ತವಮುಡಿಯೇನಿನಿಪ್ಪೋ ಯೊರುವನ್** । ಉನಕ್ಕುಪ್ಪಣಿನ್ದು ಕಡೈತ್ತಲೈ ನಿರ್ಕ್ಕ **ನೀ ಶಾಯ್ಯ ಯುಳಿವು ಕಣ್ಣಾಯ್** । **ಪುನ ತಿನ್ನೈಕಿಳ್ಳಿಪ್ಪುದುವವಿ ಕ್ಕಾಟ್ಟಿಯುರ್ ಪೊನ್ನಡಿ ವಾಳ್ಗ ವೆನ್ರು** । **ಇನಕ್ಕುರುವರ್ ಪುದಿಯುಡುಣ್ಣು ಮೆಳಿಲ್ ಮಾಲಿರುಂಶೋಲೈ ಯೆನ್ದಾಯ್** ॥

ಅರ್ಥವು **ಇನಕ್ಕುರುವರ್**-ಸ್ತ್ರೀಯರೂ ಪುರುಷರೂ ಬಾಲರೂ ವೃದ್ಧರೂ ಹೀಗೆ ಗುಂಪುಕೂಡಿಬಂದಿರುವ ಗದ್ದೆ ಹೊಲಗಳಲ್ಲಿ ಕೆಲಸಮಾಡುವ ಕೊರವರ ಜಾತಿಯವರು, **ಉರ್ ಪೊನ್ನಡಿವಾಳ್ಗ** ಎನ್ರು-"ಉನ್ನಡಿ ಶೇವಡಿ ಶೆವ್ವಿತಿರುಕ್ಕಾಪ್ಪು" ಎಂದು ಹೇಳಿರುವಹಾಗೆ ನಿನಗೆ ಮಂಗಳಾಶಾಸನಮಾಡುವದಕ್ಕಾಗಿ ಪಲ್ಲಾಣ್ಡನ್ನು ಹಾಡಿ, **ಪುನಮ್ ತಿನ್ನೈಕ್ಕಿಳ್ಳಿ** - ಹೊಲದಲ್ಲಿ ಬಿಟ್ಟ ಭತ್ತದ ತೆನ್ನೆಯನ್ನು ಕೊಯಿದು ತಂದು, **ಪುದು ಅವಿ** - ಆ ಪೈರನ್ನು ಉಪಯೋಗಿಸಿಕೊಳ್ಳುವದಕ್ಕೆ ಮೊದಲು ಹೊಸ ಅಕ್ಕಿಯಿಂದ ನಿನಗೆ ಭೋಗ್ಯವಾಗಿರುವಹಾಗೆ ಹವಿಸ್ಸನ್ನು ಮಾಡಿ, **ಕಾಟ್ಟಿ** - ನಿನಗೆ ನಿವೇದನವನ್ನು ಮಾಡಿ, **ಪುತಿಯುದುಣ್ಣುಮ್ ಎಳಿಲ್** - ಶ್ರೀಕೃಷ್ಣನು ಬೆಣ್ಣೆಯನ್ನು ಸ್ವೀಕರಿಸಿದ ತೆರದಿ ಈ ಹೊಸ ಹವಿಸ್ಸನ್ನು ಭುಜಿಸುವ ಸೊಬಗನ್ನು ಹೊಂದಿದ, **ಮಾಲಿರುಂಶೋಲೈ ಎನ್ದಾಯ್** -

---

(೧) ಪೆರಿಯಾಳ್ವಾರ್ ತಿರುಮೊಳಿ ೫. ೩. ೩.

**ಮಾಲಿರುಂಜೋಲೆ** ಎಂಬ ದಿವ್ಯದೇಶದಲ್ಲಿ ಬಿಜಮಾಡಿಸಿರುವ ಎನ್ನಪ್ಪನೇ, **ಉನಕ್ಕು** - ಶೇಷಿಯಾದ ನಿನಗೆ, **ಪಣಿಶೆಯ್‌ದು** - ಶೇಷಭೂತನಾದ **ನಾನು** ನಿತ್ಯ ಕೈಙ್ಕರ್ಯವನ್ನು ಮಾಡುವಹರಿಂದ, **ಇರಕ್ಕುವ್** - ನೀನಲ್ಲದೆ **ಅಚಿತ್ಪ್ರಾ**ಯನಾಗಿರುವ ನಾನು "**ಸಂತಮೇನಂ ತತೋವಿದುಃ** ಎಂದು ಹೇಳಿರುವಹಾಗೆ ಸತ್ತೆಯನ್ನುಹೊಂದಿ, **ತವಮುಡೈಯೇನ್**-ಅಂತಹ "**ಕಿಂಕರತ್ವಾಧಿ ರಾಜ್ಯಂ**" ಎಂದು ಹೇಳಿರುವಹಾಗೆ ಕೈಙ್ಕರ್ಯ ಸಾಮ್ರಾಜ್ಯವನ್ನು ಹೊಂದುವ ಸುಕೃತವನ್ನು ನಿನ್ನ ಅನುಗ್ರಹದಿಂದ ಹೊಂದಬೇಕೆಂದಿರುವೆನು; **ಇನಿ** - ಹೀಗಿರುವಾಗ ಇನ್ನುಮೇಲೆ, **ಪ್ರೋಯ್** - ಆಶ್ರಿತ ವತ್ಸಲನಾಯ್ ಶರಣಾಗತರ ಸಂರಕ್ಷಣೆಯಲ್ಲಿ ಬದ್ಧಾದರನಾಗಿರುವ ನಿನ್ನನ್ನನಾದರಣೆಮಾಡಿ ಅನ್ಯತ್ರಹೋಗಿ, **ಒರುವನ್ ತನಕ್ಕು**-ನಮ್ಮಹಾಗೆ ಜೀವಕೋಟಿಗೆ ಸೇರಿ, ನಮಗಿಂತ ಸ್ವಲ್ಪಹೆಚ್ಚು ಅಧಿಕಾರವನ್ನು ಸ್ವಾಮಿ ಕೃಪೆಯಿಂದ ಹೊಂದಿ ಅಲ್ಪಾಸ್ಥಿರ ಫಲಪ್ರದರಾದ ಬ್ರಹ್ಮರುದ್ರೇಂದ್ರಾದಿಗಳಲ್ಲಿ ಒಬ್ಬನನ್ನು, **ಪಣಿನ್ದು** - ನಿನ್ನ ಪಾದದಲ್ಲೇ ಇಡಲು ಯೋಗ್ಯವಾದ ತಲೆಯನ್ನು ಅಂತವರಿಗೆ ಬಾಗಿಸಿ, **ಕಡೈತ್ತಲೈ** - ನಿನ್ನ ಬಾಗಿಲು ಕಾಯುವದನ್ನು ಬಿಟ್ಟು, ಅವರ ನಿವಾಸದ ಕೊನೆಯ ಬಾಗಲಲ್ಲಿ, **ನಿರ್ಕ್ಕ**-ಕೈಜೋಡಿಸಿ ನಿಂತಿರುವದು **ನಿನ್‌ಶಾಯ್ಕ್ಕು**-ನಿನ್ನದಿವ್ಯ ತೇಜಸ್ಸಿಗೆ, **ಅಳಿವುಕಂಡಾಯ್**-ಹಾನಿಕರವಾದುದಲ್ಲವೇ ಯಾವಾಗ ನಿನ್ನ ಸ್ವರೂಪಕ್ಕೆ ಹಾನಿ ಉಂಟುಮಾಡುವಹಾಗೆ ಮಾಡಿಕೊಂಡನೋ ; ಆಗ ನನ್ನಸ್ವರೂಪವೂ ಹಾಳೇ ಆಯಿತು ಎಂಬ ಭಾವವೂ ಸೂಚಿತವು. ಪ್ರಥಮತಃ ನಿನಗೆ ನಾನು ದಾಸನು ಎಂಬ ಜ್ಞಾನಬೇಕು, ಅನಂತರ ದಾಸನಿಗೆ ಉಚಿತವಾದ ವೃತ್ತಿಯನ್ನವಲಂಬಿಸುವದರಲ್ಲಿ ಆಶೆಯುಂಟಾಗಬೇಕು, ಆದುದರಿಂದ ತನ್ನ ಶೇಷಿಗೆ ತಾನು ಕೈಙ್ಕರ್ಯಮಾಡುವದೇ ತನಗೆ ಸತ್ತೆಯನ್ನೀಯುವಂತಾದ್ದು, ಅದಿಲ್ಲದಿದ್ದರೆ ತನ್ನ ಆತ್ಮೋಜ್ಜೀವನಕ್ಕೆ ಮಾರ್ಗವಿಲ್ಲವೆಂಬ ಸ್ಥಿರಪ್ರಜ್ಞೆಯುಂಟಾಗಬೇಕು. ಇಂತಹ ಜ್ಞಾನವುಳ್ಳ ನಾನು ಅನ್ಯದೇವತೆಗಳ ಕಾಲಿಗೆ ಬಿದ್ದು ಅವರ ಬಾಗಿಲಕಾದು ನನ್ನ ಸ್ವರೂಪವನ್ನು ಹಾಳುಮಾಡಿಕೊಂಡು, ನಿನ್ನ ಮಹಿಮೆಗೆ ಕುಂದಕವಾಗುವ ಹಾಗೆ ಎಂದಿಗಾದರೂ ಮಾಡುವೆನೇ ಎಂಬುದು ಆಳ್ವಾರ್ರವರ ತಾತ್ಪರ್ಯವು. ಇದರಿಂದ ಅನ್ಯಾಭಿಗಮನವು ಪ್ರಪನ್ನನ ಸ್ವರೂಪಕ್ಕೆ ವಿರುದ್ಧವೆಂಬುದು ಹೇಳಲ್ಪಟ್ಟಿತು

೨. ಪ್ರಪನ್ನನಿಗೆ ಇತರ ಐಹಿಕೇಚ್ಛೆಯಿಂದ ಪ್ರವರ್ತಿಯು ಕೂಡದು ; **ಎನ್ನು ಮಿಡತ್ತೈಯುಮ್** - ಎನ್ನುವ ಸಂದರ್ಭವನ್ನು (೨) **ಕೂರೈ** - ವಸ್ತ್ರವು, **ಶೋರು** - ಅನ್ನವು, ಕೂರೈ ಶೋರು ಎಂಬುದನ್ನು ಬಟ್ಟೆ ಮತ್ತು ಅನ್ನವನ್ನು ಬೋಧಿಸುವ ನಿಕೃಷ್ಟವಾಚಕ ಶಬ್ದಗಳ, **ಇವೈ**-ಇವುಗಳನ್ನು, **ವೇಣ್ಡುವದಿಲ್ಲೈ** - ಅಪೇಕ್ಷಿಸುವದಿಲ್ಲವು, ಏಕೆಂದರೆ ಇವು ಜನ್ಮಕಾಲದಲ್ಲೇ ಪ್ರಾರಬ್ಧ

**೨. ಅನ್ಯಾರ್ಥ ಪ್ರವೃತ್ತಿ ಯಾಗಾದೆನ್ನು ಮಿಡತ್ತೈಯುಮ್ (೨) "ಕೂರೈ ಶೋರಿನ್ನೈ ವೇಣ್ಡುವದಿಲ್ಲೈ" ಎನ್ರುರುಳಿಚ್ಚೆಯ್‌ದಾರ್.**

---

ಕರ್ಮಾನುಗುಣವಾಗಿ ಸ್ವಾಮಿ ಸಙ್ಕಲ್ಪಾನುಸಾರವಾಗಿ ಏರ್ಪಟ್ಟವಾದುದರಿಂದ ಅಪೇಕ್ಷಿಸುವದಿಲ್ಲನೆಂಬ ಭಾವವು; ಪೂರಾ ಪಾಶುರವು ಯಾವುದೆಂದರೆ:—"**ನೆಡುಮೈಯಾಲು ಲಗೇಳು ಮಳನ್ದಾಯ್ ನಿನ್ಮಲಾ ನೆಡಿಯಾ ಯಡಿಯೇನ್ನೈ। ಕ್ಕುಡಿಮೈ ಕೊಳ್ವದರ್ಕ್ಕು ಯುರನೇಣ್ಡು ಕೂರೈ ಶೋರಿನ್ನೈ ವೇಣ್ಡುವದಿಲ್ಲೈ। ಅಡಿನು ಯೆನ್ನುಮುಕೊಕ್ಕೆಯಿನ್ನೈಯಾಲೇ ಯುಙ್ಙಙ್ಗೇ ಯುವೈಪೋವರುಙ್ಗಣ್ಣಾಯ್। ಕೊಡುಮೈ ಕಂಸನ್ನೈ ಕೊನ್ರು ನಿನ್ರುದೈ ಕೋತ್ತವನ್ರುಳೈ ಕೋಳ್ವಿಡುತ್ತನೆ**॥೪॥ ಇದರರ್ಥವು. **ನೆಡುಮೈಯಾಲ್ ಉಲಗೇಳುಂ ಅಳನ್ದಾಯ್** - ಪರಿಚ್ಛೇದ್ಯವಾಗಿ ವ್ಯಾಪಿಸಿ ತ್ರಿವಿಕ್ರಮನಾಗಿ, ಸಮಸ್ತ **ಲೋ**ಕವನ್ನು ಅಳೆದಿರುತ್ತೀಯೇ, **ಬಲಿ**ಯ ಎದುರಿಗೆ ವಾಮನನಾಗಿ ತನ್ನ ಮೂರು ಹೆಜ್ಜೆಯ ಭೂಮಿಯನ್ನು ನೀನು ಪ್ರಾರ್ಥಿಸಬಹುದು; ಅದು ಅನ್ಯಾರ್ಥ ಪ್ರವೃತ್ತಿಯಾಗಲಿಲ್ಲವೋ ಎಂದರೆ, **ನಿನ್ಮಲಾ** - ಹೀಗೆ ವಂಚಿಸಿ ಬಲಿಯಿಂದ ಮೂರು ಹೆಜ್ಜೆಯ ನೆಲವನ್ನು ಪಡೆವುದು ದೋಷವೋ ಎಂದರೆ ಸ್ವಪ್ರಯೋಜನ ವಿಲ್ಲವೆ ಪರಪ್ರಯೋಜನಕ್ಕಾಗಿಯೇ ಮಾಡಿದುದರಿಂದ ದೋಷರಹಿತನಾದವನು, ಅದೂ ಅಲ್ಲದೆ ತನ್ನ ಪವಿತ್ರಗಳಾದ ಪಾದಗಳಿಂದ ಎಲ್ಲರನ್ನೂ ಪಾವನಮಾಡಿದುದರಿಂದಲಾಗಲಿ ನಿನ್ಮಲಾ; ಹೀಗೆ ಎಲ್ಲವನ್ನೂ ಆಕ್ರಮಿಸಿ ಎಲ್ಲವೂ ನಿನ್ನ ಪಾದದ ನೆರಳಿನಲ್ಲಿರುವಹಾಗೆ ಮಾಡಿಕೊಂಡಿದುದರಿಂದ ಸರ್ವಕ್ಕೂ ಧಾರಕ ಪೋಷಕ ಭೋಗ್ಯನಾಗಿರುವದರಿಂದ, **ನೆಡಿಯಾಯ್** - ಆಶ್ರಿತರಿಗೆ ಮಾತ್ರ ಸರ್ವಾಧಿಕನಾಗಿ, ಸರ್ವಾಧಿಕನು ಹೇಗೆಂದರೆ ಸ್ವರೂಪ ರೂಪಗುಣ ವಿಭವೈಶ್ವರ್ಯಾದಿಗಳಿಂದ ಸರ್ವಾಧಿಕನಾಗಿ, **ಕೊಡುಮೈ ಕಞ್ಜನೈ ಕೊನ್ರು** - ತಂಗಿಯನ್ನೇ ಕೊಲ್ಲಲು ಯತ್ನಿಸಿ ಮತ್ತು ಆಕೆಯ ಮಕ್ಕಳುಗಳಲ್ಲಿ ಆರು ಮಕ್ಕಳನ್ನು ಕೊಂದು, ಹೀಗೆ ಕ್ರೂರ ಪಾಪಿಷ್ಠನಾದ ಕಂಸನನ್ನು ಕೊಂದು **ನಿನ್ರಾದೈ** - ನಿನ್ನ ತಂದೆಯಾದ ವಸುದೇವನ **ಕೋತ್ತವರ್ ತಳೈ ಕೊಳ್** - ಬೀಗಹಾಕಲ್ಪಟ್ಟ ಬಲಿಷ್ಠವಾದ ಬೇಡಿಯ ಬೀಗವನ್ನು, **ವಿಡುತ್ತಾನೇ** - ತೆಗದು ಹಾಕಿದವನೇ. ಹೀಗೆ ಕ್ರೂರನಾಗಿ ಅತಿ ಬಲಿಷ್ಠನಾಗಿರುವ ಕಂಸನನ್ನು ಕೊಂದವನಿಗೆ, ಈ ನನ್ನ ಕ್ರೂರಗಳಾದ ಕಾಮಕ್ರೋಧಗಳೆಂಬ ಶತ್ರುಗಳನ್ನು ಕೊಂದು, ಪ್ರಕೃತಿಯಿಂದುಂಟಾದ ಸಂಸಾರವೆಂಬ

---

**(೨) ಪರಿಯಾಳ್ವಾರ್ ತಿರುಮೊಳಿ ೫. ೧. ೪.**

ಬೇಡಿಯನ್ನು ಭೇದಿಸುವದು ನಿನಗೊಂದು ಕಷ್ಟವೇ ಎಂಬ ಭಾವವು ಸೂಚಿತವು ಕಂಸನಾದರೋ ನಿನಗೆ ಶತ್ರುಸ್ಥಾನದಲ್ಲಿದ್ದವನು, ನಾನಾದರೋ, **ಅಡಿಯೇನ್ಯೈ** - ನಿನಗೆ ಸರ್ವ ವಿಧದಲ್ಲೂ ಪರತಂತ್ರನಾಗಿ ಶೇಷಭಾವದಿಂದ ದಾಸನಾಗಿರುವ ನನ್ನನ್ನು, **ಅಡಿಮೈ ಕೊಳ್ವದರ್ಕೆ** - ಅಂತಹ ದಾಸಭೂತನ ಅಲ್ಪ ಪ್ರಾರ್ಥನೆಯಾಗಿ ನಾನು ಮಾಡುವ ಅಲ್ಪ ಕೈಂಕರ್ಯವನ್ನು ಪರಿಗ್ರಹಿಸುವದರಲ್ಲಿ. ಶೇಷಭೂತನ ಸ್ವರೂಪಾನುರೂಪವಾದ ವೃತ್ತಿಯನ್ನು ಸ್ವೀಕರಿಸುವದರಲ್ಲಿ, **ಐಯುರವೇಣ್ಡಾ** - ನೀನು ಸ್ವಲ್ಪವೂ ಸಂದೇಹ ಪಡಬೇಡ; ಹೀಗೆ ನನ್ನ ಅಲ್ಪ ಕೈಂಕರ್ಯವನ್ನು ಸ್ವೀಕರಿಸಿದರೇನೇ, ನನಗೆ ಅನುಗ್ರಹವುಂಟಾಗಿ ನನಗೆ ಅದು ಧಾರಕ ಪೋಷಕವಾಗಿ ನನಗೆ ಸತ್ತಾದಾಯಕವಾಗುತ್ತದೆ, ಆ ಕೈಂಕರ್ಯವೇ ಸ್ವಯಂ ಪ್ರಯೋಜನವೇ ವಿನಾ ಇನ್ನು ಯಾವ ಐಹಿಕಾದಿ ಪುರುಷಾರ್ಥಕ್ಕಾಗಲಿ ನಾನು ನಿನ್ನನ್ನೇನಾದರೂ ತೊಂದರೆ ಮಾಡುತ್ತಾನೋ ಎಂದು ಸಂದೇಹ ಪಡಬೇಡ ಎಂಬ ಭಾವವು; "**ನತೇ ದುಃಖಂ ಕರಿಷ್ಯಾಮಿ ನಿವಸಂತೀ ತ್ವಯಾ ಸಹ**" ಎಂದು ಸೀತೆಯು ಶ್ರೀರಾಮನಲ್ಲಿ ಅರಿಕೆ ಮಾಡಿಕೊಂಡಹಾಗೆ, ಶ್ರೀ ಆಳ್ವಾರವರೂ ಪರಮಾತ್ಮನಲ್ಲಿ ಅರಿಕೆ ಮಾಡಿಕೊಳ್ಳುತ್ತಾರೆ, ಅದನ್ನೇ ಮುಂದೆ ವ್ಯಕ್ತಪಡಿಸುತ್ತಾರೆ, **ಕೂರುಶೋರಿವ್ಯೈ** - ಅನ್ನ ಬಟ್ಟೆ ಇವೇ ಮೊದಲಾದ ಐಹಿಕಗಳನ್ನು, **ವೇಣ್ಡುವದಿಲ್ಲೈ**-ಅಪೇಕ್ಷಿಸುವದಿಲ್ಲವು; ಅದೇನು ಹಾಗೆ ಎಂದರೆ ನಿನಗೆ ಮಾಡುವ ಕೈಂಕರ್ಯ ಸಾಮ್ರಾಜ್ಯದ ಮುಂದೆ, ಯಾವ ಇತರ ಪುರುಷಾರ್ಥಗಳೂ ಇಲ್ಲವು. ದೇಹಕ್ಕಿಂತ ಆತ್ಮ ವಿಲಕ್ಷಣನಾದುದರಿಂದ, ಶಬ್ದಾದಿಗಳು ಪುರುಷಾರ್ಥಗಳಾಗಲಾರವು. ಸ್ವಾಮಿಗೆ ಪರತಂತ್ರನಾಗುವದರಿಂದ ಸ್ವಾನುಭವವು ಪುರುಷಾರ್ಥವಲ್ಲವು; ಜೀವಾತ್ಮ ಸ್ವರೂಪವು ನಿತ್ಯವಾಗಿರುವದರಿಂದ, ಸ್ವರೂಪನಾಶವು ಪುರುಷಾರ್ಥವಲ್ಲವು. ಜ್ಞಾನಗುಣಕನಾಗಿರುವದರಿಂದ ಗುಣನಾಶವು ಪುರುಷಾರ್ಥವಾಗುವದಿಲ್ಲವು. ಹಾಗಾದರೆ ಪುರುಷಾರ್ಥವು ಏನು ಎಂದರೆ ಶೇಷಭೂತನಾದ ಈತನು ಪರಮಾತ್ಮನಿಗೆ ನಿತ್ಯಕೈಂಕರ್ಯವನ್ನು ಮಾಡುವಹಾಗೆ ಅನುಗ್ರಹವೇ ಪುರುಷಾರ್ಥವು; ಅಂತಹ ಪುರುಷಾರ್ಥವನ್ನು ಅನುಗ್ರಹಿಸು ಎಂದು ಬೇಡುತ್ತಾರೆ. **ಅಡಿಮೈಎನ್ರಾಲ್** - ದಾಸ್ಯವೆನ್ನುವ, ಆ-ಅಂತಹ, **ಕೋಯಿನ್ಮೈಯಾಲೇ** - ಸಾಮ್ರಾಜ್ಯ ಪದವಿಯನ್ನು ಹೊಂದುವದರಿಂದ, **ಅನ್ನ**-ನಿರ್ವಾಹವಿಲ್ಲದೆ ಈ ಅನ್ನ ಬಟ್ಟೆ ಮೊದಲಾದವು, ಅವರ ಮಹಿಮೆಯಿಂದ, **ಅಜ್ಗಜ್ಗೇ** - ಅಲ್ಲಲ್ಲೇ, **ಪೋದರುಮ್ ಕೆಂಡಾಯ್** - ಬರುತ್ತದೆ ಅಲ್ಲವೇ, ಇದರಿಂದ ಐಹಿಕಗಳಲ್ಲಿ ಪ್ರಪನ್ನನಿಗೆ ಈ ಪರಿ ಅಭಿಲಾಷೆಯು ಕೂಡದು. "**ಪರಿತ್ಯಕ್ತಾ ಮಯಾಲಂಕಾ ಮಿತ್ರಾಣಿಚ ಧನಾನಿಚ**" ಎಂದೂ, **ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ** ಎಂದೂ, ವಿಭೀಷ

**೩. ಅನ್ಯ ಯಜನ ಮಾಗಾದೆನ್ನು ಮಿಡತ್ತೈ (೩) "ಉನ್ನಿತ್ತು ಮತ್ತೊರು ದೆಯ್‌ವಮ್ ತೊಳಾಳವನ್ನೈ ಯಲ್ಲಾಲ್" ಎನ್ರುಮ್,**

---

ಖನು ಹೇಳಿದಹಾಗೆ ಎಲ್ಲಾ ಐಹಿಕಗಳೂ ತುಚ್ಛವೂ ಅಲ್ಲದೆ ಸಾಕ್ಷಾದ್ದುಂಖಕಗಳು; ಆದುದರಿಂದ ಐಹಿಕಗಳು ಅನುಕೂಲವೇ ಆಗಲಿ ಪ್ರತಿಕೂಲವೇ ಆಗಲಿ, ಅವುಗಳಲ್ಲಿ ಮನಸ್ಸನ್ನಿಡಕೂಡದು. ಸೀತೆಯು ಹಾಗೆ "**ನೈಷಾಪಶ್ಯತಿ ರಾಕ್ಷಸ್ಯೋ ನೈತಾನ್ ಪುಷ್ಪಫಲದ್ರುಮಾನ್**" (ರಾ. ಸುಂ. ೧೬. ೨೫) ಪ್ರತಿಕೂಲರಾದ ರಾಕ್ಷಸೀಯರನ್ನೂ ಆಕೆಯು ನೋಡುತ್ತಿರಲಿಲ್ಲವು; ಅನುಕೂಲಗಳಾದ ಮನೋಹರಗಳಾದ ಪುಷ್ಪ ಫಲಗಳುಳ್ಳ ವೃಕ್ಷಗಳನ್ನು ಕಣ್ಣೆತ್ತಿ ನೋಡಲಿಲ್ಲವು; ಇನ್ನು ಯಾರನ್ನು ಯಾವಾಗಲೂ ಮನಸಾ ನೋಡುತ್ತಿದ್ದಳೆಂದರೆ "**ಏಕಸ್ಥಹೃದಯಾನೂನಂ ರಾಮಮೇವಾನುಪಶ್ಯತಿ**" ಶ್ರೀರಾಮನನ್ನೇ ಚಿಂತಿಸುತ್ತಾ ನೋಡುತ್ತಿದ್ದಳು ಎಂಬುದು ಹೇಗೋ ಹಾಗೆಯೇ ಪ್ರಪನ್ನನೂ ಇರತಕ್ಕದ್ದೆಂಬುದು ಇದರಿಂದ ಸೂಚಿತವು.

೩. ಅನ್ಯದೇವತಾರಾಧನೆಯು ಕೂಡದು, ಎಂದರೆ ಸ್ವರೂಪವಿರುದ್ಧವು ಎನ್ನುವ ಸಂದರ್ಭವನ್ನು ನಮ್ಮಾಳ್ವಾರ್ರವರು(೩) "**ಉನ್ನಿತ್ತು ಮತ್ತೊರು**" ಎಂಬ ಪಾಶುರದಲ್ಲಿ ಉಪದೇಶಿಸಿರುತ್ತಾರೆಂದು ಹೇಳಿರುತ್ತಾರೆ. **ಪೂರಾ** ಪಾಶುರಕ್ಕೂ ಅವರ ಅರ್ಥಕ್ಕೂ ೬೩೮ನೆಯ ಪುಟ ನೋಡಿ. ಇಲ್ಲಿ ಪತಿವ್ರತಾ ಧರ್ಮವನ್ನು ಕೈಕೊಂಡಿರುವ ಇವಳು, ಶ್ರೀಕೃಷ್ಣನ ಪಾದಾರವಿಂದದಲ್ಲಿ ನೀವುಗಳು ಐಕಾಂತ್ಯಾನುಸಂಧಾನಮಾಡಿರಿ; ಅವನೇ ನಮಗೆಲ್ಲಾ ರಕ್ಷಕನೆಂಬ ನಂಬಿಕೆಯಿಂದ ಅನ್ಯದೇವತಾ ಸಂಬಂಧವಿಲ್ಲದಹಾಗೆ ಸ್ತೋತ್ರಮಾಡಿರಿ; ಅದರಿಂದ ಆ ಪತಿವ್ರತೆಗೆ ಶಾಂತಿಯುಂಟಾಗುತ್ತದೆಂದು ಹೇಳುತ್ತಾಳೆ—**ಅವನ್ನೈ ಯಲ್ಲಾಲ್** "**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ**" ಎಂದೂ "**ಅಭಯಂ ಸರ್ವಭೂತೇಭ್ಯೋ ದದಾಮಿ**" ಎಂದೂ ಕಂಕಣ ಬದ್ಧನಾಗಿರುವ ಮಹೋದಾರನನು ಬಿಟ್ಟು, ಈಕೆಯು, ಮತ್ತೊರು **ದೇಯ್‌ವಮ್** - ನಮ್ಮಹಾಗೆಯೇ ಜೀವಕೋಟಿಗೆ ಸೇರಿ **ಪ್ರಜಾಪತಿ ಪಶುಪತಿ** ಎಂದು ಸ್ವಾಮಿಯು ಕೊಟ್ಟ ನಾಮಗಳನ್ನು ಧರಿಸಿರುವ ನಮ್ಮಹಾಗೆ ಬದ್ಧರಾದ ದೇವತೆಗಳು ಯಾರನ್ನೂ, **ತೊಳಾಳ್**-ಸ್ತೋತ್ರಮಾಡಲಾರಳು ಎಂದು ಹೇಳಿರುವದರಿಂದ, ಪ್ರಪನ್ನನಿಗೆ ಬೇಕಾದ ಪತಿವ್ರತಾ ಧರ್ಮಕ್ಕೆ ಸಮಾನವಾದ ಅನನ್ಯ ದೈವತ್ವವು ಪ್ರಕಟಿಸಲ್ಪಟ್ಟಿತು. ಪತಿವ್ರತಾ

---

(೩) ತಿರು. ೪. ೬. ೧೦.

## (೪)"ತೇವನೆಮ್ಬೆರುಮಾನಕ್ಕಲ್ಲಾಲ್ಪೂವುಮ್ ಪೂಶನ್ನೈಯುಮ್ ತಗುಮೇ"

ಶಿರೋಮಣಿಯಾದ ಸೀತೆಯು ಇದನ್ನು ಪ್ರಕಟಿಸಿರುತ್ತಾಳೆ :—"ಅನನ್ಯದೈವತ್ವ ಮಿಯಂ ಕ್ಷಮಾಚ ಭೂಮೌಚ ಶಯ್ಯಾ ನಿಯಮಶ್ಚ ಧರ್ಮಃ" ಹೀಗಿರುವ ದೀಗ ಪತಿವ್ರತಾತ್ವವು ಪ್ರಪನ್ನನೂ ಹಾಗೆಯೇ ಇರಬೇಕು; ಆತನಲ್ಲದೆ ಇನ್ನು ಯಾರನ್ನೂ ಸ್ಮರಿಸಕೂಡದು; ಇಯಂ ಕ್ಷಮಾಚ - ತತ್ಪ್ರಾಪ್ತಿಗೆ ಮುಂಚಿತ ವಾಗಿ ಪ್ರಾರಬ್ಧಾನುಗುಣವಾಗಿ ಎಷ್ಟು ಕ್ಲೇಶ ಉಂಟಾದರೂ ಸೀತೆಯು ರಾಕ್ಷಸಿ ಗಳ ಬಾಧೆಯನ್ನು ಸಹಿಸಿದಹಾಗೆ, ಇಯಂ ಕ್ಷಮಾಚ ವಿರಬೇಕು; ಪ್ರಾರಬ್ಧಾ ನುಗುಣವಾಗಿ ಈ ಲೋಕದ ಸುಖಕ್ಕೆ ಮನಸ್ಸನ್ನು ಕೂಡ ಕೊಡದೆ, ಒಂದುವೇಳೆ ಭೂಮೌಚಶಯ್ಯಾ ತತ್ಪ್ರಾಪ್ತಿಯವರೆಗೂ ಆದರೂ, ಇಷ್ಟವಾಗಿಯೇ ಭಾವಿಸ ತಕ್ಕದ್ದು; ನಿಯಮಶ್ಚ ಧರ್ಮಃ-ಶಾಸ್ತ್ರಚೋದಿತಮಾರ್ಗಗಳಲ್ಲಿ ನಿತ್ಯನೈಮಿತ್ತಿಕ ಗಳನುಷ್ಠಾನವು; ಇವೆಲ್ಲಾ ಧರ್ಮಗಳೂ ಪತಿವ್ರತೆಯ ಹಾಗೆ ಇರತಕ್ಕದ್ದೆಂಬುದು ಸೂಚಿತವು" ಎನ್ನು - ಎಂಬದಾಗಿಯೂ, ಮತ್ತು

೪. ಈ ಶ್ಲೋಕದಿಂದ ಪುಷ್ಪಾರ್ಚನೆ ಮೊದಲಾದ ಸಕಲಾರಾಧನೆಗಳೂ ಬ್ರಹ್ಮರುದ್ರಾದಿಗಳುಳ್ಳ ದೇವಲೋಕಕ್ಕೂ, ಮನುಷ್ಯಾದಿಗಳುಳ್ಳ ಇಹಲೋಕವೆಲ್ಲ ಕ್ಕೂ ಕಾರಣಭೂತನಾದ ಸರ್ವೇಶ್ವರನಿಗಲ್ಲದೆ ಇನ್ನು ಯಾರಿಗೂ ಸಲ್ಲದೆಂದು ಹೇಳುತ್ತಾರೆ. ಈ ಪೂರಾ ಪಾಶುರವು ಯಾವುದೆಂದರೆ :—"ತೇವು ಮೆಪ್ಪೊರುಳು ಮ್ಪಡೈಕ್ಕ ಪ್ಪೂವಿಲ್‌ನಾನ್ಮುಗನ್ನೈ ಪಡೈತ್ತ । ತೇವನೆಮ್ಬೆರು ಮಾನುಕ್ಕ ಲ್ಲಾಲ್, ಪೂವುಂಪೂಶನ್ನೈಯುಮ್ ತಗುಮೇ" ತೇವುಮ್ - ರುದ್ರಾದಿಗ ಳಿಂದ ಸೇರಿದ ಸಮಸ್ತ ದೇವಜಾತಿಯನ್ನೂ, ಎಪ್ಪೊರುಳುಮ್ - ಮನುಷ್ಯಾದಿ ಸಕಲಗಳಾದ ಇಹಲೋಕ ಪದಾರ್ಥಗಳನ್ನೂ, ಪಡೈಕ್ಕ - ಸೃಷ್ಟಿಸುವದಕ್ಕಾಗಿ, ಪೂವಿಲ್ ನಾನ್ಮುಕನ್ನೈ ಪಡೈತ್ತ - ತನ್ನ ನಾಭೀಕಮಲದಲ್ಲಿ ಚತುರ್ಮುಖ ಬ್ರಹ್ಮನನ್ನೇ ಉಂಟುಮಾಡಿದ, ದೇವರ್ ಎಂಬೆರುಮಾನಕ್ಕು ಅಲ್ಲಾಲ್ - ಲೀಲಾಸಕ್ತನಾದ ಅಥವಾ ದೇದೀಪ್ಯಮಾನ ತೇಜೋಮಯನಾದ ಸರ್ವೇಶ್ವರನಿಗ ಲ್ಲದೆ ಇನ್ನು ಯಾವ ಅನ್ಯದೇವತೆಗಾಗಲಿ, ಪೂವುಮ್ ಪೂಶನ್ನೈಯುಮ್ - ಪುಷ್ಪಾರ್ಚನೆಯು ಆರಾಧನೆಯೂ ಸಹ, ತಗುಮೋ - ಸಲ್ಲುತ್ತದೆಯೇ. ಶ್ರೀ ಕೃಷ್ಣನಿಗೆ ಪೂಜೆಯು ಸಲ್ಲತಕ್ಕದ್ದೇ ವಿನಾ ಶಿಶುಪಾಲನಿಗೆ ತಗುಮೇ ಅಥವಾ ಬ್ರಹ್ಮರುದ್ರಾದಿಗಳಿಗೂ ಕಾರಣ ಭೂತನಾದವನಿಗೆ ಸರಿಯೇ ವಿನಾ ಆತನಿಂದುಂ

(೪) ತಿರು. ೨. ೨. ೪

ಎನ್ರುವನ್, (೫) "ಈನ್ರೋಳಿರುಕ್ಕ ಮಣ್ಯೆ ನೀರಾಟ್ಟಿ" ಎನ್ರುವನ್

ಟಾದ ಬ್ರಹ್ಮರುದ್ರಾದಿಗಳಿಗೆ ಸರಿಯೇ ಎಂಬ ಬಾವವು ಭೀಷ್ಮರು ರಾಜಸೂಯ ಸಭೆಯಲ್ಲಿ ಹೇಳುತ್ತಾರೆ:—"**ಕೋನಾರ್ಹಂ ಮನ್ಯತೇ ಕೃಷ್ಣಂ ಕೋವಾಪ್ಯೇನಂ ನ ಪೂಜಯೇತ್**" (೪. ೧. ೩೩.) ಯಾರುತಾನೇ ಕೃಷ್ಣನು ಪೂಜೆಗೆ ಅರ್ಹನಲ್ಲವೆಂದು ಹೇಳುವರು? ಯಾರು ತಾನೇ ಆತನನ್ನು ಪೂಜಿಸದೇ ಇರುವರು? ಎಂದು ಹೇಳಿ, ಕೃಷ್ಣನೇ ಪೂಜೆಗೆ ಅರ್ಹನೇ ವಿನಾ ಇತರರಲ್ಲವೆಂದು ಸ್ಥಾಪಿಸಿರುತ್ತಾರೆ; ಅದೇನು ಹಾಗೆ ಎಂದರೆ ಹೇಳುತ್ತಾರೆ:—"**ಅಭೂತ ಸಂಪ್ಲವೇಪ್ರಾಪ್ತೇ ಪ್ರಲೀನೇ ಪ್ರಕೃತೌ ಮಹಾನ್। ಏಕಸ್ತಿಷ್ಠತಿ ಸರ್ವಾತ್ಮಾ ಸತು ನಾರಾಯಣ ಪ್ರಭುಃ**" ॥ (ಸಭಾ ೪೦. ೪೨. ೨೫.) "ಪ್ರಳಯದಲ್ಲಿ ಎಲ್ಲಾ ಭೂತಗಳೂ ಸೂಕ್ಷ್ಮದೆಶೆಯಲ್ಲಿ ಲೀನವಾದಾಗ ಒಬ್ಬನಲ್ಲವೇ ಆ ಸೂಕ್ಷ್ಮದೆಶೆಯಲ್ಲಿರುವ ಎಲ್ಲಕ್ಕೂ ಆತ್ಮವಾಗಿ ನಿಂತಿರುವ ಪ್ರಭುವಾದ ನಾರಾಯಣನು, ಅಂತವನೇ ಅವತಾರಿಯಾಗಿ ಶ್ರೀಕೃಷ್ಣನಾಗಿರುವಾಗ ಆತನಿಗಲ್ಲದೆ ಇನ್ನು ಯಾರಿಗೆ ಪೂಜೆಯು ಅರ್ಹವೆಂಬ ತಾತ್ಪರ್ಯವು" ಎನ್ರುವನ್ - ಎಂಬದಾಗಿಯೂ, ಮತ್ತು (೫) **ಈನ್ರೋಳಿರುಕ್ಕ**-ಶುಶ್ರೂಷೆ ಮಾಡಲು ಯೋಗ್ಯಳಾಗಿ "**ಮಾತೃದೇವೋ ಭವ**" ಎಂದು ಶ್ರುತಿಯು ಹೇಳುವ ಹಾಗೆ ದೇವತಾ ಸದೃಶಳಾದ ಹೆತ್ತತಾಯಿಯಿರುವಾಗಲೇ, **ಮಣ್ಯೆ ನೀರಾಟ್ಟಿ** - ಮರದಿಂದ ಮಾಡಿದುದಕ್ಕೆ ಅಭಿಷೇಕ ಮಾಡಿಸಿ, **ಎನ್ರುವನ್** - ಎಂಬದಾಗಿಯೂ ; **ಪೂರಾ** ಪಾಶುರವು ಯಾವುದೆಂದರೆ :—

**ಓ ಓ ಉಲಗಿನತಾಯಲ್‌ವೇ, ಈನ್ರೋಳಿರುಕ್ಕಮಣ್ಯೆ, ನೀರಾಟ್ಟಿ, ಪಡೈತ್ತಿಡನ್ದುಂಡು ಮಿಳ್ನ್ದು ತಾಳಿನ್‌ದು ತೇರ್‌ನ್ದು ಉಲಗಳಿಕ್ಕುಮ್ ಮುದರ್ ಪೆರುಮ್ ಕಡವುಳ್ ನಿರ್ಪ, ಪುಡೈಪ್ಪಲ್ಲದಾನರಿ ದೆಯ್‌ವಮ್ ಪೇಣುದಲ್, ತನದು ಪುಲ್ಲರಿವಾಣ್ಮೈ ಪೊರುನ್ದಕ್ಕಾಟ್ಟಿ ಕ್ಕೊಳ್ವನ ಮ್ಮದಲಾ ವಲ್ಲನ ಮುಯಲುಮ್ ಇನ್ನೈಯ ಶೆಯ್‌ಗೈಯಿನ್ ಪುದನ್ ಪಳಿತ್ತೊನ್ನಾಮಾಯ ಪಿರುವಿಯುಳ್ ನೀಙ್ಗಾಪ್ಪನ್ ಮಾಮಾಯತ್ತ ಮುನ್ದು ಮಾನಳಿರ್‌ನ್ದೇ** ॥

ಅರ್ಥವು :—**ಉಲಗು** - ಲೋಕವನ್ನು, **ಪಡೈತ್ತು** - ಆದಿಯಲ್ಲಿ ಸೃಷ್ಟಿಸಿ, **ಇಡನ್ದು** - ವರಾಹಾವತಾರದಲ್ಲಿ ಅಂಡಭಿತ್ತಿಯಿಂದ ಕೋರೆದಾಡೆಯಿಂದ ಎತ್ತಿ, **ಉಣ್ದು**-ಪ್ರಳಯಕಾಲದಲ್ಲಿ ಎಲ್ಲವನ್ನೂ ನುಂಗಿ ಎಂದರೆ ಸೂಕ್ಷ್ಮದೆಶೆಯಲ್ಲಿ ತನ್ನಲ್ಲಿ

(೫) ತಿರು. ೨. ೨. ೪.

(೬)"ಮತ್ತಿಜ್ಞೋರ್ ಪುದುದ್ದೆಯ್‌ವನ್ ಕೊಣ್ಡುನ್ನೋಣ್ಡೇರ್ ಪೆತ್ತ

ಏಕೀಭವಿಸಿಕೊಂಡು, ಪುಮಿೞ್‌ನ್ದು-ಪುನಃ ಅವಾಂತರ ಸೃಷ್ಟಿದಶೆಯಲ್ಲಿ ಹೊರಗೆ ಹಾಕಿ, ಅಳನ್ದು - ತ್ರಿವಿಕ್ರಮಾವತಾರದಲ್ಲಿ ಲೋಕವನ್ನೆಲ್ಲಾ ಅಳೆದು ಆಕ್ರಮಿಸಿ, ತೇರ್‌ನ್ದು-ಅನಂತರ ರಕ್ಷಣೋಪಾಯವನ್ನು ಚಿಂತಿಸಿ, ಅಳಿಕ್ಕುಮ್ - ರಕ್ಷಿಸುವ, ಮುದಲ್ - ಆದಿಕಾರಣನಾಗಿ, ಪೆರುಂ ಕಡವುಳ್-ಪರದೇವತೆಯಾದ ಶ್ರೀಮನ್ನಾರಾಯಣನು, ನಿರ್ಪ - ಸರ್ವ ಶರಣ್ಯನಾಗಿರುವಾಗ, ಅವನೈ ವಿಟ್ಟು-ಅಂತಹ ಕರುಣಾಸಾಗರನಾಗಿ ಸರ್ವಶಕ್ತನಾಗಿರುವವನನ್ನು ಬಿಟ್ಟು, ಪುಡೈ-ವಿಭೂತಿ ಪ್ರಕರಣಗಳಲ್ಲಿ ಹೇಳಲ್ಪಟ್ಟವನಾಗಿ, ಪಲ-ಕೆಲವು ಪ್ರಕಾರವುಳ್ಳವನಾಗಿ, ತಾನ್- ಸರ್ವೇಶ್ವರನನ್ನೇ ಆಶ್ರಯಿಸಬೇಕಾಗಿರುವ ತಾನೆ, ಅರಿ-ತಿಳಿದ, ದೆಯ್‌ವವ್-ದೇವತೆಗಳನ್ನು, ಪೇಣುದಲ್ - ಆದರಿಸೋಣವು, ತನದು - ತನ್ನ, ಪುಲ್ - ಕ್ಷುದ್ರವಾದ, ಅರಿವು - ಬುದ್ಧಿಯು, ಎಂದರೆ ಅಜ್ಞಾನವು ಎಂಬರ್ಥವು, ಆಣ್ಮೈ ಪೊರನ್ದು ಕಾಟ್ಟ - ದೊಡ್ಡವರ ಮನಸ್ಸಿಗೆ ತಾಕುವಹಾಗೆ ಪ್ರಕಾಶಿಸಿ, ಈನ್ರೋಳ್ - ಹೆತ್ತ ಜನನಿಯು, ಇರುಕ್ಕ - ಬದುಕಿರುವಾಗಲೇ, ಅವಳನ್ನು ಅನಾದರಿಸಿ, ಮಣ್ಣೈ ನೀರಾಟ್ಟಿ - ಒಂದು ಮರದಿಂದ ಮಾಡಿದ ಬೊಂಬೆಗೆ ಅಭಿಷೇಕಾದಿ ಉಪಚಾರಗಳನ್ನು ಮಾಡಿ, ಶೆಯ್‌ಗೈ - ಶುಶ್ರೂಷಾದಿ ಆರಾಧನರೂಪದ ಅನುಷ್ಠಾನವು, ಕೊಲ್ವನ ಮುದಲಾ - ಹಿಂಸೆಯೇ ಮೊದಲಾದ, ಅಲ್ಲನ - ನಿಷಿದ್ಧಗಳಾದ, ಮುಯಲುಮ್ ಇನ್ನೈಯಾ - ಇಂತಹ ಪ್ರಯತ್ನಕ್ಕೆ ಸಮಾನವಾದುದು, ಅಳಿ - ಆ ದೇವತೆಗಳು ಕೊಡುವ ಫಲವಾದರೋ, ತುನ್ಬಿನ್ಪ - ದುಃಖ ಮಿಶ್ರವಾದ ಸುಖವು; ಆದುದರಿಂದ, ಅಂತಹ ಕ್ಷುದ್ರ ದೇವತೆಗಳ ಆಶ್ರಯಣವು, ತೊಲ್ - ಅನಾದಿಯಾಗಿ ಬಂದ, ಮಾ - ಮಹತ್ತಾಗಿ ದುರ್ನಿವಾರವಾದ, ಮಾಯಮ್ - ಆಶ್ಚರ್ಯಕರವಾದ, ಪಿರಿವಿಯುಳ್-ಸಂಸಾರ ದೆಶೆಯಿಂದ, ನೀಜ್ಗಾ-ಬಿಡುಗಡೆಯಿಲ್ಲದೆ, ಪಲ್ - ಅನೇಕ ವಿಧವಾದ, ಮಾ - ದುರ್ನಿವಾರವಾಗಿ ಮಹತ್ತಾದ, ಮಾಯತ್ತು - ಮೋಹಜನಕಗಳಾದ ಶಬ್ದಾದಿ ವಿಷಯಗಳಲ್ಲಿ, ನಳಿರ್‌ನ್ದು - ದುಃಖಿಸಿಕೊಂಡು, ಅಳುನ್ದುಮಾ-ಕೆಟ್ಟುಹೋಗಲು ಕಾರಣವಾಗುತ್ತದೆ, ಉಲಗಿನದು - ಲೋಕದ, ಇಯಲ್ವು - ಸ್ವಭಾವವು, ಓಓ – ಅಹೋ ಎಷ್ಟು ಆಶ್ಚರ್ಯವಾದುದು, ಹೀಗೆ ಸರ್ವ ಶೇಷಿಯಾಗಿ ಪರಮೋದಾರನಾಗಿ ಆಶ್ರಿತ ಸಂರಕ್ಷಣೆಯಲ್ಲಿ ಬದ್ಧಾದರನಾಗಿರುವ ಸರ್ವೇಶ್ವರನನ್ನು ಸರ್ವಕಾಲದಲ್ಲೂ ಆರಾಧನೆ

(೬) ಪೆರಿ. ತಿರು. ೧೧. ೬. ೬.

**ತ್ತಾಯಿರುಕ್ಕ ಮಣ್ಯೈ ವೆನ್ನೀರಾಟ್ಟುತಿರೋ ಮಾಟ್ಟಾಹ ತಗವತ್ತಿರೆ" ಎನ್ರು ವರ್, ಇತ್ಯಾದಿಗಳಾಲೇ ಅರುಳಿಚ್ಚೆಯ್ ದಾರ್ಗಳ್. ಸಪ್ತರ್ಷಿ ಸಂವಾದತ್ತ**

ಮೊದಲಾದವನ್ನು ಸ್ತೋತ್ರಮಾಡುವದನ್ನು ಬಿಟ್ಟು, ಅಸಮರ್ಥರಾಗಿ ಅಚೇತಸಪ್ರಾಯರಾದ ಅನ್ಯದೇವತಾರಾಧನೆಯಲ್ಲಿ ಪ್ರವರ್ತಿಸಿ, ಈ ಸಂಸಾರ ದೆಶೆಯಲ್ಲಿ ದುಃಖಾನುಭವದಲ್ಲೇ ನರಳುವಹಾಗೆ ಅನ್ಯಾಯವಾಗಿ ಮಾಡಿಕೊಳ್ಳುತ್ತಾರೆಯೇ, ಈ ಲೋಕದ ಸ್ವಭಾವವೇ ಹೀಗೆಯೇ, ಎಂಬದಾಗಿ ಶೋಕಿಸುತ್ತಾರೆ. "ಮತ್ತಿಜ್ಞೋರ್" ಇತ್ಯಾದಿ (ಪೆರಿ. ೧೧. ೬. ೬) ಪೇಯಿರುಕ್ಕು ನೆಡುವೆಳ್ಳಮ್ ಪೆರುಮಿಶುಂ ಬಿನ್ ಮಿಹಾಕೊಡಿ ಪ್ಪೆರುಗು ಕಾಲಮ್ । ತಾಯಿರುಕ್ಕುಮ್ ವಣ್ಣಮೇ ಯುಮ್ಮೈತ್ತ ವಯಿಱ್ಱಿರುತ್ತಿ ಯುಯ್ಯಕ್ಕೊಂಡಾರ್ । ಪೋಯಿರುಕ್ಕ ಮಱ್ಱಿಜ್ಞೋರ್ ಪುದುದ್ದೆಯ್ವಮ್ ಕೊಂಡಾಡುಂ ತೊಣ್ಡೇರ್ । ಪೆಱ್ಱ ತಾಯಿರುಕ್ಕ ಮಣ್ಯೈ ವೆನ್ನೀರಾಟ್ಟುದಿರೋ ಮಾಟ್ಟಾದ ತಗವಱ್ಱಿರೇ॥" ಇದರರ್ಥವು ಪೇಯಿರುಕ್ಕುಮ್ ಎನ್ರುಮಿತ್ಯಾದಿಗಳಾಲೇ - ಎಂಬಿವೇ ಮೊದಲಾದ ಪಾಶುರಗಳ ಮೂಲಕ, ಅರುಳಿಚ್ಚೆಯ್ ದಾರ್ಗಳ್ - ಆಳ್ವಾರುಗಳು ಹೇಳಿರುತ್ತಾರೆ. ಮುಂದೆ ಆಳ್ವಾರುಗಳ ದಿವ್ಯ ಸೂಕ್ತಿ ಪ್ರಮಾಣಗಳು ಮಾತ್ರವೇ ಅಲ್ಲದೆ ಅನ್ಯದೇವತಾ ಯಜನವನ್ನು ಮಹರ್ಷಿಯೂ ನಿಂದಿಸಿರುತ್ತಾರೆಂದು ಭಾರತ ಅನುಶಾಸನ ಪರ್ವದಲ್ಲಿ ಸಪ್ತರ್ಷಿಗಳ ಸಂವಾದದಲ್ಲಿ ಕಶ್ಯಪ ಮಹರ್ಷಿಯ ಶಪಥವನ್ನು ಉದಾಹರಿಸುತ್ತಾರೆ. ಪ್ರಕರಣವೇನೆಂದರೆ, ಸಪ್ತರ್ಷಿಗಳಾದ ಅತ್ರಿ, ಅರುಂಧತೀ ಸಮೇತರಾದ ವಸಿಷ್ಠರು, ಕಶ್ಯಪ, ಭರದ್ವಾಜ, ಗೌತಮ, ವಿಶ್ವಾಮಿತ್ರ, ಜಮದಗ್ನಿ, ಮೊದಲಾದವರು ವನದಲ್ಲಿ ಬಹು ಕ್ಷುತ್ತಿನಿಂದ ಪೀಡಿತರಾಗಿ ಸಂಚರಿಸುತ್ತಿರುವಾಗ ಬಹುಸ್ಥೂಲ ಶರೀರಕನಾಗಿ ಶುನಸ್ಸಖನೆಂಬ ಹೆಸರಿನಿಂದ ಸನ್ಯಾಸ ವೇಷಧಾರಿಯಾದ ಇಂದ್ರನನ್ನು ಕಂಡು, ಆತನೊಂದಿಗೆ ಎಲ್ಲರೂ ಆಹಾರವನ್ನು ಹುಡುಕುವರಾಗಿ ಒಂದು ಪದ್ಮಸರಸ್ಸನ್ನು ಸೇರಿದರು ಅಲ್ಲಿ ಅಗ್ನಿಸಂಭೂತಳಾದ ಒಬ್ಬ ರಾಕ್ಷಸಿಯು ಇರಲು, ಇವರುಗಳು ಆಕೆಯನ್ನು ಒಂದೊಂದು ಕಮಲ ಗೆಡ್ಡೆಯನ್ನು ಕೊಡಬೇಕೆಂದು ಪ್ರಾರ್ಥಿಸಲು, ಆಗ ರಾಕ್ಷಸಿಯು ನಿಮ್ಮ ಹೆಸರುಗಳೇನು, ಹಾಗೆ ಹೆಸರಾಗಲು ಕಾರಣವೇನೆಂದು ಕೇಳಲು, ಎಲ್ಲರೂ ಕಾರಣಸಹಿತವಾಗಿ ತಮ್ಮ ಹೆಸರನ್ನು ಹೇಳಿ ಒಂದೊಂದು ತಾವರೆ ಗೆಡ್ಡೆಯನ್ನು ಪಡೆದರು. ಶುನಸ್ಸಖನು ತನ್ನ ಹೆಸರನ್ನು ಹೇಳಿದಾಗ, ಅದು ರಾಕ್ಷಸಿಗೆ ಸಮರ್ಪಕವಾಗದಿರಲು, ಇಂದ್ರನು ಕುಪಿತನಾಗಿ, ತನ್ನ ತ್ರಿದಂಡದಿಂದ ಹೊಡೆಯಲು, ಆಕೆಯು ಭೂಮಿಯಲ್ಲಿ ಬಿದ್ದು ಭಸ್ಮವಾದಳು. ಅನಂತರ ಮಹರ್ಷಿಗಳು ಆ ಸರೋವರದಲ್ಲಿ ಮಿಂದು

**ಲುಮ್, (೭) "ವಿಷ್ಣುಂ ಬ್ರಹ್ಮಣ್ಯ ದೇವೇಶಂ ಸರ್ವ ದೇವ (ಲೋಕ) ನಮಸ್ಕೃತಮ್ । ತ್ರೈಲೋಕ್ಯ ಸ್ಥಿತಿ ಸಂಹಾರ ಸೃಷ್ಟಿಹೇತುಂ ನಿರೀಶ್ವರಮ್।ಆಧಾತಾರಂ ವಿಧಾತಾರಂ ಸಂಧಾತಾರಂ ಜಗದ್ಗುರುಮ್ । ವಿಹಾಯ ಸ ಭಜತ್ಯನ್ಯಂ ಬಿಸಸ್ತೈನ್ಯಂ ಕರೋತಿ ಯಃ ॥ ವಿಷ್ಣು ಧರ್ಮ ಪರೋ ನ ಸ್ಯಾತ್ ವಿಷ್ಣುಧರ್ಮ ಪರಾಙ್ಮುಖಃ । ಕುಧರ್ಮ ವ್ರತ (ವೃತ್ತ) ಶೀಲಃ ಸ್ಯಾತ್ ಬಿಸಸ್ತೈನ್ಯಂ ಕರೋತಿಯಃ" ॥ ಎನ್ನುವರ್ ಶೊಲ್ಲಪಟ್ಟದು.**

ಆಹ್ನಿಕಗಳನ್ನು ತೀರಿಸಿ ಕ್ಷುದಾತುರರಾಗಿ ಬಂದು ನೋಡಲು ತಾವರೇಗೆಡ್ಡೆಗಳೊಂದೂ ಇರಲಿಲ್ಲವು ಆಗ ಆ ಮಹರ್ಷಿಗಳೆಲ್ಲಾ ಶಪಥಮಾಡುತ್ತಾರೇನೆಂದರೆ ಯಾವನು ಈ ತಾವರೇಗೆಡ್ಡೆಗಳ ಚೌರ್ಯವನ್ನು ಮಾಡಿರುತ್ತಾನೋ ಅವನು ಇಂತಹ ಅನರ್ಥಗಳನ್ನು ಅನುಭವಿಸಲಿ, ತಾವು ಎಂದಿಗೂ ಈ ಚೋರಕೃತ್ಯವನ್ನು ಮಾಡಲಿಲ್ಲವೆಂಬದಾಗಿ ಹೇಳುವ ಪ್ರಕರಣದಲ್ಲಿ ಮಹರ್ಷಿ ಕಶ್ಯಪರು ಮಾಡುವ ಶಪಥವು ಇದು. ಆಗ ಇಂದ್ರನು ಆ ಮಹರ್ಷಿಗಳನ್ನು ಕುರಿತು ಈ ರಾಕ್ಷಸಿಯು ನಿಮಗೆ ತೊಂದರೆ ಮಾಡಿಯಾಳೆಂಬ ಭಯದಿಂದ ನಿಮ್ಮೊಂದಿಗೆ ಶುನಸ್ಸಖನಾಗಿ ಬಂದು ಆಕೆಯನ್ನು ಕೊಂದು ನಿಮ್ಮನ್ನು ರಕ್ಷಿಸಿರುವೆನು. ನಿಮ್ಮ ರಕ್ಷಣಾರ್ಥವಾಗಿ ನಿಮ್ಮೊಂದಿಗೇ ಇದ್ದೆನು. ಬಿಸಸ್ತೈನ್ಯವನ್ನು ನಿಮ್ಮ ಪರೀಕ್ಷಾರ್ಥವಾಗಿ ಮಾಡಿದವನು ನಾನೇ, ನೀವು ಯಾರೂ ಅಲ್ಲವು ಇದರಿಂದ ನೀವು ತಿಳಿಯತಕ್ಕದ್ದೇನೆಂದರೆ ಎಂತಹ ಕಷ್ಟವಾದ ಅವಸ್ಥೆಯಲ್ಲಾಗಲಿ ಲೋಭವನ್ನು ಬಿಡತಕ್ಕದ್ದು ಎಂದು ಹೇಳಿ ಹೊರಟುಹೋದನು. "**ಯಃ** - ಯಾವನು, '**ಬಿಸಸ್ತೈನ್ಯಂ ಕರೋತಿ** - ತಾವರೆ ಗೆಡ್ಡೆಯ ಕಳುವನ್ನು ಮಾಡಿರುತ್ತಾನೋ, **ಸಃ** - ಅವನು, "**ಬ್ರಹ್ಮಣ್ಯ ದೇವೇಶಂ** - ಬ್ರಾಹ್ಮಣ ದೇವತೆಗಳು, ಇವರುಗಳಿಗೆಲ್ಲಾ ಸ್ವಾಮಿಯಾದ, **ಸರ್ವದೇವ ನಮಸ್ಕೃತಮ್** - ಬ್ರಹ್ಮರುದ್ರೇಂದ್ರಾದಿ ಸಕಲದೇವತೆಗಳಿಂದಲೂ ನಮಸ್ಕೃತನಾದ, **ತ್ರೈಲೋಕ್ಯಸ್ಥಿತಿ ಸಂಹಾರ ಸೃಷ್ಟಿ ಹೇತುಮ್**- ಮೇಲಿನ ಏಳುಲೋಕ, ಮಧ್ಯದ ಏಳುಲೋಕ, ಕೆಳಗಿನ ಏಳುಲೋಕ ಇವುಗಳು ತ್ರಿಲೋಕಗಳು, ಇವುಗಳ ಸೃಷ್ಟಿ ಸ್ಥಿತಿ ಪ್ರಳಯಗಳಿಗೆ ಕಾರಣಭೂತನಾದ, **ನಿರೀಶ್ವರಂ** - ತನಗೆ ಯಾರೂ ನಿಯಾಮಕರಿಲ್ಲದೆ ಸರ್ವನಿಯಾಮಕನಾದ, **ಆಧಾತಾರಂ** - **ಆಸಮಂತ್ ಧಾರಕಂ**, ಎಲ್ಲಾದಕ್ಕೂ ಆಧಾರ ಭೂತನಾಗಿರುವ, ಸ್ಥಿತಿ ನಿಯಾಮಕನಾದ, **ವಿಧಾತಾರಂ** - ಸೃಷ್ಟಿಕರ್ತನಾದ, **ಸಂಧಾತಾರಂ** - **ಸಂ** - ಏಕೀಕೃತ್ಯ ಧಾತಾರಂ ಎಂದರೆ ಪ್ರಳಯವನ್ನುಂಟುಮಾಡುವವನಾದ, **ಜಗ**

(೭) ಭಾರ. ಅನು. ೧೪೨- ೫೯-೬೧.

೪. ಅನ್ಯಕೀರ್ತನ ಮಾಗಾದೆನ್ನು ಮಿಡತ್ತೈ (೧) "ವಾಯುವನ್ನೈಯಲ್ಲದು ವಾಳ್‌ತ್ತಾದು"

ದ್ಗುರುಂ - ಲೋಕಕ್ಕೆಲ್ಲಾ ಆದಿ ಗುರುವಾದ, ವಿಷ್ಣುಂ-ಶ್ರೀ ಮಹಾವಿಷ್ಣುವನ್ನು, ವಿಹಾಯ - ಬಿಟ್ಟು, ಅನ್ಯಂ - ತುಚ್ಛವಾದ ಅನ್ಯದೇವತೆಯನ್ನು, ಭಜತು-ಭಜಿಸಲಿ; ತಾವರೇದಂಟನ್ನು ಕಳವು ಮಾಡಿದವನಿಗೆ ಸರ್ವೇಶ್ವರನನ್ನು ತ್ಯಜಿಸಿ ಅನ್ಯದೇವತಾ ಭಜನಮಾಡಿದ ಮಹಾದೋಷಪ್ರಾಪ್ತಿಯುಂಟಾಗಲಿ ಎಂಬ ಭಾವವು ಇದರಿಂದ ಅನ್ಯದೇವತಾ ಭಜನವು ತುಂಬಾ ದೋಷಾವಹವಾದುದೆಂದೂ ಮಾತಾಪಿತೃ ಗುರುವಧೆಗಳಿಗೆ ಸಮಾನವಾದ ಮಹಾ ಪಾತಕವೆಂದೂ ಹೇಳಿದಂತಾಯಿತು, ಯಃ - ಯಾವನು, ಬಿಸಸ್ತೈನ್ಯಂಕರೋತಿ - ಕಮಲಗಳ ಕಳವನ್ನು ಮಾಡಿರು, ತ್ತಾನೋ, ಸಃ - ಅವನು, ವಿಷ್ಣುಧರ್ಮ ಪರನು, ನ ಸ್ಯಾತ್ - ಆಗಬೇಡ ಇಷ್ಟೇ ಅಲ್ಲವು, ವಿಷ್ಣು ಧರ್ಮಕ್ಕೆ ಪರಾಙ್ಮುಖನೂ ಆಗಲಿ, ಕುಧರ್ಮ(ವೃತ್ತಿ) ವ್ರತಶೀಲಸ್ಯಾತ್-ಕೆಟ್ಟಮಾರ್ಗಗಳಲ್ಲಿ ಆತನಿಗೆ ಪ್ರವೃತ್ತಿಯುಂಟಾಗಲಿ; ಎಂದರೆ ತಾನು ಕಳ್ಳತನ ಮಾಡಿದ್ದರೆ ತನಗೆ ಈ ಮಹಾದೋಷಗಳೆಲ್ಲಾ ಪ್ರಾಪ್ತವಾಗಲಿ ಎಂಬ ಭಾವವು."

೪ ಅನ್ಯಕೀರ್ತನ ಮಾಗಾದೆನ್ನುಮಿಡಮ್ - ಸರ್ವೇಶ್ವರನಲ್ಲದ ಇತರರ ಸಂಕೀರ್ತನವು ಪ್ರಪನ್ನನಿಗೆ ಕೂಡದೆಂಬ ಸಂದರ್ಭದಲ್ಲಿ, "ವಾಯುವನ್ನೈಯಲ್ಲದು ವಾಳ್‌ತ್ತಾದು" ವಾಗಿಂದ್ರಿಯವು ಆ ಸರ್ವೇಶ್ವರನನ್ನಲ್ಲದೆ ಇನ್ನು ಯಾರನ್ನೂ ಸ್ತೋತ್ರಮಾಡಲಾರದು ಎಂದರೆ ಸರ್ವ ವಿಧದಲ್ಲೂ ಮಹೋಪಕಾರಕನಾದ ಸರ್ವೇಶ್ವರನನ್ನು ಬಿಟ್ಟು ಅನ್ಯರನ್ನು ಸ್ತೋತ್ರಮಾಡುವದು ನಿಂದಿತವು ಎಂಬ ಭಾವವು ಸರ್ವೇಶ್ವರನು ಕೃಪೆಯಾ ದಯಪಾಲಿಸಿದ ಕರಣ ಕಳೇಬರಗಳಿಗೆ ಸಾರ್ಥಕ್ಯವು. ಅನನ್ಯಾರ್ಹತೆಯಿಂದ ಆತನಿಗೇ ಪ್ರಯೋಜನವಾಗಿರುವದೇ ಎಂದು ಹೇಳುತ್ತಾರೆ. "ವಾಯುವನ್ನೈ ಯಲ್ಲದು ವಾಳ್‌ತ್ತಾದು, ಕೈಯುಲಗಮ್ ತಾಯವನ್ನೈ ಯಲ್ಲದು ತಾನ್ತೊಳಾ; - ಪೇಯ್‌ಮುಲೈ ಎಞ್ಞಾ ಣಾಗವುಣ್ಣಾನುರುವೋಡು ಪೇರಲ್ಲಾಲ್ ಕಾಣಾಕಣ್, ಕೇಳಾಶೆವಿ ||೧೧||

ವಾಯುವನ್ನೈ ಯಲ್ಲದುವಾಳ್‌ತ್ತಾದು - ವಾಕ್ಕು ಆತನನ್ನಲ್ಲದೆ ಇತರ ದೇವತೆಗಳನ್ನು ಸ್ತೋತ್ರವನ್ನು ಮಾಡದು; ಕೈಯು ಉಲಕಂ ತಾಯವನ್ನೈಯಲ್ಲದು-ತ್ರಿವಿಕ್ರಮನಾಗಿ ಅಳೆದವನಲ್ಲದೆ ಯಾರನ್ನೂ, ತಾನ್ತೊಳಾ - ನಮಸ್ಕರಿಸಲಾ

(೧) ಮುದಲ್ ತಿರುವಂದಾದಿ. ೧೧.

ದಿರದು ಎಂದರೆ ಆತನನ್ನು ನಮಸ್ಕರಿಸದೆ ನಿಲ್ಲಲಾರದು, **ಪೇಯ್ ಇತ್ಯಾದಿ** - ರಾಕ್ಷಸಿಯಾದ **ಪೂತನೆಯ** ಸ್ತನದ ವಿಷವನ್ನುಂಡವನ ಪರಮ ಲಾವಣ್ಯಯುಕ್ತ ದಿವ್ಯ ಮಙ್ಗಳ ವಿಗ್ರಹವನ್ನಲ್ಲದೆ ಬೇರೆ ಯಾವುದನ್ನೂ ನೋಡದು ಎಂದರೆ ಆತನ ದೇಹ ಲಾವಣ್ಯವು ಕಣ್ಣನ್ನು ಆಕರ್ಷಿಸುತ್ತದೆ ಎಂಬ ಭಾವವು; ಹಾಗೆಯೇ ಶಿವಿ. ಕಿವಿಯೂ, ಆತನ **ಪೇರಲ್ಲಾಲ್**-ದಿವ್ಯ ನಾಮಗಳನ್ನಲ್ಲದೆ, ಬೇರೆ ಯಾವುದನ್ನೂ, **ಕೇಳಾ** - ಕೇಳದು, **ಅಲ್ಲಾಲ್**-ಎನ್ನುವದರಿಂದ ಐಹಿಕ ಕಾಮಗಳಾದ ಸುಂದರ ಸ್ತ್ರೀಯನ್ನು ನೋಡೋಣ ಆಕೆಯ ಸಂಗೀತವನ್ನು ಕೇಳೋಣ ಇಂತಾದ್ದರಲ್ಲಿ ಮನಸ್ಸಿಲ್ಲವೆಂಬ ಭಾವವು. ಆತನು **ಹೃಷೀಕೇಶನಾದುದರಿಂದ** ನನ್ನ ಸರ್ವೇಂದ್ರಿಯಗಳನ್ನೂ ಆಕರ್ಷಿಸಿರುತ್ತಾನೆಂಬ ಭಾವವು. ೧೨೪೨-೪೩ನೆಯ ಪುಟಗಳನ್ನು ನೋಡಿ.

(೨) **"ಶೊನ್ನಾಲ್ ವಿರೋಧ ಮಿದಾಗಿಲು ಞಾನ್ಶೊಲ್ಲುವನ್ ಕೇಣ್ಮಿನೋ ।**
**ವೆನ್ನಾವಿಲ್ ಕವಿಯಾ ನೊರುವರ್‌ಕ್ಕುಙ್ಕೊಡುಕ್ಕಿಲೇನ್ ।**
**ತೆನ್ನಾತೆನಾವೆನ್ರು ವಣ್ಡು ಮುರಲ್ ತಿರುವೇಙ್ಗಡ ।**
**ತ್ತೆನ್ನಾನೈಯೆನ್ನಪ್ಪ ನೆನ್ಪೊರುಮಾನುಳನಾಗವೇ ॥೧॥**

**"ಶೊನ್ನಾಲ್**-ಹಿತವನ್ನು ಹೇಳಿದರೂ, **ವಿರೋಧಮ್** - ಹಿತವೆಂದರಿಯದೆ ಅಹಿತವಾದುದೆಂದು ಭಾವಿಸುವರು; ಆತ್ಮಾದಾಸನು, ವಿಷ್ಣುವು ಸರ್ವೇಶ್ವರನ ಎಂಬ ಪ್ರಹ್ಲಾದೋಕ್ತಿಯು ತಂದೆಯಾದ ಹಿರಣ್ಯಕಶಿಪುವಿಗೆ **"ವಕ್ಷ್ಯಾಮಿ ಸಾರಭೂತಂ ತವಾಜ್ಞಯಾ"**(ವಿ ಪು. ೧.೧೭.೧೪)ಎಂದು ಹೇಳಿರುವಹಾಗೆ,ಸಾರಭೂತವಾದುದೂ ಸಹ, ಅಹಿತವು; ಹಾಗೆಯೇ ಸರ್ವೇಶ್ವರನಾದ ರಾಮನೊಂದಿಗೆ ವೈರವು ಬೇಡ,ಸೀತೆಯನ್ನು ಸಮರ್ಪಿಸಿ ಶರಣಾಗತನಾಗಿ ಸುಖವಾಗಿ ಬಾಳು ಎಂದು ಹೇಳಿದ ತಮ್ಮನ ನುಡಿಯು ರಾವಣನಿಗೆ ಅಹಿತವಾಯಿತು,ಹಾಗೆಯೇ ಸರ್ವೇಶ್ವರನು ತನ್ನನ್ನು ಸ್ತುತಿಸಲೆಂದು ಉದಾರ ಭಾವದಿಂದ ಕೊಟ್ಟ ನಾಲಿಗೆಯಿಂದ ತುಚ್ಛರಾದ ರಾಜರು, ತುಚ್ಛರಾದ ಅನ್ಯದೇವತೆಗಳು ಇಂತವರನ್ನು ಸ್ತುತಿಸಬೇಡಿರಿ, ಓ ಕವಿಗಳೇ ತಿರುಮಲೆಯಲ್ಲಿರುವ ತಿರುವೇಙ್ಗಡ ಸ್ವಾಮಿಯನ್ನೇ ಸ್ತುತಿಸಿ.ಎಂದು ಹೇಳಿದರೆ ಅದು ನಿವಗೆ ವಿರೋಧವು ಎಂಬ ಭಾವವು; ಆದರೂ **ಶೊಲ್ಲುವಿನ್ ಕೇಣ್ಮಿನೋ** ಆದರೂ ನೀವು ಈಗ ಮಾಡುತ್ತಿರುವದು ನಿಮಗೆ ಸ್ವರೂಪವಲ್ಲವೆಂದು ಭಾವಿಸಿ, ನಿಮಗೆ ಹಿತವಾಡಲು ಪ್ರೇರಿತನಾಗಿ ಪ್ರಹ್ಲಾದನು ಅಸುರ ಪುತ್ರರಿಗೆ ಹಿತಹೇಳಿದ ಹಾಗೆ ಹೇಳುವೆನು, ದಯವಿಟ್ಟು ಲಾಲಿಸಿ, ಜ್ಞಾನಿಗಳಾದ ಪ್ರಪನ್ನರಂ ಮಾತು ಹಾಗಿರಲಿ, **ವಣ್ಡು** - ಕೀಟವಾದ ಭ್ರಮರವೂ ಕೂಡ ಮಧುಪಾನವಮಾಡಿ, **ತೆನ್ನಾ ತೆನ್ನಾ** ಮುರಲ್ ಎಂದು ಝೇಂಕಾರಮಾಡುತ್ತಿರುವ, **ತೆನ್ನಾ** ಎಂದರೆ **ತೇನ್**

(೨) "ಶೊನ್ನಾಲ್ ವಿರೋಧಮ್" ಇತ್ಯಾದಿಗಳಿಲೇ ಅರುಳಿಚ್ಚೆಯ್ದಾರ್.

ನಾ-ನಮ್ಮಗಳ ನಾಲಿಗೆಯು ಶ್ರೀನಿವಾಸನನ್ನು ಸ್ತುತಿಸಿದುದರಿಂದ, ಜೇನುತುಪ್ಪವು ಎಂದೇನಾದರು ಹೇಳುತ್ತವೆಯೋ ಎಂಬ ಹಾಗೆ ಝೇಂಕರಿಸುವ ಎಂಬ ಭಾವವು. ಅಥವಾ ತಮಗೆ ಅಮೃತ ಸದೃಶ ಮಧುವನ್ನಿತ್ತುದರಿಂದೇನಾದರೂ ಸ್ತೋತ್ರಮಾಡುತ್ತವೋ ಎಂಬುವಹಾಗೆ ಇಂಪಾದ ಶಬ್ದಮಾಡುತ್ತಿರುವ ತಿರುವೇಙ್ಗಡತ್ತು-ತಿರುಮಲೆಯಲ್ಲಿರುವವನಾಗಿ, ಎನ್ನಾನೆ-ನನ್ನ ಸ್ತುತಿಗೆ ವಿಷಯನಾಗಿ, ಎನ್ನಪ್ಪನ್ - ನನಗೆ ಮಹೋಪಕಾರಿಕನಾಗಿ ದಾಯಧನರೂಪದಲ್ಲಿ ಪರಮ ನಿಶ್ಶ್ರೇಯಸ್ಸನ್ನು ಕೊಡುವ ತಂದೆಯಾಗಿ, ಎಂಬಿರುಮಾನ್-ನನಗೆ ಸ್ವಾಮಿಯಾಗಿ ಪರಮ ಪ್ರಾಪ್ಯನಾದ ಶ್ರೀನಿವಾಸನು, ಉಳನಾಕ-ನನ್ನ ಈ ಪಾಶುರಗಳ ರೂಪವಾದ ಗಾನವನ್ನು ಕೇಳುವದಕ್ಕಾಗಿಯೇ ಬಿಜಮಾಡಿಸಿರುವಾಗ, ಭಕ್ತನ ಗಾನವನ್ನು ಕೇಳುವದೇ ತನಗೆ ಸ್ವರೂಪವೆಂದು ಭಾವಿಸಿರುವನೆಂಬುದು ಸೂಚಿತವು, ಹೀಗಿರುವಾಗ, ಎನ್ ನಾವಿಲ್ - ತನ್ನ ನಾಲಿಗೆಯ ಸತ್ತ್ವಿಗೆ ಪ್ರಯೋಜನವಾಗಿ, ಇನ್ ಕವಿ - ಈ ಮಧುರವಾಗಿರುವ ಪಾಶುರರೂಪದಲ್ಲಿರುವ ಕವಿತ್ವವನ್ನು, ಕವಿತ್ವವೇನೋ ಹೌದು, ಮಧುರ ಹೇಗೆ ಎಂದರೆ ಯಾವಾಗ ಸರ್ವೇಶ್ವರನ ಸ್ತುತಿಯಲ್ಲಿ ಆ ಕವಿತ್ವವು ಇಡಲ್ಪಟ್ಟಿತೋ ಆಗ ಅದು "ಮಧುರಾದಪಿ ತನ್ಮಧುರಂ" ಎಂಬ ಭಾವವು; ಇಂತಹ ಕವಿತ್ವವನ್ನು, ಯಾನ್ - ಅನನ್ಯಾರ್ಹ ಶೇಷಭೂತನಾದ ನಾನು, ಒರುವರುಕ್ಕುಮ್ - ಇನ್ನು ಯಾರಿಗೂ, ಎಂದರೆ ಇತರ ಕವಿಗಳು ಮಾಡುವಹಾಗೆ ಅನ್ಯದೇವತೆಗಳನ್ನಾಗಲಿ, ಇಹಲೋಕದ ರಾಜರುಗಳನ್ನಾಗಲಿ, ಕೊಡುಕ್ಕಿಲೇನ್ - ಕೊಡುವದಿಲ್ಲವು, ಓ ಶ್ರೀನಿವಾಸನೇ ನಿನಗೇನೇ ನಿರುಪಾಧಿಕ ದಾಸಭೂತನಾದ ನಾನು, ನಿನ್ನನ್ನು ಸ್ತುತಿಸುವದಕ್ಕಾಗಿ ನೀನು ದಯಪಾಲಿಸಿದ ಸತ್ತ್ವಿಯಿಂದ ನಾಲಿಗೆಯು ಪವಿತ್ರತೆಯನ್ನು ಹೊಂದಿ ನಿನ್ನನ್ನು ಈ ಪಾಶುರಗಳ ಮೂಲಕ ಆನಂದದಿಂದ ಸ್ತುತಿಸುತ್ತಿರುವಾಗ, ಇಂತಹ ಕವಿತ್ವವನ್ನು ಅನರ್ಹರಾದವರಿಗೆ ಕೊಡಲು ನನಗೆ ಶಕ್ತಿ ಎಲ್ಲಿಯದು ಎಂಬುದು ತಾತ್ಪರ್ಯವು ಅಸೇವ್ಯ ಸೇವಯರೂಪದಲ್ಲಿ ಅನರ್ಹರಾಗಿರುವರನ್ನು ಅಲ್ಪಫಲಗಳಿಗಾಗಿ ಸ್ತುತಿಸುವದು ನ್ಯಾಯವಲ್ಲವೆಂದೂ, ನಮ್ಮನ್ನು ಈ ಒಳ್ಳೇಸ್ಥಿತಿಗೆ ಬರುವಹಾಗೆ ಉಪಕರಿಸಿರುವ ಶ್ರೀನಿವಾಸನನ್ನು ಸ್ತುತಿಸುವದು ಯುಕ್ತವೆಂದೂ, ನಿಮಗೆ ಹೇಳಿದರೆ ನಿಮಗೆ ರುಚಿಸದು ಮತ್ತು ವಿರೋಧವು. ಭಗವಂತನನ್ನು ಸ್ತುತಿಸುವದೇ ನಾಲಿಗೆಗೆ ಸಾರ್ಥಕ್ಯವೆಂದು. ಒಂದು ಕೀಟವಾದ ಭ್ರಮರವೂಕೂಡ ತೆನ್ನಾ ತೆನ್ನಾ,

೫. ಅನ್ಯ ಚಿನ್ತನ ಮಾಗಾದೆನ್ನು ಮಿಡತ್ತೈ (೧) "ಶಿನ್ದೈ ಮತ್ತೊನ್ರಿನ್ರಿರತ್ತತಲ್ಲಾತ್ತನ್ನೈದೇವಪಿರಾ ನರಿಯುಮ್" ಎನ್ರುವ್,

ಎಂದು ಕೈಂಕರಿಸುವದನ್ನು ನೋಡಿದರೆ ಭಗವಂತನ ಸ್ತೋತ್ರದಿಂದ ನಾ-ನಾಲಿಗೆಯು, ತೇಱ - ಮಧುವಿನೋಪಾದಿಯಲ್ಲಿ ಮಧುರವಾದುದು ಎಂದು ಕೂಗುತ್ತಿರುವಾಗ, ಸ್ವಾಮಿಯು ನನಗೆ ಸರ್ವೋಪಕಾರಕನಾಗಿ, ಇಂಪಾದ ಈ ಆತನ ಸ್ತೋತ್ರದಿಂದ ಸತ್ತೆಯನ್ನು ದಾಸನು ಹೊಂದಿರುವಾಗ, ಆತನನ್ನು ಸ್ತುತಿಸುವದನ್ನು ಬಿಟ್ಟು, ದರಿದ್ರವಾದ ಕಾಸಿಗಾಗಿ ಅನರ್ಹರಾದ ರಾಜರೇನು, ಇತರೆ ಧನಿಕರೇನು, ಇಂತವರನ್ನು ಸ್ತುತಿಸುವೆನೇ ಎಂಬ ತಾತ್ಪರ್ಯವು" ಇತ್ಯಾದಿಗಳಿಲ್ - ಇವೇ ಮೊದಲಾದ ಪಾಶುರಗಳಲ್ಲಿ, ಅರುಳಿ ಚ್ಚೆಯ್‌ದಾರ್ - ಕೃಪೆಯಾ ಅಪ್ಪಣೆಕೊಡಿಸಿರುತ್ತಾರೆ, ಯಾರು ಎಂದರೆ ಪೂದುತ್ತಾಳ್ವಾರ್ ಮುದಲ್ ತಿರುವಂದಾದಿಯಲ್ಲೂ, ನಮ್ಮಾಳ್ವಾರ್ರವರು ತಿರುವಾಯ್ ಮೊಳಿಯಲ್ಲೂ ಎಂಬ ಭಾವವು.

ಅನ್ಯಚಿನ್ತನಮಾಗಾದೆನ್ನು ಮಿಡತ್ತೈ-ಶ್ರೀ ಮಹಾವಿಷ್ಣುವಲ್ಲದೆ ಇತರ ದೇವತಾಚಿನ್ತನವು ಸರಿಯಲ್ಲವೆಂಬುವ ಸಂದರ್ಭದಲ್ಲಿ "ಶಿನ್ದೈ ಮತ್ತೊನ್ರಿ" ಎನ್ರು - ಎಂಬುವ ಪಾಶುರದಲ್ಲಿ ಉಪದೇಶಿಸಿರುತ್ತಾರೆ.

(೧) ಈ ಪೂರಾಪಾಶುರವು ಯಾವುದೆಂದರೆ :—

ಶಿನ್ದೈಮಱ್ಱೊನ್ರಿನ್ರಿರತ್ತತಲ್ಲಾತ್ತನ್ನೈ ದೇವಪಿರಾ ನರಿಯುಮ್।
ಶಿನ್ದೈ ಯಿನಾಕ್ಕಿಯ್ ವಡಾನರಿಯಾದನ ಮಾಯಙ್ಗಳೊನ್ರುಮಿಲ್ಲೈ।
ಶಿನ್ದೈಯನಾಶೊಲ್ಲಿನಾಕ್ಕೆಯಕ್ಕೈಯಾನಿಲತ್ತೇವರ್‌ಕುಳುವಣಙ್ಗುಮ್।
ಶಿನ್ದೈಮಗಿಳ್ ತಿರುವಾರನ್ ವಿಳೈಯುಱೈತೀರ್ತ್ತನುಕ್ಕಱ್ಱಪಿನ್ನೇ॥

ಇದರರ್ಥವು :—ಶಿನ್ದೈಯಿನಾಲ್ - ಮನಸ್ಸಿನಿಂದ, ಶೊಲ್ಲಿನಾಲ್ - ವಾಕ್ಕಿನಿಂದ, ಶೆಯ್ ಕೈಯಾಲ್ - ಕರ್ಮಗಳಿಂದ ಎಂದರೆ ಮನೋವಾಕ್ಕಾಯದ ಮೂಲಕವಾಗಿ, ಮಹಾ ಭಾಗವತೋತ್ತಮರ, ಕುಳು - ಸಂಘವು, ವಣಙ್ಗುಂ - ಬಂದು ನಮಸ್ಕರಿಸುವ, ಶಿನ್ದೈ - ಅವರುಗಳ ಮನಸ್ಸನ್ನು, ಮಗಿಳ್ - ಸಂತೋಷಪಡಿಸುವ, ತಿರುವಾರಱವಿಳೈ - ತಿರುವಾರಱವಿಳೈ ಎಂಬಲ್ಲಿ, ಉಱೈ - ಬಿಜಮಾಡಿಸಿರುವ, ತೀರ್ತನುಕ್ಕು-ಮಹಾ ಪರಿಶುದ್ಧನಾಗಿರುವ ಪುರುಷೋತ್ತಮನಿಗೆ, ಅಱ್ಱಪಿಱ-ಶೇಷಭೂತನೆಂದಾದ ಬಳಿಕ, ಶಿನ್ದೈ-ನನ್ನ ಮನಸ್ಸು, ಮಱ್ಱೊನ್ರಿಱ-ಬೇರೆ ಯಾವುದನ್ನೂ, ತಿರತ್ತತಲ್ಲಾ - ಉದ್ದೇಶ್ಯವಾಗಿ ಭಾವಿಸದೇ ಇರುವ, ತನ್ನೈ-ಸ್ವಭಾವವನ್ನು, ತೇವರ್ ಪಿರಾ - ಸೂರಿ ಸೇವ್ಯನಾದ ಸರ್ವಜ್ಞನಾದವನು

ತಿರು. ೭. ೧೦. ೧೦.

**(೨) "ಅ(ವ) ರುನ್ತೇವರ್ ಮತ್ತ್ಮುಳರೆನ್ರೇನ್ ಮನತ್ತಿರ್ರೈಯುುವರ್ ಕರುತ್ತೇ" ಎನ್ರು ಮರುಳಿಚ್ಚೆಯ್‌ದಾರ್.**

---

ತಾನೇ, ಅರಿಯುುವರ್ - ತಿಳಿಯುುವವನು, ಶಿನ್ತೈಯುನಾಲ್ - ನಮ್ಮ ಮನಸ್ಸಿನಿಂದ, ಶೆಯ್‌ವ ಮಾಯ್ಯಙ್ಗಳ್ - ಮಾಡುವ ವಂಚನೆಗಳನ್ನು, ತಾನ್ - ಆ ಸರ್ವಜ್ಞನಾದ, ಸ್ವಾಮಿಯು ತಾನೇ, ಅರಿಯಾದನ ಒನ್ರುವರ್ ಇಲ್ಲೈ - ತಿಳಿಯದೇ ಇರುವದು ಯಾವುದೂ ಇಲ್ಲವು.

ತಿರುವಾರ್ರ ವಿಳ್ಳೈ ಎಂಬ ಊರಲ್ಲಿ ಬಿಜಮಾಡಿಸಿರುವ ಸ್ವಾಮಿಯು ಎಂತವನೆಂದರೆ "ಯನ್ಮನಸಾ ಧ್ಯಾಯತಿ ತದ್ವಾಚಾವದತಿ ತತ್ಕರ್ಮಣಾ ಕರೋತಿ" ಎಂದು ಹೇಳಿರುವಹಾಗೆ ಮನೋವಾಕ್ಕರ್ಮಗಳೆಲ್ಲಾ ಒಂದೇರೀತಿಯಲ್ಲಿರುವ ಕಾಪಟ್ಯವಿಲ್ಲದಿರುವ ಮಹಾ ಭಾಗವತರು ಬಂದು ನಮಸ್ಕಾರಮಾಡಿದುದರಿಂದ, ಪರಮ ಪ್ರೀತನಾಗಿ, ತಾನು ಆನಂದಮಯನಾಗಿರುವದರಿಂದ ಅವರುಗಳನ್ನೂ ಶ್ರುತಿಯಲ್ಲಿ "ಆನಂದಯಾತಿ" ಎಂದು ಹೇಳಿರುವಹಾಗೆ, ಅವರಿಗೆ ಪರಮ ಸಂತೋಷವನ್ನುಂಟುಮಾಡುವದಕ್ಕಾಗಿಯೂ ಅವರುಗಳ ಮನೋರಥವನ್ನು ಸಲ್ಲಿಸುವದಕ್ಕಾಗಿಯೂ ಈ ತಿರುವಾರ್ರ ವಿಳ್ಳೈಯಲ್ಲಿ ಬಿಜಮಾಡಿಸಿರುವನು; ಹೀಗೆ ಈ ಮಹಾ ಪರಿಶುದ್ಧರಾದ ಮಹಾ ಭಾಗವತೋತ್ತಮರಾದ ಪ್ರಪನ್ನರು ಈತನೇ ಪ್ರಾಪ್ಯನೆಂದು ಭಾವಿಸಿ ಪದೇಪದೆ ಬಂದು ನಮಸ್ಕರಿಸಿದುದರಿಂದ, ಈತನೇನಾದರೂ ತೀರ್ತ್ತನಾಗಿ, ಮಹಾಪರಿಶುದ್ಧನಾದನೋ ಎಂಬಹಾಗೆ ಬಿಜಮಾಡಿಸಿರುವವನು; ಭಾಗವತೋತ್ತಮರು ತೀರ್ಥರು; ಆದುದರಿಂದ ಸ್ವಾಮಿಯ ಪಾದವನ್ನೂ ಕೂಡ "ತೀರ್ಥೀ ಕುರ್ವನ್ತಿ" ಪರಿಶುದ್ಧವನ್ನಾಗಿ ಮಾಡಿದುದರಿಂದ ಆತನೂ ತೀರ್ತನು ಇಂತವನಿಗೆ ನಾನು ಅನನ್ಯಾರ್ಹ ಶೇಷನೆಂದು ನಂಬಿ, ಈ ತಿರುವಾರ್ರ ವಿಳೆಯ ಸ್ವಾಮಿಯೇ ಪರಮ ಪ್ರಾಪ್ಯನೆಂದು ನಂಬಿ ಆಶ್ರಯಿಸಿರುವೆನು. ಅನ್ಯ ದೇವತೆಯನ್ನು ಮನಸ್ಸಿನಲ್ಲಿ ಆಶ್ರಯಿಸಿ, ಇಲ್ಲಿ ಭಾಗವತರೆಲ್ಲಾ ತಾವು ಆಶ್ರಯಿಸಿದಹಾಗೆ ನಾನು ಆಶ್ರಯಿಸಿರುತ್ತೇನೆಂದು ವಂಚಿಸುವದಕ್ಕಾಗಿಯೂ ಬಂದವನಲ್ಲವು, ಇದೇ ದಿವ್ಯ ವೈಕುಂಠವೆಂದು ಭಾವಿಸಿ, ಪರಮ ಪದವನ್ನೂ ಬೇಡದೆ ಬಂದವನು. ಇದಕ್ಕೆ ಸಾಕ್ಷಿಯಾರು ಎಂದರೆ ಆತನ ಮನಸ್ಸೇ; ಆತನು ಸರ್ವಜ್ಞನಾದುದರಿಂದ ನಮ್ಮಗಳ ಮನಸ್ಸನ್ನೂ ಕೂಡ ತಿಳಿಯುವ ಸರ್ವಜ್ಞತೆಯು ಆತನಲ್ಲುಂಟು. ಅದನ್ನು ಮರೆಮಾಚಲು ಸಾಧ್ಯವಿಲ್ಲವು. ಆತನನ್ನೇ ಬೇಕಾದರೆ ಕೇಳಿ ತಿಳಿಯಬಹುದು ಎಂಬ ಭಾವವು. ದುಷ್ಯಂತನು ಶಕುಂತಳೆಯನ್ನು ಮದುವೆ

---

(೨) ಪೆರಿ. ತಿರು. ೮.೧೦.೨.

ಮಾಡಿಕೊಂಡು ಶಾಪಗ್ರಸ್ತನಾಗಿ ಮದುವೆಮಾಡಿಕೊಳ್ಳಲಿಲ್ಲವೆಂದು ಸಭೆಯಲ್ಲಿ ಹೆಂಡತಿಯನ್ನು ನಿರಾಕರಿಸಿದುದರಿಂದ ಕೋಪಗೊಂಡು ಹೇಳುತ್ತಾಳೆ. ನಿನ್ನ ವ್ಯಾಪಾರವೇ ಒಂದು ವಿಧವಾಯಿತು, ಬಾಯಲ್ಲಿ ಈಗ ಹೇಳುವದು ಬೇರೆ ವಿಧವಾಯಿತು. ಈ ಕೌಟಿಲ್ಯವನ್ನು ಸರ್ವೇಶ್ವರನು ತಿಳಿಯದೆ ಇರುವದಿಲ್ಲವು ಎಂದು ಮೂದಲಿಸುತ್ತಾಳೆ :—**ಏಕೋಽಹಮಸ್ಮೀತಿ ಚ ಮನ್ಯಸೇತ್ವಂ ನ ಹೃಚ್ಛಯಂವೇತ್ಸಿ ಕವಿಂ ಪುರಾಣಮ್।ಯೋ ವೇದಿತಾ ಕರ್ಮಣಃ ಪಾಪಕಸ್ಯ ತಸ್ಯಾಂತಿಕೇ ತ್ವಂ ವೃಜಿನಂ ಕರೋಷಿ"** ಆವತ್ತು ನನ್ನನ್ನು ಮದುವೆಮಾಡಿಕೊಂಡಿದುದು ಗೋಪ್ಯವಾದುದರಿಂದ ಯಾರೂ ತಿಳಿಯಲಾರರು ; ಆದುದರಿಂದ ನಿರಾಕರಿಸಿ ಕಳುಹಿಸಿ ಬಿಡೋಣವೆಂದು ಈ ಅನಾಥಳಾಗಿ ಪತಿವ್ರತಾಧರ್ಮದಲ್ಲಿರುವವಳನ್ನು ತ್ಯಾಗ ಮಾಡಿದ ಅಪರಾಧವನ್ನು ನಿನ್ನಹೃದಯಾಂತರ್ವರ್ತಿಯಾದ ಸರ್ವೇಶ್ವರನು ತಿಳಿಯಲಾರನೆಂದು ಭಾವಿಸಿರುತ್ತೀಯೋ ; ನೀನು ಮಾಡುವ ದುಷ್ಕರ್ಮಗಳನ್ನು ಸರ್ವಜ್ಞನಾಗಿರುವದರಿಂದ ಕಣ್ಣಾರ ನೋಡುತ್ತಿರುವನು ಎಂದು ಪತಿಯನ್ನು ಕುರಿತು ಶಕುನ್ತಳೆಯು ಹೇಳಿದಹಾಗೆಯೇ ನನ್ನ ಮನಸ್ಸಿನಲ್ಲಿರುವದನ್ನೂ ಕೂಡ ಆತನು ತಿಳಿಯಲು ಶಕ್ತನು. ಆದುದರಿಂದ ಏನೊಂದೂ ವಂಚನೆ ಯಿಲ್ಲವು ಈ ಸ್ವಾಮಿಯೇ ನನಗೆ ಪ್ರಾಪ್ಯನೆಂಬುದು ಸತ್ಯವು. ಹೀಗೆ ಹೇಳಿದುದರಿಂದ ಅನ್ಯಚಿಂತನವು ಸರ್ವಥಾ ಇಲ್ಲವೆಂದು ಹೇಳಿದಂತಾಯಿತು". ಎನ್ರುಮ್ - ಎಂಬದಾಗಿಯೂ, ನಮ್ಮಾಳ್ವಾರ್ರವರು ಅರುಳಿಚ್ಚೆಯ್‌ದಾರ್ - ಅಪ್ಪಣೆ ಕೊಡಿಸಿರುತ್ತಾರೆ. (೨) ಅನ್ಯ ಚಿಂತನವು ಸರಿಯಲ್ಲವೆಂಬುದಕ್ಕೆ ಇನ್ನೊಂದು ಪ್ರಮಾಣವನ್ನು ಉದಾಹರಿಸುವರಾಗಿ ತಿರುಮಂಗೈಯಾಳ್ವಾರವರೂ ಹಾಗೆಯೇ ಹೇಳಿರುತ್ತಾರೆಂದು ತಿಳಿಸುತ್ತಾರೆ. ಈ "ಪರು ದೇವರ್" ಎಂಬ ವಾಕ್ಯವಿರುವ ಪೂರಾ ಪಾಶುರವು ಯಾವುದೆಂದರೆ :—

ಪೆರುನೀರುಮ್ ವಿಣ್ಣುಮ್ಮಲೆಯುಮ್ ಉಲಗೇಳುಮ್ ।
ಒರು ತಾರಾ ನಿನ್ನುಳೊಡುಕ್ಕಿಯ ನಿನ್ನೈಯಲ್ಲಾಲ್ ।
ವರುದೇವರ್ ಮಱ್ಱುಳರೆನ್ರೆನ್ನ ನತ್ತಿರ್ರೈಯುಮ್ ।
ಜ್ಗರು ತೇನಾರ್ ಕಣ್ಣು ಪುರತ್ತು ರೈಯಮ್ಮಾನೆ ॥೨॥

ಇದರರ್ಥವು :—ಪೆರುನೀರುಮ್ - ಅಗಾಧವಾಗಿ ವಿಶಾಲವಾಗಿರುವ ಸಮುದ್ರವನ್ನೂ, ವಿಣ್ಣುಮ್-ಆಕಾಶವನ್ನೂ, ಮಲೆಯುಮ್-ಕುಲಾಚಲಗಳನ್ನೂ ಉಲಗೇಳುಮ್ - ಲೋಕಗಳನ್ನೂ, ಒರುತಾರಾ-ಪ್ರಳಯದಲ್ಲಿ ಒಂದು ಮಾಲೆಯಾಗಿಯುಳ್ಳವನಾಗಿ ಅಥವಾ ಇವುಗಳನ್ನೆಲ್ಲಾ ಒಂದು ಮಾಲೆಯಾಗಿ ಪ್ರಳಯ

ಕಾಲದಲ್ಲಿ ಉಳ್ಳವನೇ ಎಂದು ಸಂಬೋಧನೆಯಾಗಿಯಾಗಲಿ ಭಾವಿಸಬಹುದು. ಇವುಗಳನ್ನೆಲ್ಲಾ ಉದರದಲ್ಲಿ ಸೂಕ್ಷ್ಮದೆಶೆಯಲ್ಲಿ ಪ್ರಳಯಕಾಲದಲ್ಲಿ ಧರಿಸಿರುವದೆಂಬುದು ನಿನಗೇನೂ ಶ್ರಮವಿಲ್ಲವು ಒಂದು ಮಾಲೆಯನ್ನು ಧರಿಸಿದಹಾಗೆ ಎಂಬ ಭಾವವು. ಅದೂ ಅಲ್ಲದೆ ಒಂದು ಹಾರವನ್ನು ಧರಿಸಿ ನಿಂತಿರುಪದು ಹೇಗೆ ತೋರುತ್ತದೆ ಎಂದರೆ ನಿನ್ನ ಉದರದಲ್ಲಿರುವ ಚೇತನರು ತನ್ನನ್ನಾಶ್ರಯಿಸಿದಪಕ್ಷದಲ್ಲಿ ಅವರನ್ನು ರಕ್ಷಿಸುವ ದೃಢಸಙ್ಕಲ್ಪವುಳ್ಳವನು ತಾನು ಎಂದು ಪ್ರತಿಜ್ಞೆಯನ್ನು ಮಾಡುವದಕ್ಕಾಗಿ ಹಾರವನ್ನು ಹಾಕಿಕೊಂಡಿರುವಹಾಗೆ ಇದೆ ಎಂಬ ಭಾವವೂ ತೋರಿಬರುತ್ತದೆ. **ನಿನ್ನೊಳೊಡುಕ್ಕಿ** - ನಿನ್ನ ಉದರದ ಏಕದೇಶದಲ್ಲಿ ಇಟ್ಟುಕೊಂಡಿರುವ, **ನಿನ್ನೈಯಲ್ಲಾಲ್**-ನಿನ್ನ ಮೂಲಕವಲ್ಲದೆ, **ವರುದೇವರ್ ಮಱ್ಱುಳರಿ**-ನಾನು ಆಶ್ರಯಣೀಯನೆಂದು ಬಂದು ನಿಂತಿರುವ ದೇವತೆಯು, **ಮತ್ತುಳರೆನ್ರು** - ಬೇರೆ ಉಂಟೆಂದು, **ಮನತ್ತು** - ನನ್ನ ಮನಸ್ಸಿನಲ್ಲಿ, **ಇಱೈಯುಮ್** - ಸ್ವಲ್ಪವಾಗಲಿ, **ಕರುದೇನ್** - ಪೂರ್ವಪಕ್ಷರೂಪದಲ್ಲಿಯೂ ಕೂಡ ನೆನಿಸಲಾರೆನು, ಸ್ಮರಿಸುವದಿಲ್ಲವು ಎಂಬ ಭಾವವು. ಚತುರ್ಮುಖ ಬ್ರಹ್ಮನೆಂದೂ, ಪರಮೇಶ್ವರನು ಅಥವಾ ಈಶನೂ ಎಂದೂ,ಮಹೇಂದ್ರನೆಂದೂ ಹೀಗೆಲ್ಲಾ ಹೆಸರು ಧರಿಸಿ ಬಂದಿರುವ ದೇವತೆಗಳನ್ನೆಲ್ಲಾ ಪ್ರಳಯದಲ್ಲಿ ಸರ್ವೇಶ್ವರನು ತನ್ನ ಹೊಟ್ಟೆಯಲ್ಲಿಟ್ಟುಕೊಂಡು, ಇವರಿಗೆ ಒಳ್ಳೇ ಅಧಿಕಾರಗಳನ್ನು ಕೊಡಬೇಕೆಂದು ಸಙ್ಕಲ್ಪಿಸಿದುದರಿಂದ, ಅವನಿಂದ ಎಂಜಲು ರೂಪದಲ್ಲಿ ಇವರು ಉಗಳಲ್ಪಟ್ಟವರು; ಹೀಗೆ ಆತನಿಂದಲೇ ಸತ್ತೆಯನ್ನು ಹೊಂದಿ ತಾವೇ ಆಶ್ರಯಣೀಯರೆಂದು ಹೇಳಿಕೊಳ್ಳುವ ಈ ದೇವತೆಗಳನ್ನು ನಾನು ಎಂದಿಗಾದರೂ ಮನಸ್ಸಿನಲ್ಲಾದರೂ ಸ್ಮರಿಸುವನೇ? ಒಂದು ವೇಳೆ ಇವರೇನಾದರೂ ಆಶ್ರಯಿಸಲು ಯೋಗ್ಯರಾಗಬಹುದೋ ಎಂಬ ಪೂರ್ವಪಕ್ಷವನ್ನು ಮಾಡಿಯಾಗಲಿ ಸ್ಮರಿಸುವನೋ ? ಎಂದಿಗೂ ಇಲ್ಲವೆಂಬ ಭಾವವು; **ಕಣ್ಣಪುರತ್ತುಱೈಯಮ್ಮಾನೇ** – ಕಣ್ಣಪುರದಲ್ಲಿ ಬಿಜಮಾಡಿಸಿರುವ ಸ್ವಾಮಿಯೇ, ಪ್ರಳಯಾಪತ್ತಿನಲ್ಲಿ ತನ್ನ ಉದರದಲ್ಲಿಟ್ಟು ಸಂರಕ್ಷಿಸಿ ಚೇತನರು ತನ್ನನ್ನಾಶ್ರಯಿಸಿ ನಿರತಿಶಯ ಸುಖವನ್ನು ಹೊಂದಲಿ ಎಂಬ ಪರಮ ಕೃಪೆಯಾ ಕರಣ ಕಳೇಬರ ಯೋಗ, ಸಚ್ಛಾಸ್ತ್ರ, ಸದುಪದೇಶಕರನ್ನೆಲ್ಲಾ ಒದಗಿಸಿಕೊಟ್ಟು, ಅರ್ಚಾವತಾರಿಯಾಗಿ ತಿರುಕ್ಕಣ್ಣಪುರದಲ್ಲಿ ಬಿಜಮಾಡಿಸಿ, ಈ ಸಂಸಾರವೆಂಬ ಪ್ರಳಯವನ್ನು ಹೋಗಲಾಡಿಸಬೇಕೆಂದು ವನಮಾಲೆಯನ್ನು ಧರಿಸಿ ಸತ್ಯ ಸಙ್ಕಲ್ಪನಾಗಿ ನೆಲಸಿರುವಾಗ, ಇತರರಾದ ನಮ್ಮ ಹಾಗೆಯೇ ಸಂಸಾರಿಗಳಾಗಿರುವ ದೇವತೆಗಳನ್ನು ಮನಸ್ಸಿನಿಂದಲಾದರೂ ಸ್ಮರಿಸುವೆನೇ ? ಎಂಬತಾತ್ಪರ್ಯವು.

ಈ ಅಭಿಗಮನಾದಿ ನಿತ್ಯ ನೈಮಿತ್ತಿಕಗಳು ಪ್ರಪನ್ನನಿಗೆ ಅನೇಕಾನರ್ಥಗಳು

## ಅಭಿಗಮನಾದಿಷು ಅನಧಿಕೃತಾನಾ ಮುಕ್ತಾನರ್ಥ ನಿವಾರಣಂ ಕಥಮ್ ?

**ಇಸ್ಸವಾರಾಧನಾದಿ ಕ್ರಮಙ್ಗಳಿಲ್ ಅನಧಿಕೃತರ್ಕ್ಕು ಮಿಕ್ಕಾಲಙ್ಗಳಿಲ್ಲಾತ್ತಿಲುಮ್ ತಙ್ಗಳುಕ್ಕುಯೋಗ್ಯಮಾನ ನಿತ್ಯ ನೈಮಿತ್ತಿಕಙ್ಗಳಾಲುಮ್,**

---

ತೊಲಗಲು ಸಹಕಾರಿಯಾಗಬಹುದೆಂದು ಹೇಳಲ್ಪಟ್ಟಿತು. ಇಂತಹ ಪ್ರಯೋಜನವು, ಆರಾಧನೆ ಮೊದಲಾದ ನಿತ್ಯ ನೈಮಿತ್ತಿಕಗಳನ್ನು ಅನುಷ್ಠಿಸಲು ಯೋಗ್ಯತೆಯುಳ್ಳತ್ರೈವರ್ಣಿಕರಿಗೆ ಮಾತ್ರವೇ ಎಂದು ಹೇಳಿದರೆ ಪ್ರಪನ್ನರಾದ ಸ್ತ್ರೀಶೂದ್ರಾದಿಗಳಿಗೆ ಇಂತಹ ಸುಕೃತವಿಶೇಷವಿಲ್ಲವೆಂದು ಹೇಳಿದಂತಾಗುತ್ತದೆ. ಇಂತಹ ಅನ್ಯಾಯವನ್ನು ಸರ್ವೇಶ್ವರನು ಎಂದಿಗಾದರೂ ಮಾಡಿಯಾನೋ ? ಹಾಗಾದರೆ ಅಂತಹ ಅನಧಿಕೃತರ ವಿಷಯದಲ್ಲಿ ಹೇಗೆ ಎಂದರೆ ಹೇಳುತ್ತಾರೆ.

## ಹಾಗಾದರೆ ಅಭಿಗಮನಾಧಿಗಳಲ್ಲಿ ಅಧಿಕಾರವಿಲ್ಲದವರಿಗೆ ಅನರ್ಥ ನಿವಾರಣೆಯು ಹೇಗೆ ?

ಬ್ರಾಹ್ಮಣ ಕ್ಷತ್ರಿಯ ವೈಶ್ಯರಾದ ತ್ರೈವರ್ಣಿಕರಿಗೆ ನಿತ್ಯ ನೈಮಿತ್ತಿಕಗಳು ಅವುಗಳಲ್ಲೇ ಸೇರಿದ ಅಭಿಗಮನಾರಾಧನಾದಿಗಳೇನೋ ಉಂಟು, ಅವುಗಳಿಂದ ಅನರ್ಥನಾಶರೂಪ ಪ್ರಯೋಜನ ಉಂಟಾಗುತ್ತದೆಂದು ಹೇಳಬಹುದು. ಆದರೆ **"ಜಪ ಸ್ತಪಸ್ತೀರ್ಥಸೇವಾ ಪ್ರವ್ರಜ್ಯಾ ಮಂತ್ರಸಾಧನಂ। ದೇವತಾರಾಧನಂ ಚೇತಿ ಸ್ತ್ರೀಶೂದ್ರ ಪತನಾನಿ ಷಟ್"** ಜಪ, ತಪ, ಪತಿಶುಶ್ರೂಷೆಯನ್ನು ಬಿಟ್ಟು ತೀರ್ಥಯಾತ್ರೆಗಳು ಸಂನ್ಯಾಸವೂ ಮಂತ್ರೋಪಾಯವೂ ದೇವತಾರಾಧನವೂ ಈ ಆರನ್ನೂ ಸ್ತ್ರೀಶೂದ್ರರು ಅನುಷ್ಠಿಸಿದುದಾದರೆ ಅವರಿಗೆ ಪತನಕ್ಕೆಕಾರಣವಾಗುತ್ತವೆ. ಹೀಗೆ ಅಭಿಗಮನಾರಾಧನೆಗಳಲ್ಲಿ ಶೂದ್ರರಿಗೆ ಅಧಿಕಾರವಿಲ್ಲವಾದುದರಿಂದ ಪ್ರಪನ್ನರಾದ ಆವರುಗಳಿಗೂ ಭಗವತ್ಕೈಙ್ಕರ್ಯ ಭಾಗವತ ಕೈಙ್ಕರ್ಯ ಸಿದ್ಧಿಯುಂಟಾಗುವ ಪ್ರಕಾರವನ್ನೂ ಮುಂದಿನ ವಾಕ್ಯದಮೂಲಕವೂ, ಆ ವಿಷಯದಲ್ಲಿ ಪ್ರಮಾಣಗಳನ್ನೂ ಅದರ ಮುಂದಿನವಾಕ್ಯವಾದ "ಇನ್ವರ್ಥತ್ತೈ" ಎಂಬುದರ ಮೂಲಕವೂ ಉಪದೇಶಿಸುತ್ತಾರೆ. ಭಾಗವತಕೈಙ್ಕರ್ಯಮೂಲಕ ಭಗವತ್ಕೈಙ್ಕರ್ಯ ಸಿದ್ಧಿ ಎಂದುಪದೇಶಿಸುತ್ತಾರೆ. **ಇಸ್ಸವಾರಾಧನಕ್ರಮಙ್ಗಳಿಲ್** - ಈ ಭಗವದಾರಾಧನೆಯ ಕ್ರಮಗಳಲ್ಲಿ, **ಅನಧಿಕೃತರ್ಕುಮ್** - ಅಧಿಕಾರವಿಲ್ಲದ ಸ್ತ್ರೀಶೂದ್ರರಿಗೂ ಸಹ, **ಇಕ್ಕಾಲಙ್ಗಳಿಲ್ಲಾತ್ತಿಲುಮ್** - ಈ ಎಲ್ಲಾ ಕಾಲದಲ್ಲೂ, **ತಙ್ಗಳುಕ್ಕು ಯೋಗ್ಯಮಾನ** - ಇಲ್ಲಿ ತಙ್ಗಳುಕ್ಕು ಎಂಬುದು ಮುಂದೆ ಬರುವ ಪರನು ಭಾಗ

**ಸಂಕೀರ್ತನಾದಿಗಳಾಲುಮ್, ಸಮಾರಾಧನಾದಿ ಯೋಗ್ಯರಾನ ಪರಮ ಭಾಗವತರ್ಕ್ಕು ಪ್ಪರತಂತ್ರರಾಯ್ ಯಥಾಧಿಕಾರಂ ವಲ್ಲತೇವ್ವೈ ಶೆಯ್ದುಮ್ ಇಕ್ಕೈಙ್ಕರ್ಯ ಮಿಳವಾದೊಳಿಯಲಾಮ್.**

**ವತರಾನ"** - ಎಂಬುದಕ್ಕೆ ಅನ್ವಯವು, ಪರಮ ಭಾಗವತರಾದ ತಮಗೆ ಯೋಗ್ಯಗಳಾದ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನಗಳಿಂದಲೂ, **ಸಂಕೀರ್ತನಾದಿಗಳಾಲುಮ್** - ಸ್ತೋತ್ರಗಳೇ ಮೊದಲಾದವುಗಳ ಮೂಲಕ ಕೀರ್ತನ ಅಥವಾ ಭಗವನ್ನಾಮ ಸಂಕೀರ್ತನಗಳಿಂದಲೂ. ಆದಿ ಪದದಿಂದ ಗುರು ಪರಂಪರಾನುಸಂಧಾನ, ಅಷ್ಟೋತ್ತರ ಶತಸಹಸ್ರಾದಿಗಳಮೂಲಕ ಅರ್ಚನ, ಭಗವತ್ಪ್ರಬಂಧಸೇವೆ, ಪುಷ್ಪ ತುಲಸ್ಯಾದ್ಯಾಹರಣ, ಮಾಲಾಕರಣ, ದೀಪಾರೋಪಣ, ಭಗವನ್ಮಂದಿರ ಸಂಮಾರ್ಜನಾದಿ ವಿವಿಧ ಕೈಙ್ಕರ್ಯಗಳು ಸೂಚಿಸಲ್ಪಟ್ಟವು, ಇಂತಹ ಅನುಷ್ಠಾನಗಳಿಂದ **ಸಮಾರಾಧನಾದಿ ಯೋಗ್ಯರಾದ** - ಅಭಿಗಮನಾದಿ ಭಗವದಾರಾಧನೆಗೆ ಅರ್ಹರಾದ, **ಪರಮ ಭಾಗವತರ್ಕು** - ಪರಮ ಭಾಗವತರಿಗೆ, **ಪರತಂತ್ರರಾಯ್**- ಅಧೀನರಾಗಿ, ಶೇಷಭೂತರಾಗಿ ಎಂಬರ್ಥವು, **ಯಥಾಧಿಕಾರಮ್** - ತಮ್ಮ ಅಧಿಕಾರಾನುಗುಣವಾಗಿ, **ವಲ್ಲತೇವ್ವೈ ಶೆಯ್ದುಮ್** - ತನಗೆ ಸಾಮರ್ಥ್ಯವಿರುವ ಕೈಙ್ಕರ್ಯಗಳನ್ನು ಮಾಡುತ್ತ, **ಇಕ್ಕೈಙ್ಕರ್ಯಂ** - ಇಂತಹ ಕೈಙ್ಕರ್ಯವು ಎಂದರೆ ಅಭಿಗಮನಾದಿ ಕೈಙ್ಕರ್ಯಮೂಲಕ ಉಂಟಾಗುವ ಅನರ್ಥನಾಶಕರೂಪಕೈಙ್ಕರ್ಯವು, **ಇಳಿವಾದೊಳಿಯಲಾಮ್**-ಇಲ್ಲದೆ ಹೋಗುವಂಥಾದ್ದನ್ನು ತಪ್ಪಿಸಿಕೊಳ್ಳಬಹುದು ಎಂದರೆ ಈ ರೂಪವಾಗಿ ಸಿದ್ಧಿಸುತ್ತದೆ ಎಂಬರ್ಥವು. ಮಹಾ ಭಾಗವತರಿಗೆ ಶೇಷಭೂತರಾಗಿ ಅವರಿಂದ ಆಜ್ಞಾಪಿಸಲ್ಪಟ್ಟಕೈಙ್ಕರ್ಯಗಳನ್ನು ನಡೆಸುವದರಿಂದಲೂ, ಅವರಿಗೇ ಶೇಷಭೂತರಾಗಿ ಕೈಙ್ಕರ್ಯಗಳನ್ನೆಸಗುವದರಿಂದಲೂ ಸಿದ್ಧಿಸುತ್ತದೆ ಆದುದರಿಂದಲೇ ಸ್ತ್ರೀಶೂದ್ರರಿಗೆ ತ್ರೈವರ್ಣಿಕರಹಾಗೆ ಯಾವ ನಿತ್ಯ ನೈಮಿತ್ತಿಕಗಳನುಷ್ಠಾನ ಮತ್ತು ಭಗವದಾರಾಧನೆಗಳ ಆವಶ್ಯಕತೆ ಇಲ್ಲವು. ಸ್ತ್ರೀಗೆ ಮಹಾ ಭಾಗವತ ಸ್ಥಾನದಲ್ಲೇ ಪತಿಯೇ ಆಗಿ, ಆತನ ಕೈಙ್ಕರ್ಯರೂಪವಾದ ಭರ್ತೃಶುಶ್ರೂಷೆಯ ಮಾತ್ರದಿಂದಲೇ ಸಮಸ್ತ ಅನರ್ಥಗಳ ವಿನಾಶವುಂಟಾಗುವದರಿಂದಲೂ, ಶೂದ್ರಾದಿಗಳಿಗೆ ಮಹಾ ಭಾಗವತನಿಗೆ ಪರತಂತ್ರರಾಗಿ ಮಾಡುವ ಕೈಙ್ಕರ್ಯಗಳಿಂದ ಅವರಿಗೆ ಅನರ್ಥಗಳ ವಿನಾಶವೂ ಉಂಟಾಗುವದರಿಂದಲೂ, ಶ್ರೀ ವ್ಯಾಸ ಮಹರ್ಷಿಯು, ಕಲಿಯುಗದಲ್ಲಿ **ಯೋಷಿತಸ್ಸಾಧು ಧನ್ಯಾಸ್ತಾಸ್ತಾಭ್ಯೋ ಧನ್ಯತರೋಸ್ತಿ ಕಃ"** ಎಂದೂ "**ಶೂದ್ರಸ್ಸಾಧುಃ" "ಶೂದ್ರ ಧನ್ಯೋಸಿಚಾಬ್ರವೀತ್"** ಎಂದೂ, ಎಂದರೆ ಕಲಿಯುಗದಲ್ಲಿ ಸ್ತ್ರೀರುಗಳು ಬಹಳ ಸಾಧುಗಳೂ

**ಇವ್ವರ್ಥತ್ತೈ** (೧) **"ಆರಾಧನಾನಾಂ ಸರ್ವೇಷಾಂ ವಿಷ್ಣೋರಾರಾಧನಂ ಪರಮ್। ತಸ್ಮಾತ್ಪರತರಂ ಪ್ರೋಕ್ತಂ ತದೀಯಾರಾಧನಂ ಪರಮ್"। ಎನ್ರುಮ್,** (೨) **"ಕುನ್ರಮೆಡುತ್ತ ಪಿರಾ ನಡಿಯಾರೊಡು ಮೊನ್ರಿ ನಿನ್ರು**

---

ಧನ್ಯರೂ,ಅವರಿಗಿಂತ ಧನ್ಯರು ಯಾರಿದ್ದಾರೆಂದೂ, ಹಾಗೆಯೇ ಶೂದ್ರನೂ ಸಾಧುವು ಧನ್ಯನು ಎಂದೂ ಹೇಳಿರುತ್ತಾರೆ. (ವಿ. ಪು. ೬. ೨. ೭-೮); ಏಕೆಂದರೆ ತಿಳಿಸುತ್ತಾರೆ :—**"ಸ್ವಲ್ಪೇನಹಿ ಪ್ರಯತ್ನೇನ ಧರ್ಮಸ್ಸಿಧ್ಯತಿ ವೈಕಲೌ। ಶೂದ್ರೈಶ್ಚ ದ್ವಿಜಶುಶ್ರೂಷಾ ತತ್ಪರೈರ್ದ್ವಿಜ ಸತ್ತಮಾಃ। ತಥಾ ಸ್ತ್ರೀಭಿರನಾಯಾಸಾತ್ ಪತಿ ಶುಶ್ರೂಷಯೈವಹಿ"** ಶೂದ್ರರಿಗೆ ಬ್ರಹ್ಮವಿತ್ತುಗಳ ಶುಶ್ರೂಷೆಯಿಂದಲೇ,ಸ್ತ್ರೀಯರಿಗೆ ಪತಿಶುಶ್ರೂಷೆಯಿಂದಲೇ, ಹೀಗೆ ಅಲ್ಪಾಯಾಸದಿಂದಲೇ ಇಂತಹ ಧರ್ಮಾನುಷ್ಠಾನರೂಪಸಿದ್ಧಿಯು ಲಭಿಸುತ್ತದೆ, ಎಂದು ಮಹರ್ಷಿಗಳನ್ನು ಕುರಿತು ಉಪದೇಶಿಸಿರುತ್ತಾರೆ. ಸ್ತ್ರೀಗಳಿಗೆ ಭರ್ತೃ ಶುಶ್ರೂಷಯೇ ಪರಮ ಧರ್ಮನೆಂಬುದಕ್ಕೆ ಶ್ರೀ ವಾಲ್ಮೀಕಿ ಮಹರ್ಷಿಯ ದಿವ್ಯಸೂಕ್ತಿಗಳಿಗಾಗಿ (ರಾ. ಅಯೋಧ್ಯಾ. ೨೪-೨೫. ೨೬)ಶ್ಲೋಕಗಳನ್ನುಪರಾಂಬರಿಸಿ. ಹೀಗೆ ಭಾಗವತಾರಾಧನದಿಂದಲೇ ನಿತ್ಯಕರ್ಮಾಭಿಗಮನಾದಿಗಳಲ್ಲಿ ಅನಧಿಕೃತರಾದ ಸ್ತ್ರೀ ಶೂದ್ರಾದಿಗಳಿಗೆ ಇವುಗಳಿಂದುಂಟಾಗುವ ಫಲವೇ ಸಿದ್ಧಿಸುತ್ತದೆ ಎಂಬುದಕ್ಕೆ ಪ್ರಮಾಣಗಳನ್ನು ದಯಪಾಲಿಸುತ್ತಾರೆ

**ಇವ್ವರ್ಥತ್ತೈ** - ಈ ಅಭಿಪ್ರಾಯವನ್ನೇ, ಭಗವತ್ಕೈಙ್ಕರ್ಯರೂಪ ಭಗವದಾರಾಧನದಿಂದ ಯಾವ ಭಗವತ್ಪ್ರೀತಿಯು ಸಿದ್ಧಿಸಿ ಅನರ್ಥನಿವೃತ್ತಿಗಳುಂಟಾಗುತ್ತವೋ, ಅದೇ ಭಾಗವತ ಕೈಙ್ಕರ್ಯ ಮೂಲಕವೇ ಅನಧಿಕಾರಿಗಳಿಗೆ ಲಭಿಸುತ್ತದೆ ಎಂಬ ಅಬಿಪ್ರಾಯವನ್ನೇ ಎಂಬ ಭಾವವು, (೧) **ಸರ್ವೇಷಾಂ** - ಸಮಸ್ತವಾದ **ಆರಾಧನಾನಾಂ ಮಧ್ಯೇ** - ಆರಾಧನೆಗಳಲ್ಲಿ, **ವಿಷ್ಣೋರಾರಾಧನಂ** - ವಿಷ್ಣುವಿನ ಆರಾಧನೆಯು, **ಪರಂ** - ಶ್ರೇಷ್ಠವಾದುವೆಂದು, **ಪ್ರೋಕ್ತಂ** - ಹೇಳಲ್ಪಟ್ಟಿರುತ್ತದೆ, **ತಸ್ಮಾತ್** - ಆ ವಿಷ್ಣುವಿನ ಆರಾಧನೆಗಿಂತಲೂ, **ಪರಂ**-ಶ್ರೇಷ್ಠವಾದುದು, **ತದೀಯಾರಾಧನಂ** - ವಿಷ್ಣು ಭಕ್ತರ ಆರಾಧನೆಯು, **ಪರತರಂ** - ತುಂಬಾ ಶ್ರೇಷ್ಠವಾದುದಾಗಿ, **ಪ್ರೋಕ್ತಂ** - ಹೇಳಲ್ಪಟ್ಟಿರುತ್ತದೆ," **ಎನ್ರುಂ** - ಎಂಬದಾಗಿಯೂ, (೨) ಈ ತಿರುವಾಯ್ ಮೊಳಿಯ ಹತ್ತು ಪಾಶುರಗಳನ್ನೂ ಅರ್ಥದೊಂದಿಗೆ ಪಠನ ಮಾಡುವವರಿಗೆ ಸರ್ವವಿಧದಲ್ಲೂ ವಿಜಯ ಉಂಟೆಂದು ಫಲಶ್ರುತಿಯನ್ನು ಹೇಳುತ್ತಾರೆ, **ಕುನ್ರಮೆಡುತ್ತ** - ಇಂದ್ರನ ಕ್ರೂರಕೃತ್ಯದಿಂದ ರಕ್ಷಿಸುವ

---

(೧) ಪಾದ್ಮೋತ್ತರ ೨೯. ೮೧. (೨) ತಿರು. ೭. ४. ೧೧.

**ಶಡಗೋಪನುರ್ಕ್ಕೈ ಶೆಯಲ್"ಎನ್ರುಂ (೩) "ಏತ್ತಿ ಯಿರುಪ್ಪಾರ್ಕ್ಕೈ ವೆಲ್ಲುಮೇ, ಮತ್ತವರ್ಕ್ಕೈ ಶಾತ್ತಿಯಿರುಪ್ಪಾರ್ತವಮ್" ಎನ್ರುಮ್, ಅರುಳಿಚ್ಚೆಯ್ದಾರ್ಗಳ್.**

---

ದಕ್ಕಾಗಿ ಗೋವರ್ಧನೋದ್ಧರಣಮಾಡಿದ, **ಪಿರಾರ್ಕ್ಕ** - ಸರ್ವವಿಧದಲ್ಲೂ ಮಹೋಪಕಾರನಾದ ಶ್ರೀಕೃಷ್ಣನ, **ಅಡಿಯಾರೋಡುಮ್** - ದಾಸರಾದ ಭಕ್ತರೊಂದಿಗೆ, **ಒನ್ರಿನಿನ್ರ** - ವಿಶೇಷ ಪ್ರೀತಿಯಿಂದ ಏಕೀಭವಿಸಿ ನಿಲ್ಲುವ ಸ್ವರೂಪವನ್ನು ಹೊಂದಿ, **ಶಠಗೋಪರ್ಕ್ಕ** - ಶ್ರೀ ನಮ್ಮಾಳ್ವಾರವರಾದ ತಮ್ಮ, **ಉರ್ಕ್ಕೈಶೆಯಲ್**- ವಾಚಿಕರೂಪ ಕೈಂಕರ್ಯವಾಗಿ, ಮುಂದೆ, "**ನನ್ರಿ ಪುನೈನ್ದ ವೋರಾಯಿರತ್ತುಳ್ಳಿವೈ। ವೆನ್ರಿತರುಮ್ ಪತ್ತುಮ್ ಮೋವಿ ಕರ್ಪಾರ್ಕ್ಕೇ**" ಎಂದು **ಉತ್ತ**ರಾರ್ಧವಿರುತ್ತದೆ; **ಓರ್ ಆಯಿರತ್ತುಳ್** - ಅದ್ವಿತೀಯವಾದ ಸಾವಿರ ಪಾಶುರಗಳಲ್ಲಿ, **ನನ್ರಿ ಪುನೈನ್ದ** - ಸರ್ವೇಶ್ವರನ ವಿಜಯ ಸೂಚಕ ದಿವ್ಯ **ಚೇಷ್ಟಿತ**ಗಳಿಂದ **ಪೂ**ರ್ಣವಾದ, **ಇವೈ ಪತ್ತುಮ್** - ಈ ಹತ್ತು ಪಾಶುರಗಳನ್ನೂ, **ಮೋವಿಕರ್ಪಾರ್ಕ್ಕು** - ಅರ್ಥಸಹಿತವಾಗಿ ಅಭ್ಯಸಿಸುವರಿಗೆ, **ವೆನ್ರಿತರುಮ್** - ಸಮಸ್ತ ವಿಜಯಗಳನ್ನೂ ಅವು ಕೊಡುತ್ತವೆ, ಇಲ್ಲಿ ಶ್ರೀ ನಮ್ಮಾಳ್ವಾರವರು ತಮಗೆ ಶ್ರೀ ಕೃಷ್ಣನ ಭಕ್ತರೊಂದಿಗೆ ಸೇರಿಮಾಡುವ ವಾಚಿಕ ಕೈಙ್ಕರ್ಯವೇ ತಮಗೆ ಸ್ವರೂಪವಾಗಿ ಭಾವಿಸಿರುತ್ತಾರೆ" **ಎನ್ರುಮ್** - ಎಂಬದಾಗಿಯೂ ಮತ್ತು

(೩) ಇದು ಉತ್ತರಾರ್ಧವು. **ಪೂ**ರ್ವಾರ್ಧವು--

"**ಮಾರಾಯತಾನವನೈ ವಳ್ಳುಗಿರಾಲ್ ಮಾರ್ ಇರಣ್ಡು**
**ಕೂರಾಕಕ್ಕೀರಿಯ ಕೋಳರಿಯೈ-ವೇರಾಕ**" ಎಂದು.

**ಮಾರಾಯತಾನವನೈ** - ಸರ್ವೇಶ್ವರನಿಗೆ ಶತ್ರುವಾಗಿ ಆಚರಿಸಕೂಡದೆಂದು ತಿಳಿಯದ ಹಿರಣ್ಯಕಶಿಪುವೆಂಬ ರಾಕ್ಷಸನನ್ನು, **ವಳ್ಳುಗಿರಾಲ್**-ಕ್ರೂರಗಳಾದ ಉಗುರುಗಳಿಂದ, **ಮಾರ್** - ವಕ್ಷಸ್ಥಳವನ್ನು, ಇರಣ್ಡು**ಕೂರಾಗ**-ಎರಡು ಭಾಗವಾಗಿ, **ಕೀರಿಯ** - ಸೀಳಿದ, **ಕೋಳ್ ಅರಿಯೈ** - ಮಹಾ ಪರಾಕ್ರಮಿಯಾದ ಶ್ರೀನರಸಿಂಹ ಸ್ವಾಮಿಯನ್ನು, **ಏತ್ತಿ ಇರುಪ್ಪಾರ್ಕ್ಕೈ** - ಸ್ತೋತ್ರಮಾಡುವ **ಮಹಾ** ಭಾಗವತೋತ್ತಮರ **ಮತ್ತು**, **ಅವರ್ಕ್ಕೈ** - ಅಂತಹ ಭಾಗವತೋತ್ತಮರನ್ನು, **ಶಾತ್ತಿಯಿರುಪ್ಪಾರ್** - ಆಶ್ರಯಿಸಿರುವವರ, ಅಥವಾ **ಸ್ತೋ**ತ್ರಮಾಡುವವರ, **ತವಮ್**- ಸುಕೃತವು, **ವೆಲ್ಲುಮೇ** - ಜಯಶೀಲವಾದುದೇ, ಇಲ್ಲಿ ಭಗವದಾರಾಧನ **ಸ್ತೋತ್ರ**

---

(೩) ನಾನ್ಮುಗನ್ತಿರುವಂದಾದಿ. ೧೮.

**ಇಕ್ಕೈಙ್ಕರ್ಯಙ್ಗಳೈ ತಾಙ್ಗಳ್ ಅನುಷ್ಠಿತ್ತು ಉಕಪ್ಪಾರ್ಕ್ಕುಮ್,**
**ಇದು ಕಣ್ಡು ಉಕಪ್ಪಾರ್ಕ್ಕುಮ್, ಜಗದ್ವ್ಯಾಪಾರಂ ಪಣ್ಣು ವಧಿಕೃತ**

---

ಮಾಡುವವರಿಗಿಂತಲೂ, ಇಂತಹ ಭಾಗವತರನ್ನು ಆರಾಧಿಸುವವರು ಮಹಾ ಸುಕೃತಶಾಲಿಗಳು ಎಂದು ಹೇಳಲ್ಪಟ್ಟಿತು." ಎನ್ರುಮ್ - ಎಂಬದಾಗಿಯೂ, ಅರುಳಿಚೆಯ್‌ದಾರ್‌ಗಳ್ - ಕೃಪಯಾ ಉಪದೇಶಿಸಿರುತ್ತಾರೆ; ಯಾರು ಎಂದರೆ ಪಾದ್ಮೋತ್ತರ ಕರ್ತಾರವಾದ ಶ್ರೀ ವ್ಯಾಸ ಮಹರ್ಷಿಯೂ, ನಾನ್ಮುಕನ್ತಿರುವನ್ದಾದಿ ಕರ್ತಾರವಾದ ತಿರುಮಳಿಶೈಯಾಳ್ವಾರ್‌ರವರೂ ಎಂದು ಇಟ್ಟುಕೊಳ್ಳತಕ್ಕದ್ದು.

ಹೀಗೆ ಭಗವದಾರಾಧನಾದಿ ನಿತ್ಯ ನೈಮಿತ್ತಿಕಗಳಲ್ಲಿ ಅನಧಿಕೃತರಿಗೂ, ತದಧಿಕೃತರ ಆಶ್ರಯಣದ ಮೂಲಕ, ಅಧಿಕೃತರಿಗೆ ಉಂಟಾಗುವದು ಯಾವ ಫಲವೋ, ಆ ಫಲವೇ ಬರೀ ಆಶ್ರಯಣ ಮೂಲಕವೇ ಉಂಟಾಗುತ್ತದೆಂದು ಶ್ರೀ ಆಳ್ವಾರಾದಿ ದಿವ್ಯ ಸೂಕ್ತಿಪ್ರಮಾಣಗಳ ಮೂಲಕ ತೋರ್ಪಡಿಸಿದರು. ಪ್ರಪನ್ನರಾದ ಅಧಿಕೃತರಿಗೆ ಹೇಗೆ ಅನರ್ಥ ನಿವೃತ್ತಿರೂಪಪ್ರಯೋಜನವೋ, ಹಾಗೆಯೇ ಮಹಾ ಭಾಗವತಾಶ್ರಯಣದಿಂದಲೇ ಅನಧಿಕೃತ ಪ್ರಪನ್ನರಿಗೂ ಅನರ್ಥ ನಿವೃತ್ತಿಯು ದೊರೆಯುತ್ತದೆಂದು ಹೇಳಲ್ಪಟ್ಟಿತು. ಮುಂದಿನ ವಾಕ್ಯದಿಂದ ಇದರಲ್ಲಿ ಸಂಶಯ ಬೇಕಿಲ್ಲವೆಂಬುದಕ್ಕಾಗಿ ಒಂದು ದೃಷ್ಟಾಂತ ಮೂಲಕ ಸಮರ್ಥನೆ ಮಾಡಿ ಹೇಳುತ್ತಾರೆ:—ಇಕ್ಕೈಙ್ಕರ್ಯಙ್ಗಳೈ - ಈ ಭಗವದಾರಾಧನಾದಿ ನಿತ್ಯ ನೈಮಿತ್ತಿಕಗಳನ್ನು, ತಾಙ್ಗಳ್ ಅನುಷ್ಠಿತ್ತು - ತಮಗೇ ಅಧಿಕಾರವಿರುವದರಿಂದ ಅನುಷ್ಠಿಸಿ, ಉಗಪ್ಪಾರ್ಕ್ಕುಮ್ - ಭಗವತ್ಪ್ರೀಣನವು ದೊರೆಯುತ್ತದೆಂದು ಸಂತೋಷಪಡುವವರಿಗೂ, ಇದು ಕಣ್ಡು ಉಗಪ್ಪಾರ್ಕ್ಕುಮ್ - ತಮಗೆ ಅಧಿಕಾರವಿಲ್ಲದುದರಿಂದ, ತಾವು ಆಶ್ರಯಿಸಿದ ಭಾಗವತರು ಇವುಗಳನ್ನು ಮಾಡುವದನ್ನು ನೋಡಿ, ತಮಗೂ ಭಗವತ್ಪ್ರೀತಿಯುಂಟಾಗುತ್ತದೆಂಬ ಭಾವನೆಯಿಂದ ಸಂತೋಷಚಿತ್ತರಾಗಿರುವವರಿಗೂ, ಭೋಗಮ್ ಏಕರೂಪಮ್ - ಅದರಿಂದುಂಟಾಗುವ ಆನಂದವೂ ಫಲವೂ ಒಂದೇ ವಿಧವಾದುದು; ಅದನ್ನು ಈಗ ಸ್ಥಾಪಿಸಿದ ಒಂದು ದೃಷ್ಟಾಂತಮೂಲಕ ವ್ಯಕ್ತಪಡಿಸುತ್ತಾರೆ. ಆದರೆ ಅಭಿಗಮನಾದಿ ಆರಾಧನೆಗಳನ್ನು ನಡೆಸುವವರುಗಳಿಗೆ ಉಂಟಾಗುವ ಆನಂದವು ಸುಮ್ಮನೆ ಅವುಗಳನ್ನು ನೋಡುತ್ತಿರುವ ಅಥವಾ ಅಲ್ಪಸಹಾಯವನ್ನು ಮಾಡುವ ಅನಧಿಕೃತರಿಗೆ ಹೇಗೆ ಉಂಟಾದೀತು ? ಎರಡೂ ಒಂದೇ ಹೇಗೆ ಆದೀತು ? ಇಬ್ಬರಿಗೂ ಒಂದೇ ವಿಧ ಫಲವೆಂದರೆ ಒಪ್ಪತಕ್ಕದ್ದೇ ಎಂಬ ಸಂದೇಹವು ಬಾಧಿಸಬಹುದು. ಹಾಗೆ ಸಂದೇಹಕ್ಕೆ ಸ್ವಲ್ಪವೂ ಅವಕಾಶವಿಲ್ಲವೆಂದು ಒಂದು ದೃಷ್ಟಾಂತ

**ನಾನ ಈಶ್ವರನುಕ್ಕುಮ್ ಮುಕ್ತರುಕ್ಕುಮ್ ಪೋಲೆ, ಭೋಗಮೇಕ ರೂಪಮ್. (೧) "ಧರ್ಮಶ್ಶ್ರುತೋವಾ ದೃಷ್ಟೋವಾ ಸ್ಮೃತೋವಾ ಕಥಿತೋಪಿವಾ। ಅನುಮೋದಿತೋವಾ ರಾಜೇಂದ್ರ ಪುನಾತಿ ಪುರುಷಂಸದಾ" ಎಙ್ಗಿರ ಪಾವನತ್ವಮ್ಪೋಲೆ ಭೋಗ್ಯತ್ವಮುಮ್ ಕುರೈ ಯಿಲ್ಲೈ-**

ಮೂಲಕ ತಿಳಿಸುತ್ತಾರೆ. ಹಿಂದೆ ಮುಕ್ತರೆಲ್ಲರಿಗೂ ಆನಂದವು ಒಂದೇ ಸಮನಾದುದೆಂದೂ, ಆ ಆನಂದವು ಪರಮಾತ್ಮನ ಆನಂದಕ್ಕೂ ಸಮವೆಂದು ಸ್ಥಾಪಿಸಿದರು, ಆದೃಷ್ಟಾಂತಮೂಲಕವೇ ಇದನ್ನೂ ಸ್ಥಾಪಿಸುತ್ತಾರೆ:—**ಜಗದ್ವ್ಯಾಪಾರಂಪಣ್ಣವಧಿಕೃತನಾನ ಈಶ್ವರನುಕ್ಕುಮ್** - ಜಗದ್ವ್ಯಾಪಾರವನ್ನು ನಡೆಸುವ ಅಧಿಕಾರವುಳ್ಳ ಸರ್ವೇಶ್ವರನಿಗೂ, **ಮುಕ್ತರುಕ್ಕುಂಪೋಲೆ** - ಮುಕ್ತರಿಗೂ ಭೋಗವು ಹೇಗೆ ಏಕರೂಪವೋ, ಹಾಗೆಯೇ ಇಲ್ಲಿಯೂ ಈ ಕೈಙ್ಕರ್ಯಗಳಲ್ಲಿ ಅಧಿಕಾರಿವಿರುವವರಿಗೂ ಅವರನ್ನು ಆಶ್ರಯಿಸಿರುವ ಅನಧಿಕಾರಗಳಿಗೂ ಭೋಗವು ಏಕರೂಪವು ಆದುದರಿಂದ ಈ ವಿಷಯದಲ್ಲಿ ಸಂದೇಹವು ಬೇಕಿಲ್ಲವೆಂಬ ಭಾವವು. ಹಾಗೆ ಈ ಅಧಿಕಾರಿಗಳಿಗೂ ಅನಧಿಕಾರಿಗಳಿಗೂ ಭೋಗವು ಏಕರೂಪವೆಂದು ಶ್ರೀ ವ್ಯಾಸ ಮಹರ್ಷಿಯು ಹೇಳಿರುತ್ತಾರೆಂದು ಭಾರತ ಪ್ರಮಾಣವನ್ನು ಮುಂದೆ ಉದಾಹರಿಸುತ್ತಾರೆ. "**ಧರ್ಮಃ** - ಧರ್ಮವು, ಶಾಸ್ತ್ರದಲ್ಲಿ ವಿಧಿ ನಿಷೇಧರೂಪದಲ್ಲಿ ಹೇಳಿರುವದು, ಶಾಸ್ತ್ರವಿಹಿತವಾದ ಅನುಷ್ಠಾನವು, **ಶ್ರುತೋವಾ** - ಉಪದೇಶರೂಪದಲ್ಲಿ ಕೇಳಲ್ಪಟ್ಟಿರಾಗಲಿ, **ದೃಷ್ಟೋವಾ** - ಅಂತಹ ಕೈಙ್ಕರ್ಯವು ನೋಡಲ್ಪಟ್ಟಿರಾಗಲಿ, **ಸ್ಮೃತೋವಾ** - ಹಿಂದೆ ನಡೆದುದನ್ನು ಸ್ಮರಿಸಲ್ಪಟ್ಟಿರಾಗಲಿ, **ಕಥಿತೋಪಿವಾ** - ಹೇಳಲ್ಪಟ್ಟಿರಾಗಲಿ, **ಅನುಮೋದಿತೋವಾ** - ಬಹು ಚೆನ್ನಾಗಿ ನಡೆಯಿತು ಎಂದು ಅದನ್ನು ಅಙ್ಗೀಕರಿಸಲ್ಪಟ್ಟಿರಾಗಲಿ, **ಹೇ ರಾಜೇಂದ್ರ** - ಓರಾಜಶ್ರೇಷ್ಠನೇ, **ಸದಾ** - ಯಾವಾಗಲೂ, **ಪುರುಷಂ** - ಅಧಿಕಾರಿಯನ್ನು, **ಪುನಾತಿ**-ಪವಿತ್ರೀಕರಿಸುತ್ತದೆ. ಪಾಪಗಳು ತೊಲಗುವದರಿಂದ ಪರಿಶುದ್ಧನಾಗುತ್ತಾನೆ ಧರ್ಮಾನುಷ್ಠಾನವನ್ನು ತಾನೇ ಮಾಡಬೇಕೆಂಬ ಆವಶ್ಯಕತೆಯು ಇರುವದಿಲ್ಲವು, ಅದನ್ನು ಕೇಳಿದರೂ ಸರಿಯೇ, ಅಥವಾ ಕಣ್ಣಿನಿಂದ ನೋಡಿದರೂ ಸರಿಯೇ, ಅದನ್ನು ಸ್ಮರಿಸಿದರೂ ಸರಿಯೇ, ಅದನ್ನು ಕುರಿತು ಪಠಿಸಿದರೂ ಸರಿಯೇ, ಅಥವಾ ಅದನ್ನು ಅಙ್ಗೀಕರಿಸಿದರೂ ಸರಿಯೇ ಈತನಿಗೆ ಪಾಪಪರಿಹಾರಮೂಲಕ ಪವಿತ್ರತೆ ಯುಂಟಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. **ಎಙ್ಗಿರ ಪಾವನತ್ವಂಪೋಲೆ** ಎಂಬ ಪ್ರಮಾಣದಲ್ಲಿ ಹೇಳಲ್ಪಟ್ಟಿರುವ ಪಾವನತ್ವವು ಈ ಎಲ್ಲರಿಗೂ

(೧) ಭಾರ. ಅಶ್ವ. ೯೬, ೩೧.

ಹೇಗೆ ಸಮವೋ, ಹಾಗೆಯೇ, ಭೋಗ್ಯತ್ವಮುಮ್ ಏಕರೂಪಮಾಗ - ಈ ಭಗವದಾರಾಧನಾದಿಗಳಲ್ಲಿ ಅಧಿಕಾರವಿರುವವರಿಗೂ, ಅಧಿಕಾರ ವಿಲ್ಲದವರಿಗೂ ಭೋಗ್ಯತ್ವವು ಸಮವೆಂದು ಹೇಳುವವಕ್ಕೇನೂ ಕುರೈಯಿಲ್ಲೈ - ಕುಂದಕವಿಲ್ಲವು. ಆದರೆ ಜ್ಯೋತಿಷ್ಟೋಮ ಯಜ್ಞಾನುಷ್ಠಾನವನ್ನು ಮಾಡುವವನಿಗೆ, ಸ್ವರ್ಗಪ್ರಾಪ್ತಿ ಫಲವುಂಟು, ಅಂಥಾವನನ್ನು ಆಶ್ರಯಿಸಿದವನು ಅದನ್ನು ನೋಡುವದರಮಾತ್ರದಿಂದಲೇ ಸ್ವರ್ಗಪ್ರಾಪ್ತಿ ಹೊಂದುವನೆಂದರೆ ಅಸಂಗತವಲ್ಲವೋ, ಎಂದಾಕ್ಷೇಪ ತಂದರೆ, ಅಲ್ಲಿ ಫಲವು ಮುಖ್ಯ ಕಲ್ಪವಾದ ಅನುಷ್ಠಾನಕ್ಕೆ ಮಾತ್ರವೇ ಹೇಳಿತೇ ವಿನಾ ಅನುಕಲ್ಪವಾದ ನೋಡುವದೇ ಮೊದಲಾದುದಕ್ಕೆ ಹೇಳಲಿಲ್ಲವು ಆದುದರಿಂದ ನೋಡುವವರಿಗೆ ಸ್ವರ್ಗವಿಲ್ಲವು ಆದರೆ ಪಾವನತ್ವವೇನೋ ಉಂಟು. ಇದು ಪ್ರಪನ್ನ ವಿಷಯವು, ಅಂತಹ ಸ್ವರ್ಗಪ್ರಾಪ್ತಿ ವಿಷಯವಾದುದಲ್ಲವು. ಪ್ರಮಾಣವು ಪಾವನತ್ವಫಲ ವಿಷಯವಾಗಿ ಅದು ಎಲ್ಲರಿಗೂ ಏಕರೂಪವೆಂದು ಹೇಳುವದರಿಂದ, ನಮಗೆ ಅದು ಗ್ರಾಹ್ಯವೆಂದು ಭಾವಿಸತಕ್ಕದ್ದು. ಆದುದರಿಂದ ಭಗವದಾರಾಧನಾದಿ ನಿತ್ಯ ನೈಮಿತ್ತಿಕಗಳನ್ನು ಅನಧಿಕೃತರು ತಾವೇ ಮಾಡದಿದ್ದರೂ, ಹಾಗೆ ಅನುಷ್ಠಿಸುವ ಮಹಾ ಭಾಗವತರನ್ನಾಶ್ರಯಿಸಿ, ಅವರುಗಳು ಮಾಡುವವನ್ನೇ ಅನುಮೋದಿಸಿ ಅದಕ್ಕೆ ಬೇಕಾದ ಸಹಾಯಗಳನ್ನು ಅವರ ಆಜ್ಞಾಧಾರಿಗಳಾಗಿ ಶಿರಸಾವಹಿಸಿ, ನಡೆಸುವದರಿಂದಲೇ ಅಂತಹ ಫಲವೇ ಎಂದರೆ ಅನರ್ಥನಿವೃತ್ತಿಯು ಉಂಟಾಗುತ್ತದೆಂದು ಸಮರ್ಥಿಸಿ ಸಪ್ರಮಾಣವಾಗಿ ಉಪದೇಶಿಸಿರುತ್ತಾರೆ.

ಹೀಗೆ ಭಗವದಾರಾಧನೆಯಲ್ಲಿ ಸ್ತ್ರೀ ಶೂದ್ರಾದಿಗಳಿಗೆ ಅಧಿಕಾರವಿಲ್ಲದಿದ್ದರೂ ಪತಿವ್ರತಾಸ್ತ್ರೀಯು ಪತಿಯನ್ನೇ ಪರದೈವವೆಂದು ಆಶ್ರಯಿಸಿರುವದರಿಂದ, ಪತಿಯು ಅನುಷ್ಠಿಸುವ ಭಗವದಾರಾಧನಾದಿ ನಿತ್ಯ ನೈಮಿತ್ತಿಕಗಳಿಂದಲೇ ಆಕೆಗೂ ಅನಿಷ್ಟ ನಿವೃತ್ತಿಯ ಮೂಲಕ ಪಾವನತ್ವವೂ, ಶೂದ್ರಾದಿ ಅನಧಿಕೃತರಿಗೂ ಮಹಾ ಭಾಗವತನನ್ನು ಆಶ್ರಯಿಸಿದರೆ, ಆ ಭಾಗವತನು ಅನುಷ್ಠಿಸುವ ನಿತ್ಯ ನೈಮಿತ್ತಿಕಗಳಿಂದಲೇ ಅವರಿಗೂ ಪಾವನತ್ವವು ಲಭಿಸುತ್ತದೆಂದು ಸ್ಥಾಪಿಸಲ್ಪಟ್ಟಿತು ಆದರೆ ಪ್ರಪನ್ನರಾದ ಸ್ತ್ರೀ ಶೂದ್ರಾದಿಗಳಿಗೂ ಭಗವದನುಸ್ಮರಣೆಯು ಆವಶ್ಯಕವು. ಧ್ಯೇಯೋ ನಾರಾಯಣಸ್ಸದಾ ಎಂದು ಹೇಳಿರುವದು ಸಾರ್ವತ್ರಿಕವಾಗಿ ಹೇಳಿರುವಂತಾದ್ದು. ಅದರಲ್ಲಿ ಎಲ್ಲರಿಗೂ ಅಧಿಕಾರವುಂಟು ಈ ಧ್ಯಾನವು ಅಷ್ಟಾಕ್ಷರ ಮೂಲಕವಾಗಿ ಮಾಡುವದೇ ಪ್ರಶಸ್ತವು. ಆದರೆ ಈ ಅನಧಿಕಾರಿಗಳಿಗೆ ಮೂಲ ಮಂತ್ರೋಚ್ಚಾರಣೆಯು ಸರಿಯಲ್ಲವಲ್ಲಾ, ಹೀಗಿರುವಾಗ ಸರ್ವಾಧಿಕಾರವಾದ ಈ ಭಗವದನುಸ್ಮರಣೆಯನ್ನು ಅವರುಗಳು ಯಾವರೀತಿಯಲ್ಲಿ ಮಾಡತಕ್ಕದ್ದೆಂಬುದನ್ನು ಮುಂದೆ ಉಪದೇಶಿಸುತ್ತಾರೆ :—

### ಅನಧಿಕೃತ ಪ್ರಪನ್ನೈಃ ಭಗವದನುಸ್ಮರಣಂ ಕಥಂ ಕರ್ತವ್ಯಂ ?

**ಅಪ್ಪಡಿಯೇ (೧) "ತಸ್ಮಾತ್ಸಪ್ರಣವಂ ಶೂದ್ರೋ ಮನ್ನಾಮಾನಿ ನಕೀರ್ತಯೇತ್" ಎನ್ರು ಮಹಾ ಭಾರತತ್ತಿಲುಮ್, (೨) ಅಷ್ಟಾಕ್ಷರ ಜಪ ಸ್ತ್ರೀಣಾಂ ಪ್ರಕೃತ್ಯೇವ ವಿಧೀಯತೇ । ನ ಸ್ವರಃ ಪ್ರಣವೋಙ್ಗಾನಿ ನಾ**

---

### ಅನಧಿಕೃತರಾದ ಪ್ರಪನ್ನರಿಂದ ಭಗವದನುಸ್ಮರಣೆಯು ಹೇಗೆಮಾಡತಕ್ಕದ್ದು ?

**ಅಪ್ಪಡಿಯೇ** - ಭಗವದಾರಾಧನಾದಿಗಳಲ್ಲಿ ಅಧಿಕೃತರಾದವರಿಗೆ ಪಾಂಚಕಾಲಿಕ ಭಗವದನುಸ್ಮರಣೆಯ ರೂಪವಾದ ಮಂತ್ರಾದಿ ರಹಸ್ಯಗಳ ಮೂಲಕ ಧ್ಯಾನವೂ ಸಹ ಹೇಗೆ ಆವಶ್ಯಕವೋ ಹಾಗೆಯೇ, ಮುಂದೆ ಅನಧಿಕೃತರಾದ ಸ್ತ್ರೀ ಶೂದ್ರಾದಿಗಳಿಗೆ ಭಗವದನುಸ್ಮರಣವು ಆವಶ್ಯಕವೆಂದು ಹೇಳಿ **ಭಗವದನುಸ್ಮರಣ ರಸತ್ತುಕ್ಕು** - ಭಗವದನುಸ್ಮರಣವಿಂದುಂಟಾಗುವ ಆನಂದಕ್ಕೇನೂ ಅವರಿಗೂ, **ಕ್ಕುರೈಯಿಲ್ಲೈ** - ನ್ಯೂನತೆಯಿಲ್ಲವೆಂದು ಹೇಳುತ್ತಾರೆ ; ಅದಕ್ಕೆ ಕೆಲವು ಪ್ರಮಾಣಗಳನ್ನುದಾಹರಿಸುತ್ತಾರೆ (೧) **ತಸ್ಮಾತ್**-ಆಕಾರಣದಿಂದ ಶೂದ್ರನು **ಮನ್ನಾಮಾನಿ** - ನನ್ನ ನಾಮಗಳನ್ನು, ಅಷ್ಟೋತ್ತರ ಸಹಸ್ರ ನಾಮಾವಳಿಗಳಲ್ಲಿ, **ಸಪ್ರಣವಂ** ಪ್ರಣವ ಸಹಿತವಾಗಿ, **ನ ಕೀರ್ತಯೇತ್**- ಉಚ್ಚರಿಸಬಾರದು ಆತನು, **ಹರಿಃ ಓಂ** ಎಂದು ಹೇಳಕೂಡದು, **ಓಂ ಶ್ರೀಕೃಷ್ಣಾಯನಮಃ, ಓಂ ಶ್ರೀ ರಾಮಾಯನಮಃ** ಎಂದೂ ಹೇಳಕೂಡದು, ದೇವರ ನಾಮಗಳನ್ನೇ ಉಚ್ಚರಿಸಬಾರದು ಎಂಬ ಅಭಿಪ್ರಾಯವಲ್ಲವು ; ಓಂ ಎಂದು ಪ್ರಣವನೊಂದಿಗೆ ಉಚ್ಚರಿಸತಕ್ಕದ್ದಲ್ಲವೆಂಬ ಭಾವವು" **ಎನ್ರು ಭಾರತತ್ತಿಲುಮ್** ಎಂದು ಭಾರತದಲ್ಲೂ (೨) ಮತ್ತು, **ಸ್ತ್ರೀಣಾಂ** - ಬ್ರಾಹ್ಮಣಾದಿ ತ್ರೈವರ್ಣಿಕ ಸ್ತ್ರೀಯರುಗಳಿಗೆ, ಸುಮ್ಮನೆ ಸ್ತ್ರೀಣಾಂ ಎಂದಿದ್ದರೂ ಹೀಗೆ ಅರ್ಥವನ್ನು ಗೋಬಲೀವರ್ದನ್ಯಾಯದಿಂದ ಮಾಡಿರುತ್ತದೆ, ಏಕೆಂದರೆ ಮುಂದೆ **ಸ್ತ್ರೀಣಾಂತು ಶೂದ್ರಜಾತೀನಾಂ** ಎಂದು ಶೂದ್ರಸ್ತ್ರೀಯರಿಗೆ ಬೇರೆ ವಿಧಾನವು ಹೇಳಲ್ಪಟ್ಟಿರುತ್ತದೆ, **ಅಷ್ಟಾಕ್ಷರ ಜಪಃ** - ಮೂಲ ಮಂತ್ರ ಜಪವು, **ಪ್ರಕೃತ್ಯೇವ** - ಮಂತ್ರವೊಪ್ಪೋ ಅಷ್ಟು ಮಾತ್ರದಿಂದಲೇ ಎಂದರೆ ಸ್ವರದಿಂದ ಉಚ್ಚಾರಣೆಯೂ ಕೂಡದು, ಪ್ರಣವದಿಂದ ಉಚ್ಚಾರಣೆಯೂ ಕೂಡದೆಂಬುದು ತಾತ್ಪರ್ಯವು. ಇದನ್ನೇ ಮುಂದೆ

---

(೧) ಭಾರ. ಆಶಂ.೧೧೫. ೧೪. (೨) ನಾರದೀಯೇ,

**ಪ್ಯನ್ಯ ವಿಧಯಸ್ತಥಾ । ಸ್ತ್ರೀಣಾಂತು ಶೂದ್ರಜಾತೀನಾಂ ಮಂತ್ರ ಮಾತ್ರೋಕ್ತಿ ರಿಷ್ಯತೇ" ಎನ್ರು ನಾರದೀಯಾದಿಗಳಿಲುಮ್, (೩) "ನಮೋ ನಾರಾಯಣೇತ್ಯುಕ್ತ್ವಾ ಶ್ವಪಾಕಃ ಪುನರಾಗಮತ್" ಎನ್ರು ಶ್ರೀ ವರಾಹ ಪುರಾಣತ್ತಿಲುಮ್, (೪) "ನಾಯಿನಾಲ್ ನಮೋ ನಾರಣಾವೆನ್ನು ಮತ್ತ ಕೆತ್ತಿಡಕ್ಕೈಗಳ್ಳೆ ಕ್ಕೊಳ್ಳು" ಎನ್ರುಮ್, (೫) ನಾಮುಂ ಶೊಲ್ಲಿಲ್ ನಮೋ**

---

ವಿವರಿಸುತ್ತಾರೆ :— **ನ ಸ್ವರಃಪ್ರಣವೋಽಙ್ಗಾನಿ** - ಉದಾತ್ತಾದಿ ಸ್ವರದೊಂದಿಗೆ ಉಚ್ಚಾರಣೆಯಿಲ್ಲದೆಯೂ, ಪ್ರಣವವಿಲ್ಲದೆಯೂ, ಅಙ್ಗನ್ಯಾಸ ಕರನ್ಯಾಸಾದಿಗಳಿಲ್ಲದೆಯೂ ಇರತಕ್ಕದ್ದು, **ತಥಾ** - ಹಾಗೆಯೇ, **ನಾಪ್ಯನ್ಯ ವಿಧಯಃ** - ಬೇರೆ ಇನ್ನು ಯಾವ ವಿಧಿಗಳೂ ಇಲ್ಲವು, ಋಷಿ ಛಂದಸ್ಸುಗಳೂ ಇಲ್ಲವು ಎಂಬ ಭಾವವು. ಈ ಪ್ರಮಾಣವನ್ನೇ ಮುಂದೆ ಪುನಃ ಮೂಲಮಂತ್ರಾಧಿಕಾರದಲ್ಲೂ ಉದಾಹರಿಸಿರುತ್ತಾರೆ ಅಲ್ಲಿ ಮಂತ್ರಗಳ ಉಪದೇಶವು ವೈದಿಕ, ವೈದಿಕ ತಾಂತ್ರಿಕ, ತಾಂತ್ರಿಕವೆಂದು ಮೂರು ವಿಧವೆಂದೂ, ಬ್ರಾಹ್ಮಣನಿಗೆ ವೈದಿಕವಾಗಿಯೂ, ಕ್ಷತ್ರಿಯರಿಗೆ ವೈದಿಕ ತಾಂತ್ರಿಕವಾಗಿಯೂ, ವೈಶ್ಯ ಶೂದ್ರರಿಗೆ ತಾಂತ್ರಿಕವಾಗಿಯೂ ಇರತಕ್ಕದ್ದೆಂದು ಪಾಂಚರಾತ್ರದಲ್ಲಿ ಹೇಳ್ಪಟ್ಟಿದೆಯೆಂದು ತಿಳಿಸಿ, ಮೂಲಮಂತ್ರವು ಪ್ರಣವ ಚತುರ್ಥಿಗಳಿಲ್ಲದುದಾದರೆ ಮಂತ್ರಾಧಿಕಾರವಿಲ್ಲದ ಸರ್ವರಿಗೂ ಉಪಯುಕ್ತವಾದುದಾಗುತ್ತದೆಂದು ಹೇಳಲ್ಪಟ್ಟಿರುತ್ತದೆ." **ಎನ್ರು** - ಎಂಬದಾಗಿ, **ನಾರದೀಯಾದಿಗಳುಮ್** ನಾರದೀಯ ಪುರಾಣವೇ ಮೊದಲಾದವುಗಳಲ್ಲೂ (೩) **ನಮೋ ನಾರಾಯಣೇತ್ಯುಕ್ತ್ವಾ** - ಪ್ರಣವ ಚತುರ್ಥಿಗಳಿಲ್ಲದೆ ಸ್ವರದಿಂದಲೂ ಉಚ್ಚರಿಸದೆ ಸುಮ್ಮನೆ **ನಮೋನಾರಾಯಣಾ** ಎಂದು ಇಷ್ಟುಮಾತ್ರ ಉಚ್ಚರಿಸಿದರೆ, **ಶ್ವಪಾಕಃ**-ನಾಯಿ ಮಾಂಸವನ್ನು ತಿನ್ನುವ ಚಂಡಾಲನೂ ಕೂಡ, **ಪುನರಾಗಮತ್** - ಪುನಃ ಹಿಂತಿರುಗಿಬಂದನು, ಹಾಗೆ ಮಂತ್ರವನ್ನು ಉಚ್ಚರಿಸಿದುದರಿಂದ ಅಧೋಗತಿಯಿಂದ ಹಿಂತಿರುಗಿದನು ಎಂಬ ಭಾವವು," **ಎನ್ರು** - ಎಂಬದಾಗಿ, **ಶ್ರೀವರಾಹ ಪುರಾಣದಲ್ಲೂ**, (೪) **"ನಾಯಿನಾಲ್"** ಇತ್ಯಾದಿ-ಇದರ ಅರ್ಥ ತಾತ್ಪರ್ಯಗಳಿಗೆ ೧೮೫೭-೮ ನೆಯ ಪುಟಗಳನ್ನು ನೋಡಿ **ಎನ್ರುಮ್**-ಎಂಬದಾಗಿಯೂ (೫) ತಿರುಮಂಗೈಯಾಳ್ವಾರ್ ಅನುಗ್ರಹಿಸಿರುವ ಪೆರಿಯ ತಿರುಮೊಳಿ ಆರಾಂಪತ್ತುಪತ್ತಾನ್ದಿರುಮೊಳಿಯ ಪ್ರತಿಯೊಂದು ಪಾಶುರದಲ್ಲೂ **"ನಾಮುಮ್ ಶೊಲ್ಲಿಲ್ ನಮೋ ನಾರಾಯಣಮೇ"** ಎಂದು ಪಲ್ಲವಿರೂಪದಲ್ಲಿ ಇರುತ್ತದೆ.

---

(೩) ವರಾಹಪುರಾಣ ೧೩೯-೫೩ (೪) ಪೆರಿ. ತಿರು. ೪.೫ ೨.(೫) ಪೆರಿ. ೬. ೧೦. ೧

**ನಾರಾಯಣನೋ” ಎನ್ರುಮ್, ಶೊಲ್ಲುಗಿರಪಡಿಯೇ ತಿರುಮಂತ್ರಮಾ ಗಿರ ಎಟ್ಟ್ರುಕ್ಕಣ್ಣಾನ ಕರುಮ್ಬಿಲೇ ವೇರ್ ಪ್ಪಱ್ಱುಮ್ ತಲೈಯಾಡ್ಡೈ ಯುಮ್ ಕಳಿನ್ದಾಲ್ ನಡುವುಳ್ಳ ಅಂಶಮ್ ಸರ್ವೋಪಜೀವ್ಯಮಾಗಿರಾ ಪ್ಪೋಲೆ ಪ್ರಪತ್ತಿ ನಿಷ್ಠರೆಲ್ಲಾರ್ಕ್ಕುಮ್ ಸರ್ವಕಾಲತ್ತಿಲುಮ್ ಭಗವದನು**

---

ಹೀಗೆ **“ನಾಮಮ್ ಶೊಲ್ಲಿಲ್”** ಪರಮಪುರುಷನ ನಾಮಗಳನ್ನು ಹೇಳಲಾಗಿ ಆತನು ಎಂತವನೆಂದರೆ, ಶ್ರಿಯಃಪತಿಯಾಗಿ, ಆಶ್ರಿತಸುಲಭನಾಗಿ ಅತಿ ಮಾನುಷ ಚೇಷ್ಟಿತೆಗಳನ್ನು ನಡೆಸುವ ಸಾಮರ್ಥ್ಯವುಳ್ಳವನಾಗಿ, ವಿರೋಧಿನಿರಸನ ಶೀಲನಾಗಿ ಉಭಯವಿಭೂತಿಯುಕ್ತನಾಗಿರುವ ಪರಮಪುರುಷನ ನಾಮವನ್ನು ಹೇಳಿದರೆ ನಮಗೆ ಇಷ್ಟಾರ್ಥಸಿದ್ಧಿಯುಂಟು. ಅದನ್ನು ಹೇಳುವದು ಹೇಗೆ ಎಂದರೆ **“ನಮೋ ನಾರಾಯಣನೋ”** ಮೂಲಮಂತ್ರದಲ್ಲಿ ಹೇಳಿರುವ **“ನಮೋನಾರಾಯಣ”** ಎಂಬದಾಗಿ ಎಂಬ ತಾತ್ಪರ್ಯವು ಮೊದಲು ಪಾಶುರದಲ್ಲಿ **ಕಂಡುಕೊಣ್ಡೇನ್ ನಾರಾಯಣಾವೆನ್ನುಮ್ ನಾಮಮ್”** ಎಂಬ ಅಭಿಪ್ರಾಯವೇ ಇಲ್ಲಿಯೂ ಸ್ಮಾರಿತವು” **ಶೊಲ್ಲುಗಿರಪಡಿಯೇ** - ಹೇಳಿರುವ ಮೇರೆಗೆ, **ತಿರುಮಂತ್ರಮಾ ಗಿರ** - ಮೂಲಮಂತ್ರವಾಗಿರುವ, **ಎಟ್ಟುಕ್ಕಣ್ಣಾನ** - ಎಂಟು ಗೆಣ್ಣುಗಳುಳ್ಳ, **ಕರುಮ್ಬಿಲೇ** – ಕಬ್ಬಿನಲ್ಲಿ, **ವೇರ್ ಪತ್ತುಮ್** - ಮೂಲಭಾಗವನ್ನೂ, ಬುಡ ವನ್ನೂ, **ತಲೆಯಾಡ್ಡೈ** - ಅಗ್ರ ಭಾಗವಾದ ಸೋಗೆಯನ್ನೂ, **ಕಳಿನ್ದಾಲ್** - ತೆಗದುಹಾಕಿದರೆ, **ನಡುವುಳ್ಳಅಂಶಮ್** - ಮಧ್ಯಭಾಗವು, **ಸರ್ವೋಪಜೀವ್ಯ ಮಾಗಿರಾಪ್ಪೋಲೆ** - ಸಮಸ್ತರಿಗೂ ಶಕ್ತಿಯನ್ನು ಕೊಡುವ ರೀತಿಯಲ್ಲಿ ಭೋಗ್ಯ ವಾಗಿರುವಹಾಗೆ, **ಪ್ರಪತ್ತಿ ನಿಷ್ಠರೆಲ್ಲಾರ್ಕ್ಕುಮ್** - ಪ್ರಪತ್ತಿಯನ್ನನುಷ್ಠಿಸುವ ರೆಲ್ಲರಿಗೂ, ಸ್ತ್ರೀ ಶೂದ್ರಾದಿಗಳೆಲ್ಲರಿಗೂ ಎಂಬಭಿಪ್ರಾಯವು, ಭಗವದನುಸ್ಮರಣ ದಿಂದುಂಟಾಗುವ, ರಸತ್ತುಕ್ಕು-ಆನಂದಕ್ಕೆ ಎಂದರೆ ಆನಂದಪ್ರಾಪ್ತಿಗೆ ವಿರೋಧ ವಿಲ್ಲವು. ಇಲ್ಲಿ ತಿರುಮಂತ್ರವು ಅಮೃತವೆಂದು ಹೇಳಿಸಿಕೊಳ್ಳುವ ಮೋಕ್ಷಾನಂದ ಪ್ರಾಪ್ತಿಯನ್ನುಂಟುಮಾಡುವದರಿಂದ ಸ್ವಾದುತಮವಾದ ಕಬ್ಬಿಗೆ ಹೋಲಿಸಲ್ಪಟ್ಟಿ ರುತ್ತದೆ. ಅದು ಅಷ್ಟಾಕ್ಷರ ಮಂತ್ರವಾದುದರಿಂದ ಎಂಟು ಗೆಣ್ಣುಗಳುಳ್ಳದ್ದು; ಸರ್ವರಿಗೂ ಭೋಗ್ಯವಾಗುವದಕ್ಕೆ ಕೆಳಗಿನ ಕಠಿಣವಾದ ಗಂಟಿನ ಭಾಗವನ್ನು ಮೇಲಿನ ರುಚಿಯಿಲ್ಲದ ತುಂಡೆಭಾಗವನ್ನೂ ಕಬ್ಬಿನಲ್ಲಿ ತೆಗದುಹಾಕಿದರೆ, ಸರ್ವರಿಗೂ ಹೇಗೆ ಭೋಗ್ಯವಾದುದಾಗುತ್ತದೆಯೋ, ಹಾಗೆಯೇ ಮೂಲಮಂತ್ರದ ಮೂಲಭಾಗ ವಾದ ಪ್ರಣವವನ್ನೂ, ಅಗ್ರಭಾಗವಾದ ಚತುರ್ಥಿಯನ್ನೂ ತೆಗದು ಹಾಕಿದರೆ, ಸರ್ವಾಧಿಕಾರವುಳ್ಳದಾಗುತ್ತದೆಂಬ ಭಾವವು. **ಪ್ರಣವಚತುರ್ಥಿ**

**ಸ್ಮರಣರಸತ್ತ್ಯಕ್ಕ್ಯ ವಿರೋಧಮಿಲ್ಲೈ. ಸಪರಿಕರಮಾನ ವಿಲಕ್ಷಣಭಕ್ತಿಯೋಗ ಮಾಗಲಿರೆ ಶಿಲರ್ಕ್ಕು ವಿರೋಧಮುಳ್ಳದು. ಕ್ಷಣಮಾತ್ರ ಸಾಧ್ಯಮಾನ ಪ್ರಪ**

ಗಳಿಲ್ಲದಿದ್ದರೆ **ವಿರೋಧಮಿಲ್ಲೈ** ಎಂದು ಹೇಳಿರುವದರಿಂದ, ಪ್ರಣವ ಚತುರ್ಥಿ
ಗಳು ಇದ್ದರೆ, ಪಾಂಚರಾತ್ರಾದಿ ಅನೇಕ ಪ್ರಮಾಣಗಳಿಗೆ ವ್ಯತ್ಯಸ್ತವಾದುದರಿಂದ
ಈ ಅಧಿಕಾರಿಗಳಿಗೆ ವಿರೋಧವೆಂಬ ತಾತ್ಪರ್ಯವು ; ಸ್ತ್ರೀ ಶೂದ್ರಾದಿಗಳಿಗೆ ಪ್ರಣ
ವವು ಕೂಡದೆಂಬುದಕ್ಕೆ ಮಹಾಭಾರತ ವಚನವನ್ನೂ, ಸ್ವರ ಕೂಡದೆಂಬುದಕ್ಕೆ
ನಾರದೀಯುವಚನವನ್ನೂ, ಪ್ರಣವಚತುರ್ಥಿಗಳಿಲ್ಲದಿದ್ದರೆ ಸರ್ವವಿಷಯುವಾಗುತ್ತ
ದೆಂಬುದಕ್ಕೆ ಶ್ರೀ ವಾರಾಹ ವಚನವನ್ನೂ, ಉದಾಹರಿಸಿ, ಆಳ್ವಾರುಗಳಭಿಪ್ರಾ
ಯುವೂ ಹಾಗೆಯೇ ಎಂಬ ದಕ್ಕೆ ಶ್ರೀ ತಿರುಮಂಗೈಯಾಳ್ವಾರವರ ಪಾಶುರವನ್ನು
ಉದಾಹರಿಸಿರುತ್ತಾರೆ. ಭಕ್ತಿಯೋಗಕ್ಕೀಗ ತ್ರೈ ವರ್ಣಿಕರೇ ಆಗಿರಬೇಕೆಂಬ ಆವ
ಶ್ಯಕವೆಂದೂ ಇತರರಿಗೆ ಕೂಡದೆಂಬ ವಿರೋಧೋಕ್ತಿಯುಂಟು; ಈ ಪ್ರಪತ್ತ್ಯುಪಾ
ಯವಲ್ಲಾದರೋ ಹಾಗಿಲ್ಲವು ; ಭಗವದನುಸ್ಮರಣರೂಪ ಆನಂದವು ಸಾರ್ವತ್ರಿಕ
ವಾಗಿ ಉಂಟು. ಈ ಸರ್ವೋಪಜೀವ್ಯವಾಗಿರುವ ವೈಲಕ್ಷಣ್ಯವು ಭಕ್ತಿಯೋಗಕ್ಕಿಲ್ಲ
ವೆಂಬ ಭಾವವು. **ಸರ್ವಕಾಲತ್ತಿಲುಮ್** ಎಂದು ಹೇಳಿರುವದು ದೇಹಯಾತ್ರಾದಿ
ಆವಶ್ಯಕಗಳಾದ ಕಾರ್ಯಗಳಿಗೆ ಬೇಕಾದ ಕಾಲವಲ್ಲದ ಮಿಕ್ಕ ಎಲ್ಲಾ ಕಾಲಗಳಲ್ಲೂ
ಭಗವದನುಸ್ಮರಣಮಾಡುವದು ಪ್ರಪನ್ನನಿಗೆ ಉಚಿತವಾದುದೆಂದು ಇದರಿಂದ ಹೇಳ
ಲ್ಪಟ್ಟಿತು ಹಾಗೆಯೇ ಶ್ರೀ ಭಾಷ್ಯಕಾರರಿಗೆ ಸರ್ವಲೋಕಶರಣ್ಯನಾದ ಶ್ರೀ ರಂಗನಾ
ಥನು ಉಪದೇಶಿಸಿದನೆಂದು ಹೇಳುತ್ತಾರೆ. ಹೀಗೆ ಭಗವದನುಸ್ಮರಣವು "**ವಿದ್ವಾಂಸ
ಏವ ಮಾನಸೇ ರಮನ್ತೇ**" ಎಂಬ **(ತೈ ನಾ)** ಶ್ರುತಿವಾಕ್ಯದ ಹಾಗೆ, ಪರಮಾ
ನಂದಪ್ರದವೆಂದು ಹೇಳುವದಕ್ಕಾಗಿಯೇ, **ಭಗವದನುಸ್ಮರಣರಸತ್ತ್ಯಕ್ಕು** ಎಂಬ
ಪ್ರಯೋಗವು. ಈ ಸ್ವತಂತ್ರಪ್ರಪತ್ತ್ಯನುಷ್ಠಾನಮಾಡಿದ ಸಮಸ್ತ ಪ್ರಪನ್ನರೂ
ಈ ಭಗವದನುಸ್ಮರಣವನ್ನು ಪ್ರಣವಚತುರ್ಥಿಗಳಿಲ್ಲದ ಮೂಲ ಮಂತ್ರ ಜಪದಿಂದ
ಮಾಡಬಹುದು. ಇದೀಗ ಮಹತ್ತಾದ ಉಪಕಾರವು ಈ ಅನುಕೂಲವು ಭಕ್ತಿ
ಯೋಗಕ್ಕೆ ಇಲ್ಲವೆಂದೂ ತ್ರೈವರ್ಣಿಕರು ಮಾತ್ರವೇ ಸಪರಿಕರವಾದ ಭಕ್ತಿ
ಯೋಗವನ್ನವಲಂಬಿಸತಕ್ಕದ್ದೇವಿನಾ, ಇತರರು ಅನುಷ್ಠಿಸಿದುದಾದರೆ ವಿರೋಧ
ವೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ :—**ಸಪರಿಕರಮಾನ** – ಶ್ರವಣ
ಮನನಾದಿ ಅಂಗಗಳಿಂದ ಸೇರಿದ, ವಿಲಕ್ಷಣವಾದ, ಏತಕ್ಕೆ ವಿಲಕ್ಷಣವೆಂದರೆ
"**ಭಜನಸುಖಮೇಕಸ್ಯ ವಿಪುಳಂ**" ಎಂದು ಹೇಳಿರುವಹಾಗೆ ತೈಲಧಾರಾವಚ್ಛಿನ್ನ
ಸತತ ಧ್ಯಾನದಿಂದ ಉಂಟಾಗತಕ್ಕ ಆನಂದವು ಅಸದೃಶವಾದುದು, ಆದುದರಿಂದ

**ದನಂ, ಸಿದ್ಧಮಾನವಳಿವಿಲುಮ್, (೧) "ದ್ವಯಮರ್ಥಾನುಸಂಧಾನೇನ ಸಹ ಸದೈವಂ ವಕ್ತಾ" ಎನ್ರು ಶರಣ್ಯ ನರುಳಿ ಚೆಯ್ದಾನಿರೇ.**

ವಿಲಕ್ಷಣವಾದ **ಭಕ್ತಿಯೋಗವೀಗ ಶಿಲರ್ಕ್ಕು** - ಕೆಲವರಿಗೆ ಎಂದರೆ ಸ್ತ್ರೀ ಶೂದ್ರಾದಿಗಳಿಗೆ, ವಿರೋಧವುಳ್ಳದುದು ಇಂತಹ ಭಗವಧ್ಯಾನರೂಪ ಅನುಸ್ಮರಣೆಯಲ್ಲಿ ಸಮಸ್ತ ಪ್ರಪನ್ನರಿಗೂ ಅಧಿಕಾರ ಉಂಟೆಂದೂ, ಅನನ್ಯ ಪ್ರಣವ ಚತುರ್ಥಿ ರಹಿತ ಮೂಲಮಂತ್ರ ಜಪದಿಂದ ಮಾತ್ರವೇ ಅಲ್ಲದೆ, ದ್ವಯಮಂತ್ರೋಚ್ಚಾರಣ ಮೂಲಕವಾಗಿಯೂ ನಡೆಸಬಹುದೆಂದೂ, ಈ ಸಂದರ್ಭದಲ್ಲಿ ಶರಣ್ಯನಾದ ಶ್ರೀ ರಙ್ಗನಾಥೋಕ್ತಿಯೇ ಇದೆ ಎಂದೂ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ:— **ಕ್ಷಣಮಾತ್ರಸಾಧ್ಯಮಾನ**- ಅಲ್ಪಕಾಲದಲ್ಲಿ ಸಕೃದನುಷ್ಠಾನದಿಂದ ಸಾಧ್ಯವಾದ ಇಲ್ಲಿ ಕ್ಷಣವೆಂಬುದು ಬೌದ್ಧನು ಹೇಳುವ ಕ್ಷಣವಲ್ಲವು, ಅಲ್ಪಕಾಲವೆಂಬರ್ಥವು ; ಏಕೆಂದರೆ ಪ್ರಪದನಾನುಷ್ಠಾನವು ಬೌದ್ಧನು ಹೇಳುವ ಕ್ಷಣಕಾಲದಲ್ಲಿ ಆಗುವದಿಲ್ಲವು. **ಪ್ರಪದನಂ**-ಸ್ವತಂತ್ರ ಪ್ರಪತ್ತಿಯು, **ಸಿದ್ಧಮಾನ ವಳಿವಿಲುಮ್**- ಸಿದ್ಧಿಸಿ ಈತನು ಕೃತ ಕೃತ್ಯನೆಂದು ಹೇಳಿಸಿಕೊಂಡರೂ ಉತ್ತರಕೃತ್ಯವಾಗಿ, ಭಗವದನುಸ್ಮರಣವೂ ಈ ಕೃತಕೃತ್ಯನಾದ ಪ್ರಪನ್ನನಿಗೆ ಆವಶ್ಯಕವೆಂದು ಹೇಳುತ್ತಾರೆ, "**ಏವಂ** - ಈ ಪ್ರಕಾರವಾಗಿ ವಿರಕ್ತಿಭಾವದಿಂದ ಐಹಿಕದಲ್ಲಿ ಮಮತೆಯನ್ನು ತೊರೆದು, ಭಗವಂತನನ್ನು ಸ್ಮರಿಸುತ್ತಾ, **ಸದಾ** - ಯಾವಾಗಲೂ ಎಂದರೆ ತನಗೆ ನಿರ್ವಾಹವಿಲ್ಲದೆ ದೇಹಯಾತ್ರೆಗೆ ಬೇಕಾದ ಕಾಲವೇನು, ಈತನಿಗೆ ನಿಯತಕರ್ಮಗಳ ಅನುಷ್ಠಾನವೇನು, ಇಂತಹವುಗಳಿಗೆ ಅನ್ವಯಿಸಿ ಮಿಕ್ಕ ಎಲ್ಲಾ ಕಾಲದಲ್ಲೂ ಎಂಬರ್ಥವು, **ಅರ್ಥಾನುಸಂಧಾನೇನ ಸಹ** - ಮಂತ್ರದಲ್ಲಿ ಬೋಧಿತವಾದ ಸಮಸ್ತ ಅರ್ಥಗಳನ್ನು ತಿಳಿದು ಅನುಸಂಧಾನದೊಡನೆ **ದ್ವಯಂ** - ದ್ವಯಮಂತ್ರವನ್ನು, **ವಕ್ತಾ** - ಉಚ್ಚರಿಸುವವನಾಗಿ" **ಎನ್ರು** - ಎಂಬದಾಗಿ, **ಶರಣ್ಯರ್** - ಸರ್ವಲೋಕ ಶರಣ್ಯನಾದ ಶ್ರೀರಙ್ಗನಾಥನು, **ಅರುಳಿ ಚೆಯ್ದಾನಿರೇ** - ಶ್ರೀ ಭಾಷ್ಯಕಾರರವರಿಗೆ ಪರಮಕೃಪೆಯಾ ಉಪದೇಶಿಸಿದನಲ್ಲವೇ ? ಶ್ರೀ ಯತಿವರ್ಯರು ಶ್ರೀರಙ್ಗನಾಥನನ್ನು ಕುರಿತು ಮಾಡಿದ ಪ್ರಶ್ನೆಗೆ ಸರ್ವೇಶ್ವರನು ದಯಪಾಲಿಸಿದ ಉತ್ತರವು. ಹೀಗೆ ದ್ವಯಮಂತ್ರಾರ್ಥಾನುಸಂಧಾನದೊಂದಿಗೆ ಸದಾ ದ್ವಯಮಂತ್ರವನ್ನು ಉಚ್ಚರಿಸುತ್ತಾ, ತನ್ನನ್ನೇ ನಿರಂತರ ಧ್ಯಾನಿಸುತ್ತಾ "ಅತ್ರೈವ ಶ್ರೀರಙ್ಗೇ ಸುಖಮಾಸ್ವ" ದೇಹಪಾತದವರೆಗೂ ಈ ಶ್ರೀರಙ್ಗದಲ್ಲೇ ಸುಖದಿಂದ ಇದ್ದುಬಿಡು ಎಂದು ಆಜ್ಞಾಪಿಸಿದರು. ಈ ಪ್ರಪ

(೧) ಶರಣಾಗತಿ ಗದ್ಯಂ.

ದನವು ಕ್ಷಣಮಾತ್ರ ಸಾಧ್ಯವೆಂದು ಹೇಳಿದುದರಿಂದ ಭಕ್ತಿಮಾರ್ಗಕ್ಕಿಂತ ಅತಿ ಸುಲಭೋಪಾಯವಾಗಿ ಸರ್ವಾಧಿಕಾರಿವಾಗಿರುವ ಪ್ರಭಾವಸೂಚಿತವಾದುದರಿಂದ, ಮುಂದೆ ಪ್ರಭಾವ ವ್ಯವಸ್ಥಾಧಿಕಾರವು ಹೇಳಲ್ಪಡುತ್ತದೆಂಬುದು ಸೂಚಿತವು. ಆದೂ ಅಲ್ಲದೆ ಪ್ರಪನ್ನನು ತನಗೆ ಸ್ವರೂಪವಾದ ಭಗವದನುಸ್ಮರಣಕ್ಕೆ ಪರಿಕರ ರಹಿತ ಮೂಲ ಮಂತ್ರೋಚ್ಚಾರಣೆಯಹಾಗೆ ದ್ವಯವನ್ನೂ ಕೂಡ ಉಚ್ಚರಿಸಬಹು ದೆಂದು ಇದರಿಂದ ಸೂಚಿತವು. ಆದರೆ ಶರಣ್ಯೋಕ್ತಿಯು ಪರಮ ಬ್ರಹ್ಮ ವಿತ್ತಾದ ಶ್ರೀ ಯತಿವರ್ಯರಿಗೆ ಹೇಳಿದುದು ಅದು ಹೇಗೆ ಸರ್ವಾಧಿಕಾರವುಳ್ಳದು ಎಂದು ಹೇಳಲಾದೀತು ಎಂದರೆ ಶ್ರೀ ಯತಿವರ್ಯರೇ ಈ ದ್ವಯಮಂತ್ರದ ಉಪದೇಶವನ್ನು ತಮ್ಮ ಗುರುವಾದ ತಿರುಕ್ಕೋಟ್ಟಿಯೋರ್ ನಂಬಿಯವರಿಂದ ಹೊಂದಿದ ಒಡನೆಯೇ ತಮ್ಮನ್ನು ಆಶ್ರಯಿಸಿದ ಸಮಸ್ತ ಪ್ರಪನ್ನರಿಗೂ ಉಪ ದೇಶಿಸಿಬಿಟ್ಟರು. ಆ ಗೋಷ್ಠಿಯಲ್ಲಿ ಬ್ರಾಹ್ಮಣರು ಮಾತ್ರವೇ ಇದ್ದರೆಂದು ಹೇಳಿಲ್ಲವು. ಶ್ರೀ ಯತಿವರ್ಯರ ವಿಶೇಷ ಪ್ರಿಯಶಿಷ್ಯನಾದ ಬ್ರಾಹ್ಮಣೇತರನಾದ ದಾಸಿಯು ಇರಲಿಲ್ಲವೆಂದು ಹೇಳಲು ಪ್ರಮಾಣವಿಲ್ಲವು. ಇದರ ವ್ಯಾಖ್ಯಾನದಲ್ಲಿ ಶ್ರೀ ಸಾರ ಪ್ರಕಾಶಿಕಾ ವ್ಯಾಖ್ಯಾತೃವು ಹೀಗೆ ಅಪ್ಪಣೆ ಕೊಡಿಸಿರುತ್ತಾರೆ :— **"ದ್ವಯಪ್ರತಿಪಾದ್ಯತಯಾಪಿ ಭಗವತೋ ನಿರಂತರಧ್ಯಾನಸ್ಯ ಭಗವತ್ಯೈ ವೋಕ್ತತ್ವಾತ್ತದ್ದ್ವಯಸ್ಯ ಸರ್ವಾಧಿಕಾರತ್ವಾತ್ಸರ್ವೇಷಾಂ ಭಗವದ್ಧ್ಯಾನಸಂ ಸಂಭವತ್ಯೇವ"** ಭಗವಂತನ ನಿರಂತರ ಧ್ಯಾನವನ್ನು ದ್ವಯಮಂತ್ರ ಮೂಲಕವಾ ಗಿಯೂ ನಡೆಸಬಹುದೆಂದು ತಾನೇ ಸ್ವತಃ ಹೇಳಿರುವದರಿಂದ, ಆ ದ್ವಯ ಮಂತ್ರಕ್ಕೆ ಸರ್ವಾಧಿಕಾರತ್ವವಿರುವದರಿಂದಲೂ ಸಮಸ್ತಪ್ರಪನ್ನರಿಗೂ ಭಗವ ದ್ಧ್ಯಾನವೂ ಉಂಟೇ ಉಂಟೆಂದು ಹೇಳಿರುತ್ತಾರೆ. **ಸದೈವ ವಕ್ತಾ** - ಯಾವಾ ಗಲೂ ದ್ವಯಮಂತ್ರವನ್ನೇ ಪಠಿಸುವನಾಗಿ ಎಂದು ಹೇಳಿರುವದರಿಂದ ನಿಷಿದ್ಧ ವಾದ ಮತ್ತು ಕಾಮ್ಯ ಕರ್ಮಗಳಲ್ಲಿ ಸರ್ವಾತ್ಮನಾ ಪ್ರವರ್ತಿಸಕೂಡದೆಂದು ಸ್ಪಷ್ಟ ವಾಗಿ ಹೇಳಿದಂತಾಯಿತು. ಇವು ಪ್ರಪನ್ನರಿಗೆ ಸರ್ವಾತ್ಮನಾ ಸ್ವರೂಪವಿರುದ್ಧವು. ದ್ರವ್ಯಾಶೆಯನ್ನಿಟ್ಟುಕೊಂಡು ಮನೆಮನೆಗೆ ಎಂದಿಗೂ ತಿರುಗಕೂಡದು, ಮತ್ತು ದ್ರವ್ಯಾರ್ಜನೆಗಾಗಿ ನಾನಾವಿಧ ಕ್ಲೇಶಗಳನ್ನೂ ಪ್ರವೃತ್ತಿಗಳನ್ನೂ ಇಟ್ಟುಕೊಳ್ಳ ಕೂಡದೆಂದು ಹೇಳಿದಂತಾಯಿತು. **ಸದೈವಂ ವಕ್ತಾ** ಎಂದು ಹೇಳಿರುವದರಿಂದ ಪ್ರಪನ್ನನ ಮುಖವನ್ನು ನೋಡಿದರೆ ಈತನ ಕೆಳಗಿನ ತುಟಿಯು ದ್ವಯೋಚ್ಚಾ ರಣೆಯಿಂದ ಅದರುತ್ತಿರಬೇಕೆಂದು ಕೆಲವು ಮಹನೀಯರು ಹೇಳಿರುತ್ತಾರೆ. ಬರೀ ಮಂತ್ರೋಚ್ಚಾರಣೆಯೇ ಸಾಲದು, ಅದರ ಉಪದೇಶಜ್ಞಾನವೂ ಅವಶ್ಯಕ ವೆಂಬುದು **"ದ್ವಯಮರ್ಥಾನುಸಂಧಾನೇನ"** ಎಂಬ ಪ್ರಯೋಗದಿಂದ ವ್ಯಕ್ತವು.

**ಭಕ್ತಪ್ರಪನ್ನಯೋಸ್ಸಾಧನತ್ವಫಲತ್ವರೂಪ ಭಗವದ್ಧ್ಯಾನಮಾವಶ್ಯಕ ಮಿತಿ ಉಪಸಂಹರತಿ.**

**ಆಗ್ಯೈಯಾಲ್ "ಧ್ಯೇಯೋನಾರಾಯಣಸ್ಸದಾ" ಎನ್ರುದುವುಮ್ ಯಥಾಧಿಕಾರಂ, ಶಿಲರ್ಕ್ಕು ಉಪಾಯಮಾಗವುಮ್, ಶಿಲರ್ಕ್ಕುಫಲಮಾಗ ವುಮ್, ಕೊಳ್ಳುಗೈಯಾಲಿದು ಸ್ವತಂತ್ರಪ್ರಪತ್ತಿಕ್ಕು ವಿರುದ್ಧಮನ್ರು.**

---

ಇದು ಅನುಷ್ಠಾನಮಂತ್ರವಾದುದರಿಂದ ಗುರುಮುಖೇನ ಇದರರ್ಥದ ಉಪದೇಶ ವನ್ನು ಹೊಂದಿ, ಆ ಗುರುವಿನ ಉಚ್ಚಾರಣಾನುಚ್ಚಾರಣರೂಪವಾಗಿ ಅನುಷ್ಠಿಸ ತಕ್ಕದ್ದೆಂಬುದೂ ಸೂಚಿತವು. ಎಲ್ಲರಿಗೂ ಪ್ರಪತ್ತಿಯಲ್ಲಿ ಅಧಿಕಾರವಿರುವದ ರಿಂದಲೂ, ಇದು ಅನುಷ್ಠಾನಮಂತ್ರವಾದುದರಿಂದಲೂ, ಇದಕ್ಕೆ ಸರ್ವಾಧಿಕಾರತ್ವ ಉಂಟೆಂಬುದು ವ್ಯಕ್ತವು.

**ಭಕ್ತಪ್ರಪನ್ನರಿಬ್ಬರಿಗೂ ಸಾಧನತ್ವಫಲತ್ವರೂಪದಲ್ಲಿ ಭಗವದ್ಧ್ಯಾನವು ಆವಶ್ಯಕವೆಂಬುದರ ಉಪಸಂಹಾರವು.**

**ಆಗ್ಯೈಯಾಲ್"** - ಹೀಗೆ ಭಗವದನುಸ್ಮರಣವು ಪ್ರಪದನಾನುಷ್ಠಾನಮಾಡಿ ಕೃತಕೃತ್ಯನಾದವನಿಗೂ ಕೂಡ ಆವಶ್ಯಕವಾಗಿರುವದರಿಂದ, **ಧ್ಯೇಯೋ ನಾರಾ ಯಣಸ್ಸದಾ"** ಎನ್ರುದುವುಮ್-ಎಂಬುದೂ ಕೂಡ, **ಯಥಾಧಿಕಾರಮ್**-ಧ್ಯಾನಿ ಸುವನಿಗೆ ಅಧಿಕಾರವಿರುವ ರೀತಿಯಲ್ಲಿ, ಎಂದರೆ ತ್ರೈವರ್ಣಿಕನಾಗಿ ಸಮರ್ಥನಾಗಿ ದ್ದರೆ, **ಶಿಲರ್ಕ್ಕು** - ಕೆಲವರಿಗೆ, **ಉಪಾಯ್ಮವಾಗುವುಮ್** - ಉಪಾಯರೂಪ ದಲ್ಲಿ ಐಕಾಂತ್ಯದಿಂದ ಉಪಾಸನರೂಪವಾಗಿಯೂ, **ಶಿಲರ್ಕ್ಕು ಫಲಮಾಗುವುಮ್**- ಇನ್ನು ಕೆಲವರಿಗೆ ಸ್ತ್ರೀ ಶೂದ್ರಾದಿಗಳಿಗೂ ಮತ್ತು ಅಸಮರ್ಥರಿಗೂ, **ಫಲಮಾ ಗುವುಮ್** - ಪ್ರಪದನರೂಪವಾಗಿ ತದನಂತರ ಭಗವದನುಸಂಧಾನರೂಪವಾ ಗಿಯೂ, **ಕೊಳ್ಳುಗೈಯಾಲೇ** - ಅಙ್ಗೀಕರಿಸುವದರಿಂದ, **ಇದು** - ಸದಾ ಭಗ ವದನುಸಂಧಾನವು, **ಸ್ವತಂತ್ರಪ್ರಪತ್ತಿಕ್ಕುಮ್ ವಿರುದ್ಧಮನ್ರು** - ವಿರುದ್ಧವಾ ದುದಲ್ಲವು. ಈ **"ಧ್ಯೇಯೋ ನಾರಾಯಣಸ್ಸದಾ"** ಎಂಬ ಮಹಾ ಭಾರತ ವಚನದಿಂದ ಉಪಾಯವು ಭಕ್ತಿಯೋಗವಾದ ಪಕ್ಷದಲ್ಲಿ, ಉಪಾಸನರೂಪದಲ್ಲಿ ಭಗವಧ್ಧ್ಯಾನವು ವಿಧಿಸಲ್ಪಟ್ಟಿತೆಂದು ತಿಳಿಯತಕ್ಕದ್ದು. ಹಾಗಲ್ಲದೆ ಉಪಾಯವು ಸ್ವತಂತ್ರ ಪ್ರಪತ್ತಿಯಾದರೆ, ಆಗಲೂ ಧ್ಯಾನವು ಉಪಾಯರೂಪದಲ್ಲಿ ಕೃತಕೃತ್ಯ ನಾದ ಪ್ರಯುಕ್ತ ಬೇಕಾಗಿಲ್ಲದಿದ್ದರೂ, ಪ್ರಪನ್ನನಿಗೆ ಸ್ವರೂಪದಾಯಕವಾಗಿ ಭಗ ವದನುಸಂಧಾನವು ಆಯಾ ಅಧಿಕಾರಿಗಳನ್ನು ಕುರಿತು ಹೇಳಿದ ರೀತಿಯಲ್ಲಿ, ಮೂಲ

ಮಂತ್ರ ಅಥವಾ ದ್ವಯಮಂತ್ರೋಚ್ಚಾರಣೆಗಳ ಮೂಲಕ ನಡೆಸತಕ್ಕದ್ದೆಂಬ ಭಾವವು. ಶ್ರೀಮನ್ನಾರಾಯಣನು ಒಂದು ಸಂದರ್ಭದಲ್ಲಿ ಉಪಾಯರೂಪವಾಗಿಯೂ, ಇನ್ನೊಂದು ಸಂದರ್ಭದಲ್ಲಿ ಫಲರೂಪವಾಗಿಯೂ, ಧ್ಯೇಯನೆಂದು ಸ್ಥಾಪಿಸಲ್ಪಟ್ಟಿತು.

"ಧ್ಯೇಯೋ ನಾರಾಯಣಸ್ಸದಾ" ಎಂಬ ಭಾರತ ವಚನಾನುಸಾರವಾಗಿ ಉಪಾಸನ ಒಂದೇ ಉಪಾಯವಾಗಿ ಕಂಡರೂ, ಪ್ರಪದನವೆಂಬುದು ಇನ್ನೊಂದು ಸರ್ವಾಧಿಕಾರವುಳ್ಳ ಉಪಾಯವು, ಅದಕ್ಕೂ ಕೂಡ ಬಲಾತ್ಕಾರವಾಗಿ ಭಾರತ ವಾಕ್ಯವನ್ನು ಅನ್ವಯಿಸಬಹುದೆಂದು ಹೇಳಿ, ಆಗ ಧ್ಯಾನವೆಂದರೆ ಭಗವದನುಸ್ಮರಣವೆಂದು ಹೇಳಿದಿರಿ; ಶ್ರುತಿಯೂ ಕೂಡ ಉಪಾಸನವನ್ನೇ ಉಪಾಯವಾಗಿ "ನಾನ್ಯಃಪನ್ಥಾ ವಿದ್ಯತೇ ಅಯನಾಯ" ಎಂದು ಹೇಳಿರುತ್ತದೆ. ಇದೂ ಅಲ್ಲದೆ ಶ್ರೀ ಭಾಷ್ಯದಲ್ಲೂ, ಗೀತಾಭಾಷ್ಯದಲ್ಲೂ ಶ್ರೀ ಭಾಷ್ಯಕಾರರು ಉಪಾಯವಾಗಿ ಹೇಳಿರುವದು ಉಪಾಸನವೇ. ಪ್ರಪದನವು ಹೇಗೆ ಉಪಾಯವು ಎಂದಾಕ್ಷೇಪ ತಂದರೆ, ಅದಕ್ಕೆ ಸಮಾಧಾನವಾಗಿ ಹೇಳಬಹುದು ಏನೆಂದರೆ—ಶ್ರೀ ಭಾಷ್ಯಕಾರರವರು ವಶೀಕರಣ ಪರಂಪರೆಗಳನ್ನು ತಿಳಿಸುವದರಲ್ಲಿ ಕಡೆಗೆ "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂದು ಪ್ರಪದನವೂ ಉಪಾಯವೆಂದು ಹೇಳಿದ್ದಾರಲ್ಲಾ, ಎಂದರೆ, ಶ್ರೀ ಭಾಷ್ಯದಲ್ಲೂ, ಶ್ರೀ ಗೀತಾಭಾಷ್ಯದಲ್ಲೂ ಹೇಳಿರುವ ಪ್ರಪತ್ತಿಯು ಅಙ್ಗ ಪ್ರಪತ್ತಿಯೇ ವಿನಾ, ಅಙ್ಗಿರೂಪದಲ್ಲಿಲ್ಲವು; ಗೀತೆಯ ೭ನೆಯ ಅಧ್ಯಾಯದ ೧೪ನೆಯ ಶ್ಲೋಕದಲ್ಲಿ "ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿ ತೇ" ಎಂಬುದಕ್ಕೆ ಶ್ರೀ ಭಾಷ್ಯಕಾರರವರು ಮಾಯಾಮುತ್ಸೃಜ್ಯ ಮಾಮೇವೋಪಾಸತ ಇತ್ಯರ್ಥಃ ಎಂದು ವ್ಯಾಖ್ಯಾನ ಮಾಡಿರುವದರಿಂದ ಇಲ್ಲಿ ಹೇಳಿರುವ ಪ್ರಪತ್ತಿಯು ಅಂಗ ಪ್ರಪತ್ತಿ ಎಂದು ಹೇಳಿದಂತಾಯಿತು, ಮತ್ತು "ಸರ್ವಧರ್ಮಾ ಪರಿತ್ಯಜ್ಯ" ಎಂಬ ಚರಮಶ್ಲೋಕದಲ್ಲಿ ಮಾಮೇಕಂ ಶರಣಂ ವ್ರಜ" ಎಂದು ವಿಧಿಸಿರುವ ಪ್ರಪದನವೂ ಅಙ್ಗಶರಣಾಗತಿಯೇ; ಆದುದರಿಂದ ಶ್ರೀ ಭಾಷ್ಯಕಾರರಿಗೆ ಉಪಾಸನವೇ ಉಪಾಯವೆಂಬ ಭಿಪ್ರಾಯವೇ ವಿನಾ ಪ್ರಪದನವಲ್ಲವೆಂದು ಪೂರ್ವಪಕ್ಷವನ್ನು ತರಬಹುದೆಂದು ಭಾವಿಸಿ, ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ. ಶ್ರೀ ಭಾಷ್ಯದಲ್ಲೂ ಶ್ರೀ ಗೀತಾ ಭಾಷ್ಯದಲ್ಲೂ ಹೇಳಿರುವ ಪ್ರಪದನವು ಅಙ್ಗರೂಪ ಶರಣಾಗತಿಯೇ, ಇದನ್ನು ಎಲ್ಲರೂ ಒಪ್ಪತಕ್ಕದ್ದೇ. ಒಂದು ಸಂದರ್ಭದಲ್ಲಿ ಅಙ್ಗವಾದುದು ಇನ್ನೊಂದು ಸಂದರ್ಭದಲ್ಲಿ ಅಙ್ಗಿಯಾಗಕೂಡದೆಂಬ ನಿಯಮವೇನೂ ಇಲ್ಲವು. ಸ್ವತಂತ್ರ ಪ್ರಪತ್ತಿಯು ಅಙ್ಗಿಯು ಇದನ್ನೇ ಶರಣಾಗತಿ ಗದ್ಯದಲ್ಲಿ ಅವರೇ ಉಪದೇಶಿಸಿರುತ್ತಾರೆ. ಶ್ರೀ ಯಾಮುನೇಯರೂ "ನ ಧರ್ಮ

ನಿಷ್ಠೋಽಸ್ಮಿ" ಎಂಬ ಶ್ಲೋಕದಲ್ಲಿ ಪ್ರಪತ್ತಿಯನ್ನು ಅಜ್ಞಯಾಗಿಯೇ ಭಾವಿಸಿರು ತ್ತಾರೆ ಅಂತೂ ಎರಡು ವಿಧ ಉಪಾಯಾನುಷ್ಠಾನಕ್ಕೂ ಪ್ರಪದನವು ಆವಶ್ಯಕವು ; ಉಪಾಸನರೂಪಕ್ಕೆ ಅಙ್ಗವು, ಭರನ್ಯಾಸಕ್ಕೆ ಅಙ್ಗಿಯು. ಆದುದರಿಂದ ಪ್ರಪದನ ಮೂಲಕ ಶರಣಾಗತಿಯನ್ನು ಮಾಡದೆ ಎಂದರೆ ಪ್ರಪನ್ನನಾಗದೇ ಮೋಕ್ಷವೇ ಇಲ್ಲವೆಂದು ಶ್ರೀ ನಿಗಮಾಂತದೇಶಿಕರವರು "ಪ್ರಪನ್ನಾದನ್ಯೇಷಾಂ ನದಿಶತಿ ಮುಕುಂದೋ ನಿಜಪದಂ" ಎಂಬ ಶ್ಲೋಕದಲ್ಲಿ ತಿಳಿಸಿರುತ್ತಾರೆ. ಶ್ರೀ ಭಾಷ್ಯ ಕಾರರು ಈ ಎರಡು ವಿಧೋಪಾಯಗಳಲ್ಲಿ ಯಾವುದನ್ನು ಅವಲಂಬಿಸಿದರು ಎಂದರೆ ಭರನ್ಯಾಸವನ್ನೇ ಅನುಷ್ಠಿಸಿದರೆಂಬುದು, ಕ್ಷಣಮಾತ್ರ ಸಾಧ್ಯಮಾನ ಪ್ರಪ ದನಂ ಸಿದ್ಧಮಾನ ವಳಿವಿಲುಮ್ ಎಂಬ ಪ್ರಯೋಗದಿಂದ ವ್ಯಕ್ತಪಡುತ್ತದೆ. ಆದುದರಿಂದ ಪ್ರಪದನವು ಎರಡು ಆಕಾರವುಳ್ಳದ್ದೆಂದೂ ಅಙ್ಗರೂಪವಾದು ದನ್ನು ಶ್ರೀ ಭಾಷ್ಯ ಗೀತಾ ಭಾಷ್ಯದಲ್ಲಿ ಶ್ರೀ ಭಾಷ್ಯಕಾರರು ಉಪಪಾದಿಸಿದ ರೆಂದೂ ಅಙ್ಗಿರೂಪವಾಗಿ ಶ್ರೀಮನ್ನಾರಾಯಣ ಪಾಂಚರಾತ್ರ, ಪದ್ಮಪುರಾ ಣಾದಿಗಳಲ್ಲಿ ಬೋಧಿತವಾದುದನ್ನು ಶರಣಾಗತಿ ಗದ್ಯದಲ್ಲಿ ಉಪದೇಶಿಸಿದ ರೆಂದೂ ಮುಂದಿನವಾಕ್ಯದಿಂದ ತಿಳಿಸಿ, ಶ್ರೀ ಭಾಷ್ಯಕಾರರಿಗೆ ಎರಡು ವಿಧವಾದ ಉಪಾಯಗಳೂ ಅಭಿಮತವಾದವುಗಳೇ ಎಂದು ತಿಳಿಸುತ್ತಾರೆ. ಆದರೆ ಈ ಸಂದ ರ್ಭದಲ್ಲಿ ಇನ್ನೊಂದು ಆಕ್ಷೇಪಣೆಯನ್ನು ತರಬಹುದು. ಒಂದೇ ಅನುಷ್ಠಾನಕ್ಕೆ ಎರಡು ವಿಧವಾದ ಆಕಾರ ಹೇಗೆ ? ಪ್ರಪದನವು ಎರಡು ಕಡೆಯಲ್ಲೂ ಅಙ್ಗವೆಂದು ಭಾವಿಸತಕ್ಕದ್ದು ಅಥವಾ ಅಙ್ಗಿ ಎಂದು ಭಾವಿಸತಕ್ಕದ್ದು, ಭಕ್ತಿ ರೂಪಧ್ಯಾನವು ಎರಡಕ್ಕೂ ಆವಶ್ಯಕವೆಂದು ಹೇಳಿ ಪ್ರಪದನವೇ ಅಙ್ಗಿಯಾಗಿ ಮೋಕ್ಷಸಾಧಕವೆಂದೂ ಹೇಳಬಹುದು, ಅಥವಾ ಭಕ್ತಿರೂಪಧ್ಯಾನವೇ ಎರಡುಕಡೆ ಯಲ್ಲೂ ಅಙ್ಗಿ ಎಂದು ಹೇಳಿ, ಅದಕ್ಕೆ ಕಾರಣ ಭೂತವಾಗ ಅಙ್ಗವಾಗಿ ಎರಡು ಕಡೆಯಲ್ಲೂ ಪ್ರಪದನವು ಎಂದು ಭಾವಿಸುವದಾದರೂ ಯುಕ್ತವು. ಈ ಪೂರ್ವ ಪಕ್ಷಕ್ಕೂ ಸಹ "ಇಪ್ರಪತ್ತಿ ಅಙ್ಗವಾನ" ಎಂದಾರಂಭಿಸಿ ಹೇಳಿರುವ ವಾಕ್ಯ ಮೂಲಕ ಸಮಾಧಾನವನ್ನು ಹೇಳುತ್ತಾರೆ. ಶರಣಾಗತಿಯು ಅಙ್ಗವಾಗಿಯಾ ಗಲಿ, ಸ್ವತಂತ್ರವಾಗಿಯಾಗಲಿ ಮೋಕ್ಷಸಾಧಕವೆಂಬುದಕ್ಕೆ "ಸಾಧನಾಂತರ ಯುಕ್ತಾವಾ ಪ್ರಪತ್ತಿಸ್ಸ್ವಯಮೇವ ವಾ । ಸಾಧಯೇನ್ಮುಕ್ತಿ ಕಾಮಾನಾಂ ವಿಮುಕ್ತಿಂ ಪ್ರಣವೋ ಯಥಾ" ಇತ್ಯಾದಿ ಪ್ರಮಾಣಗಳಿರುವದರಿಂದಲೆ , ಶ್ರೀ ಭಾಷ್ಯಕಾರರೂ ಸಹ ಈ ಎರಡುವಿಧ ಆಕಾರಗಳನ್ನೂ ಮನಸ್ಸಿನಲ್ಲಿಟ್ಟು ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂದು ಹೇಳಿದರು ; ಇದಕ್ಕೆ ನಿದರ್ಶನವು ಪ್ರಣವೋಪಾಸನೆಯು ; ಇದೇ ಬೃಹದಾರಣ್ಯಕ ಛಾಂದೋಗ್ಯಗಳಲ್ಲಿ ಹೇಳಿರುವ

## ಪ್ರಪತ್ತೇಃ ಅಙ್ಗಾಙ್ಗರೂಪಯೋಃ ಶ್ರೀ ಭಾಷ್ಯಕಾರಾಭಿಮತತ್ವಕಥನಮ್

**ಇಪ್ರಪತ್ತಿ ಅಙ್ಗಮಾನ ವೇಷತ್ತೈ ಭಾಷ್ಯಾದಿಗಳಿಲೇ ಉದಾಹರಿತ್ತರುಳಿನಾರ್; ಸ್ವತಂತ್ರಮಾನ ವೇಷತ್ತೈ ಗದ್ಯತ್ತಿಲೆ ಅರುಳಿಚ್ಚೆಯ್ದಾರ್.**

---

ಹಾಗೆ ಸ್ವತಂತ್ರೋಪಾಸನೆಯಾದರೂ ಆಗಬಹುದು ; ಪುಣ್ಯಾಹವು ಸ್ವತಂತ್ರ ಕರ್ಮವಾಗಿಯಾಗಲಿ ಅಥವಾ ಇತರ ಕರ್ಮಗಳಾದ ಚೌಲ, ಉಪನಯನ, ವಿವಾಹಾದಿಗಳಿಗೆ ಅಙ್ಗವಾಗಿಯಾಗಲಿ ಹೇಗೆ ಆಗಬಹುದೋ ಹಾಗೆ, ಶರಣಾಗತಿಯು ಅಙ್ಗರೂಪವಾಗಿರುವ ಆಕಾರವನ್ನು ಶ್ರೀ ಭಾಷ್ಯದಲ್ಲೂ ಶ್ರೀ ಗೀತಾಭಾಷ್ಯದಲ್ಲೂ ಹೊರಪಡಿಸಿದರು, ಅಙ್ಗರೂಪವಾಗಿರುವ ಆಕಾರವನ್ನು **ಶರಣಂ ತ್ವಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ। ಪರಮಾತ್ಮಾ ಚ ತೇನೈವ ಸಾಧ್ಯತೇ ಪುರುಷೋತ್ತಮಃ"** ಉಪಾಸನರೂಪ ಧ್ಯಾನಯೋಗಕ್ಕೆ ಅಸಮರ್ಥರಾದ ಪ್ರಪನ್ನರು ಅಙ್ಗರೂಪ ಪ್ರಪತ್ತ್ಯನುಷ್ಠಾನದಮೂಲಕ ಮುಕ್ತಿಯನ್ನೈದಿದರೆಂದು ಹೇಳಿರುವ ಇತ್ಯಾದಿ ಪ್ರಮಾಣಗಳ ಪರಿಶೀಲನದ ಮೂಲಕ, ಸ್ವಾನುಷ್ಠಾನಪೂರ್ವಕವಾಗಿ ಶ್ರೀ ಶರಣಾಗತಿಗದ್ಯದಲ್ಲಿ ಉಪದೇಶಿಸಿರುತ್ತಾರೆಂದು ಹೇಳುತ್ತಾರೆ :—

### ಪ್ರಪದನಕ್ಕೆ ಅಙ್ಗಾಙ್ಗಭಾವ ಉಂಟೆಂಬುದು ಶ್ರೀ ಭಾಷ್ಯಕಾರರಿಗೆ ಅಭಿಮತವು.

---

**ಇಪ್ರಪತ್ತಿ** - ಈ ಪ್ರಪದನವು, **ಅಙ್ಗಮಾನವೇಷತ್ತೈ** - ಉಪಾಸನಮಾರ್ಗಗಳಿಗೆ, **ಅಙ್ಗಮಾನವೇಷತ್ತೈ** - ಅಙ್ಗವಾಗಿರುವ ಆಕಾರವನ್ನು, **ಭಾಷ್ಯಾದಿಗಳಿಲೇ**-ಶ್ರೀಭಾಷ್ಯಗೀತಾಭಾಷ್ಯಗಳಲ್ಲಿ, **ಉದಾಹರಿತ್ತರುಳಿನಾರ್**-ಕೃಪಯಾ ಶ್ರೀಭಾಷ್ಯಕಾರರು ಉದಾಹರಿಸಿದರು **ಸ್ವತಂತ್ರಮಾನವೇಷತ್ತೈ** - ಪ್ರಪದನವೇ ಸ್ವತಂತ್ರವಾದ ಉಪಾಯವಾಗಿರುವ ಆಕಾರವನ್ನು, **ಗದ್ಯತ್ತಿಲೇ ಅರುಳಿಚ್ಚೆಯ್ದಾರ್** - ಶರಣಾಗತಿಗದ್ಯದಲ್ಲಿ ಕೃಪಯಾ ಉಪದೇಶಿಸಿರುತ್ತಾರೆ. ಹೀಗೆ ಪ್ರಪದನವು ಎರಡು ಆಕಾರವುಳ್ಳದ್ದೆಂಬುದು ನಿಸ್ಸಂಶಯವೆಂಬುದನ್ನು ಶ್ರೀ ಭಾಷ್ಯಕಾರರೇ ವ್ಯಕ್ತಪಡಿಸಿರುತ್ತಾರೆ. ಶರಣಾಗತಿ ಗದ್ಯದ ಅಂತ್ಯದಲ್ಲಿ "**ಅನೃತಂ ನೋಕ್ತಪೂರ್ವಂ ಮೇ**" ಎಂದಾರಂಭಿಸಿ **ನಿಸ್ಸಂಶಯಸ್ಸುಖಮಾಸ್ಸ್ವ**" ಎಂದು ಮುಗಿಸಿರುವ ಶರಣ್ಯೋಕ್ತಿಯನ್ನು ಚೆನ್ನಾಗಿ ಪರ್ಯಾಲೋಚಿಸಿದರೆ, ಇದು ವ್ಯಕ್ತವಾಗುತ್ತದೆ ಇಲ್ಲಿ "**ಸಕೃದೇವಪ್ರಪನ್ನಾಯ ತವಾ**

(೧) "ಕ್ಲೇಶಾನಾಂ ಚ ಕ್ಷಯಕರಂ ಯೋಗಾದನ್ಯನ್ನ ವಿದ್ಯತೇ"

ಸ್ಮೀತಿ ಚಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" ಎಂದು ಶ್ರೀ ವಿಭೀಷಣಾಳ್ವಾನ್ ವಿಷಯದಲ್ಲಿ ಶ್ರೀರಾಮನಾಗಿ ತಾನು ಹೇಳಿರುವ ಸ್ವತಂತ್ರ ಪ್ರಪತ್ತಿ ನಿಷ್ಠನ ವಿಷಯದಲ್ಲೆಂಬುದು ಸುಸ್ಪಷ್ಟವು. ಅರ್ಜುನನ ವಿಷಯದಲ್ಲಿ ಕೃಷ್ಣಾವತಾರಿಯಾಗಿ "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ । ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಎಂದು ಹೇಳಿರುವದು ಅಙ್ಗಪ್ರಪತ್ತಿ ವಿಷಯವೆಂದು ಅಲ್ಲಿ ವ್ಯಾಖ್ಯಾನವಾಡಿದರೂ, ಈ ಶರಣಾಗತಿ ಗದ್ಯದಲ್ಲಿ ಈ ಎರಡು ಶ್ಲೋಕಗಳನ್ನೂ ಒಟ್ಟಿಗೆ ಸೇರಿಸಿ ಶರಣ್ಯನು ಸ್ವತಂತ್ರ ಪ್ರಪತ್ತಿ ವಿಷಯದಲ್ಲೂ ಹೇಳಿರುವದರಿಂದ, "ಸರ್ವಧರ್ಮಾನ್ ಪರಿತ್ಯಜ್ಯ" ವೆಂಬಶ್ಲೋಕವೂ ಸ್ವತಂತ್ರಪ್ರಪತ್ತಿಯನ್ನೂ ಕೂಡ ಬೋಧಿಸುತ್ತದೆಂಬುದು ಸ್ಪಷ್ಟವು. ಇದರಲ್ಲಿ ಸಂಶಯಬೇಡವೆಂದು ತಿಳಿಸುವದಕ್ಕಾಗಿ "ಇತಿ ಮಯ್ಯೈವಹಿ ಉಕ್ತಮ್" ಎಂದು ಶರಣ್ಯನಿಂದ ಹೇಳಲ್ಪಟ್ಟಿರುತ್ತದೆ. ಆದುದರಿಂದ "ಸರ್ವಧರ್ಮಾನ್" ಎಂಬ ಶ್ಲೋಕವು ಎರಡುವಿಧವಾದ ಶರಣಾಗತಿಯನ್ನೂ ಬೋಧಿಸುತ್ತದೆ ಎಂಬುದರಲ್ಲಿ ನಿಸ್ಸಂದೇಹವು. ಆದುದರಿಂದಲೇ "ಸಕೃದೇವ" ಎಂಬುದು ಹೇಗೆ ಶ್ರೀ ರಾಮಾಯಣ ಚರಮಶ್ಲೋಕವೋ ಹಾಗೆಯೇ "ಸರ್ವಧರ್ಮಾನ್" ಎಂಬುದು ಗೀತಾಚರಮಶ್ಲೋಕವಾಗುವದರಲ್ಲಿ ಸಂದೇಹವಿಲ್ಲವು, ಹೀಗೆ "ಸರ್ವಧರ್ಮಾನ್" ಎಂಬ ಶ್ಲೋಕದಲ್ಲಿ ಅಙ್ಗ ಪ್ರಪತ್ತಿಯೂ ಸ್ವತಂತ್ರ ಪ್ರಪತ್ತಿಯೂ ಎರಡೂ ವಿವಕ್ಷಿತವು. ಹಾಗೆಯೇ ಗೀತೆಯ ೭-೧೪ ಶ್ಲೋಕವಾದ "ಮಾಮೇವಯೇ ಪ್ರಪದ್ಯನ್ತೇ" ಎಂಬ ಶ್ಲೋಕದಲ್ಲೂ ಸಹ ಎರಡೂ ವಿವಕ್ಷಿತವು. ದಾಸನು ಆ ಶ್ಲೋಕಕ್ಕೆ ಬರೆದಿರುವ ಆಚಾರ್ಯಹೃದಯಾನ್ವೇಷಿಣೀ ಎಂಬ ಗೀತಾ ಭಾಷ್ಯವನ್ನು ಪರಾಂಬರಿಸಬಹುದು.

ಹಾಗಾದರೆ ಶ್ರೀ ಭಾರತ ಅನುಶಾಸನ ಪರ್ವದಲ್ಲೂ, ವಿಷ್ಣುಧರ್ಮದಲ್ಲೂ ಭಕ್ತಿಯೋಗವೊಂದೇ ಉಪಾಯನೆಂದು ಹೇಳಿದೆಯಲ್ಲಾ, ಆ ವಾಕ್ಯಗಳಿಗೂ ಶ್ರೀ ಭಾಷ್ಯಕಾರರಭಿಪ್ರಾಯಕ್ಕೂ ಐಕಕಂಠ್ಯವು ಹೇಗೆ? ಎಂಬ ಪೂರ್ವಪಕ್ಷ ಬಂದೀತೆಂದು ಭಾವಿಸಿ, ಈ ಪ್ರಮಾಣಗಳು ಭಕ್ತಿಯೋಗ ನಿಷ್ಠರನ್ನು ಮಾತ್ರ ಕುರಿತು ಹೇಳಿದುದಾದುದರಿಂದಲೂ, ಸ್ವತಂತ್ರ ಪ್ರಪತ್ತಿಯು ಬೇರೇ ವಿಧಿ ಬಲದಿಂದ ಪ್ರಾಪ್ತವಾದುದರಿಂದ ಏನೊಂದೂ ವಿರೋಧವಿಲ್ಲವೆಂದು ಸಾಧ್ಯೋಪಾಯ ಶೋಧನವಿಷಯವನ್ನು ಮುಗಿಸುತ್ತಾರೆ—(೧) ಕ್ಲೇಶಾನಾಂಚ ಕ್ಷಯಕರಂ - ದುಃಖ

(೧) ಭಾರ. ಅನು ೧೪೭ ೧೧.

(೨) "ನ ಕರ್ಮಣಾಂ ಕ್ಷಯೋ ಭೂಪ ಜನ್ಮನಾಮಯುತೈರಪಿ । ಋತೇ ಯೋಗಾತ್ ಕರ್ಮಕಕ್ಷಂ ಯೋಗಾಗ್ನಿಃ ಕ್ಷಪಯೇತ್ಪರಂ ॥" ಇತ್ಯಾದಿಗಳು ವ್ ಸ್ವತಂತ್ರ ಪ್ರಪತ್ತಿವಿಧಿ ಬಲಶ್ಚಾಲಿ ಅಧಿಕಾರ್ಯಂತರ ವಿಷಯಬ್ಜ್ಞಳಾಗ ಕ್ಕಡವನ. ಇಪ್ಪಡಿ ಸಾಧ್ಯೋಪಾಯ ವಿಷಯುವಾಗ ಮತ್ತುವ್ ಪಿರ

---

ಗಳಿಗಾದರೋ ನಾಶಕವಾದುದು, ಕ್ಷಯಶಬ್ದದಿಂದ ಕ್ರಮೇಣ ನಾಶವಾಗುತ್ತದೆಂಬ ಭಾವವು ಸೂಚಿತವು, ಯೋಗಾದನ್ಯತ್ - ಭಕ್ತಿಯೋಗದ ಉಪಾಸನಕ್ಕಿಂತ ಬೇರೆಯಾದುದು ಯಾವುದೂ, ನ ವಿದ್ಯತೇ - ಇರುವದಿಲ್ಲವು" ಎಂದೂ, (೨) ಹೇ ಭೂಪ - ಓ ರಾಜನೇ, ಜನ್ಮನಾಮಯುತೈರಪಿ - ಅಸಂಖ್ಯಾತಗಳಾದ ಜನ್ಮಗಳಿಂದಲೂ ಕೂಡ, ಯೋಗಾದೃತೇ - ಭಕ್ತಿಯೋಗವನ್ನು ಬಿಟ್ಟರೆ, ಕರ್ಮಣಾಂ ಕ್ಷಯಃ - ಪುಣ್ಯಪಾಪಗಳಿಗೆ ನಾಶವು, ನ - ಇಲ್ಲವು. ಕರ್ಮಕಕ್ಷಂ - ಕರ್ಮವೆಂಬುವ ಒಣಗಿದ ತೃಣಕಾಷ್ಠಾದಿಗಳುಳ್ಳ ವನವನ್ನು, ಯೋಗಾಗ್ನಿಃ ಪರಂ-ಭಕ್ತಿಯೋಗವ ಉಪಾಸನರೂಪ ಬೆಂಕಿಯು ಮಾತ್ರವೇ, ಕ್ಷಪಯೇತ್ - ನಾಶಮಾಡಲು ಸಾಮರ್ಥ್ಯ ಉಳ್ಳದು" ಇತ್ಯಾದಿಗಳುವ್ ಎಂಬಿವೇ ಮೊದಲಾದ ಪ್ರಮಾಣಗಳು, ಸ್ವತಂತ್ರ ಪ್ರಪತ್ತಿ ವಿಧಿಬಲಶ್ಚಾಲಿ-ಸ್ವತಂತ್ರ, ಪ್ರಪತ್ತಿಯನ್ನು ವಿಧಿಸುವ ಪ್ರಮಾಣಬಲದಿಂದ, ಅಧಿಕಾರ್ಯಂತರ ವಿಷಯಙ್ಗಳಾಕಕ್ಕಡವನ- ಭಕ್ತಿಯೋಗನಿಷ್ಠನನ್ನು ಮಾತ್ರ ಉದ್ದೇಶಿಸಿ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಇದರಿಂದ ಪ್ರಪತ್ತಿಯು ಉಪಾಯವಲ್ಲವೆಂದು ಹೇಳಲು ಸಾಧ್ಯವಿಲ್ಲವೆಂಬ ಭಾವವು ಯೋಗಾದನ್ಯತ್ ಎಂಬ ಮತ್ತು ಋತೇ ಯೋಗಾತ್ ಎಂಬ ಪ್ರಯೋಗಗಳು ಪ್ರಪತ್ತಿಯನ್ನು ವ್ಯಾವರ್ತಿಸಿ ಹೇಳುವದಿಲ್ಲವು. ಉಪಾಸನಕ್ಕೆ ಸಾಮರ್ಥ್ಯವಿದ್ದು ಅಧಿಕಾರಿಯಾದವನಿಗೆ ಹೇಳಿದ ವಾಕ್ಯಗಳಾದುದರಿಂದ ಆತನಿಗೆ ಉಪಾಸನವಿಲ್ಲದೆ ಬೇರೆ ಮಾರ್ಗವಿಲ್ಲವೆಂಬ ಭಾವವು. ಉಪಾಸನಕ್ಕೆ ಸಾಮರ್ಥ್ಯವೂ ಇಲ್ಲದೆ ಅಧಿಕಾರವೂ ಇಲ್ಲದೇ ಇರುವವರಿಗೆ ಪ್ರಪತ್ತಿ ಮಾರ್ಗವೆಂದು ಬೇರೇ ವಿಧಿಗಳಿರುವದರಿಂದ, ಇದರಿಂದ ಪ್ರಪತ್ತಿಯು ಉಪಾಯವಾಗಲು ಯಾವ ವಿರೋಧವೂ ಇಲ್ಲವೆಂಬ ಭಾವವು. ಹೀಗೆ ಅರ್ಥಮಾಡದೆ ಯೋಗ ಒಂದೇ ಉಪಾಯವು, ಇನ್ನು ಯಾವುದೂ ಅಲ್ಲವೆಂದು ಅರ್ಥಮಾಡಿದರೆ, ಆಗ ಪ್ರಪತ್ತಿಯೂ ಉಪಾಯವೆಂದು ಹೇಳುವ ಪ್ರಮಾಣಗಳೆಲ್ಲಾ ನಿರರ್ಥಕಗಳಾಗುವುವೆಂಬ ತಾತ್ಪರ್ಯವು. ಈಗ ಈ ರಹಸ್ಯತ್ರಯಪ್ರಕರಣಕ್ಕೆ ಉಪಯುಕ್ತವಾಗಿ ತೋರಿಬಂದ ಶಙ್ಕೆಗಳಿಗೆಲ್ಲಾ ಪರಿಹಾರವನ್ನು ಹೇಳಿದ್ದಾಯಿತು. ಇವೂ ಅಲ್ಲದೆ ಇನ್ನೂ ಕೆಲವು ಶಙ್ಕೆಗಳುಂಟು, ಅವುಗಳಿಗೆ ಪರಿಹಾರವನ್ನು ತಾವು ಬರೆದಿರುವ ನಿಕ್ಷೇಪರಕ್ಷೆಯಲ್ಲಿ ಕಾಣಬಹು

---

೨. ವಿ. ತ. ೧೧೨. ೪.

ಕ್ಕುಮ್ ಕಲಕ್ಕಙ್ಗಳುಕ್ಕು ಪರಿಹಾರಮ್ ನಿಕ್ಷೇಪ ರಕ್ಷೈಯಿಲೇ ಕಣ್ಡು ಕೊಳ್ವದು.

## ರಹಸ್ಯತ್ರಯೇ ಸಾಧ್ಯೋಪಾಯಸ್ಯಾನುಸಂಧೇಯತ್ವಂ

**ಇಸ್ಸಾಧ್ಯೋಪಾಯಂ ಶೋಧಿತಮಾನ ಕಟ್ಟಳೈಯಿಲೇ ರಹಸ್ಯತ್ರಯತ್ತಿಲ್ ಯಥಾಸ್ಥಾನ ಮನುಸಂಧೇಯಮ್**

ದೆಂದು ಹೇಳುತ್ತಾರೆ, ಇಪ್ಪಡಿ - ಹೀಗೆ ಹಿಂದೆ ಉಪಪಾದಿಸಿದ ರೀತಿಯಲ್ಲೇ ಸಾಧ್ಯೋಪಾಯ ವಿಷಯವಾಗಿ, ಮುತ್ತ್ಯಮ್ - ಈಮೇಲೆ ಪ್ರಕರಣಾನುಗುಣವಾಗಿ ಉಪಪಾದಿಸಲ್ಪಟ್ಟವಲ್ಲದೇ ಬೇರೇ, ಪಿರಕ್ಕುಮ್ - ಉಂಟಾಗುವ, ಕಲಕ್ಕಙ್ಗಳುಕ್ಕು ಪರಿಹಾರಮ್ - ಶಙ್ಕೆಗಳಿಗೆ ಪರಿಹಾರವನ್ನು, ನಿಕ್ಷೇಪರಕ್ಷೆಯಲ್ಲಿ ಕಣ್ಡುಕೊಳ್ವದು - ಕಾಣಬಹುದು. ಈ ಉಪಾಯಕ್ಕೆ ಸ್ವತಂತ್ರ ಪ್ರಪತ್ತಿ ಎಂದು ಹೇಳಿರುವದು ಸರಿಯೋ? ಭಕ್ತಿಯೂ ಪ್ರಪತ್ತಿಯೂ ಸಹ ಒಂದೇ ಉಪಾಯವಲ್ಲವೊ ? ಪ್ರಪತ್ತಿಯೊಂದು ಸಾಧ್ಯೋಪಾಯವೆನ್ನುವದಕ್ಕೆ ಹಿಂದಿನ ಕಾಲಗಳಲ್ಲಿ ಯಾರೂ ಅದನ್ನು ಅನುಷ್ಠಿಸಿದಹಾಗೆ ಕಾಣಬರುವದೇ ಇಲ್ಲವಾದುದರಿಂದ ಅದನ್ನು ಉಪಾಯವೆಂದು ಭಾವಿಸುವದು ಹೇಗೆ? ಆದುದರಿಂದ ಪೂರ್ವಸಂಪ್ರದಾಯಕ್ಕೆ ವಿರುದ್ಧವಾದುದಲ್ಲವೇ ? ಪ್ರಪತ್ತಿರೂಪಜ್ಞಾನವೇನು ಸ್ಮೃತಿರೂಪವೇ ? ಅನುಭವರೂಪವೇ ? ಸ್ಮೃತಿರೂಪವೆಂದರೆ ಸಕೃತ್ಸ್ಮೃತಿರೂಪವಾದುದೇ ? ಅಥವಾ ತೈಲಧಾರೆಯಹಾಗೆ ಸ್ಮೃತಿ ಸಂತಾನರೂಪವಾದುದೇ ? ಇತ್ಯಾದಿ ಶಙ್ಕೆಗಳು; ಇವುಗಳಿಗೆ ಪರಿಹಾರವು ನಿಕ್ಷೇಪರಕ್ಷೆಯಲ್ಲಿ ದೊರಕುತ್ತವೆ ಎಂಬ ಭಾವವು

## ರಹಸ್ಯತ್ರಯಗಳಲ್ಲಿ ಸಾಧ್ಯೋಪಾಯದ ಅನುಸಂಧಾನದ ಸ್ಥಳಗಳು.

**ಈ ಸಾಧ್ಯೋಪಾಯವು, ಶೋಧಿತಮಾನ ಕಟ್ಟಳೈಯಿಲೇ** - ಶೋಧಿಸಲ್ಪಟ್ಟ ರೀತಿಯಲ್ಲಿ ಎಂದರೆ ಅದರ ವಿಷಯವಾದ ಸಂಶಯಗಳು ಪರಿಹರಿಸಲ್ಪಟ್ಟ ರೀತಿಯಲ್ಲಿ ರಹಸ್ಯತ್ರಯದಲ್ಲಿ, **ಯಥಾಸ್ಥಾನಂ** - ಎಲ್ಲೆಲ್ಲಿ ಉಪಪಾದಿಸಲ್ಪಟ್ಟವೆಯೋ ಅವನ್ನು, ಅನುಸಂಧಾನಮಾಡಬಹುದು ಸುಲಭವಾಗಿ ಗ್ರಹಿಸಬಹುದಾದುದರಿಂದ ತಾವು ಅವುಗಳನ್ನು ಸೂಚಿಸುವ ಆವಶ್ಯಕತೆ ಇಲ್ಲವೆಂಬ ಭಾವವು ತೋರಿಬರುತ್ತದೆ, ಆ ಸ್ಥಳಗಳು ಯಾವುವೆಂದರೆ :— ಮೂಲಮಂತ್ರದಲ್ಲಿ, ನಮಃ ಎಂಬ ಶಬ್ದದಲ್ಲಿ ಅಖಂಡ ನಮಶ್ಶಬ್ದವು ಪ್ರಪದನವನ್ನು ಸೂಚಿಸುತ್ತದೆ ಇದನ್ನು ಚೆನ್ನಾಗಿ ಮೂಲ ಮಂತ್ರಾಧಿಕಾರದಲ್ಲಿ ಉಪಪಾದಿಸಿದ್ದಾರೆ. ಮಾರ್ಕಂಡೇಯರು ಪಂಚಪಾಂಡವರಿಗೂ ತುಂಬಾ ಕೃಪೆಯಿಂದ ಉಪದೇಶಿಸಿರುತ್ತಾರೆ, "ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ" ಓ ಪುರುಷ ಶ್ರೇಷ್ಠರಾದ

ಪಾಂಡವರುಗಳಿರಾ, ನಿಮ್ಮ ಬಂಧುವಾದ ಶ್ರೀಕೃಷ್ಣನು ಸಾಮಾನ್ಯನಲ್ಲವು, ಆತನೇ ಮಾಧವನು, ಶ್ರಿಯಃಪತಿಯು, ಆತನೇ ಸರ್ವಲೋಕ ಶರಣ್ಯನಾದುದರಿಂದ ಆತನಲ್ಲಿ ಶರಣಾಗತಿಯನ್ನು ಮಾಡಿ" ಎನ್ನಲು, ಆಗ, "**ದ್ರೌಪದ್ಯಾಸ್ಸಹಿತಾಸ್ಸರ್ವೇ ನಮಶ್ಚಕ್ರುರ್ಜನಾರ್ದನಂ**" ಆಗ ದ್ರೌಪದೀ ಸಮೇತರಾಗಿ ಅವರೆಲ್ಲರೂ ಜನಾರ್ದನನನ್ನು ಶರಣ ಹೊಂದಿದರು," ಎಂಬ ವಾಕ್ಯವನ್ನೂ, "**ನಮಸಾ ಯೋ ಕರೋದ್ದೇವೇ ಸಸ್ವಧ್ವರ ಇತೀರಿತಃ**" ನಮಸ್ಕಾರಪೂರ್ವಕವಾಗಿ ಯಾವನು ಭರನ್ಯಾಸ ಮಾಡುತ್ತಾನೋ, ಆ ಯಾಗವೀಗ ಉತ್ಕೃಷ್ಟಯಾಗವೆಂದು ಹೇಳಿಸಿಕೊಳ್ಳುತ್ತದೆ" ಎಂಬ ಅಹಿರ್ಬುಧ್ನ್ಯ ವಾಕ್ಯವನ್ನೂ ಅಲ್ಲಿ ಉದಾಹರಿಸಿರುತ್ತಾರೆ. ಹಾಗೆಯೇ **ದ್ವಯದಲ್ಲೂ** ಸಾಧ್ಯೋಪಾಯವು **ಶರಣಮಹಂ ಪ್ರಪದ್ಯೇ** ಎಂಬಲ್ಲಿ **ಸೂಚಿತವು**. ಚರಮಶ್ಲೋಕದಲ್ಲೂ "**ಮಾಮೇಕಂ ಶರಣಂ ವ್ರಜ**" ಎಂಬ ವಿಧ್ಯುಕ್ತಿಯಲ್ಲಿ ಈ ಸಾಧ್ಯೋಪಾಯವು ಸೂಚಿತವು. ಹೀಗೆ ಸಾಧ್ಯೋಪಾಯವನ್ನು ಹೇಳಿದ ಸ್ಥಳಗಳನ್ನು ಬಹು ಸುಲಭವಾಗಿ ಗ್ರಹಿಸಬಹುದಾದುದರಿಂದ **ಯಥಾಸ್ಥಾನಂ** ಎಂಬ ಪ್ರಯೋಗವು. ಹೀಗೆ ಈ ಸ್ಥಳಗಳಲ್ಲಿ ಹೇಳಲ್ಪಟ್ಟ ಸಾಧ್ಯೋಪಾಯದ ಅಭಿಪ್ರಾಯವೂ ತಾವು ಈಗ ಸ್ಥಾಪಿಸಿದ ರೀತಿಗೆ ಅನುಸಾರವಾಗಿಯೇ ಇರುತ್ತವೆಂದು ತಿಳಿಸುವದಕ್ಕಾಗಿ "**ಇಜ್ಞಶೋಧಿತಮಾನ ಕಟ್ಟಳೈಯಿಲೇ**" ಎಂಬ ಪ್ರಯೋಗವು ಈ ಅಧಿಕಾರವನ್ನು ಉಪಸಂಹಾರಮಾಡಲು ಹೊರಟು ಹಿಂದಿನ ಕ್ರಮವನ್ನನುಸರಿಸಿ ಒಂದು ಪಾಶುರ ಮತ್ತು ಒಂದು ಶ್ಲೋಕ ಇವುಗಳ ಮೂಲಕ ಅಧಿಕಾರಾರ್ಥವನ್ನು ಸಙ್ಗ್ರಹಿಸಿ ಹೇಳಿ ಪರಿಸಮಾಪ್ತಿಯನ್ನು ಮಾಡುತ್ತಾರೆ. ಈ ಮುಂದಿನ ಪಾಶುರದಲ್ಲಿ ಸಿದ್ಧೋಪಾಯನ ವಶೀಕರಣಕ್ಕಾಗಿ ಸಾಧ್ಯೋಪಾಯವು ಆವಶ್ಯಕವೆಂದು ಹೇಳುತ್ತಾರೆ; ಅವರೆ, "**ಯಮೇವೈಷವೃಣುತೇ ತೇನ ಲಭ್ಯಃ**" ಪರಮಾತ್ಮನು ಯಾವನನ್ನು ವರಿಸುವನೋ ಅವನಿಂದಲೇ ಪ್ರಾಪ್ಯನು ಎಂದು ಶ್ರುತಿಯು ಹೇಳಿರುವಾಗ ಸಾಧ್ಯೋಪಾಯದ ಆವಶ್ಯಕತೆ ಏಕೆ? ಎಂಬ ಪೂರ್ವಪಕ್ಷಕ್ಕೂ ಹಾಗೆಯೇ ಸಮಾಧಾನವನ್ನು ಹೇಳುತ್ತಾರೆ. ಈ ಸಾಧ್ಯೋಪಾಯಾನುಷ್ಠಾನದಿಂದ ಪ್ರೀತನಾಗಿ ಯಾವನು ನಿತ್ಯವಿಭೂತಿಯಲ್ಲಿರಲು ಯೋಗ್ಯನೆಂದು ವರಿಸುವನೋ ಆತನಿಗೆ ಮಾತ್ರವೇ ಲಭ್ಯನೆಂಬುದು ಶ್ರುತ್ಯಭಿಪ್ರಾಯವಾದುದರಿಂದ ಏನೊಂದೂ ವಿರೋಧವಿಲ್ಲವೆಂದು ಹೇಳುತ್ತಾರೆ. ಉಪಾಯಾನುಷ್ಠಾನವನ್ನು ಸರಿಯಾಗಿ ಭಗವಂತನು ಪ್ರೀತನಾಗುವಹಾಗೆ ಮಾಡಿದರೆ ಫಲಕಾರಿಯು. ಉಪಾಯಾನುಷ್ಠಾನದಹಾಗೆ ಕೇವಲ ಪ್ರವೃತ್ತಿಮಾತ್ರ ಯಿದ್ದುದಾದರೆ ಫಲಕಾರಿಯಾಗದು. ಪರೀಕ್ಷೆಗೆ ಅನೇಕ ತರುಣರು ಹೋಗಬಹುದು. ಪರೀಕ್ಷಿಸುವ ಪಂಡಿತನು ಯಾವನನ್ನು ಮಾತ್ರ ಅವನು ಬರೆದಿರುವ ಉತ್ತರಗ

ವರಿಕ್ಕಿನ್ರನನ್ ಪರ್ರ ಯಾವರ್ಕ್ಕೈ ಯೆನ್ನು ಮರ್ಕ್ಕೈಯುದನಿಲ್ ।
ವಿರಿಕ್ಕಿನ್ರದುವುಮ್ ಕುರಿಯೊನ್ರಾಲ್ ವಿನ್ನೈಯರ್ಕ್ಕೈಯಾದಲಿನಾಮ್ ।
ಉರಕ್ಕಿನ್ರನನ್ನೆರಿಯೋರುವ್ಪಡಿ ಕಳಿಲೋರ್ ನ್ದುಲಕನ್ ।
ತರಿಕ್ಕಿನ್ರ ತಾರಕನಾರ್ ತಗವಾಲ್ ತರಿಕ್ಕಿನ್ರ ನಮೇ ॥೩೧॥

---

ಳಿಂದ ಯೋಗ್ಯನೆಂದು ಭಾವಿಸುವನೋ? ಅವನು ಮಾತ್ರ ಹೇಗೆ ತೀರ್ಗಡೆಯನ್ನು ಹೊಂದುತ್ತಾನೆಯೋ, ಹಾಗೆಯೇ ಇಲ್ಲಿಯೂ ಎಂದು ಭಾವಿಸತಕ್ಕದ್ದು.

**ಅರ್ಥ**—**ಪರ್ರ** - ಸರ್ವರಿಗೂ ಶ್ರೇಷ್ಠನಾದ ಸರ್ವೇಶ್ವರನು, **ಯಾವರ್ಕ್ಕೈ** - **"ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ಯಮೇವೈಷವೃಣುತೇ ತೇನ ಲಭ್ಯಃ** (ಕಠ ೧. ೨ ೨೩ ಮುಂ. ೩ ೨. ೩) ಎಂದು ಉಪನಿಷತ್ತುಗಳಲ್ಲಿ ಹೇಳಿರುವಹಾಗೆ ಯಾವನೊಬ್ಬನನ್ನು, **ವರಿಕ್ಕಿನ್ರನ್** - ವರಿಸುತ್ತಾನೆಯೋ, **ಮರ್ಕ್ಕೈಯುದನಿಲ್** - ವೇದದಲ್ಲಿ ಎಂದರೆ ಮೇಲೆ ಹೇಳಿದ ಮುಂಡಕ ಕಠೋಪನಿಷತ್ತುಗಳಲ್ಲಿ, **ವಿರಿಕ್ಕಿನ್ರದುವುಮ್** - ವಿಸ್ತರಿಸಿ, ಪ್ರಕಾಶಿಸುವಹಾಗೆ ಹೇಳಿರುವ ಆತನ ವರಿಸುವಿಕೆಯೂ ಕೂಡ, **ವಿನ್ನೈಯರ್ಕ್ಕೈ** - ಅನಾದಿ ಕರ್ಮ ಪ್ರವಾಹದಿಂದ ಭಗವನ್ನಿಗ್ರಹಕ್ಕೆ ಪಾತ್ರರಾಗಿರುವಹಾಗೆ ಪಾಪ ಭೂಯಿಷ್ಠರಾದವರುಗಿರುವದರಿಂದಲೇ, **ಕುರಿಯೊನ್ರಾಲ್** - ವ್ಯಾಜರೂಪದಲ್ಲಿ ಭಕ್ತಿ ಪ್ರಪತ್ತಿರೂಪ ಸಾಧ್ಯೋಪಾಯಗಳಲ್ಲಿ ಒಂದರ ಅನುಷ್ಠಾನಮೂಲಕವಾಗಿಯೇ ಈ ವ್ಯಾಜವಾದ ಸಾಧ್ಯೋಪಾಯವಿಲ್ಲದೆ ತಾನು ಸಿದ್ಧೋಪಾಯನಾಗಿ ವರಿಸುವದಿಲ್ಲವೆಂಬ ತಾತ್ಪರ್ಯವು. **ಆದಲಿಲ್** - ಆ ಕಾರಣದಿಂದ, **ನಾಮ್**-ಸಾಪರಾಧಿಗಳಾದ ನಾವು, **ಉರ್ಕ್ಕೈಗಿನ್ರ** - ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿರುವ, **ನನ್ನೆರಿ** - ಪರಮ ಪ್ರಾಪ್ಯವನ್ನು ಹೊಂದಿಸುವುಗಳಾದ ಪ್ರಯುಕ್ತ ಒಳ್ಳೆ ಉಪಾಯಗಳಾದ ಭಕ್ತಿ ಪ್ರಪತ್ತಿಗಳು, **ಓರುಂ ಪಡಿಗಳಿಲ್ ಓರ್ನ್ದು** - ಯಾವ ಪ್ರಕಾರದಿಂದ ವಿಚಾರಮಾಡಿ ತಿಳಿಯತಕ್ಕದ್ದೋ ಹಾಗೆ ವಿಚಾರಮಾಡಿ, **ಉಲಗನ್ತರಿಕ್ಕಿನ್ರ** ಅಂತರ್ಯಾಮಿಯಾಗಿ ಜಗದ್ಧಾರಕನಾದ, **ತಾರಕನಾರ್** - ಸಂಸಾರ ಸಮುದ್ರವನ್ನು ದಾಟಿಸುವ, ಶ್ರಿಯಃಪತಿಯು, **ತಕವಾಲ್** - ಆಶ್ರಿತರನ್ನು ಅತ್ಯರ್ಥ ಪ್ರಿಯರನ್ನಾಗಿ ಭಾವಿಸುವ ಪರಮ ಕೃಪೆಯಿಂದ, **ತರಕಿನ್ರನಮ್** - ಉಜ್ಜೀವಿತರಾಮವೆಂದು ನಿರ್ಭರರಾಗಿರುವೆವು.

**ತಾತ್ಪರ್ಯ**.—ಇಲ್ಲಿ ಸರ್ವೇಶ್ವರನನ್ನು **ಪರ್ರ** ಎಂದು ಹೇಳಿರುವದು, **"ಅಕ್ಷರಾತ್ಪರತಃ ಪರಃ"** ಎಂದು ಮುಂಡಕ (೨-೧-೨)ದಲ್ಲಿ ಹೇಳಿರುವಹಾಗೆ ಜಗತ್ತಿನ ಎಲ್ಲಾ ಭೂತಗಳಿಗಿಂತಲೂ ಸರ್ವೋತ್ಕೃಷ್ಟನೆಂದೂ ಹೇಳಿರುವದರಿಂದ

ಬ್ರಹ್ಮ ರುದ್ರಾದಿಗಳಾಗಿ ಈ ಲೋಕದ ಕ್ಷೇತ್ರಜ್ಞರಾಗಿ ಮೋಕ್ಷಪ್ರದತ್ವ ಶಕ್ತಿಯಿಲ್ಲದ ಅಸಮರ್ಥರನ್ನು ಪ್ರಪನ್ನನು ಆಶ್ರಯಿಸಿದರೆ ತನ್ನ ಇಷ್ಟಾರ್ಥ ಸಿದ್ಧಿಸದು; ಪರತ್ವಾದಿ ಆಶ್ರಯೋಪಯುಕ್ತ ಕಲ್ಯಾಣ ಮಹೋದಧಿಯನ್ನಾಶ್ರಯಿಸಿದರೇನೇ ಮನೋರಥ ಪೂರ್ಣವೆಂಬುದು ಸೂಚಿತವು. ಇಂತಹ ಸರ್ವೋತ್ಕೃಷ್ಟತೆಯೊಂದಿಗೆ "ಸ ಚ ಮಮ ಪ್ರಿಯಃ" ಎಂದೂ "ಜ್ಞಾನೀತ್ವಾತ್ಮೈವಮೇ ಮತಂ" ಎಂದೂ ಆಶ್ರಿತರ ವಿಷಯದಲ್ಲಿ ಪರಮ ಕಾರುಣಿಕನು ಆತನು ಎಂದು ತೋರಿಸುವದಕ್ಕಾಗಿ, ಭಗವಾನ್ ಎಂಬ ಪ್ರಯೋಗವು ಅಂತ್ಯದಲ್ಲೂ ಇರುತ್ತದೆ. ಇವೆರಡು ಗುಣಗಳಾದ ಸರ್ವ ಶಕ್ತಿತ್ವ ಕಾರುಣ್ಯಗಳಿರುವವನನ್ನು ಆಶ್ರಯಿಸಿದರೆ ಫಲದಲ್ಲಿ ಈಷದಪಿ ಸಂದೇಹವೇ ಇಲ್ಲವು ಎಂದು ಭರಿಗಿಪ್ರಸನ್ನೇ ಎಂಬುದರಿಂದ ನಿರ್ಭರತ್ವವನ್ನು ಸೂಚಿಸಿರುತ್ತಾರೆ.

ಆದರೆ ಬಂಧದಲ್ಲಿ ಸಿಕ್ಕಿ ನರಳುತ್ತಿರುವ ಜೀವ ವರ್ಗವನ್ನು ರಕ್ಷಿಸಬೇಕೆಂದು ಸುವ್ರತವನ್ನು ಧರಿಸಿರುವ ಈ ಕರುಣಾನಿಧಿಯನ್ನು ಆಶ್ರಯಿಸಬೇಕೋ? ಶ್ರುತಿಯಲ್ಲಿ "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ, ಯಮೇವೈಷ ವೃಣುತೇ ತೇನ ಲಭ್ಯಃ" ಎಂದು ಶ್ರುತಿಯಿರುವದರಿಂದ ಆತನು ಸರ್ವಸ್ವತಂತ್ರನಾಗಿ, ತನಗೆ ಯಾರ ವಿಷಯದಲ್ಲಿ ಇಷ್ಟ ಉಂಟಾಗುತ್ತದೋ ಅವರಿಗೆ ತಾನು ಪ್ರಾಪ್ಯನು" ಎಂಬುದರಿಂದ ಸರ್ವೇಶ್ವರನೇ ಸ್ವತಂತ್ರಿಸಿ ಮುಕ್ತಿ ಕೊಡುವನು. ಈ ಭಕ್ತಿ ಪ್ರಪತ್ತಿರೂಪ ನಿರರ್ಥಕೋಪಾಯಗಳಿಂದ ಪ್ರಯೋಜನವೇನು ಎಂದು ಆಕ್ಷೇಪವನ್ನು ತರಬಹುದೆಂದು ಯೋಚಿಸಿ, ಅದಕ್ಕೆ ಸರಿಯಾದ ಅರ್ಥವನ್ನು ದಯಪಾಲಿಸುತ್ತಾರೆ: ಸ್ವತಂತ್ರನಾಗಿ ತನ್ನ ಇಷ್ಟಬಂದಂತೆ ಮುಕ್ತಿ ಕೊಡುವನು ಎಂದು ಹೇಳಿ ಬಿಟ್ಟರೆ, ಕರುಣಾನಿಧಿಯಾಗಿಯೂ ಸಮರ್ಥನಾಗಿಯೂ ಸ್ವತಂತ್ರನಾಗಿಯೂ ಇರುವದರಿಂದ ಸರ್ವರಿಗೂ ಮುಕ್ತಿಯನ್ನು ಕೊಟ್ಟಿರಬೇಕಾಗಿತ್ತು ಹಾಗಿಲ್ಲದೆ ಲೆಖ್ಖ ಮಾಡಲು ಅಸಾಧ್ಯವಾಗಿರುವ ಜೀವಕೋಟಿಯು ಬಂಧದಲ್ಲೇ ನರಳುತ್ತಾ ಇದೆ. ಹಾಗಲ್ಲವು, ಇಷ್ಟಬಂದಹಾಗೆ ಕೆಲವರಿಗೆ ಮಾತ್ರ ಮುಕ್ತಿ ಕೊಡುವನು ಎಂದರೆ ವೈಷಮ್ಯ ನೈರ್ಘೃಣ್ಯಕ್ಕೆ ಒಳಗಾಗುವನು. ಆದುದರಿಂದ ಮುಕ್ತಿಗೆ ಪ್ರಧಾನ ಕಾರಣಭೂತನು ಸರ್ವೇಶ್ವರನೇಯಾದರೂ ತಾನು ಎಲ್ಲರಿಗೂ ಇಷ್ಟಬಂದಂತೆ ಮುಕ್ತಿಯನ್ನೀಯುವದಿಲ್ಲವೆಂದೂ, ಎರಡು ವಿಧವಾದ ಉಪಾಯಗಳಲ್ಲಿ ಯಾವವನ್ನಾದರೂ ತಾನು ಶಾಸ್ತ್ರಗಳಲ್ಲಿ ಹೇಳಿರುವಹಾಗೆ ಸರಿಯಾಗಿ ತಾನು ಪ್ರೀತನಾಗುವಹಾಗೆ ಅನುಷ್ಠಿಸಿದರೇನೇ ಅವನ್ನು ವ್ಯಾಜೀಕರಿಸಿ, ಮುಕ್ತಿಯನ್ನೀಯತಕ್ಕವನೆಂದೂ, ಅದರಿಂದಲೇ ಮುಕುಂದನೆಂಬ ನಾಮಧೇಯವು ಸರ್ವೇಶ್ವರನಿಗೆ ಸಲ್ಲತಕ್ಕದ್ದೆಂದೂ ಸೂಚಿಸುವ,

ಕ್ಕಾಗಿಯೇ ಪಿರಗಿನ್ರದುಮ್ ಕುರಿಯೊನ್ರಾಲ್ ಎಂಬ ಪ್ರಯೋಗವು. ಇದರಿಂದ ಎರಡು ವಿಷಯವು ಸೂಚಿತವು,—(೧) ವ್ಯಾಜರೂಪವಾಗಿ ಭಕ್ತಿ ಅಥವಾ ಪ್ರಪತ್ತಿರೂಪ ಉಪಾಯಾನುಷ್ಠಾನವೂ ಆವಶ್ಯಕವು. (೨) ಆ ಉಪಾಯಾನುಷ್ಠಾನವು ಶಾಸ್ತ್ರ ಸಮ್ಮತವಾದುದಾಗಿ ಆದರಿಂದ ಪರಮ ಕಾರುಣಿಕನು ಪ್ರೀತನಾಗಬೇಕು. ಆದುದರಿಂದ ಯಮೇವೈಷ ವೃಣುತೇ ಎಂಬ ಶ್ರುತಿಯು ಇದನ್ನೇ ಉಪದೇಶಿಸುತ್ತದೆ. ಬರೀ ಉಪಾಯಾನುಷ್ಠಾನವು ಸಾಲದು, ಆದರಿಂದ ಭಗವಂತನು ಪ್ರೀತನಾಗಿ ಈ ಅಧಿಕಾರಿಯನ್ನು ವರಿಸಿದರೆ, ಆಗೀಗ ತೇನ ಲಭ್ಯನು ಎಂದು ಹೇಳಿರುತ್ತದೆಯಾದುದರಿಂದ ಸಾಧ್ಯೋಪಾಯಾನುಷ್ಠಾನ ವಿಷಯದಲ್ಲಿ ಶಙ್ಕೆಗೆ ಅವಕಾಶವಿಲ್ಲವೆಂದುಪದೇಶಿಸಿರುತ್ತಾರೆ. ಹಾಗೆಯೇ ಗೀತೆಯಲ್ಲೂ ಪರಮಾತ್ಮನೇ ಹೇಳಿಕೊಂಡಿರುತ್ತಾನೆ. ಈ ಶ್ರುತ್ಯರ್ಥವನ್ನೇ ಬಹುನಿಪುಣತರವಾಗಿ ಶ್ರೀಕೃಷ್ಣನು ಅಲ್ಲಿ ಉಪಪಾದಿಸಿರುವದರಿಂದ ಶ್ರೀಭಾಷ್ಯಕಾರರು ಆ ಶ್ಲೋಕಗಳ ವ್ಯಾಖ್ಯಾನದಲ್ಲಿ ಈ ಕಠಶ್ರುತಿಯನ್ನೇ ಉದಾಹರಿಸಿರುತ್ತಾರೆ. ಅವು ಯಾವುವೆಂದರೆ :—

ನಾಹಂವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ।
ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ॥

(ಗೀ ೧೧. ೫೩. ೫೪) ನನ್ನಲ್ಲಿ ಭಕ್ತಿಯಿಲ್ಲದ ಬರೀ ವೇದಗಳಿಂದಲೂ ಎಂದರೆ ಅವುಗಳನ್ನು ಗುರುಗಳ ಮೂಲಕ ಅಧ್ಯಯನವನ್ನು ಹೇಳಿಸಿಕೊಳ್ಳುವದೇನು, ಅದನ್ನೇ ಪ್ರವಚನಮಾಡುವದೇನು, ಇನ್ನೊಬ್ಬರಿಗೆ ಅಧ್ಯಯನ ಹೇಳುವದೇನು, ಇವುಗಳಿಂದಲೂ, ಬರೀ ಯಾಗದಾನಹೋಮತಪಸ್ಸುಗಳಿಂದಲೂ ನನ್ನನ್ನು ಸಾಕ್ಷಾತ್ಕರಿಸಲು ಸಾಧ್ಯನಲ್ಲವು. ಇನ್ನು ಹೇಗೆ ಸಾಧ್ಯನೆಂದರೆ, ಅವ್ಯಭಿಚರಿತ ಐಕಾನ್ತ್ಯ ಭಕ್ತಿಯಿಂದ ಸರಿಯಾಗಿ ಶಾಸ್ತ್ರಗಳ ಮೂಲಕ ತಿಳಿಯಲೂ ಶಕ್ಯನು, ಯಥಾವತ್ತಾಗಿ ಸಾಕ್ಷಾತ್ಕರಿಸಲು ಶಕ್ತನು, ಯಥಾವತ್ತಾಗಿ ಪರಿಪೂರ್ಣನಾದ ನನ್ನನ್ನನುಭವಿಸಲೂ ಸಾಧ್ಯನ." ಎಂಬುದು ಅರ್ಥವು, ಈ ಶ್ಲೋಕಗಳು ಸಾಧ್ಯೋಪಾಯದ ಆವಶ್ಯಕತೆಯನ್ನೂ, ಆದರಿಂದ ಭಗವಂತನು ಸುಪ್ರೀತನಾಗಿ ಸಾಧ್ಯೋಪಾಯಾನುಷ್ಠಾನವು ಪೂರ್ಣವಾಗುವಹಾಗೆ ಮಾಡಿ ಪ್ರಾಪ್ಯನಾಗುವನೆಂಬರ್ಥವನ್ನೂ ಸೂಚಿಸುತ್ತವೆ. ರಾಜ್ಯಾಡಳತಿಗಳಿಗೆ ಯೋಗ್ಯರಾಗಿರುವವರನ್ನು ಚುನಾಯಿಸುವದರಲ್ಲಿ ರಾಜನೇ ಯದ್ಯಪಿ ಸ್ವತಂತ್ರನಾದರೂ ತನಗೆ ಯಾವುದೊಂದು ಪಕ್ಷಪಾತ ಬುದ್ಧಿಯೂ [illegible] ತೋರಿಸಲು, ಸಿವಿಲ್ ಸರ್ವಿಸ್ ಪರೀಕ್ಷೆ ಯೆಂಬ ಒಂದು ವ್ಯಾಜವನ್ನು

ಏರ್ಪಡಿಸಿ ಅದರಲ್ಲಿ ಸೇರ್ಗಡೆ ಹೊಂದಿದವರನ್ನೇ ಹೇಗೆ ವರಿಸುತ್ತಾನೋ ಹಾಗೆಯೇ ಸರ್ವೇಶ್ವರನೂ ಸಹ ತನಗೆ ಯಾವ ಪಕ್ಷಪಾತಗಳೂ ಇಲ್ಲವೆಂದೂ ಭಕ್ತಿ ಪ್ರಪತ್ತ್ಯುಪಾಯಾನುಷ್ಠಾನಗಳನ್ನೇ ವ್ಯಾಜೀಕರಿಸಿ, ಅವುಗಳನ್ನು ಶಾಸ್ತ್ರೋಕ್ತರೀತ್ಯಾ ಸರಿಯಾಗಿ ನಡೆಸುವವರಿಗೆ ಮಾತ್ರವೇ ಮೋಕ್ಷವನ್ನು ಅನುಗ್ರಹಿಸುವನು. ಆದುದರಿಂದ ನ್ಯಾಸವು ಅವಶ್ಯಕವೆಂದು ಕುರಿಯೊನ್ರಾಲ್ ಎಂಬ ಪ್ರಯೋಗದಿಂದ ಉಪದೇಶಿಸುತ್ತಾರೆ. ಶ್ರೀ ಭಾಷ್ಯಕಾರರವರೂ "ಯಮೇವೈಷ ವೃಣುತೇ" ಎಂಬಲ್ಲಿ ಹೇಳಿರುವ ವರಣವು ಶ್ರಿಯಃಪತಿಯು ನಿರ್ಹೇತುಕವಾಗಿ ಮಾಡುವದಿಲ್ಲವೆಂದೂ ಹೇತುಸಾಪೇಕ್ಷೆಯಾಗಿಯೇ ನಡೆಸುವನೆಂದೂ, ಉಪಪಾದಿಸಿರುತ್ತಾರೆ. ಈ ಸಂದರ್ಭದಲ್ಲಿ ಅವರು ಹೇಳಿರುವದೇನೆಂದರೆ:— "ಪ್ರಿಯತಮ ಏವ ಹಿ ವರಣೀಯೋ ಭವತಿ, ಯಸ್ಯಾಯಂ ನಿರತಿಶಯ ಪ್ರಿಯಸ್ಸ ಏವಾಸ್ಯ ಪ್ರಿಯತಮೋ ಭವತಿ; ಪ್ರೀತಿ ರೂಪತಾಪನ್ನ ಭಕ್ತಿರೇವ ವರಣ ಹೇತು ತಯಾ ಶ್ರುತ್ಯಭಿಪ್ರೇತಾ; ನ ತು ನಿರ್ಹೇತುಕಂ ವರಣಂ" ಇದರ ಅರ್ಥವೇನೆಂದರೆ, "ಯಾವನು ತುಂಬಾ ಪ್ರಿಯತಮನಾಗುವನೋ ಅವನು ತಾನೇ ಸರ್ವೇಶ್ವರನಿಂದ ವರಿಸಲು ಯೋಗ್ಯನಾಗುವನು; ಪ್ರೀತಿ ರೂಪವನ್ನು ಹೊಂದಿದ ಭಕ್ತಿಯೊಗ ಸರ್ವೇಶ್ವರನಿಂದ ವರಿಸಲ್ಪಡುವದಕ್ಕೆ ಹೇತುವಾಗುತ್ತದೆಂಬುದೇ "ಯಮೇವೈಷ ವೃಣುತೇ" ಎಂಬ ಶ್ರುತಿಯ ಅಭಿಪ್ರಾಯವು; ಕಾರಣವೇನೂ ಇಲ್ಲದೇನೇ ಸರ್ವೇಶ್ವರನು ವರಿಸುವನೆಂಬ ಅಭಿಪ್ರಾಯವಲ್ಲವು" ಆದುದರಿಂದ ಪರಮ ಪುರುಷವರಣೀಯತೆಗೆ ಹೇತು ಭೂತಗಳಾದ ಈ ಸಾಧ್ಯೋಪಾಯಗಳ ವಿಷಯಗಳಲ್ಲಿ ಯಾವ ವಿಧವಾದ ಶಙ್ಕೆಯೂ ಯುಕ್ತವಲ್ಲವು; ಭಕ್ತ್ಯುಪಾಯವು ಸ್ವರೂಪವಿರುದ್ಧವೆಂದೂ, ಪ್ರಪತ್ತಿಯು ಪೂರ್ವೀಕರಾದ ಮುನಿ ಜನಗಳು ಅನುಷ್ಠಿಸಲಿಲ್ಲವೆಂದೂ ಇತ್ಯಾದಿ ಆಕ್ಷೇಪಗಳೆಲ್ಲಾ ಶಾಸ್ತ್ರವನ್ನು ತ್ಯಜಿಸಿ ಮಾಡುವಂತವುಗಳೆಂದು ತಿಳಿಸುವದಕ್ಕಾಗಿ ಉರೈಕ್ಕಿನ್ರನನ್ನೆರಿ ಎಂದು ಹೇಳಿ, ಶಾಸ್ತ್ರಚೋದಿತಗಳಾಗಿ ಯಿರುವದರಿಂದ ಅವುಗಳು ನಲ್ ನೆರಿ ಉತ್ಕೃಷ್ಟಮಾರ್ಗಗಳೆಂದು ಹೇಳಿ, ಅವುಗಳನ್ನು ಓರುಮ್ಪಡಿಗಳಿಲ್ ಓರ್ಕ್ಕು ಶಾಸ್ತ್ರಗಳಲ್ಲಿ ಹೇಳಿರುವಹಾಗೆ ಅನುಷ್ಠಿಸಿ ಈ ಅನುಷ್ಠಾನಗಳು ಶ್ರಿಯಃಪತಿಯನ್ನು ವಶೀಕರಣಮಾಡಿಕೊಳ್ಳುವ ಉಪಾಯಗಳೆಂಬ ಅನುಸಂಧಾನ ಬೇಕೆಂದು ಹೇಳಿರುತ್ತಾರೆ ಈ ಸಾಧ್ಯೋಪಾಯಗಳನ್ನನುಷ್ಠಿಸಿ ಪ್ರಪನ್ನನಾಗದೇ ಇದ್ದರೆ ಈ ಕರುಣಾಸಾಗರನು ಮೋಕ್ಷವನ್ನೀಯನು ಎಂದು "ಪ್ರಪನ್ನಾದನ್ಯೇಷಾಂ ನ ದಿಶತಿ ಮುಕುಂದೋ ನಿಜಪದಮ್" ಎಂದು ಸ್ವಾಮಿಯವರೇ ಕಂಠೋಕ್ತವಾಗಿ ಹಿಂದೆ ತಿಳಿಸಿರುತ್ತಾರೆ. ಆದುದರಿಂದ ಭಕ್ತಿ ಪ್ರಪತ್ತಿಗಳೇ ಮೋಕ್ಷ ಸಾಧಕಗಳಾದ ಉಪಾಯಗಳು ಎಂಬುದೇ ಸಿದ್ಧಾಂತವು ಎಂಬ ಭಾವವು,

ಆಗಲಿ, ಇವುಗಳನ್ನೇನೋ ಮೋಕ್ಷೋಪಾಯಗಳೆಂದೇ ಅಙ್ಗೀಕರಿಸೋಣ; ಶಾಸ್ತ್ರ ಸಮ್ಮತವಾಗಿಯೇ ಸರಿಯಾಗಿಯೇ ಅನುಷ್ಠಿಸತಕ್ಕದ್ದೆಂದೂ ಒಪ್ಪೋಣ; ಹೀಗೆಲ್ಲಾ ಮಾಡಿದರೂ ಭಗವಂತನು ಸುಪ್ರೀತನಾಗದೇ ಹೋದರೂ ಆಗಲೂ ಅವು ನಿರರ್ಥಕಗಳಲ್ಲವೋ? ಎಂದರೆ ಹೇಳುತ್ತಾರೆ; **ಉಲಗಮ್ ದರಿಕ್ಕಿನ್ರ ತಾರಕನಾರ್** ಸರ್ವೇಶ್ವರನು; ಸಮಸ್ತ ಜಗತ್ತಿಗೂ ಆತನೇ ಧಾರಕನಾಗಿರುತ್ತಾನೆ. ಆತನ ಪ್ರಶಾಸನೆ ನಿಯಮನದಲ್ಲಿ ಸಮಸ್ತ "**ದ್ಯಾವಾಪೃಥಿವ್ಯೌ ವಿಧೃತೌ ತಿಷ್ಠತಃ," "ಏಷ ಸೇತುರ್ವಿಧರಣಃ" "ಏಷಾಂ ಲೋಕಾನಾಂ ಅಸಂಭೇದಾಯ**" ಎಂದು ಹೇಳಿರುವಹಾಗೆ ಈ ಲೋಕ ನಿಯಮನದಲ್ಲಿ ಬದ್ಧಕಂಕಣನಾಗಿ ಕೂತಿರುವಾಗ, ತನ್ನ ನಿಯಮನಾನುಸಾರ ಉಪಾಯಾನುಷ್ಠಾನಮಾಡಿದ ಜ್ಞಾನಿಯನ್ನು ಎಂದಿಗಾದರೂ ಮರತಾನೋ? "**ಜ್ಞಾನೀತ್ವಾತ್ಮೈವ ಮೇ ಮತಂ**'' ತಾನು ಎಲ್ಲಾದಕ್ಕೂ ಆತ್ಮಾವಾಗಿರುವದು ಹಾಗಿರಲಿ, ಆತನೇ ತನಗೆ ಆತ್ಮಾ ಎಂದು ಭಗವಂತನು ಹೇಳಿಕೊಂಡಿರುತ್ತಾನೆ "**ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಂಚನ**" ಎಂದೂ ಹೇಳಿರುತ್ತಾನೆ. ಆದುದರಿಂದ ಆತನನ್ನು **ತಾರಕನಾರ್** ಎಂದು ಹೇಳಿರುತ್ತಾರೆ, ಸಂಸಾರ ತಾರಕನು ಎಂದರ್ಥವನ್ನಾಗಲಿ ಹೇಳಬಹುದು. ಅಥವಾ "**ಏತಂ ಸೇತುಂ ತೀರ್ತ್ವಾ**" (ಛಾ. ೮. ೪. ೧.) ಎಂಬಲ್ಲಿ "**ತರತಿಶ್ಚ ಪ್ರಾಪ್ತಿವಚನಃ**" ಎಂದು ಭಾಷ್ಯವಿರುವದುದರಿಂದ **ತಾರಕನಾರ್** ಎಂಬುವದರಿಂದ ತಾನೇ ಪ್ರಾಪ್ತ್ಯಯು ಎಂದೂ ಅರ್ಥ ಹೇಳಬಹುದು. ಅಥವಾ "**ಸಂಸಾರಸಾಗರ ನಿಮಗ್ನ**"ರಾದವರ ಉತ್ತಾರಣೆಯಲ್ಲಿ ಬದ್ಧಾದರನಾದುದರಿಂದಲಾಗಲಿ "**ತಾರಕನಾರ್**"ನೆಂದು ಪ್ರಯೋಗಿಸಿರಬಹುದು. ಇದರಿಂದ ಆತನ ಪ್ರಾಪ್ತಿಯುಂಟಾಗುವದರಲ್ಲಿ ಸಂದೇಹವಿಲ್ಲವೆಂಬುದೂ ಸೂಚಿತವು. ಹಾಗೆ ತಾನು ಪ್ರಾಪ್ಯವಾಗಿ ಸಾಯುಜ್ಯವನ್ನೂ ಸಾರ್ಷ್ಟಿತೆಯನ್ನೂ ದಯಪಾಲಿಸುವದೂ ತನ್ನ ಕೃಪಾಪ್ರಭಾವವೇ ವಿನಾ ಬೇರೆಯಲ್ಲಾ ಎಂದು ತಿಳಿಸುವದಕ್ಕಾಗಿ "**ತಕವಾಲ್**" ಎಂಬ ಪ್ರಯೋಗವು. ಆದರೆ ಈ ಅನಾದಿ ಕರ್ಮ ಪ್ರವಾಹಮೂಲಕ ವಿನೈಯರೇ, ಮಹಾಪರಾಧಿಗಳ ಭಯವಿಲ್ಲವೋ ಎಂದರೆ ಪ್ರಸನ್ನನಾದ ಬಳಿಕ ಆತನನ್ನೇ ನಿರಂತರ ಧ್ಯಾನಮಾಡುತ್ತಾ ಆತನ ಪ್ರೀತಿಯನ್ನು ಸಂಪಾದಿಸಿದ ಬಳಿಕ "**ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ.... ನಿಸ್ಸಂಶಯೋಮುಕ್ತಿ ಫಲಪ್ರಪಾತಃ**" ಎಂದು ಹೇಳಿರುವ ಮೇರೆಗೆ ಅನಿಷ್ಟನಿವೃತ್ತಿಮೂಲಕ ಇಷ್ಟಪ್ರಾಪ್ತಿಯಲ್ಲಿ ಈಷದಪಿ ಸಂದೇಹವಿಲ್ಲವೆಂದು ಸೂಚಿಸುವದಕ್ಕಾಗಿ "**ತರಕ್ಕಿನ್ರ ನಮೇ**" ಎಂದು ಪ್ರಯೋಗಿಸಿರುತ್ತಾರೆ.

**ಅವತಾರಿಕೆ:**—ಸಿದ್ಧೋಪಾಯನಾದ ಸರ್ವೇಶ್ವರನು ಸ್ವತಃ ಸರ್ವಜ್ಞನು, ಸರ್ವಶಕ್ತನು, ಸ್ವತಂತ್ರನು, ಇದಲ್ಲದೆ ನಮಗೆಲ್ಲಾ ಸಹಜವಾದ ಪರಮ ಸುಹೃತ್ತು; ಶೇಷಿಯು, ಕರುಣಾಸಾಗರನು; ನಾವು ಆತನಿಗೆ ಸಹಜವಾಗಿರುವ ಅಸ್ವತಂತ್ರರಾಗಿರುವ ಮಕ್ಕಳು, ದಾಸರು, ಸಂಸಾರ ಸಾಗರದಲ್ಲಿ ಬಿದ್ದು ಒದ್ದಾಡುತ್ತಿರುವವರು. ಇಂತವರು ಆತನನ್ನು ಈ ಸಾಧ್ಯೋಪಾಯಗಳನ್ನನುಷ್ಠಿಸಿ ಬೇಡಿಕೊಳ್ಳಬೇಕೇ? ಹಾಗೆ ಬೇಡಿದನಂತರ ರಕ್ಷಿಸೋಣವು ಆತನ ಪ್ರಭಾವಕ್ಕೆ ಕುಂದಕವಲ್ಲವೇ? ಸಾಧ್ಯೋಪಾಯವು ಆವಶ್ಯಕವೆಂದರೆ, ಸಿದ್ಧೋಪಾಯ ಪ್ರಾಧಾನ್ಯಕ್ಕೂ ಏಕತ್ವಕ್ಕೂ ವಿರೋಧವಲ್ಲವೇ? ಸಾಧ್ಯೋಪಾಯದಿಂದ ವಶ್ಯನೆಂದರೆ ಸರ್ವೇಶ್ವರನಿಗೆ ಸಿದ್ಧೋಪಾಯತ್ವವು ಹೇಗೆ ಕೂಡುತ್ತದೆ? ಸಾಧ್ಯೋಪಾಯವೂ ಆವಶ್ಯಕವೇ ಎಂದರೆ ಸಾಧ್ಯೋಪಾಯವಿಲ್ಲದೆ ರಕ್ಷಿಸಲು ಆತನಿಗೆ ಶಕ್ತಿಯಿಲ್ಲವೆಂದು ಆತನ ಸರ್ವಶಕ್ತಿತ್ವಕ್ಕೆ ನ್ಯೂನತೆಯುಲ್ಲವೋ? ಇತ್ಯಾದಿ ಅನೇಕ ಆಕ್ಷೇಪಗಳೆಲ್ಲಾ ಸರಿಯಾದ ಆಕ್ಷೇಪಗಳಲ್ಲವೆಂದು ಹೇಳುತ್ತಾರೆ.

**ಮೇಲೆ ಹೇಳಲ್ಪಟ್ಟ ಸಾಧ್ಯೋಪಾಯಶೋಧನವು ಸ್ವಾಚಾರ್ಯ ಕೃಪಾಲಬ್ಧವಾದುದೆನ್ನುತ್ತಾರೆ.**

ಸತ್ತರ್ಕಗಳಲ್ಲದ ಆಕ್ಷೇಪಗಳನ್ನೆಲ್ಲಾ ನಿರ್ಮೂಲವಮಾಡುವ ಸಿದ್ಧಾನ್ತವನ್ನೊಳಗೊಂಡಿರುವ ತರ್ಕವಿದ್ಯೆಯಲ್ಲೇ ಶಿಕ್ಷಿತರಾಗಿರುವದೂ ಅಲ್ಲದೆ, ಕೆಮ್ಮಣ್ಣಿನಿಂದ ಕಲುಷಿತವಾದ ನೀರು ಚಿಲ್ಲದ ಬೀಜದಿಂದ ನೈರ್ಮಲ್ಯವನ್ನು ಹೇಗೆ ಹೊಂದುತ್ತದೋ, ಹಾಗೆ ತಮ್ಮ ಆಚಾರ್ಯರುಗಳು ಉಪನಿಷತ್ತುಗಳ ಸಾರತಮವಾದ ಉಪದೇಶದಿಂದ ಅಂತಹ ಶಙ್ಕಾಗಳಿಂದ ಕಲುಷಿತವಾಗದಹಾಗೆ ಪರಿಶುದ್ಧವಾದ ಜ್ಞಾನವುಳ್ಳವರು; ಅವರುಗಳ ತರ್ಕ ನೈಪುಣ್ಯತೆಯೆಲ್ಲಾ ಸಾರಭೂತವಾದ ಉಪನಿಷತ್ತುಗಳ ಜ್ಞಾನದಿಂದ ಪ್ರತಿಷ್ಠಿತವಾದ ಸತ್ತರ್ಕವು. ಅಂತಹ ಸತ್ತರ್ಕದಿಂದ ಸಮಸ್ತ ಇಂದ್ರಜಾಲರೂಪ ಕುತರ್ಕಗಳ ಕಾಲುಷ್ಯವೆಲ್ಲಾ ತೊಲಗಿ ಸ್ವಚ್ಛವಾದ ಜ್ಞಾನವಿಕಾಸವುಳ್ಳವರು. ಅಂತಹ ಪರಮಾಚಾರ್ಯರ ಕೃಪಾಪೂರ್ಣವಾದ ಉಪದೇಶವು, ಲಭಿಸಿದುದರಿಂದ ಈ ಸಾಧ್ಯೋಪಾಯ ಶೋಧನವನ್ನು ತಾವು ಮಾಡಿರುವದಾಗಿ ಹೇಳಿಕೊಳ್ಳುತ್ತಾರೆ.

**ಅರ್ಥ:**—ನಮ್ಮ ಮಹನೀಯರಾದ ಮಹಾಪ್ರಾಜ್ಞರಾದ ಪೂರ್ವಾಚಾರ್ಯರುಗಳು ನಮಗೆ ಪರಮಕೃಪಯಾ ಸದುಪದೇಶವನ್ನು ಮಾಡಿರುತ್ತಾರೆಂದು ಹೇಳುತ್ತಾರೆ. ಏನನ್ನು ಉಪದೇಶಿಸಿರುತ್ತಾರೆಂದರೆ:—**ನಃ**-ನಮ್ಮಗಳಿಗೆ, **ಸಾಧ್ಯಾಂ** - ಸಾಧ್ಯೋಪಾಯವಾದ, ಭಕ್ತಿ ಅಥವಾ ಪ್ರಪತ್ತಿಮಾರ್ಗವನ್ನು, ಪ್ರಕರಣವು ಪ್ರಪತ್ತಿಮಾರ್ಗವಾದುದರಿಂದ, ಸಾಧ್ಯಾಂ ಎಂಬುದರಿಂದ ಪ್ರಪತ್ತಿ ಎಂದು ಇಟ್ಟುಕೊಳ್ಳಬಹುದು. ಸಿದ್ಧೋಪಾಯ [illegible] ಸಿದ್ಧೋಪಾಯನಾದ ಶ್ರೀ [illegible] ವರಿ

ಉಕ್ತಪ್ರಕಾರ ಸಾಧ್ಯೋಪಾಯಶೋಧಕತ್ವಂ ಸ್ವಾಚಾರ್ಯ
ಕೃಪಾಲಬ್ಧಮಿತ್ಯಾಹ.

ತತ್ತದ್ಧೈತುಕ ಹೇತುಕೇ ಕೃತಧಿಯಸ್ತರ್ಕೇಂದ್ರಜಾಲಕ್ರಮೇ ।
ಬಿಭ್ರಾಣಾಃ ಕಥಕಪ್ರಧಾನ ಗಣನೇ ನಿಷ್ಠಾಂ ಕನಿಷ್ಠಾಶ್ರಯಾಮ್ ।
ಅಧ್ಯಾತ್ಮಶ್ರುತಿ ಸಂಪ್ರದಾಯ ಕತಕೈರದ್ಧಾ ವಿಶುದ್ಧಾಶಯಾ ।
ಸಿದ್ಧೋಪಾಯವಶೀಕ್ರಿಯಾಮಿಹ ಹಿ ನಸ್ಸ್ವಧ್ಯಾಪ ಸಮುದ್ಧ್ಯಾಪಯನ್ ॥೩೪॥
ಇತಿ ಕವಿತಾರ್ಕಿಕಸಿಂಹಸ್ಯ ಸರ್ವತಂತ್ರಸ್ವತಂತ್ರಸ್ಯ ಶ್ರೀವೇದಾನ್ತಾಚಾರ್ಯಸ್ಯ ಕೃತಿಷು
ಶ್ರೀಮದ್ರಹಸ್ಯತ್ರಯಸಾರೇ ಸಾಧ್ಯೋಪಾಯ ಶೋಧನಾಧಿಕಾರಶ್ಚತುರ್ತ್ರಿಂಶಃ ॥

---

ಕರಣೋಪಾಯವನ್ನಾಗಿ. ಇತಿ - ಎಂಬದಾಗಿ, ಸಮುಧ್ಯಾಪಯನ್ - ವೇದಾಂತ ಶಾಸ್ತ್ರ ಸಾರ್ವಭೌಮರಾದ ಪ್ರಯುಕ್ತ ಚೆನ್ನಾಗಿ ಬುದ್ಧಿಯನ್ನು ಕಲಿಸಿರುತ್ತಾರೆ, ಬಹು ಸ್ವಾರಸ್ಯವಾಗಿ ನಿಸ್ಸಂದೇಹವಾಗಿ, ಯಾವದೊಂದು ಶಙ್ಕೆಗಳಿಗೂ, ಅವಕಾಶ ವಿಲ್ಲದಹಾಗೆ ಕೃಪಯಾ ಉಪದೇಶಿಸಿರುತ್ತಾರೆ. ಅವರು ಎಂತವರೆಂದರೆ ಹೇಳು ತ್ತಾರೆ:—ಪೂರ್ವಾರ್ಧದಿಂದ ದುಷ್ಟ ಹೇತುಗಳನ್ನು ಹೇಳಿ ಕುತರ್ಕಗಳನ್ನು ಮಾಡುವ ಯುಕ್ತಿವಾದಗಳಿಗೆ, ಸರಿಯಾದ ಯುಕ್ತಿಗಳನ್ನೇ ಹೇಳಿ, ಅವರು ಗಳ ವಾದಗಳನ್ನು ಜಯಿಸುವ ತರ್ಕವಿದ್ಯೆಗಳಲ್ಲಿ ಚೆನ್ನಾಗಿ ಶಿಕ್ಷಿತರಾಗಿರುವ ತಾರ್ಕಿಕಾಗ್ರೇಸರರು ಎಂದು ಹೇಳುತ್ತಾರೆ, (೧) ತತ್ತದ್ಧೈತುಕ ಹೇತುಕೇ - ತತ್ತತ್ - ಆಯಾ ಎಂದರೆ ನಾನಾ ವಿಧವಾದ, ಹೈತುಕ - ಶಾಸ್ತ್ರಗಳನ್ನು ದೂರೀ ಕೃತಮಾಡಿ, ಬರೀ ಯುಕ್ತಿಗಳಾದ ಹೇತುಗಳನ್ನು ಎಂದರೆ ಕಾರಣಗಳನ್ನು ಹೇಳಿ ವಾದಮಾಡುವರು, ಕುತರ್ಕಗಳ ಮೂಲಕ ವಾದಮಾಡುವವರು ಹೈತು ಕರು, ಅಂತವರೇ, ಹೇತುಕೇ - ಕಾರಣವಾಗಿವುಳ್ಳ, ತರ್ಕೇಂದ್ರಜಾಲಕ್ರಮೇ - ತರ್ಕ - ಇಂತಹ ತರ್ಕವೆಂಬ, ಇಂದ್ರಜಾಲಕ್ರಮೇ ಬುದ್ಧಿಯನ್ನು ಮೋಸಗೊ ಳಿಸುವ ಕ್ರಮದಲ್ಲಿ, ಕೃತಧಿಯಃ-ಶಿಕ್ಷಿತವಾದ ಬುದ್ಧಿಯುಳ್ಳವರಾದುದರಿಂದಲೇ, ಕಥಕ ಪ್ರಧಾನ ಗಣನೇ - ತಾರ್ಕಿಕಾಗ್ರೇಸರರನ್ನು ಗಣನೆ ಮಾಡುವದರಲ್ಲಿ, ಕನಿಷ್ಠಾಶ್ರಯಾಂ - ಕಿರುಬೆರಳಿನ, ಆಶ್ರಯವನ್ನು, ಬಿಭ್ರಾಣಾಃ - ಧರಿಸಿರುವಂ ತಹ ಪೂರ್ವಾಚಾರ್ಯರು, ತಾರ್ಕಿಕರಲ್ಲಿ ಮೊದಲು ಯಾರು ಎಂದು ಹೆಬ್ಬೆರಳನ್ನು ಕಿರುಬೆರಳಿನಲ್ಲಿಟ್ಟು ಎಣಿಸುವಾಗ, ನಮ್ಮ ಪೂರ್ವಾಚಾರ್ಯರುಗಳಾದ ಯಾಮು ನೇಯರೂ ಶ್ರೀ ಭಾಷ್ಯಕಾರರೂ, ಹಾಗೆಯೇ ಈಚೆಗೆ ನಡಾದೂರಮ್ಮಾಳ್ ಕಿಡಾಂಬಿ ಅಪ್ಪುಳ್ಳಾರ್ ಮೊದಲಾದವರೂ ಎಂಬ ಭಾವವು; ಅವರುಗಳ ಉಪದೇಶ ದಿಂದ ತರ್ಕಶಾಸ್ತ್ರದಲ್ಲಿ ಪ್ರವೀಣತೆಯನ್ನು ಹೊಂದಿ ಕವಿತಾರ್ಕಿಕ ಸಿಂಹರೆಂದು ಪ್ರಸಿದ್ಧರಾದ ತಾವೂ ಸಹ ಸೂಚಿಸಲ್ಪಟ್ಟರು. ಹೀಗೆ ಪರಪಕ್ಷಕುತರ್ಕಗಳನ್ನು ಅಂತಹ ಯುಕ್ತಿವಾದಗಳಿಂದಲೇ ನಿರ್ಮೂಲಮಾಡುವ ಶಕ್ತಿಯುಳ್ಳವರೆಂಬ ಭಾವವು.

ಆದರೆ ಅಂತಹ ಯುಕ್ತಿವಾದ ಮಾತ್ರವೇ ಅಷ್ಟು ಪ್ರಶಸ್ತವಲ್ಲವು. ಇನ್ನೂ ಹೆಚ್ಚು ವೈಲಕ್ಷಣ್ಯವೂ ಉಂಟೆಂದು ಉತ್ತರಾರ್ಧದಿಂದ ತಿಳಿಸುತ್ತಾರೆ. ಪರವಾದಿಗಳ ತರ್ಕವಾದರೋ ಶಾಸ್ತ್ರವನ್ನು ತ್ಯಜಿಸಿದ ಕುತರ್ಕವು ನಮ್ಮವರ ತರ್ಕವಾದರೋ ವೇದಾಂತಶಾಸ್ತ್ರಜ್ಞಾನದಿಂದ ಸುಪ್ರತಿಷ್ಠಿತವಾದ ಸತ್ತರ್ಕವು; ಅಂತಹ ತರ್ಕದಿಂದ ಸರ್ವಸಂಶಯಗಳನ್ನು ಕಳೆದುಕೊಂಡು ಪರಿಶುದ್ಧವಾದ ಅಂತಃಕರಣವುಳ್ಳವರೆಂದು ಹೇಳುತ್ತಾರೆ (೨) ಅಧ್ಯಾತ್ಮಶ್ರುತಿಸಂಪ್ರದಾಯಕತಕೈಃ- ಅಧ್ಯಾತ್ಮ ಶ್ರುತಿ - ವೇದಾಂತ ನಿರ್ಣಯವನ್ನು ಬೋಧಿಸುವ ಶ್ರುತಿಗಳು ಇವು ಯಾವುವೆಂದರೆ ಮುಖ್ಯವಾಗಿ ದಶೋಪನಿಷತ್ತುಗಳು, ಇವುಗಳ ಸಂಪ್ರದಾಯ - ಗುರುಶಿಷ್ಯಕ್ರಮದಿಂದ ಅವಿಚ್ಛಿನ್ನವಾಗಿ ಪ್ರಾಪ್ತವಾದ ಉಪದೇಶಗಳೆಂಬ, ಕತಕೈಃ ಕಶ್ಮಲವಾಗಿ ಕೆರೆಯನೀರಿನಹಾಗೆ ಕೆಂಪಗೆ ಕಲುಷಿತವಾದ ನೀರನ್ನು ಶುದ್ಧಿಮಾಡುವ ಸತ್ತರ್ಕರೂಪಗಳಲ್ಲಿರುವ ಚಿಲ್ಲದ ಬೀಜಗಳಿಂದ, ಅದ್ಧಾ - ಬಹು ಚನ್ನಾಗಿ, ವಿಶುದ್ಧಾಶಯಾಃ - ನಿರ್ಮಲವಾದ ಮನಸ್ಸುಗಳನ್ನುಳ್ಳವರು, ಇಂತಹ ಬರೀ ಯುಕ್ತವಾದದಿಂದಲೂ, ಮತ್ತು ವೇದಾಂತ ಶಾಸ್ತ್ರಜ್ಞಾನದಿಂದಲೂ ಗೆಲ್ಲಲು ಸಾಮರ್ಥ್ಯವುಳ್ಳ ತಾರ್ಕಿಕಾಗ್ರೇಸರರಾದ ತಮ್ಮ ಆಚಾರ್ಯರುಗಳು ಸಾಧ್ಯೋಪಾಯದಿಂದಲೇ ಸಿದ್ಧೋಪಾಯನು ವಶ್ಯನೆಂದು ಉಪದೇಶಿಸಿರುತ್ತಾರೆ. ಈ ಉಪದೇಶದಲ್ಲಿ ಪ್ರಧಾನವಾದ ಉಪದೇಶವು ಯಾವುವೆಂದರೆ.—"ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂಬ ಶ್ರೀ ಭಾಷ್ಯಕಾರರ ಪ್ರಸಿದ್ಧೋಕ್ತಿಯು. ಆ ಸಿದ್ಧೋಪಾಯನಾಗಿ ಕರುಣಾನಿಧಿಯಾದ ಶ್ರಿಯಃಪತಿಯನ್ನು ವಶೀಕರಣಮಾಡಿಕೊಳ್ಳಬೇಕಾದರೆ, ಆತನ ಪಾದಾರವಿಂದದಲ್ಲಿ ಅನುಷ್ಠಿಸಿದ ಶರಣಾಗತಿಯೋ ಇದೇ ಸಾಧ್ಯೋಪಾಯವು ಇದು ಎರಡು ವಿಧವು (೧) ಅಙ್ಗರೂಪದಲ್ಲಿ ಭಕ್ತ್ಯುಪಾಯವು ಹೇಳಲ್ಪಟ್ಟಿತು (೨) ಅಙ್ಗಿರೂಪದಲ್ಲಿ ಪ್ರಪತ್ತ್ಯುಪಾಯವು ಹೇಳಲ್ಪಟ್ಟಿತು. ಮೊದಲನೆಯದು "ಮಾಮೇವ ಯೇ ಪ್ರಪದ್ಯಂತೇ" ಎಂದು (ಗೀತಾ ೭-೧೪) ಶ್ಲೋಕದಲ್ಲೂ, "ಮಾಂ ನಮಸ್ಕುರು ಮಾಮೇವೈಷ್ಯಸಿ" ಎಂದು (ಗೀತಾ ೯-೩೪) ಶ್ಲೋಕದಲ್ಲೂ, "ಮಾಮೇಕಂ ಶರಣಂ ವ್ರಜ" ಎಂದು ಗೀತಾ ೧೮-೬೬ನೇ ಶ್ಲೋಕದಲ್ಲೂ, ಹೀಗೆಲ್ಲಾ ಉಪಪಾದಿತವು. ಅಙ್ಗಿರೂಪ ಪ್ರಪತ್ತಿಯು (ಗೀ ೧೮. ೬೬) ಶ್ಲೋಕದಲ್ಲೂ ಕಠಶ್ರುತಿಯಲ್ಲೂ, ವಸುರಣ್ಯೋ ಮಂತ್ರದಲ್ಲೂ, ಭಗವಚ್ಛಾಸ್ತ್ರದಲ್ಲೂ, ರಾಮಾಯಣ, ಭಾರತ, ಭಾಗವತಗಳಾದ ಇತಿಹಾಸಗಳಲ್ಲೂ, ಇನ್ನೂ ಶಾಂಡಿಲ್ಯ ಸ್ಮೃತಿ, ಅಹಿರ್ಬುಧ್ನ್ಯಸಂಹಿತೆ ಮೊದಲಾದವುಗಳಲ್ಲೂ ಉಪಪಾದಿತವು. ಹಾಗಾದರೆ ಗೀತೆಯಲ್ಲಿ ಈ ಸ್ವತಂತ್ರ ಪ್ರಪತ್ತಿಯು ಹೇಳಿದ್ದೋ ಎಂದರೆ ಈ ಸಮಸ್ತ ವ್ಯಾಧಿಗಳಿಗೂ ಭೇಷಜ ರತ್ನವಾದ ಇದನ್ನು

ಅಲ್ಲಿನ ಒಂದು ವಿಧವಾದ ಪ್ರಬಲರೋಗಕ್ಕೆ ಭೇಷಜವೆಂದು ಹೇಳಿದರೆ, ಇತರ ರೋಗಗಳಿಗೂ ಭೇಷಜವಲ್ಲವೆಂದು ಊಹಿಸಲು ಕಾರಣವಿಲ್ಲವು. ಆದುದರಿಂದ ಗೀತಾ ಚರಮಶ್ಲೋಕವು ಎರಡು ವಿಧ ಶರಣಾಗತಿಯನ್ನೂ ಉಪದೇಶಿಸುತ್ತದೆಂದು ಭಾವಿಸತಕ್ಕದ್ದು. ಈ ಅಭಿಪ್ರಾಯಗಳನ್ನೆಲ್ಲವನ್ನೂ ಮೇಲಿನ ಶ್ರೀಭಾಷ್ಯಕಾರರ ದಿವ್ಯಸೂಕ್ತಿಯನ್ನೂ ಮನಸ್ಸಿನಲ್ಲಿಟ್ಟೇ, ಈ ಸಿದ್ಧೋಪಾಯ ಸಾಧ್ಯೋಪಾಯ ವಿಷಯಗಳಲ್ಲಿ ಉಂಟಾಗಬಹುದಾದ ಸರ್ವ ಸಂಶಯಗಳೂ ನಿಲ್ಲಲು ಸಾಧ್ಯವೇ ಇಲ್ಲವು. ಶ್ರೀ ಯಾಮುನೇಯರು ಶ್ರೀ ಭಾಷ್ಯಕಾರರು ಮೊದಲಾದ ತಾರ್ಕಿಕಾಗ್ರೇಸರರು ಇತರ ಸಿದ್ಧಾಂತಿಗಳನ್ನೆಲ್ಲಾ ತಮ್ಮ ಸತ್ತರ್ಕಗಳಿಂದ ಜಯಿಸಿ ಪೂರ್ವಪಕ್ಷ ಸಿದ್ಧಾಂತಗಳನ್ನೆಲ್ಲಾ ಅವರುಗಳನುಗ್ರಹಿಸಿರುವ ಸಿದ್ಧಿತ್ರಯ ಶ್ರೀಭಾಷ್ಯಾದಿಗ್ರಂಥಗಳಲ್ಲಿ ವ್ಯಕ್ತಪಡಿಸಿರುತ್ತಾರೆ. ಆ ಅಭಿಪ್ರಾಯಗಳನ್ನೇ ತಾವೂ ಉಪಪಾದನೆಮಾಡಿ, ಶತದೂಷಣೀ ಪರಮತಭಂಗ,ನ್ಯಾಯಸಿದ್ಧಾಂಜನ, ನಿಕ್ಷೇಪರಕ್ಷೆ ಮುಂತಾದ ಗ್ರಂಥಗಳಲ್ಲಿ ವ್ಯಕ್ತಪಡಿಸಿರುತ್ತೇನೆಂಬಂಶವೂ ಸೂಚಿತವು. ಆದುದರಿಂದ ತತ್ತದ್ಧೈತುಕಹೇತುಕೇ,ತರ್ಕೇಂದ್ರಜಾಲಕ್ರಮೇ ಕೃತಧಿಯಃ ಎಂದು ತಮ್ಮ ಪೂರ್ವಾಚಾರ್ಯರನ್ನು ಕುರಿತು ಹೇಳಿದರು. ಬರೀ ತರ್ಕವು ಶಾಸ್ತ್ರಸಮ್ಮತವಿಲ್ಲದುದಾದರೆ ಕುತರ್ಕವಾಗುತ್ತದೆ. ಆದರಿಂದ ಪ್ರತಿಷ್ಠಿತಜ್ಞಾನವು ದೊರೆಯುವದಿಲ್ಲವೆಂದು "ತರ್ಕಾಽಪ್ರತಿಷ್ಠಾನಾದಪಿ" (೨.೧.೧೧.) ಎಂಬ ಬ್ರಹ್ಮ ಸೂತ್ರದಲ್ಲಿ ಶ್ರೀ ವ್ಯಾಸಮಹರ್ಷಿಯು ಹೇಳಿರುತ್ತಾರೆ ಶ್ರೀದೇಶಿಕರೂ ಸಙ್ಕಲ್ಪ ಸೂರ್ಯೋದಯದಲ್ಲಿ, ತರ್ಕೇಣಪ್ರತಿತಿಷ್ಠತಿ, ಕೇವಲತರ್ಕವೇ ಪ್ರತಿಷ್ಠಿತ ಜ್ಞಾನವನ್ನುಂಟು ಮಾಡುವದಿಲ್ಲವೆಂದು ಹೇಳಿರುತ್ತಾರೆ. ಜಗನ್ಮಿಥ್ಯಾದೃಶ್ಯತ್ವಾತ್ ರಜ್ಜುಸರ್ಪವತ್ ಎಂದು ಅನುಮಿತಿ ಯುಕ್ತಿಯಿಂದ ಸಾಧಿಸಿದರೆ ಅದೇ ಯುಕ್ತಿಯಿಂದಲೇ ಪರಬ್ರಹ್ಮ ಮಿಥ್ಯಾ ದೃಶ್ಯತ್ವಾತ್ ಎಂದು ಪ್ರತಿದ್ವಂದ್ವಿಯಾಗಿ ಅನುಮಿತಿ ಹೇಳಲು ಶಕ್ತಿಯುಳ್ಳವರೆಂಬ ಭಾವವು. ಇಂತಹ ಹೇತುಗಳಿಂದ ಸಾಧಿಸುವದೆಲ್ಲಾ ಇಂದ್ರಜಾಲಕ್ರಮವೆಂದು ಹೇಳಲ್ಪಟ್ಟಿತು. ಈ ಇಂದ್ರಜಾಲ ಕ್ರಮವನ್ನು ಮನಸ್ಸಿನಲ್ಲಿಟ್ಟು ಆಕ್ಕಿಯಾಳ್ವಾನ್ ನೆಂಬ ಅದ್ವೈತಿ ಸನ್ಯಾಸಿಯು, ಯಾಮುನೇಯರನ್ನು ವಾದಕ್ಕೆ ಕರೆದು, ಹೇಳುತ್ತಾರೇನೆಂದರೆ.—ನೀವು ಮೂರು ವಾಕ್ಯಗಳನ್ನು ಹೇಳಬಹುದು, ಅಹುದು ಎಂಬುದನ್ನು ಅಲ್ಲವೆಂದು ನಾನು ಸಾಧಿಸಿಕೊಡುವೆನು, ನೀವು ಅಲ್ಲವೆಂದು ಹೇಳಿದುದನ್ನು ನಾನು ಹೌದು ಎಂದು ಸಾಧಿಸುವೆನು ಎಂದು ಹೇಳಲಾಗಿ, ಇಂತಹ ಇಂದ್ರಜಾಲೋಕ್ತಿಗೆ ತತ್ಸದೃಶವಾದ ಯುಕ್ತಿಯೇ ಪರಮ ಭೇಷಜವಾಗಿ ತಿಳಿದು ಯಾಮುನೇಯರು ಅದು ರಾಜನ ಸಭಾಂಗಣವಾದುದರಿಂದ, "ರಾಜನು ಸಾರ್ವಭೌಮನೆಂದೂ, ರಾಜಪತ್ನೀ ಪತಿವ್ರತೆಯೆಂದೂ" ತಿಳಿಸಿ, ಇದನ್ನು ಅಲ್ಲವೆಂದು ಸಾಧಿಸಿ ನೋಡೋಣವೆಂದೂ, "ನಿಮ್ಮ ತಾಯಿಯು ಬಂಜೆ

ಯಲ್ಲವು ಎಂದು ಹೇಳಿ" ಬಂಜೆಯೆಂದು ಸಾಧಿಸಿ ಎಂದೂ, ಹೇಳಲು; ಇದಕ್ಕೆ ರಾಜ ಪುರೋಹಿತನು ಬಹಳ ಲಜ್ಜಿತನಾಗಲು; ಯುಕ್ತಿಮಾತ್ರವಲ್ಲದೆ ಅನಂತರ ಶಾಸ್ತ್ರವಾದಗಳಲ್ಲೂ ಜಿತರಾದರೆಂಬ ವೃತ್ತಾಂತ ಉಂಟು. ಹಾಗೆಯೇ ಶ್ರೀ ಭಾಷ್ಯಕಾರರಿಗೆ ವಿದ್ಯಾಗುರುಗಳಾದ ಯಾದವಪ್ರಕಾಶರೂ ಶ್ರೀ ಭಾಷ್ಯಕಾರರ ಶಿಷ್ಯರಾದ ಶ್ರೀ ಕೂರೇಶರೊಂದಿಗೆ ವಾದಮಾಡಿ ಸೋತು ವಿಶಿಷ್ಟಾದ್ವೈತ ಸಿದ್ಧಾಂತವನ್ನವಲಂಬಿಸಿ ಶ್ರೀ ವೈಷ್ಣವ ಯತಿಗಳಾಗಿ ಯತಿಧರ್ಮ ಸಮುಚ್ಚಯವೆಂಬ ಗ್ರಂಥವನ್ನು ಬರೆದು ಪ್ರಖ್ಯಾತರಾದರೆಂಬ ವೃತ್ತಾಂತವುಂಟು. ಹಾಗೆಯೇ ವೇದಾಂತಿ ಎಂಬ ನಾಮಧೇಯವುಳ್ಳ ಅದ್ವೈತಿಗಳು ಶ್ರೀ ಪರಾಶರ ಭಟ್ಟರಿಂದ ವಾದದಲ್ಲಿ ಜಿತರಾಗಿ ಶ್ರೀ ವೈಷ್ಣವ ಸಂನ್ಯಾಸಿಯಾಗಿ ನಂಜೀಯರೆಂಬ ಯತಿಯಾಗಿ ಮಹಾಪ್ರಸಿದ್ಧರಾದರೆಂಬ ಇತಿಹಾಸ ಉಂಟು. ಆದುದರಿಂದ ನಮ್ಮ ಪೂರ್ವಾಚಾರ್ಯರುಗಳೆಲ್ಲಾ ಕಥಕಪ್ರಧಾನ ಗಣನೆಯಲ್ಲಿ,ದತ್ತಕನಿಷ್ಠಕಾಂಗುಳಿಯುಳ್ಳವರು ; ತಾರ್ಕಿಕಾಗ್ರೇಸರರು ಯಾರೆಂದು ಗಣನೆ ಮಾಡುವದರಲ್ಲಿ ಮೊದಲನೆಯದಾದ ಕಿರುಬೆಟ್ಟಿನಿಂದ ಎಣಿಸಲ್ಪಡುವವರು; ತಮ್ಮ ಹಾಗೆ ತಾರ್ಕಿಕ ಸಿಂಹರಾದ ನಮ್ಮ ಸಿದ್ಧಾಂತದ ತಾರ್ಕಿಕ ಶಿಖಾಮಣಿಗಳು ಎಂದು ಹೇಳಿಕೊಂಡಿರುತ್ತಾರೆ. ಆದುದರಿಂದಲೇ ನಿಷ್ಠಾಂ ಕನಿಷ್ಠಾಶ್ರಯಾಂ ಬಿಭ್ರಾಣಾಃ ಎಂಬ ಪ್ರಯೋಗವು. ಗಣನೆಯಲ್ಲಿ ಕನಿಷ್ಠ ಬೆರಳಿಗೆ ಪ್ರಾಥಮ್ಯವೆಂಬುದು "ಪುರಾ ಕವೀನಾಂ ಗಣನಾಪ್ರಸಂಗೇ" ಕಾಳಿದಾಸ ಕವಿಯೇ ದತ್ತಕನಿಷ್ಠಕನೆಂದೂ, ಆತನಿಗೆ ಸರಿಯಾದ ಎರಡನೆಯ ಕವಿಯೇ ದೊರೆಯದೇ ಇದ್ದುದರಿಂದ ಅನಾಮಿಕಾ ಎಂಬ ಎರಡನೆಯ ಬೆರಳು "ಅನಾಮಿಕಾ ಸಾರ್ಥವತೀ ಬಭೂವ" ಎಂದು ಅನಾಮಿಕಾ ಎಂಬ ಹೆಸರು ಅರ್ಥವತ್ತಾದುದೆಂದು ಕವಿಗಳು ವರ್ಣಿಸಿರುತ್ತಾರೆ. ಆದುದರಿಂದ ಅಗ್ರೇಸರತ್ವವನ್ನು ಹೇಳುವದಕ್ಕಾಗಿ ಕನಿಷ್ಠಾಶ್ರಯಾಂ ಎಂಬ ಪ್ರಯೋಗವು.

ನಮ್ಮ ಈ ಪೂರ್ವಾಚಾರ್ಯರುಗಳ ಮಹತ್ವವು ಬರೀ ತರ್ಕ ನೈಪುಣ್ಯದಿಂದ ಮಾತ್ರವೇ ಅಲ್ಲವು. ಹಾಗೆ ಬರೀ ತರ್ಕನೈಪುಣ್ಯವುಳ್ಳ ಮನಸ್ಸು ನೀರು ಕೆಂಪಗಿರುವ ಕೆರೆಯಹಾಗೆ ನಿರ್ಮಲವಾಗಿರದು ಇತರ ಸಿದ್ಧಾಂತಿಗಳ ಮನಸ್ಸು ಹೇಗೆ ಕಙ್ಮಾವಿಲವಾಗಿರುತ್ತದೋ ಹಾಗೆಯೇ ಇರುತ್ತಿತ್ತು. ನಮ್ಮ ಪೂರ್ವಾಚಾರ್ಯರಾದ ತಾರ್ಕಿಕ ಶಿಖಾಮಣಿಗಳೋ ಎಂದರೆ, ಅಧ್ಯಾತ್ಮಶ್ರುತಿಸಂಪ್ರದಾಯ ಕತಕೈಃ ವಿಶುದ್ಧಾಶಯರು ಉಪನಿಷತ್ತುಗಳ ಸಾರಭೂತಾರ್ಥಗಳ ಅವಿಚ್ಛಿನ್ನ ಉಪದೇಶ ಮೂಲಕ ಗುರುಶಿಷ್ಯಕ್ರಮದಿಂದ ಒದಗಿದ ಜ್ಞಾನವೆಂಬ ಚಿಲ್ಲದ ಬೀಜಗಳಿಂದ ನಿರ್ಮಲೀಕೃತಗಳಾದ ಮನಸ್ಸನ್ನುಳ್ಳವರು. ಉಪನಿಷತ್ತುಗಳಿಗೆ, ಕಲುಷಿತವಾದ ಮತಿಗಳ ಹಾಗೆ ಅಪಾರ್ಥಗಳನ್ನು ಹೇಳದವರು. ದ್ವೈಪಾಯನರು ತಮ್ಮ ಸೂತ್ರಗಳಲ್ಲಿ ಸರಿಯಾದ ಅರ್ಥಗಳನ್ನು ಬೋಧಿಸಿದ ದನ್ನು ಯಥಾರ್ಥವಾಗಿ ಉಪದೇಶ ಮೂ

ಲಕ ಗ್ರಹಿಸಿದವರು. ಆದುದರಿಂದ ಶ್ರೀ ದೇಶಿಕರವರೇ ಸಙ್ಕಲ್ಪ ಸರ್ಯೋ‍ದಯದಲ್ಲಿ ತಮ್ಮ ಸಿದ್ಧಾನ್ತವು "ನಾಥೋಪಜ್ಞಂ ಪ್ರವೃತ್ತಂ ಬಹುಭಿರುಪಚಿತಂ ಯಾಮುನೇಯಪ್ರಬಂಧೈ । ತ್ರಾತಂ ಸಮ್ಯಗ್ಯತೀಂದ್ರೈರಿದಮಖಿಲತಮಃಕರ್ಶನಂ ದರ್ಶನಂ ನಃ॥"(೪೯) ಹೀಗೆ ಈ ಮೂರು ಮಹನೀಯರುಗಳಾದ ನಾಥಮುನಿ, ಯಾಮುನಮುನಿ, ಶ್ರೀ ರಾಮಾನುಜಮುನಿ ಇವರುಗಳ ಸತ್ತರ್ಕಗಳಿಂದ ಪ್ರತ್ಯಕ್ಷಾನುಮಾನ ಶಬ್ದಪ್ರಮಾಣಗಳಲ್ಲಿ ಅಪಲಾಪಾದಿ ಯಾವ ದೋಷಗಳೂ ಇಲ್ಲದಹಾಗೆ ಸಕಲಸಿದ್ಧಾಂತಗಳಲ್ಲಿರುವ ಶಙ್ಕಾರೂಪ ಅಂಧಕಾರವೆಲ್ಲಾ ತಮ್ಮ ಸಿದ್ಧಾಂತದ ಬೆಳಕಿನಿಂದ ತೊಲಗಿರುತ್ತವೆಂದು ಹೇಳಿಕೊಂಡಿರುತ್ತಾರೆ. ಶ್ರೀ ಭಾಷ್ಯಕಾರರವರು ಪರಿಪಾಲಿಸಿದ ಸರ್ವಸಮಂಜಸಾರ್ಥಗಳು ಶ್ರೀ ಭಾಷ್ಯದಲ್ಲೂ ವೇದಾರ್ಥಸಂಗ್ರಹದಲ್ಲೂ ಹೇಳಲ್ಪಟ್ಟ ಸಮಂಜಸಾರ್ಥಗಳೇ ಗುರುಶಿಷ್ಯಕ್ರಮದಲ್ಲಿ ಬಂದುದೇ ಶ್ರುತಪ್ರಕಾಶಿಕೆಯಲ್ಲೂ ಪ್ರತಿಷ್ಠಿತಗಳಾಗಿ ಹಾಗೆಯೇ ಸಂಪ್ರದಾಯಕ್ರಮದಿಂದ ಶ್ರೀ ನಡಾದೂರಮ್ಮಾಳ್, ತಮ್ಮ ಮಾತುಲರು ಅವರಿಂದ ತಮಗೂ ಹೀಗೆ ಪರಂಪರಾಕ್ರಮದಿಂದ ಬಂದಿರುತ್ತವೆ ಎಂಬುದು ಸೂಚಿಸಲ್ಪಟ್ಟಿತು. ಇಂತಹ ಮಹನೀಯರ ಸರ್ವೋತ್ಕೃಷ್ಟವಾದ ಪರಮಹಿತವಾದ ನಿಸ್ಸಂಶಯವಾದ ಉಪದೇಶವು ಯಾವುದೆಂದರೆ :—ಕರುಣಾಸಾಗರನಾದ ಆಶ್ರಿತ ವತ್ಸಲನಾದ ಸಿದ್ಧೋಪಾಯನಾದ ಶ್ರಿಯಃಪತಿಯನ್ನು ವಶೀಕರಣಕ್ಕಾಗಿ, ಸೀತೆಯು ರಾವಣನಿಗೆ ಉಪದೇಶಿಸಿದ ರೀತಿಯಲ್ಲಿ, "ಪ್ರಸಾದಯಸ್ವತ್ವಂ ಚೈನಂ ಶರಣಾಗತವತ್ಸಲಂ" ಸಾಧ್ಯೋಪಾಯದಿಂದ ಪ್ರಸನ್ನನಾಗಿ ಮಾಡಿಕೊಳ್ಳತಕ್ಕದ್ದು ಆವಶ್ಯಕವು. ಇದನ್ನು ತಮ್ಮ ವಾದಮೂಲಕವಾಗಿ ಮಾತ್ರವೇ ಉಪಪಾದಿಸಿದುದಲ್ಲವು. ಈ ಅರ್ಥಗಳು ತಮಗೆ ವಾದಿನಡಾದೂರಮ್ಮಾಳ್, ಆತ್ರೇಯ ರಾಮಾನುಜಾಚಾರ್ಯರಾದ ಗುರುವರ್ಯರುಗಳಿಂದ ಪರಮಹಿತದಿಂದ ಉಪದೇಶಿಸಲ್ಪಟ್ಟವು. ಆದುದರಿಂದ ಸರ್ವರೂ ಇದೇ ಪರಮಹಿತವೆಂದು ಭಾವಿಸಿ ಪರಮಾದರದಿಂದ ಗ್ರಹಿಸತಕ್ಕ ವಿಷಯವೆಂದು ಪರಮಕೃಪೆಯಿಂದ ಉಪದೇಶಿಸಿರುತ್ತಾರೆ.

ಸಾರದೀಪಿಕಾವ್ಯಾಖ್ಯಾತೃವು ಈ ಅಧಿಕಾರದ ಸಙ್ಗ್ರಹಾರ್ಥವನ್ನು ಸೂಚಿಸಿರುತ್ತಾರೆ, ಹೇಗೆಂದರೆ :—"ಇಪ್ಪಡಿ ಇವ್ವಧಿಕಾರತ್ತಿಲ್ (೧)ಪ್ರಪತ್ತಿಯಿನ್ ಸರ್ವಾಧಿಕಾರತ್ವಮುಮ್, (೨) ವಿಶ್ವಾಸಾದಿಗಳಂಗಿಯನ್ನು ನಿಕ್ಷೇಪಮೇಅಂಗಿ ಎನ್ರು ಮಿಡಱುಮ್, ಮತ್ತು (೩) ಮುಣ್ಣಾನ ಶಙ್ಕಾ ವಿಶೇಷ ಪರಿಹಾರಙ್ಗಳುಮ್, (೪) ಭಕ್ತ್ಯಾದಿಗಳುಕ್ಕು ಸ್ವರೂಪವಿರುದ್ಧತ್ವಾದಿ ಶಙ್ಕಾಪರಿಹಾರಮುಮ್, (೫) ಸ್ವರಕ್ಷಣಾರ್ಥವ್ಯಾಪಾರಂ ವಿಹಿತಮೆನ್ರು ಮಿಡಱುಮ್, (೬) ವಿಹಿತತ್ವಾದ್ಭಕ್ತಿ ಪ್ರಪತ್ತಿಗಳಿರಣ್ಡುಮ್ ಯಥಾಧಿಕಾರಂ ಸಗಿಕ್ಕಪ್ಪಟ್ಟನ ಎನ್ರುಮ್. (೭) ಭಕ್ತಿಯು ಮಾಚಾರ್ಯರುಚಿ ಪರಿ

ಗ್ರಹೀತವೆನ್ನುವುದುವುಮ್,(೮) ಕಲಿಯ ಎಗತ್ತಿಲುಮ್ ಭಕ್ತಿಕ್ಕಧಿಕಾರಿಗಳ್ ಸಂಭಾವಿತರೆನ್ರುಮ್,(೯) ಅಶಕ್ತಾಧಿಕಾರಿಕ್ಕು ಭಕ್ತಿಸ್ವಾಧಿಕಾರವಿರುದ್ಧಮೆನ್ರುಮ್, (೧೦) ನ್ಯಾಸವಿದ್ಯೆಯೇ ಸರ್ವವಿದ್ಯೆಗಳಿಲ್ ಶ್ರೇಷ್ಠಮೆನ್ರುಮ್, (೧೧) ಪರಿಕರವಿಷಯಶಂಕಾಪರಿಹಾರಙ್ಗಳುಮ್ (೧೨) ಭಕ್ತಿಪ್ರಪತ್ತಿಗಳಿರಣ್ಡುಮ್ ಅಭಿಸಂಧಿಭೇದತ್ತಾಲೆ ವಿರುದ್ಧ ಫಲಸಾಧನಙ್ಗಳಾಗಕ್ಕೂಡುಮೆನ್ರುಮ್. (೧೩) ಪ್ರಯೋಜನಾಂತರಪರರ್ಕ್ಕು ಇವ್ವೆ ಪ್ರವೃತ್ತಿ ಧರ್ಮಕೋಟಿಯಿಲೆ ನಿರ್ಕುಮೆನ್ರುಮ್, (೧೪) ಅನ್ಯಾಭಿಗಮನಾದಿಗಳಾಗಾದೆನ್ರುಮ್, (೧೫) ಪ್ರಪನ್ನರ್ಕ್ಕು ಸರ್ವಕಾಲತ್ತಿಲುಮ್ ಭಗವದನುಸ್ಮರಣರೂಪ ಫಲಭಕ್ತ್ಯನುವರ್ತನತ್ತುಕ್ಕು ವಿರೋಧಮಿಲ್ಲೈಯೆನ್ರುಮ್ ಶೊಲ್ಲಿತ್ತಲೈಕ್ಕಟ್ಟಿನಾರ್"

ಈ ಅಧಿಕಾರದಲ್ಲಿ ಏನೇನು ಉಪಪಾದಿಸಲ್ಪಟ್ಟಿದೆ ಎಂಬುದನ್ನು ಅಧಿಕಾರಮಧ್ಯದಲ್ಲಿ ನಾವು ಕಾಣಿಸಿರುವ ವಿಷಯ ಸೂಚನೆಗಳಿಂದಲೂ ಗ್ರಹಿಸಬಹುದು.

ಅಧಿಕಾರಾರ್ಥಸಙ್ಗ್ರಹವನ್ನು ಸಾರದೀಪಿಕೆಯವರು ಸಂಸ್ಕೃತ ಶ್ಲೋಕಗಳ ಮೂಲಕ ಹೇಳಿರುವದನ್ನು ಸಾರವಿವರಣೆಯವರೂ ಉದಾಹರಿಸಿರುತ್ತಾರೆ:—

"ಬದ್ಧಿಸೌಕರ್ಯಾಯ ಸಾರದೀಪಿಕಾಯಾ ಮುಕ್ತಾಧಿಕಾರಾರ್ಥ ಸಙ್ಗ್ರಹ ಕಾರಿಕಾಲಿಖ್ಯಂತೇ—"ಪ್ರಪತ್ತೇರ್ವ್ಯದಿಕತ್ವೇಪಿ ಸರ್ವವರ್ಣಾಧಿಕಾರತಾ। ವಿಶ್ವಾಸಃ ಪ್ರಾರ್ಥನಾಚಾತ್ಮ ರಕ್ಷಾಭರ ಸಮರ್ಪಣೇ ॥೧॥ ಪರ್ಯವಸ್ಯತ್ಯತಶ್ಶಾಸ್ತ್ರೇ ನ್ಯಾಸೋಙ್ಗ್ಯೇವ ವಿಧೀಯತೇ। ಅಂಗ ಪಂಚಕ ಸಂಪನ್ನಂ ರಕ್ಷಾಭರಸಮರ್ಪಣಮ್ ॥೨॥ ಪ್ರಪತ್ತಿಶಾಸ್ತ್ರವಿಹಿತಂ ಸರ್ವದೇಶಿಕ ಸಮ್ಮತಂ। ನಸ್ವರೂಪವಿರುದ್ಧತ್ವಮ್ ಭಕ್ತ್ಯಾದೇ ರ್ವಿಹಿತತ್ವತಃ ॥೩॥ ನಾಹಂಕಾರಾದಿ ಗರ್ಭತ್ವಮಸ್ಯಶಾಸ್ತ್ರೇಷು ಕಥ್ಯತೇ। ಸಶೇಷತಾ ವಿರುದ್ಧತ್ವ ಪಾರತಂತ್ರ್ಯವಿರೋಧಿತೇ ।೪॥ ಶೇಷತ್ವಂ ಪಾರತಂತ್ರ್ಯಂಚ ಮುಕ್ತಾವಪಿಚ ವಿಶ್ರುತಮ್। ನಚೈಕಾಂತ್ಯ ವಿರುದ್ಧತ್ವಂ ಶ್ರೀಶಸಂರಾಧನತ್ವತಃ ॥೫॥ ಪ್ರಾಪ್ಯಾನುರೂಪತಾ ಭಾವೋ ನಾನ್ಯೇಷಾಂ ಯುಕ್ತಿಗೋಚರಃ। ಶಾಸ್ತ್ರಾದೇವಾ ವಸೇಯಾತೋ ಭಕ್ತಿಃಪ್ರಾಪ್ಯೋ ಚಿತಾಮತಾ ॥೬॥ ಪರಮರ್ಷಿಗೃಹೀತತ್ವಾನ್ನೈವಾಚಾರ್ಯ ಬಹಿಷ್ಕೃತಾ। ಕಲೌನಿಷೇಧೋ ನೈವಾಸ್ಯಾಸ್ತದಶಕ್ತೇರ್ವಿರುಧ್ಯತೇ ॥೭॥ ಸಂಭಾವಿತಸ್ವಭಾವತ್ವಂ ನಾಂಗಾನಾಂ ವಿಹಿತತ್ವತಃ। ಸಂಭಾವಿತತ್ವೇ ಚಾಂಗಾನಾಂ ವಿಶ್ವಾಸೇ ಪ್ಯೇತದಾಪತೇತ್ ॥೮॥ ವಿಶ್ವಾಸ ತಾರತಮ್ಯಸ್ಯ ಸಂಭವಾಲ್ಲೋಕಶಾಸ್ತ್ರಯೋಃ। ಮಹಾನೇವಹಿ ವಿಶ್ವಾಸಃ ಪ್ರಪತ್ತೇ ರಂಗಮಿಷ್ಯತೇ ॥೯॥ ತತ್ಕಾಲೇ ಮಂದ ವಿಶ್ವಾಸಾ ನಪಿ ಇಶೋಧಿಕಾರಿಣಃ। ಕ್ರಮೇಣ ಪೂರ್ಣ ವಿಶ್ವಾಸಾ ನ್ಕೃತ್ವಾಪಾತಿ ದಯಾಧಿಃ ॥೧೦॥ ಉಪಾಯಾಂತರ ಶಕ್ತ್ಯಾದಿ ವಿಳಂಬ ಕ್ಷಮತಾ ಫಲೇ। ವ್ಯಾ

ಸಾದೇ ಭರ್ಜನೇ ಹೇತು ರ್ವಿಶ್ವಾಸಾದಿ ಶೂನ್ಯತಾ ॥೧೧॥ ಕ್ವಚಿತ್ಪ್ರಪನ್ನೇ ಭಗವತ್ಸಾಕ್ಷಾತ್ಕಾರಾದಿ ದೃಶ್ಯತೇ । ನ್ಯಾಸೇ ಸಙ್ಕಲ್ಪ ವೈಷಮ್ಯಾತ್ಪ್ರಾರಬ್ಧ ಸುಕೃತಾತ್ಪುರಾ ॥ ೧೨ ॥ ಕೇಚಿದ್ದೃಷ್ಟಫಲಾಸಿದ್ಧ್ಯೈ ನ್ಯಾಸೇಷು ವಿಹಿತೇ ಫಲೇ । ಕರ್ಮ ಕರ್ತ್ರಾದಿ ವೈಗುಣ್ಯಾತ್ಫಲಾಸಿದ್ಧಿರ್ಹಿ ಸರ್ವತಃ ॥ ೧೩ ॥ ವಿರುದ್ಧ ಫಲ ಹೇತುತ್ವ ಮಭಿಸಂಧಿವಶಾದ್ಭವೇತ್ । ಏಕಸ್ಯ ರಾಜ್ಞೋ ದಾತವ್ಯ ಜಂಬೀರ ಫಲನೀತಿತಃ ॥೧೪॥ ಪ್ರವೃತ್ತಿ ಧರ್ಮಸ್ತೋ ಭಕ್ತಿ ಪ್ರಪತ್ತೀ ಕಾಮುಕಾಮಿನಾಂ । ನಿವೃತ್ತಿಧರ್ಮ ತಾವೇವ ಭಗವಚ್ಚರಣಾರ್ಥಿನಾಂ॥ ಅನ್ವೃತ್ತ್ಯನಾವೃತ್ತಿ ವಶಾದ್ವಿಷಮಾವಪಿ ತಾವುಭೌ । ಮೋಕ್ಷೈಕ ಫಲದಾ ಸ್ಯಾತಾಂ ಅಧಿಕಾರಿ ವಿಶೇಷತಃ ॥೧೬॥ ಉಪಾಯ ಫಲಯೋರೇಕ ರೂಪತ್ವೇಪಿ ಪ್ರಪನ್ನಯೋಃ । ಫಲೇ ವಿಳಂಬಾವಿಳಂಬೌ ತ್ವರಾಯಾ ಸ್ತಾರತಮ್ಯತಃ ॥೧೭॥ ಸಾಧ್ಯೋಪಾಯ ಪ್ರಸನ್ನೋಯಸ್ಸಿದ್ಧೋಪಾಯಃ ಫಲಪ್ರದಃ। ತತ್ಸಿದ್ಧ ಸಾಧ್ಯಯೋಃ ಕಾರ್ಯಂ ಫಲಂ ಶಾಸ್ತ್ರೇಷು ವರ್ಣ್ಯತೇ ॥೧೮॥ ಹರಿರೇಕಸ್ಸದಾ ಧ್ಯೇಯಃ ಇತ್ಯಾದ್ಯುಕ್ತ್ಯನುಸಾರತಃ। ಅಂಗಪ್ರಪತ್ತಿಪರತಾಂ ಶ್ಲೋಕಸ್ಯಾಹುರ್ನತನ್ಮತಂ ॥೧೯॥ "ಹರಿರೇಕಸ್ಸದಾಧ್ಯೇಯ" ಇತ್ಯಾದಿಭಿರ್ಹಿ ವಿಧೀಯತೇ। ಸ್ವತಂತ್ರನ್ಯಾಸನಿಷ್ಠಸ್ಯ ಫಲರೂಪ ಮುಪಾಸನಮ್ ॥೨೦॥ ಕೈಂಕರ್ಯೇ ಕ್ರಿಯಮಾಣೇ ತು ಖ್ಯಾತಿಲಾಭ ವಿವರ್ಜಿತಃ । ಪ್ರಯೋಜನಾಂತರಾನಿಚ್ಛುರ್ಮೋಕ್ಷಂ ಚಾಪಿ ಫಲಂ ತ್ಯಜೇತ್ ॥ ೨೧ ॥ ಸ್ವಯಂಪ್ರಯೋಜನತ್ವೇನ ಮುಕ್ತವತ್ಸರ್ವಮಾಚರೇತ್ । ಅನ್ಯಾಭಿಗಮನಂ ತ್ಯಾಜ್ಯಂ ತಥಾನ್ಯಾರ್ಥ ಪ್ರವೃತ್ತಯಃ ॥೨೨॥ ಅನ್ಯಪೂಜಾನ್ಯಕೀರ್ತಿಶ್ಚ ತ್ಯಾಜ್ಯಮನ್ಯ ವಿಚಿನ್ತನಮ್। ಏತೇಷಾಂ ವಿನಿವೃತ್ತ್ಯರ್ಥಂ ಹರಾವಭಿಗಮಾದಿಕಮ್ ॥೨೩॥ ವಿಧೀಯತೇಸ್ಯ ಶಾಸ್ತ್ರೇಷು ಕಾಲೇಷೂಕ್ತೇಷು ಪಂಚಸು । ಅನರ್ಹಾಣಾಮಪಿ ನೃಣಾಂ ದೇವಾಭಿಗಮನಾದಿಷು ॥೨೪॥ ಸ್ವಯೋಗ್ಯನಿತ್ಯ ಕೃತ್ಯೈರ್ವಾ ಸ್ಥಿತಿ ಶ್ಶುಶ್ರೂಷಯಾಪಿವಾ । ವಿಲಕ್ಷಣೋ ಭಕ್ತಿಯೋಗಃ ಸ್ತ್ರೀಶೂದ್ರಾಣಾಂ ನಿಷಿಧ್ಯತೇ॥೨೫॥ ಸರ್ವೇಷಾಂ ಸರ್ವದಾ ಕಾರ್ಯೋ ದೇಹಾನುಸ್ಮೃತಿಲಕ್ಷಣಃ । ಕ್ಲೇಶಾನಾಂಚ ಕ್ಷಯಕರಂ ಯೋಗಾದನ್ಯ ನ್ನ ವಿದ್ಯತೇ ॥೨೬॥ ಇತ್ಯಾದಿಷು ಪ್ರಪನ್ನೇಭ್ಯ ಇತರತ್ರ ನಿಯಮ್ಯತೇ ॥ ಇತಿ.

ಶ್ರೀಮದ್ರಹಸ್ಯತ್ರಯಸಾರದ ಇಪ್ಪತ್ತನಾಲ್ಕನೆಯ
ಸಾಧ್ಯೋಪಾಯಶೋಧನಾಧಿಕಾರಕ್ಕೆ
ತಿರುನಾರಾಯಣಪುರಂ ವಿಜಯರಾಘವಶರ್ಮನ
ಆಚಾರ್ಯಹೃದಯಾನ್ವೇಷಿಣೀ